

ತಪಸ್ಸಿನ ತೇಜ ಯೋಗದ ಓಜ

( ಮೂಲ ಇಂಗ್ಲೀಷಿನಲ್ಲಿ )

# ಮಹಾಯೋಗಿ

## ಶ್ರೀ ಅರವಿಂದರ ಚರಿತ್ರೆ, ಸಾಧನೆ, ಉಪದೇಶ

ಲೇಖಕರು:

ರಂಗನಾಥ ರಾಮಚಂದ್ರ ದಿವಾಕರ



ಕನ್ನಡಿಸಿದವರು:

ನರೇಗಲ್ ಪ್ರಲ್ಹಾದ — ಸಂಗಮ ನಾರಾಯಣ

೧೯೫೪

ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ

ಮುದ್ರಕರು :
ಹ. ರಾ. ಮೊಹರೆ
ಸಂಯುಕ್ತ ಕರ್ನಾಟಕ ಮುದ್ರಣಾಲಯ
ಹುಬ್ಬಳ್ಳಿ

ಮೊದಲನೆಯ ಆವೃತ್ತಿ ೧೯೫೪

ಬೆಲೆ : ಎರಡು ರೂಪಾಯಿ ಎಂಟು ಆಣೆಗಳು

ಪ್ರಕಾಶಕರು :
ರಂ. ರಾ. ದಿವಾಕರ
ಅಧ್ಯಾತ್ಮ ಕಾರ್ಯಾಲಯ
ಹುಬ್ಬಳ್ಳಿ

# ಅನುಕ್ರಮಣಿಕೆ



# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೭ | ೧೮ | ಪತಿಕ್ರೆಗಳು | ಪತ್ರಿಕೆಗಳು |
| ೮ | ೭ | ಅಟಲಿ | ಇಟಲಿ |
| ೯ | ೬ | ಅಂತಸ್ಥ | ಅಂತಃಸ್ಥ |
| ೧೪ | ೨೦ | ಸ್ವತ್ತ್ವ | ಸ್ವತ್ವ |
| ೨೪ | ೭ | ಝ. ಟಿ. ತೆಲಂಗ | ಕೆ. ಟಿ. ತೆಲಂಗ |
| ೩೫ | ೧೪ | ಅವರಿಗೆ | (ಈ ಶಬ್ದ ಬಿಡಬೇಕು) |
| ೬೫ | ೧೭ | ಅವರನ್ನು | (ಈ ಶಬ್ದ ಬಿಡಬೇಕು) |
| ೮೮ | ೧೨ | ಅವರನ್ನು | (ಈ ಶಬ್ದ ಬಿಡಬೇಕು) |
| ೮೯ | ೨೮,೨೯ | ಸಲಾಕೆಗಳ | (ಈ ಶಬ್ದ ಬಿಡಬೇಕು) |
| ೯೦ | ೧೩ | 'ಅಶ್ರಮವಾಸ' | 'ಆಶ್ರಮವಾಸ' |
| ೧೦೩ | ೧೦ | ಸೌರೀಸ | ಸೌರೀನ |
| ೧೦೩ | ೧೯ | ಆ ಮನೆತವದವರ | ಆ ಮನೆತನದವರ |
| ೧೦೫ | ೧೬-೧೭ | ಹೇಳಿಕೊಳ್ಳತಕ್ಕ | ಹೇಳತಕ್ಕ |
| ೧೧೯ | ೧೦ | ವ್ಯಕ್ತಪಡಿಸರಲಾರದಂಥ | ವ್ಯಕ್ತಪಡಿಸಿರಲಾರದಂಥ |
| ೧೨೨ | ೧೫ | ವಿಶಿಷ | ವಿಶಿಷ್ಟ |
| ೧೩೦ | ೧೦ | ಆಧ್ಮಾತ್ಮಿಕತೆ | ಆಧ್ಯಾತ್ಮಿಕತೆ |
| ೧೪೧ | ೨೭ | ಪ್ರಕೃತಿಯ | ಪ್ರಕೃತಿಯ |
| ೧೪೨ | ೫ | ಪ್ರವೃತ್ತಿಯು | ಪ್ರವೃತ್ತಿಯು |
| ೧೪೫ | ೩ | (ತಾಖ್ತೆ–ಸುಲೆಮಾನ್ | (ತಖ್ತ-ಎ-ಸುಲೆಮಾನ್ |
| ೧೫೨ | ೧೧ | ಕೂಡು | ಕೂಡಿ |
| ೧೫೩ | ೧೫ | (ಪುಟ ೨೫೨) | (ಪುಟ ೨೮೨) |
| ೧೫೮ | ೧೦ | ಇದೆಲ್ಲವೂ | ಇವೆಲ್ಲವೂ |
| ೧೭೨ | ೨೫ | ಶ್ರೀ ಲೀಲೆ | ಶ್ರೀ ಲೇಲೆ |
| ೧೮೫ | ೧೯ | ೨೬ನೆಯ | ೨೪ನೆಯ |
| ೧೯೧ | ೨೧ | ಸಾಧನೆ | ಸ್ಥಾನ |
| ೧೯೧ | ೨೪ | ಅವರಿಗೆ | ಅವನಿಗೆ |
| ೨೦೨ | ೧೧ | ಅಗತ್ಯವಿವೆ | ಅಗತ್ಯವಿದೆ |
| ೨೩೪ | ೪ | ತನ್ನಯ | ತನ್ಮಯ |

# ಮುನ್ನುಡಿ



ನಾನು ಮೂಲ ಇಂಗ್ಲೀಷದಲ್ಲಿ ಬರೆದ 'ಮಹಾಯೋಗಿ' (Mahayogi) ಎಂಬ ಪುಸ್ತಕವನ್ನು ಮುಂಬಯಿಯ ಭಾರತೀಯ ವಿದ್ಯಾಭವನದವರು ಹೋದ ವರುಷ ಆಗಸ್ಟ ೧೫ಕ್ಕೆ ಪ್ರಕಟಿಸಿದರು. ಕನ್ನಡಾನುವಾದವನ್ನು ಕೂಡ ಅದೇ ತಾರೀಖಿಗೆ ಪ್ರಕಟಿಸಬೇಕೆಂಬ ಸಂಕಲ್ಪ ಹಾಗೂ ವ್ಯವಸ್ಥೆ ಮಾಡಲಾಗಿತ್ತು. ಆದರೆ ಕಾರಣಾಂತರಗಳಿಂದ ಅದು ಸಾಧ್ಯವಾಗದೆ ಹೋಗಿ ಈಗ ೨೧-೨-೫೪ ದಿನ ಕನ್ನಡ 'ಮಹಾಯೋಗಿ'ಯು ಪ್ರಸಿದ್ಧವಾಗುತ್ತಲಿದೆ. ಈಗ ಪ್ರಸಾರದಲ್ಲಿದ್ದ ಇಂಗ್ಲೀಷ್ ೧ನೆ ಆವೃತ್ತಿಗೂ ಕನ್ನಡದ ಈ ಆವೃತ್ತಿಗೂ ಇದ್ದ ಒಂದು ವ್ಯತ್ಯಾಸವೆಂದರೆ ಇಲ್ಲಿದ್ದ ೭ನೆ ಪ್ರಕರಣವು ಹೊಸದಾಗಿ ಸೇರಿಸಲಾಗಿದೆ.

ಶ್ರೀ ಅರವಿಂದ ಘೋಷರ ಸಂಕ್ಷಿಪ್ತ ಚರಿತ್ರ, ಅವರ ಸಾಧನ, ಸಿದ್ಧಿ ಹಾಗೂ ಉಪದೇಶ ಇವೇ ಈ ಚಿಕ್ಕ ಪುಸ್ತಕದ ಕಥಾವಸ್ತು. ಈಚೆಗೆ ಭಾರತದಲ್ಲಿ ಆಗಿಹೋದ ಹಲವು ಮಹಾಪುರುಷರಲ್ಲಿ ಇವರ ಸ್ಥಾನವು ಅತ್ಯುಚ್ಚವಿದ್ದು, ಜಗತ್ತಿನಲ್ಲಿಯ ಅತ್ಯಂತ ಶ್ರೇಷ್ಠ ಸಿದ್ಧಪುರುಷರಲ್ಲಿ ಇವರೊ-ಬ್ಬರು, ಎಂದು ಹೇಳಲು ಅಡ್ಡಿ ಇಲ್ಲ. ಇಂಥವರ ಪರಿಚಯವು ನಮ್ಮೆಲ್ಲರಿಗೂ ಆಗುವದು ಅತ್ಯವಶ್ಯ ಎಂಬ ಭಾವನೆಯಿಂದ ಈ ಪುಸ್ತಕವು ಬರೆಯಲಾಗಿದೆ.

ಶ್ರೀ ಅರವಿಂದರ ಬಗ್ಗೆ ಜನಸಾಮಾನ್ಯರಲ್ಲಿ ಅತೀವ ಜಿಜ್ಞಾಸೆ ಇದೆ. ಅಲ್ಲದೆ ಅವರ ಸಂದೇಶವನ್ನು ಚೆನ್ನಾಗಿ ತಿಳಿದುಕೊಳ್ಳಬೇಕು ಎಂಬ ಆಸ್ಥೆ ಇದೆ. ಆದುದರಿಂದಲೆ ಇಂಗ್ಲೀಷ ೧ನೆ ಆವೃತ್ತಿಯ ೫೦೦೦ ಪ್ರತಿಗಳು ಈಗಾಗಲೆ ಮಾರಿಹೋಗಿ ೨ನೆ ಆವೃತ್ತಿಯ ೧೦೦೦೦ ಪ್ರತಿಗಳು ಅಚ್ಚಾಗುತಲಿವೆ, ಎಂದು ಪ್ರಕಾಶಕರು ನನಗೆ ತಿಳಿಸಿದ್ದಾರೆ. ಶ್ರೀ ಅರವಿಂದರು ಮಹಾನ್ ಸಾಧುಸಂತರ, ಮುನಿಪುಂಗವರ, ಆಚಾರ್ಯರ, ಭಾಷ್ಯಕಾರರ ಪಂಕ್ತಿಗಷ್ಟೇ ಸೇರಿದವರಲ್ಲ; ಆದರೆ ಅವರು ಋಷಿಗಳ ಕೋಟಿಗೆ ಸೇರಿದವರು, ಅವರು ಆಧುನಿಕ ಮಂತ್ರದ್ರಷ್ಟಾರರು ಎಂದು ಜನರು ಶ್ರದ್ಧಾಪೂರ್ವಕವಾಗಿ ನಂಬಿರುವರು. ಅಂಥವರ ಮಹಾಚರಿತ್ರೆ ಲೋಕಪ್ರಿಯವಾಗಿ ಲೋಕಾದರಕ್ಕೆ ಪಾತ್ರವಾದರೆ ಅದೇನಾಶ್ಚರ್ಯ!

ಇದನ್ನು ಕನ್ನಡಿಸುವ ಭಾರವನ್ನು ಶ್ರೀಗಳಾದ ಸರೇಗಲ್ ಪ್ರಲ್ಹಾದ ಹಾಗೂ ಸಂಗಮ ನಾರಾಯಣ ಇವರು ಹೊತ್ತುದಕ್ಕಾಗಿ ನಾನು ತುಂಬ ಕೃತಜ್ಞನಿದ್ದೇನೆ. ಅದೇ ಮೇರೆಗೆ ನನ್ನ ಮಿತ್ರರೂ ಸಹಕಾರಿಗಳೂ ಆದ ಶ್ರೀ ಪುರೋಹಿತ ಹಣಮಂತಾಚಾರ್ಯರು ಅನೇಕ ರೀತಿ ಸಹಾಯಮಾಡಿ ಇದರ ಪ್ರಕಟನೆಯಲ್ಲಿ ನೆರವಾಗಿರುವರು. ಅವರಿಗೆ ನನ್ನ ಧನ್ಯವಾದಗಳು. ಸಂಯುಕ್ತ ಕರ್ನಾಟಕ ಮುದ್ರಣಾಲಯದವರು ಎಡೆಬಿಡದೆ ಕೆಲಸಮಾಡಿ ಆದಷ್ಟು ಬೇಗನೆ ಅಚ್ಚುಮಾಡಿದ್ದಕ್ಕಾಗಿ ಅವರಿಗೆ ನಾನು ಆಭಾರಿಯಾಗಿದ್ದೇನೆ.

ನನ್ನ ಹಲವು ಕೃತಿಗಳಂತೆ ಈ ಪುಸ್ತಕದ ಈ ಕನ್ನಡರೂಪವು ಕೂಡ ಲೋಕಪ್ರಿಯವಾಗುವದೆಂದು ನಂಬಿ ಕನ್ನಡಪ್ರೇಮಿಗಳಿಗೆ ಅರ್ಪಿಸುತಲಿದ್ದೇನೆ.

ರಾಜಭವನ-ಪಟನಾ
೧೨-೨-೧೯೫೪

ರಂಗನಾಥ ದಿವಾಕರ

# ಗ್ರಂಥಕರ್ತನ ಪ್ರಸ್ತಾವನೆ



(ಇಂಗ್ಲಿಷ್ ೧ ನೆ ಆವೃತ್ತಿಗೆ ಬರೆದುದು)

ಈ ಗ್ರಂಥವನ್ನು ನಾನು ಬರೆದೇನೆಂದು ನನ್ನ ಎಣಿಕೆಯಿರಲಿಲ್ಲ; ಇಂಥ ಕೆಲಸವು ನನ್ನ ಅಳವಿನ ಆಚೆಯದೆಂದೂ ನಾನು ಭಾವಿಸಿದ್ದೆ. ಈ ವಿಚಿತ್ರ ಜಗತ್ತಿನಲ್ಲಿ ದೈವಯೋಜನೆಯನ್ನು ಮುಂಚಿತವಾಗಿ ಯಾರೂ ಅರಿಯರು. ನಮ್ಮ ನಮ್ಮ ಇಷ್ಟದೈವದ ಪೂರ್ವಯೋಜನೆಯಂತೆ ಪರಿಸ್ಥಿತಿಯು ತನ್ನ ಪ್ರಭಾವದಿಂದ ನಮ್ಮಿಂದ ಕಾಲಕಾಲಕ್ಕೆ ಇಂತಿಂತಹ ಕಾರ್ಯವನ್ನೆ ಮಾಡಿಸಿ ಬಿಡುತ್ತದೆ.

ಒಂದು ಮಾತನ್ನು ನಾನಿಲ್ಲಿ ಸಂತೋಷದಿಂದ ಒಪ್ಪಿಕೊಳ್ಳುತ್ತೇನೆ; ಅದೇನೆಂದರೆ, ಕೊನೆಗೊಮ್ಮೆ ಈ ಕೆಲಸವನ್ನು ನಾನು ಕೈಕೊಂಡಕೂಡಲೆ ದಿನ ದಿನವೂ ಅದು ನನ್ನ ಅಂತರಂಗವನ್ನೆ ಆವರಿಸತೊಡಗಿತು. ಕೆಲಸವು ಮುಂದುವರಿದಂತೆ ಅದರ ಭವ್ಯತೆಯ ಅರಿವೂ ನನಗುಂಟಾಯಿತು. ಅದೇ ಕಾಲಕ್ಕೆ ನನ್ನ ಚಿತ್ತವು ಹೆಚ್ಚು ಹೆಚ್ಚಾಗಿ ಆಕರ್ಷಿತವಾಗತೊಡಗಿತು. ಕೈಕೊಂಡ ಈ ಕಾರ್ಯದಲ್ಲಿ ನಾನು ಎಷ್ಟರ ಮಟ್ಟಿಗೆ ಯಶಸ್ವಿಯಾಗಿರುವೆನೊ ನಾನರಿಯೆ. ಆದಾಗ್ಯೂ ಈ ಕಾರ್ಯದಲ್ಲಿ ನಾನು ನಿಮಿತ್ತನಾದುದು ನನ್ನ ಭಾಗ್ಯವೆ ಸರಿ. ಮಹಾಪುರುಷರ ಚರಿತ್ರೆಗಳು ನನ್ನನ್ನು ಯಾವಾಗಲೂ ಆಕರ್ಷಿಸಿವೆ. ಅದರಲ್ಲಿಯೂ ಸಾಧುಸಂತರ ಇಲ್ಲವೆ ಆಧ್ಯಾತ್ಮವಿದ್ಯಾಕ್ಷೇತ್ರದಲ್ಲಿ ಮಾನವಕುಲಕ್ಕೆ ಗುರುಗಳಾದವರ ಚರಿತ್ರೆಗಳಿಗಂತೂ ನಾನು ಹೆಚ್ಚಾಗಿ ಮನಸೋತಿದ್ದೇನೆ.

ಶಾಲೆಯಲ್ಲಿ ವಿದ್ಯಾರ್ಥಿಯಿದ್ದಾಗಿನಿಂದಲೂ ಶ್ರೀ ಅರವಿಂದರಲ್ಲಿ ಗೌರವಾದರಗಳನ್ನು ತಳೆದವನು ನಾನು. ಅವರ ಗ್ರಂಥಗಳ ಅಭ್ಯಾಸವನ್ನು ನಮ್ರ ಜಿಜ್ಞಾಸುವಾಗಿ ಅಂದಿನಿಂದಲೂ ಮಾಡುತ್ತ ಬಂದಿದ್ದೇನೆ. 'ಯುಗಾಂತರ' 'ಬಂದೇ ಮಾತರಮ್', 'ಕರ್ಮಯೋಗಿನ್' ಪತ್ರಿಕೆಗಳಲ್ಲಿ ಅವರು ಬರೆಯುತ್ತಿದ್ದ ಸ್ಫೂರ್ತಿದಾಯಕ ಲೇಖಗಳನ್ನು ನಾವು ಆತ್ಯಾತುರರಾಗಿ ಓದುತ್ತಿದ್ದೆವು. ಆಗಿನ ನಮ್ಮ ಎಳಕ ಮನಗಳಿಗೆ ಅವರ ಲೇಖಗಳಲ್ಲಿಯ ಗರ್ಭಿತಾರ್ಥವು ಪೂರ್ಣವಾಗಿ ಅವಗತವಾಗುತ್ತಿರಲಿಲ್ಲ. ಆದರೂ ಅವುಗಳಲ್ಲಿಯ ಉಚ್ಚ, ಉದಾತ್ತ, ಆಧ್ಯಾತ್ಮಿಕ ಪ್ರವೃತ್ತಿಯೆ ನಮ್ಮ ಮನಗಳನ್ನು ಸೆಳೆದುಕೊಂಡಿ

ತ್ತೆಂಬುದನ್ನು ನಾನು ಪೂರ್ಣ ಬಲ್ಲೆ. ಅಂದಿನ ಅವರ ರಾಜಕೀಯ ವಿಚಾರಗಳು ಅತ್ಯಂತ ಪ್ರಚೋದಕವಾಗಿದ್ದುವಲ್ಲದೆ ಆ ವಿಚಾರಗಳ ತತ್ತ್ವಶಾಸ್ತ್ರವಂತೂ ನಮಗೆ ಸೋಮರಸವೆ ಆಗಿತ್ತು.

ಶ್ರೀ ಅರವಿಂದರು ರಾಜಕೀಯ ಕ್ಷೇತ್ರದಿಂದ ನಿವೃತ್ತರಾದಾಗ ನಾನು ಕೇವಲ ಹದಿನಾರು ವರ್ಷದವನಿದ್ದೆ. ಆ ತರುವಾಯದ ಅವರ ಲೇಖನ-ಭಾಷಣಗಳಾದರೂ ನನ್ನ ಮನಸ್ಸನ್ನು ಮೊದಲಿನಂತೆಯೆ ಆಕರ್ಷಿಸತೊಡಗಿದವು. ಅಂದಿನಿಂದ ಇಂದಿನ ವರೆಗೂ ಅವರ ಗ್ರಂಥಗಳನ್ನು ಓದುತಲಿದ್ದೇನೆ. ಈಗ ಅವರ ಚರಿತ್ರೆ, ಸಾಧನೆ ಮತ್ತು ಉಪದೇಶ ಇವುಗಳ ಬಗ್ಗೆ ಒಂದು ಚಿಕ್ಕ ಅಭ್ಯಾಸಪೂರ್ಣ ಗ್ರಂಥವನ್ನು ಬರೆದು ಮುಗಿಸಿ ಅದನ್ನು ಅವರನ್ನು ಅರಿತವರ ಹಾಗು ಇನ್ನೂ ಅರಿಯಬೇಕಾದವರ ಕೈಯಲ್ಲಿ ಕೊಡಲು ನಾನು ಸಮರ್ಥನಾದುದಕ್ಕೆ ನನಗೆ ಸಮಾಧಾನವೆನಿಸಿದೆ.

ನನ್ನ ಈ ಗ್ರಂಥದಲ್ಲಿ ಅವರ ಸಂಪೂರ್ಣ ಚರಿತ್ರೆಯಾಗಲಿ, ಅವರ ಅಂತ-ರಂಗಜೀವನದ ಪೂರ್ಣ ಚಿತ್ರವಾಗಲಿ ಇಲ್ಲವೆಂಬುದರ ಅರಿವು ನನಗಿದೆ. ಇದನ್ನು ಬರೆಯುವಾಗ ಆ ಉದ್ದೇಶವು ನನ್ನ ಕಣ್ಣುಮುಂದೆ ಇರಲಿಲ್ಲವೆಂದೆ ಹೇಳಬಹುದು. ಹಿಮಾಲಯದ ಅತ್ಯುನ್ನತ ವೈಭವವನ್ನು ಕೈವಶಪಡಿಸಿ-ಕೊಳ್ಳುವದು ನನ್ನಿಂದ ಸಾಧ್ಯವೆ? ಅದರ ದುರ್ಗಮ ಪಥವನ್ನು ಒಳಹೊಕ್ಕು ನಾನು ಶೋಧಿಸಬಲ್ಲೆನೆ? ಈ ಪುಟಗಳಲ್ಲಿ ಕೇವಲ ಸೂಚನೆಯಿದೆಯೆ ಹೊರತು ಸರ್ವಸಂಗ್ರಹವಿಲ್ಲ; ಇಲ್ಲಿ ಕೇವಲ ಪ್ರಚೋದನೆಯಿದೆಯೆ ಹೊರತು ಪೂರ್ಣ ವರ್ಣನೆಯಿಲ್ಲ; ಇಲ್ಲಿ ಮುಖ್ಯ ಮಾತನ್ನು ಧ್ವನಿತ ಮಾಡಿದೆಯೆ ಹೊರತು ವಿಸ್ತಾರವಾಗಿ ವಿವರಿಸಿಲ್ಲ. ಮಾನವಕುಲದ ಮುಂಬರುವ ಸಂತಾನಕ್ಕಾಗಿ ಶ್ರೀ ಅರವಿಂದರು ಬಿಟ್ಟು ಹೋದ ಭವ್ಯ ಭಾಂಡಾರದ ಬಾಗಿಲು ಇಲ್ಲಿದೆಯೆಂದು ಕೈಯೆತ್ತಿ ತೋರಿಸುವ ಕೈಗಂಬ ಮಾತ್ರ ಈ ಗ್ರಂಥ! ಅವರ ಭಾಂಡಾರವು ವಿಶಾಲವಾಗಿದೆ, ವಿಪುಲವಾಗಿದೆ, ವಿವಿಧವೂ ಆಗಿದೆ. ಅವರ ಎಲ್ಲ ಬರೆವಣಿಗೆಗೂ ಮಾತಿಗೂ ಅವರ ಅದ್ವಿತೀಯ ದಿವ್ಯಾನುಭವಗಳ ಆಧಾರವಿದೆ. ಆದುದರಿಂದ, ಅವರು ಬಿಟ್ಟು ಹೋದ ವಾಙ್ಮಯದ ತುಂಬೆಲ್ಲ ಉದಾತ್ತ ಪ್ರೇರಣೆಯುಂಟು, ದೈವೀ ಅಂತರ್ಜ್ಞಾನವುಂಟು, ದ್ರಷ್ಟಾರನ ನಿಶ್ಚಿತ ದರ್ಶನವುಂಟು.

ಅಲ್ಪಜೀವಿಗಳಿಂದ ತುಂಬಿದ ಈ ಜಗತ್ತಿಗೆ ಆಗೀಗ ಭೆಟ್ಟಿಕೊಡುವ ಮಹಾವಿಭೂತಿಪುರುಷರಲ್ಲಿ ಅವರೊಬ್ಬರಾಗಿದ್ದರೆಂಬುದು ನಿಃಸಂಶಯದ

ಮಾತು. ಇಂಥ ಮಹಾಪುರುಷರೆ ಮಾನವಕುಲಕ್ಕೆ ಹೊಸ ಬೆಳಕನ್ನು ಕೊಡುತ್ತಾರೆ; ಮಾನವ ಸಂತಾನದಲ್ಲಿ ಹೊಸ ಜೀವಕಳೆ ಹುಟ್ಟಿಸುತ್ತಾರೆ. ಇಂಥವರೆ ಮಾನವನ ದೃಷ್ಟಿಯನ್ನೂ ಚೇತನವನ್ನೂ ವಿಶಾಲಗೊಳಿಸುತ್ತಾರೆ. ಆಧುನಿಕ ಕಾಲದಲ್ಲಿ ಅಧ್ಯಾತ್ಮ ಕ್ಷೇತ್ರದಲ್ಲಿ ಕೈಕೊಳ್ಳಲಾದ ಅತಿ ದೊಡ್ಡ ಸಾಹಸವು ಶ್ರೀ ಅರವಿಂದರದು.

ಮಾನವನು ಭೌತಿಕ ಪ್ರಪಂಚದ ಬಗ್ಗೆ ತನ್ನ ಜ್ಞಾನವನ್ನು ಹೆಚ್ಚಿಸಿ-ಕೊಳ್ಳುತ್ತ ಬಾಹ್ಯ ಪಾರ್ಥಿವ ಜಗತ್ತನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಳ್ಳಲು ನಿತ್ಯ ಪ್ರಯತ್ನ ನಡಿಸಿದ್ದಾನೆ. ಈ ಪ್ರಯತ್ನದಲ್ಲಿ ಸಾಹಸವಿದೆ, ಮಹತ್ವಾಕಾಂಕ್ಷೆಯಿದೆ, ಅದ್ಭುತರಮ್ಯತೆಯೂ ಇದೆ. ಇದೆಲ್ಲವು ಮನೋಮೋಹಕವೂ ಆಗಿದೆ. ಅಣುವಿನ ಸ್ಫೋಟವಾಯಿತೆಂದಾಗ, ಇಲ್ಲವೆ ಗೌರೀಶಂಕರ ಶಿಖ-ರಾರೋಹಣದ ಯಶಸ್ವಿ ಪ್ರಯತ್ನವಾಯಿತೆಂದಾಗ ಅವುಗಳ ವೃತ್ತಾಂತವನ್ನು ಒಮ್ಮೆ ಆಕಸ್ಮಿಕವಾಗಿ ಓದಿದರೂ ಸಾಮಾನ್ಯ ವಾಚಕರಲ್ಲಿ ಅದ್ಭುತ ರೋಮಹರ್ಷವುಂಟಾಗುವದೆಂದ ಮೇಲೆ ಆ ಪ್ರಯತ್ನಗಳು ನಿರ್ಜೀವ-ನೀರಸವೆಂದು ಯಾರು ಅಂದಾರು? ಪ್ರತ್ಯಕ್ಷ ಸಾಹಸವಂತೂ ಎಷ್ಟೊಂದು ಉತ್ತೇಜಕವೂ ಉನ್ಮಾದಕವೂ ಆಗಿರಬೇಕು!

ಆದಾಗ್ಯೂ ಇಂದಿನ ಯುಗದ ದುರಂತ ಕಥೆಯೆ ಬೇರೆ ಬಗೆಯದಾಗಿದೆ. ನಮ್ಮ ಅಂತರಾತ್ಮನನ್ನು ನಾವು ಕೆಲಮಟ್ಟಿಗಾದರೂ ಅಲಕ್ಷಿಸಿರುವದು ಆತ್ಮಘಾತಕ ವೃತ್ತಿಯಾಗಿದೆ. ಈ ದಿಕ್ಕಿನಲ್ಲಿ ಆಧುನಿಕ ವಿಜ್ಞಾನಕ್ಷೇತ್ರದಲ್ಲಿ ತೀರ ಇತ್ತೀಚೆ ಸ್ವಲ್ಪ ಸಂಶೋಧನೆಯೇನೊ ನಡೆದಿದ್ದು ಅದಾದರೂ ತ್ರೋಟಕವೆ ಆಗಿದೆ. ಈಗಾಗಲೆ ಮಾನವಕುಲಕ್ಕೆ ಪಿತ್ರಾರ್ಜಿತ ಆಸ್ತಿಯೆಂದು ದೊರಕಿದ ಅಧ್ಯಾತ್ಮವಿದ್ಯೆಯನ್ನು ಉಪಯೋಗಿಸಿಕೊಂಡು, ಅಂತಃಪ್ರಜ್ಞೆಯನ್ನು ನಿಯಂ-ತ್ರಿಸಿ ಅದನ್ನು ಗೆಲ್ಲುವ ವೀರ ಧೀರ ಪಥದಲ್ಲಿ ಈ ಮೊದಲಿಗಿಂತಲೂ ಹೆಚ್ಚಿನ ಸಾಹಸ ಕೈಕೊಳ್ಳುವ ಅತಿ ದೊಡ್ಡ ಪ್ರಯತ್ನವು ಆಗಬೇಕಾದುದು ಆವಶ್ಯಕ ಇದೆ. ನಾವೀಗ ಗೆಲ್ಲಬೇಕಾದ ಗೌರೀಶಂಕರವು ಬಿಳಿ ಬರ್ಫದಿಂದ ಬೆಳಗುವ ಹಿಮಾಲಯ ನಗಾಧಿರಾಜನ ಶುಭ್ರಕಿರೀಟವಲ್ಲ; ಆದರೆ ಅದು ನಮ್ಮ ಅಂತ-ರ್ಲೋಕದ ಅಧಿರಾಜ್ಯದಲ್ಲಿ ಮಿಣುಗುವ ನಂದಾದೀಪದ ದೀಪಸ್ತಂಭವಾಗಿದೆ. ಮಾನವನು ತನ್ನ ಒಳಗೆಯೆ ಸ್ವರಾಜ್ಯವನ್ನು ಎಲ್ಲಿಯ ವರೆಗೆ ಸ್ಥಾಪಿಸಿಲ್ಲವೊ, —ಆತನ ಚಂಚಲ ಮನವು ವಿಕಾರಗಳಿಂದಲೂ ಉನ್ಮತ್ತ ರಾಜಸಿಕ ಪ್ರಚೋದನೆಯಿಂದಲೂ ಎಲ್ಲಿಯ ವರೆಗೆ ಹೊಯ್ದಾಡುತಿದೆಯೊ—ಅಲ್ಲಿಯ

ವರೆಗೆ ಅವನಿಗೆ ಶಾಂತಿ, ಆನಂದ ಇಲ್ಲವೆ ತನ್ನ ಅಂತಃಶಕ್ತಿಗಳ ಮೇಲೆ ಪ್ರಭುತ್ವ ಇವು ದೊರೆಯಲಾರವು.

ಅಂಥ ಅಂತರ್ಲೋಕದ ಅಧಿರಾಜ್ಯದ ದುರ್ಗಮ ಪಥವನ್ನು ಶೋಧಿಸಿ ತೆಗೆಯುವದರಲ್ಲಿ ಶ್ರೀ ಅರವಿಂದರು ಕೈಕೊಂಡ ಸಾಹಸವು ಅತಿ ಶ್ರೇಷ್ಠವಾದುದು. ಇಂಥವರ ಚರಿತ್ರೆ-ಸಾಧನೆ-ಸಿದ್ಧಿಗಳ ಒಂದು ನೋಟವನ್ನು ಚಿತ್ರಿಸುವ ಭಾಗ್ಯವು ನನಗೆ ದೊರಕಿದುದಕ್ಕಾಗಿ ನಾನು ಧನ್ಯನೆ ಸರಿ.

ನಮ್ಮ ಕಥಾನಾಯಕರ ಆಂತರಿಕ ಜೀವನದ ಪೂರ್ಣ ಕಥೆಯನ್ನು ಬರೆಯುವದು ಅವರನ್ನುಳಿದು ಇನ್ನಾರಿಗೂ ಸಾಧ್ಯವೆ ಇಲ್ಲ. ಏಕೆಂದರೆ, ಅವರೆ ಅಂದಂತೆ 'ಅದು ಮೇಲ್ಭಾಗದಲ್ಲಿ ನೆಲಿಸಿಲ್ಲ'. ತಮ್ಮ ಚರಿತ್ರೆಯ ಮಾತು ಬಂದಾಗ ಅವರೆ ಹೀಗೆ ಉದ್ಗಾರ ತೆಗೆದುದುಂಟು (೧೯-೧೧-'೨೫. ದಕ್ಷಿಣಾ ಆಗಸ್ಟ ೧೯೫೧):— 'ನನ್ನ ಚರಿತ್ರೆ ಬರೆಯುವದು ಸಾಧ್ಯವೆ ಇಲ್ಲ. ಇದಲ್ಲದೆ ಕವಿಗಳ, ತತ್ತ್ವಜ್ಞಾನಿಗಳ ಹಾಗೂ ಯೋಗಿಗಳ ಚರಿತ್ರೆ ಬರೆಯುವದರಲ್ಲಿ ಅರ್ಥವೂ ಇಲ್ಲ. ಇದರ ಕಾರಣವೆಂದರೆ, ಜನರ ಹೊರಗಣ್ಣಿಗೆ ಕಾಣುವ ಕ್ರಿಯೆಗಳಿಂದ ಇಂಥವರ ಒಳಗಿನ ನಿಜವಾದ ಜೀವನವನ್ನು ಅಳೆದು ನೋಡಲು ಬರುವದಿಲ್ಲ. ನೆಪೋಲಿಯನ್, ಜೂಲಿಯಸ್ ಸೀಝರರಂಥವರ ಚರಿತ್ರೆಗಳ ರೀತಿಯೆ ಬೇರೆ; ಅವರ ಜೀವನಸಿದ್ಧಿಯು ಅವರ ಕರ್ಮಕ್ಷೇತ್ರದಲ್ಲಿಯೆ ವ್ಯಕ್ತವಾಗುವದು.' ಆದರೆ ಇಂದು ಶ್ರೀ ಅರವಿಂದರು ನಮಗೆ ಕಾಣದ ಹಾಗು ತಿಳಿಯದ ಲೋಕದಲ್ಲಿ ಪ್ರವೇಶಮಾಡಿದ್ದಾರೆ. ಅವರೆ ಬರೆಯುಬಲ್ಲಾಗ ಇಂಥ ಯಾವ ಚಾರಿತ್ರಿಕ ವಿಷಯಗಳನ್ನೂ ಅವರು ಬರೆದಿಟ್ಟಿಲ್ಲ-ವೆಂದಮೇಲೆ, ಈಗ ಅವರು ತಮ್ಮ ಹಿಂದೆ ಬಿಟ್ಟುಹೋದ ಸೂಚಕ ಉಕ್ತಿ-ವಚನಗಳ ಆಧಾರದ ಮೇಲಿಂದಲೆ ನಾವು ಅವರ ಚರಿತ್ರೆಯನ್ನು ರಚಿಸಬೇಕಾಗಿದೆ. ಇಂಥ ಉಕ್ತಿ-ವಚನಗಳಾದರೊ ಹೇರಳವಾಗಿವೆ. ಅವರ ಆತ್ಮಪುರುಷನು ನಮ್ಮೆಲ್ಲರಿಗಾಗಿ ಅಂತರ್ಲೋಕದಲ್ಲಿ ಎಷ್ಟೊಂದು ನಿಕರದ ಕಾಳಗವನ್ನು ಹೂಡಬೇಕಾಯಿತೆಂಬುದನ್ನು ತಿಳಿದುಕೊಳ್ಳುವದಕ್ಕೆ ಈ ಉಕ್ತಿಗಳು ಸಾಕಷ್ಟಿವೆ. ಅವರ ಜೀವನವೆ ಒಂದು ವೀರ ಮಹಾಕಾವ್ಯವಾಗಿತ್ತು; ಆ ಮಹಾಕಾವ್ಯದ ನಾಯಕನಾಗಿ ಅವರು ಗೈದ ಪಾತ್ರದ ಪರಿಚಯವನ್ನು ಮಾಡಿಕೊಳ್ಳಲು ಅವರ ಈ ವಚನಗಳು ಬೇಕಾದಷ್ಟಿವೆ. ನಾವು ಅರಿಯಲಿ ಇಲ್ಲವೆ ಅರಿಯದಿರಲಿ— ಆ ಅನಂತ ಬ್ರಹ್ಮಚೈತನ್ಯದೊಳಗಿಂದಲೆ,— ಉಪ-ನಿಷತ್ತುಗಳು ಹೇಳುವ ಆ 'ಆನಂದ' ದೊಳಗಿಂದಲೆ ನಾವೆಲ್ಲರೂ ಹುಟ್ಟಿ

ಬಂದಿದ್ದೇವೆ. ನಾವಿರುವದು ಅದರಲ್ಲಿಯೆ; ನಾವು ಸಕಲ ಕರ್ಮಗಳನ್ನು ಗೈಯುವದೂ ಅದರಲ್ಲಿಯೆ. ನಮ್ಮ ಸಕಲ ಅಸ್ತಿತ್ವವೂ ಅದರಲ್ಲಿಯೆ ಇದ್ದು ನಾವು ಲಯಹೊಂದುವದೂ ಅದರಲ್ಲಿಯೆ ಸರಿ. ಈ ಅತ್ಯಲ್ಪ ಜಾಗ್ರತ ಜೀವನದ ಸಂಮೋಹಿನೀ ಶಕ್ತಿಯಿಂದ ನಾವು ಆವೇಶಗೊಂಡಿರುತ್ತೇವೆ; ಆದರೆ ನಮ್ಮ ಚೇತನದ ಸೂಕ್ಷ್ಮತರ ಲೋಕಗಳನ್ನು ನಾವು ಅರಿಯೆವು. ನಮ್ಮ ಆದಿಯಾಗಲಿ ಅಂತವಾಗಲಿ ನಮಗೆ ತಿಳಿಯದು. ಆದಾಗ್ಯೂ, ಜೀವನದ ರಸನಿಮಿಷಗಳ ಅವಧಿಯಲ್ಲಿ, — ಸತ್ತ್ವ ( Being ) ಮತ್ತು ಸಂಭೂತಿ ( Becoming ) ಇವುಗಳ ಅಜ್ಞಾತ ಮಹಾಸಾಗರದೊಡನೆ ನಾವು ಪಡೆದ ಸಮರಸತೆ-ಸಮಗ್ರತೆಗಳ ಅನುಭವವು ನಮಗೆ ಆಗುವದು; ಈ ಎರಡೂ ಶಕ್ತಿಗಳನ್ನು ಸಮನ್ವಯಗೊಳಿಸಿ ಸಫಲಗೊಳಿಸುವ ಆ ಪುರು-ಷೋತ್ತಮನ ದಿವ್ಯಾನುಭವವೂ ಆಗುವದುಂಟು. ನಮ್ಮ ಅಸ್ತಿತ್ವದ ಸಾರವೆ ಆಗಿರುವ ಇಂಥ ಅಂತರ್ಲೋಕದಲ್ಲಿ ಮುಳುಗಿ ನೋಡಲು ಶ್ರೀ ಅರವಿಂದರ ಆತ್ಮವು ಬೆಳಕನ್ನು ತೋರುವದು. ತಮದಿಂದ ಜ್ಯೋತಿಗೂ ಅಸತ್ಯದಿಂದ ಸತ್ಯಕ್ಕೂ, ಮೃತ್ಯುವಿನಿಂದ ಅಮೃತತ್ವಕ್ಕೂ ಅವರು ನಮ್ಮನ್ನು ಕರೆದೊಯ್ಯಲಿ.

ಇನ್ನು ಗ್ರಂಥದ ಯೋಜನೆಯ ಬಗ್ಗೆ ಕೆಲವು ಮಾತುಗಳನ್ನು ಹೇಳುವದು ಅವಶ್ಯವಿದೆ. ಮೊದಲಿನ ಆರು ಪ್ರಕರಣಗಳಲ್ಲಿ ಅವರ ಚರಿತ್ರೆಗೆ ಸಂಬಂಧಿಸಿದ ವಾಸ್ತವಿಕ ಸಂಗತಿಗಳನ್ನೆ ಹೆಚ್ಚಾಗಿ ಸಮಾಲೋಚಿಸಿದ್ದು, ಯಾವ ನಾಟಕದ ನಾಯಕರು ಅವರಾಗಿದ್ದರೂ ಅದರ ಕ್ರಮಬದ್ಧ ವಿಕಾಸವು ಈ ಪ್ರಕರಣಗಳಲ್ಲಿ ಉಂಟು. ಏಳರಿಂದ ಹನ್ನೊಂದರ ವರೆಗಿನ ಪ್ರಕರಣಗಳಲ್ಲಿ ಮುಖ್ಯವಾಗಿ ಅವರ ಸಾಧನೆ-ಸಿದ್ಧಿ-ಉಪದೇಶಗಳ ಬಗ್ಗೆ ವಿವೇಚಿಸಲಾಗಿದೆ. ನನ್ನ ದೃಷ್ಟಿಯಲ್ಲಿ, ಅವರ ಆಧ್ಯಾತ್ಮಿಕ ಸಾಧನೆಗೆ ಸಂಬಂಧಿಸಿದ ಜ್ಞಾನವೆ ಉಳಿದೆಲ್ಲ ಸಂಗತಿಗಳಿಗಿಂತ ಮಾನವಕುಲಕ್ಕೆ ಅತಿ ಮಹತ್ವದ ನಿಧಿಯಾಗಿದೆ. ಸತ್ಯದ ಶೋಧಕರಿಗೆಲ್ಲ ಈ ನಿಧಿಯೆ ಪ್ರತ್ಯಕ್ಷ ಸಹಾಯವನ್ನು ನೀಡಬಲ್ಲದು.

ಮೂರು ವರ್ಷಗಳ ಹಿಂದೆ ಮೊನ್ನೆಮೊನ್ನಿನ ವರೆಗೂ ನಮ್ಮ ಮಧ್ಯ-ದಲ್ಲಿಯೆ ಇದ್ದು ಈಗ ಪುನಃ ತಮ್ಮ ಅನಂತಯಾತ್ರೆಯನ್ನು ಕೈಕೊಂಡಿರ ಬಹುದಾದ ಮಹಾಯೋಗಿಗಳ ವಿಷಯವಾಗಿ ನಾನು ಬರೆದ ಈ ಕೃತಿಯನ್ನು ಅವರನ್ನು ಅರಿಯಬಯಸುವ ಜಿಜ್ಞಾಸುಗಳೆಲ್ಲರೂ ಮೆಚ್ಚುವರೆಂದು ನೆರೆ-ನಂಬಿದ್ದೇನೆ.

ಈ ಪ್ರಕಟನೆಯು ಸಾಧ್ಯವಿದ್ದಷ್ಟು ಉಪಯುಕ್ತವಾಗಬೇಕೆಂದು ಕೊನೆಯಲ್ಲಿ ಕೆಲವು ಹೆಚ್ಚೋಲೆ, ಆಧಾರಗ್ರಂಥಗಳು, ಕೋಶ ಮತ್ತು ಗ್ರಂಥಸೂಚಿ ಇವನ್ನು ಕೊಟ್ಟಿದ್ದೇನೆ. ಭಾರತೀಯ ವಿದ್ಯಾಭವನದ ಅಧ್ಯಕ್ಷರಾದ ಶ್ರೀ. ಕೆ. ಎಂ. ಮುನಸಿಯವರು ತಮ್ಮ ಲೋಕಪ್ರಿಯ 'ಭವನ'ದ ಪುಸ್ತಕ ವಿಶ್ವವಿದ್ಯಾಲಯದ ಮಾಲೆಯಲ್ಲಿ ನನ್ನ ಈ ಕೃತಿಯನ್ನು ಪೋಣಿಸಲು ಸಮ್ಮತಿಸಿ ಅನೇಕ ರೀತಿಯಿಂದ ಪವಿತ್ರವೂ ಸಂಸ್ಮರಣೀಯವೂ ಆದ ೧೫ನೆಯ ಅಗಸ್ಟ ದಿನಾಂಕದಲ್ಲಿಯೆ ಪ್ರಸಿದ್ಧಿಸುವ ಯೋಜನೆ ಮಾಡಿದ್ದಕ್ಕಾಗಿ ನಾನು ಶ್ರೀ ಮುನಸಿಯವರಿಂದ ತುಂಬ ಉಪಕೃತನಾಗಿದ್ದೇನೆ.

ಈ ಗ್ರಂಥವನ್ನು ಬೆಳಕಿಗೆ ತರಲು ನನಗೆ ಪ್ರೋತ್ಸಾಹವಿತ್ತ ನನ್ನ ಎಲ್ಲ ಮಿತ್ರರಿಗೂ—ವಿಶೇಷವಾಗಿ ಶ್ರೀ ಸುರೇಂದ್ರ ಮೋಹನ ಘೋಷ, ಶ್ರೀ. ಸುರೇಂದ್ರ ಜೌಹರ, ಶ್ರೀ ಪೋದ್ದಾರ ಮತ್ತು ಶ್ರೀ ನಲಿನೀಕಾಂತ ಗುಪ್ತ ಇವರೆಲ್ಲರಿಗೂ ನಾನು ಋಣಿಯಾಗಿದ್ದೇನೆ. ಇದನ್ನು ಬರೆಯುವಾಗ ಉಪಯುಕ್ತ ಸಾಮಗ್ರಿಯನ್ನು ಒದಗಿಸಿದುದಕ್ಕಾಗಿ ಪಾಟ್ನಾದ ಪ್ರೊ. ಕೆ. ಕೆ. ದತ್ತ ಇವರಿಗೂ ಮೂಲಪ್ರತಿ—ಕೋಶ—ಗ್ರಂಥ ಸೂಚಿಗಳನ್ನು ಸಿದ್ಧಪಡಿಸುವದರಲ್ಲಿ ನನಗೆ ನೆರವಾದುದಕ್ಕಾಗಿ ಶ್ರೀ ಆರ್. ಎಸ್. ರಾವ್, ಶ್ರೀ ಗದಗಕರ ಮತ್ತು ಶ್ರೀ ಫಾಟಕ್ ಇವರೆಲ್ಲರಿಗೂ ನಾನು ಋಣಿಯಾಗಿದ್ದೇನೆ.

ರಾಂಚಿ
೧೦—೬—೧೯೫೩

ರಂ. ರಾ. ದಿವಾಕರ

# ಮಹಾಯೋಗಿ



## ೧ ಯುಗ-ಪ್ರವೃತ್ತಿ

ಜೀವನವನ್ನು, ಪ್ರಚಂಡಶಕ್ತಿಯೊಡನೆ ಮುಟ್ಟಲು ಬಾರದಂತೆ ಮುನ್ನುಗ್ಗುತ್ತ ಮೇಲೆ ಅಪ್ಪಳಿಸುತ್ತ ಭೋರ್ಗರೆಯುವ ಒಂದು ಮಹಾಪ್ರವಾಹಕ್ಕೆ ಹೋಲಿಸ-ಬಹುದು. ಆ ಪ್ರವಾಹವು ಹಾದಿಯಲ್ಲಿ ಅಡ್ಡಬರುವ ಜಡದ ಜಂಜಡವನ್ನೆಲ್ಲ ತನ್ನೊಂದು ಉದ್ದೇಶಕ್ಕಾಗಿ ಸಂತತವೂ ಕೊರೆಕೊರೆದು ಸಂಘಟಿಸುತ್ತ ನಡೆದಂತೆ ಜೀವನವೂ ಮುಂದೆ ಸಾಗುತ್ತಿದೆ; ತನ್ನ ಸಹಸ್ರ ರೂಪಗಳನ್ನು ಅದು ಪ್ರಕಟ-ಗೊಳಿಸುತ್ತಿದೆ. ಇಂಥ ಈ ಜೀವನಶಕ್ತಿಯ ಉಚ್ಚರೂಪವೆಂದರೆ ಸವ್ಯಕ್ಕಂತೂ ಮಾನವಕುಲವೇ ಸರಿ. ಕೋಟಿಗಟ್ಲೆ ವ್ಯಕ್ತಿಗಳಾಗಿ ಬೆಳೆದುಬಂದ ಮಾನವಪ್ರಾಣಿಗಳಾದ ನಾವೆಲ್ಲರೂ ನಿತ್ಯವೂ ನವಚೇತನದೊಡನೆ ಮುಂಬರಿಯುತ್ತಿರುವ ಆ ಶಾಶ್ವತ ಮಹಾಪ್ರವಾಹದಲ್ಲಿ ಎಲ್ಲಿಯೋ ಕೆಲವು ಸಣ್ಣ ಕ್ಷುದ್ರ ತುಂತುರು ಹನಿಗಳೇ ಸರಿ.

ಜೀವನದ ಮಧ್ಯದಲ್ಲಿ ಜೀವನದ ಮುಖಾಂತರವೇ ಚೇತನವೂ ಮನವೂ ನಮ್ಮಲ್ಲಿ ಹಣಿಕೆಹಾಕುತ್ತ ಪ್ರತಿವ್ಯಕ್ತಿಯೊಳಗಿನ ಚೈತ್ಯಪುರುಷನು ( Psyche ) ಈ ಪೃಥ್ವಿಯಲ್ಲಿ ಹೇಗೆ ಮುಂದುವರಿಯುತ್ತಿದ್ದಾನೆಂಬುದರ ಒಳನೋಟವನ್ನು ನಮಗೆ ತೋರಿಸಿಕೊಡುವವು. ಪೃಥ್ವಿಯಂಥ ಬೇರೆ ಗ್ರಹಗಳಲ್ಲಿಯೂ ಇಂಥ ಜೀವಶಕ್ತಿಯು ಇರಬಹುದೆಂದು ನಾವು ಕೆಲಮಟ್ಟಿಗೆ ಖಂಡಿತವಾಗಿ ಅನುಮಾನ ಮಾಡಬಹುದಾದರೂ ಅಲ್ಲಿಯ ಜೀವಕೋಟಿಯ ನಿಶ್ಚಿತ ಸ್ವರೂಪವನ್ನೂ ಅದರ ಪರಿಸ್ಥಿತಿಯನ್ನೂ ನಾವು ಕಲ್ಪಿಸಲಾರೆವು. ಪೃಥ್ವಿಯ ಮೇಲಿನ ಪರಿಸ್ಥಿತಿಯನ್ನೂ ಜಡಸೃಷ್ಟಿಯ ಸ್ಥಿತಿಗತಿಗಳನ್ನೂ ಅವಲೋಕಿಸಿದಲ್ಲಿ ಇಲ್ಲಿಯೂ ವಿಶಿಷ್ಟ ವಿಘ್ನಗಳು ಕಂಡುಬರುತ್ತಿದ್ದು ದಾರಿಯು ಸುದೀರ್ಘವೂ ದುರ್ಗಮವೂ ಆಗಿರುವದಲ್ಲದೆ ಡೊಂಕುಡೊಂಕಾಗಿಯೂ ಇರುವದುಂಟು; ಆದಾಗ್ಯೂ ಸಾಧಿಸಿದ ಪ್ರಗತಿಯು

ಸಣ್ಣದೇನಲ್ಲ. ಏಕೆಂದರೆ ವಿಜ್ಞಾನಿಗಳ ಅಭಿಪ್ರಾಯದಂತೆ ಪ್ರಾಣ-ಮನಃಶಕ್ತಿಯು (Life-mind) ಈ ಪೃಥ್ವಿಯ ಮೇಲೆ ಪ್ರಾದುರ್ಭವಿಸಿ ಇದೀಗ ಕೇವಲ ಕೆಲವೇ ಲಕ್ಷ ಇಲ್ಲವೆ ಕೋಟಿ ವರ್ಷಗಳು ಸಂದಿದ್ದು ಈ ಶಕ್ತಿಯು ಗಂಡಾಂತರಗಳಿಂದ ಕೂಡಿದ ಮಹತ್ವದ ಪ್ರಯಾಣವನ್ನು ಒಂದೇಸವನೆ ಮುಂದುವರಿಸುತ್ತಿದೆ. ಪ್ರಾಣ-ಮನಗಳು ಪ್ರಗತಿಪರವಾಗಿದ್ದು ಇನ್ನೂ ಹೊಸ ಹೊಸ ವಿಜಯಗಳನ್ನು ಅವು ಪಡೆಯಬಲ್ಲವಾಗಿವೆ. ಒಂದೊಮ್ಮೆ ವಾನರ-ನರ (Anthropoide ape) ನಿಂದ ಮಾನವಪ್ರಾಣಿಯ ಅದ್ಭುತವಿಕಾಸವಾದಂತೆ ಇನ್ನು ಮುಂದಿನ ಹೆಜ್ಜೆಯಾದರೂ ಅದ್ಭುತವೂ ಅಲ್ಲದೆ ರಮ್ಯವೂ ಆಗುವ ಆಶೆ ಕಂಡುಬರುತ್ತಿದೆ.

ಮಾನವರಲ್ಲಿಯಾದರೋ ಅತಿ ಸ್ವಲ್ಪ ವ್ಯಕ್ತಿಗಳು ಇತರರಂತೆಯೇ ಜೀವಿಸಿ-ಕೊಂಡಿರದೆ ತಮ್ಮ ಜೀವನದಲ್ಲಿ ದಿವ್ಯ ತೇಜವನ್ನು ಪ್ರಕಟಪಡಿಸುವದುಂಟು. ಅವರ ಚರಿತ್ರೆಯನ್ನು ನಿರೀಕ್ಷಿಸಿದಾಗ ಮಾನವಕುಲಕ್ಕೆ ಉಚ್ಚ ಉದಾತ್ತವಾದುದೊಂದು ಗುರಿಯುಂಟೆಂದೂ ಮಾನವನು ಊರ್ಧ್ವಲೋಕಾಭಿಮುಖವಾಗುವಂತಹ ಹೊಸ ಹೊಸ ಮಾರ್ಗಗಳನ್ನು ಹುಡುಕಿತೆಗೆಯುವದು ಸಾಧ್ಯವಿದೆಯೆಂದೂ ಪ್ರತ್ಯಕ್ಷ ನಿದರ್ಶನವು ದೊರೆಯುತ್ತದೆ. ಪ್ರಾಣ-ಮನಗಳೇ ಸೃಷ್ಟಿಯಲ್ಲಿಯ ಉಚ್ಚರೂಪಗಳೆಂದು ಖಂಡಿತವಾಗಿ ಹೇಳಲು ಬರುವಂತಿಲ್ಲ. ಸೂಕ್ಷ್ಮತರವೂ ಗೂಢಾದ್ಗೂಢ-ತರವೂ ಆದ ಒಂದಾನೊಂದು ಶಕ್ತಿಯು ತಾನೇ ತಾನಾಗಿ ಜಡ-ಪ್ರಾಣ-ಮನಗಳಲ್ಲಿ ಪ್ರಕಟವಾಗುವದೆಂಬ ಅನುಭವವು ಮಾನವೀಚೇತನಕ್ಕೆ ಈಗಾಗಲೇ ತೋಚಿದು-ದುಂಟು. ಮಾನವನ ಚೇತನವು ಅಹಂಕಾರದ ಆಚೆಗೆ ಹೋದಾಗ, ಆತನು ಪ್ರೇರಣೆಯ ಅವಸ್ಥೆಯನ್ನು ಪಡೆದಾಗ, ಪ್ರಕೃತಿಯಲ್ಲಿ ಅಂತರ್ಭೂತವಾದಂತಿರುವ ಆ ಗೂಢಶಕ್ತಿಯು ಸಾಧನವಾದ ಅಂತರ್‌ಜ್ಞಾನದ ಆದೇಶದಂತೆ ಆತನು ನಡೆದು ಕೊಳ್ಳುತ್ತಿರುವಾಗ ಅದರ ಕಿಂಚಿದನುಭವಗಳು ಆತನಿಗೆ ಆಗಾಗ ಬರುವದುಂಟು. ಜೀವನವೇ ಅಂಥ 'ಶ್ರೀಮದೂರ್ಜಿತ ಸತ್ತ್ವ'ವೊಂದನ್ನು ತಿಳಿದಾಗಲಿ ತಿಳಿಯದೆ ಆಗಲಿ ಶೋಧಿಸುತ್ತಿದೆ; ಜೀವಂತವಾದ ಪ್ರತಿ ವ್ಯಕ್ತಿಯೂ ಅದನ್ನು ಶೋಧಿಸು ತ್ತಿದೆ. ಮಾನವಕುಲವನ್ನು ಸಾಮಾನ್ಯ ಜೀವನದ ಮದದೊಳಗಿಂದ ಮೇಲೆತ್ತಿ ವಿಕಾಸದ ಮಾರ್ಗದಲ್ಲಿ ಅದನ್ನು ತ್ವರಿತ ಗತಿಯಿಂದ ಮುಂದೆ ಸಾಗಿಸಲು ಕಾಲ ಕಾಲಕ್ಕೆ ಪ್ರಯತ್ನಿಸಿದ ಅಪರೂಪದ ಮಹಾನುಭಾವರಲ್ಲಿ ನಿಃಸಂಶಯವಾಗಿಯೂ ಶ್ರೀ ಅರವಿಂದರು ಒಬ್ಬರು. ಪ್ರಪಂಚದ ವಿಚಾರಕ್ಷೇತ್ರಕ್ಕೆ ಅವರಿತ್ತ ಕಾಣಿಕೆ ವಿವಿಧವೂ ಬಹುಮುಖವೂ ಆಗಿದೆ; ಇಂಥ ಕಾಣಿಕೆ ಬೇರೊಂದಿಲ್ಲ. ಮುಖ್ಯವಾಗಿ ಯೋಗದ ಕ್ಷೇತ್ರದಲ್ಲಿಯೂ ಆಧ್ಯಾತ್ಮಿಕ ಸಾಧನೆ-ಸಿದ್ಧಿಗಳಲ್ಲಿಯೂ ಅವರ ಕಾಣಿಕೆ ಮೂಲಭೂತವೂ ಅದ್ವಿತೀಯವೂ ಆಗಿರುವದಲ್ಲದೆ ಕೆಲವು ಅಂಶಗಳಲ್ಲಿ ಪೂರ್ಣವಾಗಿ ಕ್ರಾಂತಿಕಾರಕವೂ ಆಗಿದೆ.

ಸಾಮಾನ್ಯವಾಗಿ ಸ್ತ್ರೀಪುರುಷರೆಲ್ಲರೂ ತಮ್ಮ ತಮ್ಮ ಯುಗದ ಪಡಿಯಚ್ಚುಗಳೇ ಆಗಿರುತ್ತಾರೆಂದು ಆಗಾಗ್ಗೆ ಅನ್ನುವದುಂಟು. ಜನಸಾಮಾನ್ಯರ ವಿಷಯದಲ್ಲಿ ಈ ಮಾತು ಎಷ್ಟೇ ನಿಜವಿದ್ದರೂ ಅಪವಾದಗಳು ಇದಕ್ಕೆ ಇದ್ದೇ ಇವೆ. ಶ್ರೀ ಅರವಿಂದ ರಂತೂ ಅತಿ ದೊಡ್ಡ ಅಪವಾದವೇ ಸರಿ. ಅವರಂಥ ಮಹನೀಯರು ಆಯಾ ಯುಗದ ಪರಿಸರದೊಳಗಿಂದಲೇ ಹುಟ್ಟಿಬಂದು ಅದರ ಪ್ರಭಾವವು ಅವರ ಮೇಲೆ ಆಗಿದ್ದರೂ ತಮ್ಮ ಕಾಲದ ಪರಿಸ್ಥಿತಿಯನ್ನು ಅವರು ಬಹುಮಟ್ಟಿಗೆ ಪಲ್ಲಟಿಸಿ ಯುಗಪುರುಷರೆನಿಸಿಕೊಳ್ಳುತ್ತಾರೆ. 'ಮಗುವು ಮಾನವನ ತಂದೆ' ಎಂಬ ಮಾತಿನಲ್ಲಿ ಯಾವ ಅರ್ಥವಿದೆಯೋ ಆ ಅರ್ಥದಲ್ಲಿ ಇಂಥವರು ತಮ್ಮ ಕಾಲದ ವ್ಯಕ್ತಿಗಳನ್ನು ರೂಪಿಸಿದ ಚರಿತ್ರಪುರುಷರಾಗುತ್ತಾರೆ. ಆಯಾ ಕಾಲದ ಪ್ರಭಾವವೂ ಅವರ ಮೇಲೆ ಆಗಿರುವದೆಂದು ಹೇಳುವಾಗ ಅವರಾದರೂ ತಮ್ಮ ಕಾಲದ ಪ್ರವಾಹದೊಳ-ಗಿಂದ ಹೊರತೆಗೆದ ಮೀನಿನಂತೇನೂ ಅಲ್ಲವೆಂದಿಷ್ಟೇ ಅರ್ಥ. ಅವರು ತಮ್ಮ ತಮ್ಮ ಕಾಲದ ಪೂರ್ವೋತ್ತರ ಸಂದರ್ಭಕ್ಕೆ ಹೊಂದಿಕೊಂಡೇ ಬಾಳಿದರೂ ಅತ್ಯಂತ ಮೌಲಿಕ ಕಾಣಿಕೆಯನ್ನು ತಮ್ಮ ಯುಗಕ್ಕೆ ಅರ್ಪಿಸುವದರಿಂದ ಅವರ ಪ್ರಭಾವವಾದರೂ ಆಯಾ ಕಾಲದ ಮೇಲೆ ಅಚ್ಚಳಿಯದೆ ಉಳಿದು ಅನಂತರದ ಅನೇಕ ಸಂತತಿಗಳು ಅವರ ಹೆಜ್ಜೆಯಲ್ಲಿಯೇ ಹೆಜ್ಜೆಯಿಟ್ಟು ಅವರನ್ನು ಅನುಸರಿಸುತ್ತವೆ. ಇಂಥವರಿಗೇ ಶಕಪುರುಷರೆಂದು ನಾವು ಕರೆಯುವುದು.

ಮಗುವು ಮೊದಲ ಉಸುರನ್ನು ಎಳೆದಾಗಿನಿಂದಲೇ ಅದರ ಚೈತ್ಯಶಕ್ತಿಯು ಸಜೀವವೂ ಕಾರ್ಯಪ್ರವೃತ್ತವೂ ಆಗಿದ್ದು ಕಾಲಮಾನ ಪರಿಸ್ಥಿತಿಯ ಸಾರವನ್ನೂ ಹೀರಿಕೊಳ್ಳಬಲ್ಲದೆಂಬ ಸಂಗತಿಯನ್ನು ಈಗ ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಶಿಶು ಅರವಿಂದನಾದರೋ ಅಸಾಧಾರಣ ಶಿಶುವಾಗಿದ್ದನು. ಶಾಲೆ ಕಲಿಯುತ್ತಿದ್ದಾಗಲೇ ಸಕಾಲಕ್ಕಿಂತ ಬಲು ಮುಂಚೆಯೇ ಪಕ್ವವಾದ ಫಲದಂತೆ ಅಸಾಧಾರಣ ವ್ಯಕ್ತಿತ್ವವು ಅವನಲ್ಲಿ ಮೈದಾಳಿತ್ತು. ಬಾಲ ಅರವಿಂದನ ಬಹುಶ್ರುತ ಪ್ರತಿಭೆಯು ಪ್ರಫುಲ್ಲವಾಗುತ್ತ ನಡೆದು ಮಾನವನಿಗೆ ಸಂಬಂಧಿಸಿದ ಪ್ರತಿ ಕ್ಷೇತ್ರದಲ್ಲಿಯೂ ಅದು ಕಾರ್ಯ-ಪ್ರವೃತ್ತವಾಗಿ ಕೊನೆಯಲ್ಲಿ ಪೂರ್ಣವೂ ಸಮಗ್ರವೂ ಆದ ತತ್ತ್ವಜ್ಞಾನವೊಂದನ್ನು ಅರಳಿಸಿ ತೋರಿಸಿತು. ಆದುದರಿಂದ ಕುಮಾರ ಅರವಿಂದನ ಜನ್ಮ-ಬಾಲ್ಯ-ಶಿಕ್ಷಣಗಳ ಸಮಯದಲ್ಲಿ ಗಾಳಿ ಹೇಗೆ ಬೀಸುತ್ತಿತ್ತು, ಯಾವ ಶಕ್ತಿಗಳು ಕಾರ್ಯ ಮಾಡುತ್ತಿದ್ದವು ಹಾಗೂ ಯಾವ ಪ್ರಭಾವಗಳು ಸುತ್ತಲೂ ಪಸರಿಸಿದ್ದವು ಈ ಮೊದಲಾದ ಮಾತುಗಳನ್ನು ಮೊದಲು ತಿಳಿದುಕೊಳ್ಳುವದು ಅವಶ್ಯವಾಗಿದೆ.

ಈ ಮತ್ತು ಇನ್ನಿತರ ದೃಷ್ಟಿಗಳಿಂದಲೂ ಶ್ರೀ ಅರವಿಂದರ ಚರಿತ್ರ-ಕಾರ್ಯ-ವಿಚಾರ-ಸಾಧನೆ-ಸಿದ್ಧಿ-ಉಪದೇಶಗಳ ಪೂರ್ಣ ಅರ್ಥವು ತಿಳಿಯಬೇಕೆಂಬ ಉದ್ದೇಶದಿಂದಲೂ ಅವರ ಯುಗದ ಸರ್ವಸಾಧಾರಣ ಪ್ರವೃತ್ತಿಗಳ ಐತಿಹಾಸಿಕ ಹಿನ್ನೆಲೆಯ

ಸುಳುಹನ್ನು ನಮ್ಮ ಕಣ್ಣಮುಂದೆ ಚಿತ್ರಿಸಿಕೊಂಡರೆ ಬಹಳ ಪ್ರಯೋಜನವುಂಟು. ಇದರಿಂದ ಅವರ ಆಚಾರ-ವಿಚಾರಗಳಿಗೂ ಅಂದಿನ ಪರಿಸ್ಥಿತಿಗೂ ಇರುವ ಪರಸ್ಪರ ಸಂಬಂಧವನ್ನು ಅರಿತುಕೊಳ್ಳಲು ಅತ್ಯಂತ ಸಹಾಯವಾಗುವದು.

ಇಲ್ಲಿ ಒಂದು ಮಾತನ್ನು ಲಕ್ಷಿಸಬೇಕಾಗಿದೆ. ನಾನಿಲ್ಲಿ ಚಿತ್ರಿಸುವ ಹಿನ್ನೆಲೆಗಾಗಲಿ ಸೂಚಿಸುವ ಪ್ರವೃತ್ತಿಗಳಿಗಾಗಲಿ ಇಂದಿನ ನಿರೀಕ್ಷಕರ ದೃಷ್ಟಿಕೋನವಿಲ್ಲ. ಇಂದಿನವರು ನೋಡುವ ದೃಷ್ಟಿಕೋನವೇ ಬೇರೆ. ಅಂದಿನ ನಿರೀಕ್ಷಕರೂ ವಿಚಾರವಂತರೂ ಸುಧಾರಕರೂ ನೋಡಬಹುದಾಗಿದ್ದ ದೃಷ್ಟಿಕೋನದಿಂದಲೇ ಆ ಕಾಲದ ಚಿತ್ರವನ್ನು ಮತ್ತೊಮ್ಮೆ ಕಣ್ಣಮುಂದೆ ರೂಪಿಸಿಕೊಳ್ಳುವ ಪ್ರಯತ್ನವನ್ನು ನಾನಿಲ್ಲಿ ಮಾಡುತ್ತಿದ್ದೇನೆ. ಅಂದು ಜೀವಿಸಿದ ಕರ್ಮವೀರರು ಎದುರಿಸಬೇಕಾಗಿ ಬಂದ ಸಮಸ್ಯೆಗಳನ್ನು ಅವರು ಕಂಡ ರೀತಿಯೇ ಬೇರೆ; ಅವರಿಗೆ ಅಡ್ಡ ಬಂದ ಶಕ್ತಿಗಳ ಸ್ವರೂಪವನ್ನು ಅವರು ತೂಗಿ ನೋಡಿದ ರೀತಿಯೇ ಬೇರೆ. ಇಂದಿನವರಾದ ನಾವು ನಮ್ಮ ಬುದ್ಧಿವಂತಿಕೆಯಿಂದಲೋ ಮೂರ್ಖತನದಿಂದಲೋ ಆಗಿನ ಸಮಸ್ಯೆಗಳ ಬಗ್ಗೆ ಅಂದಿನವರು ತಳೆದ ಅಭಿಪ್ರಾಯಗಳನ್ನು ಒಪ್ಪಲಾರೆವು. ಆದರೆ ಅಂದಿನವರಿಗೆ ಒಂದು ವಿಶಿಷ್ಟ ದೃಷ್ಟಿಕೋನವಿದ್ದು ಅದರ ಫಲವಾಗಿಯೇ ಅವರ ಕಾರ್ಯಗಳಿಗೆ ವಿಶಿಷ್ಟ ಪರಿಣಾಮಗಳು ಉಂಟಾದವೆಂಬ ವಸ್ತುಸ್ಥಿತಿಯನ್ನು ನಾವು ಅಲ್ಲಗಳೆಯುವಂತಿಲ್ಲ. ಅಂದಿನ ವಿಶಿಷ್ಟ ಪರಿಸ್ಥಿತಿಯಲ್ಲಿ ಒದಗಿದ ಘಟನೆಗಳಿಂದ ಅಂದಿನವರಲ್ಲಿ ಉಂಟಾದ ಪ್ರತಿಕ್ರಿಯೆಯ ರೀತಿಯು ನಮಗಿಲ್ಲಿ ಮುಖ್ಯವಲ್ಲದೆ, ಇಲ್ಲದ ಕಾಲ್ಪನಿಕ ಅಭಿಪ್ರಾಯಗಳಿಂದಾಗಲಿ ಸಂಗತಿಗಳಿಂದಾಗಲಿ ಯಾವ ಪ್ರಯೋಜನವೂ ಇಲ್ಲ.

ಈ ಪ್ರಕರಣದ ಉದ್ದೇಶಗಳಿಗಾಗಿ ನಾವು ಪರಿಶೀಲಿಸಬೇಕೆನ್ನುವ ಕಾಲಾವಧಿಯೆಂದರೆ ಸ್ಥೂಲವಾಗಿ ಕ್ರಿ. ಶ. ೧೮೫೮ ರಿಂದ ೧೮೯೩ ರ ವರೆಗೆ. ಇದರಲ್ಲಿ ಒಟ್ಟು ೩೫ ವರ್ಷಗಳಿದ್ದು ಪ್ರಾರಂಭದ ೧೪ ವರ್ಷಗಳು ಅರವಿಂದ ಕುಮಾರನ ಜನ್ಮಕ್ಕಿಂತ ಮುಂಚಿನವಾಗಿವೆ. ಈ ಅವಧಿಯೆಂದರೆ, ತತ್ಪೂರ್ವದಲ್ಲಿ ಬ್ರಿಟಿಶರು ಹಲವು ದಶಕಗಳ ವರೆಗೆ ನಡಿಸಿದ ವಿರಾಟಿಕೆಯ ಆಡಳಿತದ ಪರಿಣಾಮವಾಗಿ ಅಂದು ಕಳೆದುಳಿದ ಹಲವು ದೇಶಾಭಿಮಾನಿಗಳು ಕೊನೆಯದಾಗಿ ಹೂಡಿದ ಸ್ವಾತಂತ್ರ್ಯ ಯುದ್ಧವು ಮುಗಿದು ಆದೇ ೧೪ ವರ್ಷಗಳಾಗಿದ್ದವು; ಅಂದಿನ ಸರಕಾರವು ಈ ಅವಧಿಯಲ್ಲಿ ಕಠೋರ ದಬ್ಬಾಳಿಕೆಯನ್ನು ಸಾಗಿಸಿತ್ತು. ದೇಶಾಭಿಮಾನಿಗಳು ಹೂಡಿದ ಈ ಯುದ್ಧಕ್ಕೆ 'ಹಿಂದೀ ಸಿಪಾಯಿಗಳು ಹೂಡಿದ ಬಂಡೆಂ'ದು ಆಂಗ್ಲ ಅಧಿಕಾರಿಗಳೂ ಅವರ ಪಕ್ಷಪಾತ ವಹಿಸಿದ ಇತಿಹಾಸಕಾರರೂ ಘಂಟಾಘೋಷವಾಗಿ ಅನೇಕ ವರ್ಷಗಳಿಂದ ಹೇಳುತ್ತ ಬಂದಿದ್ದಾರೆ. ಈ ಬಂಡಿನಲ್ಲಿ ಆ ಸಿಪಾಯಿಗಳು ಅನೇಕ ಅತ್ಯಾಚಾರಗಳನ್ನು ಎಸಗಿದರೆಂದು ಹಿಂದುಸ್ಥಾನದ ಇತಿಹಾಸವನ್ನು ಓದುವವರ ಕಿವಿಯಲ್ಲಿ ಕರ್ಕಶವಾಗಿ ಕೇಳುವಂತೆ ಕೂಗುತ್ತ ಬಂದಿದ್ದಾರೆ. ಇದು ಬಂಡಲ್ಲ

ವೆಂದೂ ಹಿಂದುಸ್ಥಾನದ ಸುಪುತ್ರರು ತಮ್ಮ ಮಾತೃಭೂಮಿಯ ವಿಮೋಚನೆಗಾಗಿ ಪರಕೀಯ ಆಕ್ರಮಣದ ವಿರುದ್ಧ ಹೂಡಿದ ಪವಿತ್ರ ಯುದ್ಧವು ಇದೆಂದೂ ಹಿಂದೀ ದೇಶಭಕ್ತರು ಸಾರಿ ಹೇಳಬೇಕಾಗಿ ಬಂತು; ಇತ್ತೀಚಿನ ಇತಿಹಾಸಕಾರರು ಈ ಮಾತನ್ನು ಸಮರ್ಥಿಸಿದ್ದಾರೆ. ಇನ್ನು 'ಅತ್ಯಾಚಾರ'ಗಳ ಬಗ್ಗೆ ಹೇಳುವದೆಂದರೆ ಅವು ಅತಿರಂಜಿತ ಅತಿಶಯೋಕ್ತಿಗಳಾಗಿರುವವು. ದೇಶಾಭಿಮಾನಿಗಳು ತಮ್ಮ ಉದಾತ್ತ ಧ್ಯೇಯಕ್ಕಾಗಿ ಗೈದ ಹಿಂಸೆಗಿಂತ ಆಕ್ರಮಣಕಾರರ ಹಿಂಸೆ ಎಷ್ಟೋ ಪಟ್ಟು ಕ್ರೂರವಾಗಿತ್ತು. ಕ್ರಿ. ಶ. ೧೮೫೭-೯೩ರ ಈ ಅವಧಿಯಲ್ಲಿ ಅರವಿಂದ ಕುಮಾರನ ಜನ್ಮದ ತರುವಾಯದ ೨೧ ವರ್ಷಗಳು ಬರುತ್ತಿದ್ದು ಅದರಲ್ಲಿ ಆತನ ಬಾಲ್ಯದ ವರ್ಷಗಳೂ ಇಂಗ್ಲಂಡದಲ್ಲಿ ಆತನು ಶಿಕ್ಷಣ ಪಡೆದ ವರ್ಷಗಳೂ ಸಮಾವಿಷ್ಟವಾಗುತ್ತವೆ. ಯುವಕರಾದ ಅರವಿಂದರು ೧೮೯೩ರಲ್ಲಿ ಸ್ವದೇಶಕ್ಕೆ ಮರಳಿ ಬಂದು ಬಡೋದೆಯಲ್ಲಿ ೧೩ ವರ್ಷಗಳ ವರೆಗೆ ನೆಲಿಸಿ ತರುವಾಯ ಕೊನೆಯ ಬಾರಿ ಕಲಕತ್ತೆಗೆ ತೆರಳಿದರು. ಇಂಗ್ಲಂಡದಲ್ಲಿರುವಾಗಲೇ ಅರವಿಂದ ಕುಮಾರನು ದೇಶಾಭಿಮಾನದ ಕೆಲವು ಚಟುವಟಿಕೆಗಳಲ್ಲಿ ಆಸಕ್ತನಾಗಿದ್ದನೇನೋ ನಿಜ; ಆದರೆ ಕರ್ಮಯೋಗಿ ಅರವಿಂದರು ತಮ್ಮ ಜೀವನದ ಮಹಾ ಸಿದ್ಧತೆಯನ್ನು ಮಾಡತೊಡಗಿದುದು ಅವರು ಬಡೋದೆಯಲ್ಲಿ ಇರತೊಡಗಿದ ದಿನಾಂಕದಿಂದಲೇ ಸರಿ. ಆದುದರಿಂದ ಇಲ್ಲಿ ಉಲ್ಲೇಖಿಸಿದ ಈ ಅವಧಿಯನ್ನು, ಮುಖ್ಯವಾಗಿ ಆಗ ಹಿಂದುಸ್ಥಾನದಲ್ಲಿ ಪಸರಿಸಿದ ಪ್ರವೃತ್ತಿ-ಪ್ರಭಾವಗಳ ಹಾಗೂ ಕಾರ್ಯಮಾಡುತ್ತಿದ್ದ ಶಕ್ತಿಗಳ ಹೊಳಹು ಹಾಕಲು ಆರಿಸಿಕೊಳ್ಳಲಾಗಿದೆ.

ಈ ಅವಧಿಯನ್ನು ಪರಿಶೀಲಿಸುವಾಗ ರಾಜಕೀಯ ಮತ್ತು ಆರ್ಥಿಕ, ಧಾರ್ಮಿಕ ಮತ್ತು ಸಾಮಾಜಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳ ಬಗ್ಗೆ ಪ್ರತ್ಯೇಕವಾಗಿ ಚರ್ಚಿಸಿದರೆ ಬಹಳ ಅನುಕೂಲವಾಗುವದು. ಇಲ್ಲಿ ಪಂಚಾಂಗದ ವರ್ಷಗಳಿಗಿಂತ ಅಂದಿನ ದಿನಗಳಲ್ಲಿ ಈ ವಿಶಾಲದೇಶದಲ್ಲಿ ಪ್ರಸಾರಹೊಂದುತ್ತಿದ್ದ ಶಕ್ತಿಗಳಿಗೂ ಪ್ರಭಾವಗಳಿಗೂ ಹೆಚ್ಚಿನ ಮಹತ್ವವಿದೆ. ಈ ಶಕ್ತಿಪ್ರಭಾವಗಳು ದೇಶದ ಆದ್ಯಂತವೂ ಏಕರೂಪಿಯಾಗಿದ್ದವು; ಏಕೆಂದರೆ, ರಾಜಮಹಾರಾಜರೆಂಬ ಬಿರುದನ್ನು ಹೆಸರಿಗೆ ಪಡೆದು ತಮ್ಮ ರಾಜ್ಯದಲ್ಲಿ ಒಂದು ಬಗೆಯ ಸ್ವಾಯತ್ತ ಆಡಳಿತವನ್ನು ನಡಿಸಿಕೊಂಡು ಹೋಗಲು ಬ್ರಿಟಿಶ ಒಡೆಯರಿಂದಲೇ ಅಪ್ಪಣೆಪಡೆದ ಕೆಲವು ದೇಶೀಯ ಸಂಸ್ಥಾನಿಕರ ಪ್ರದೇಶಗಳನ್ನು ಹೊರತುಪಡಿಸಿ ಇಡಿ ಹಿಂದುಸ್ಥಾನವು ಬ್ರಿಟಿಶರ ಅಡಿಯಾಳಾಗಿ ದಾಸ್ಯಶೃಂಖಲೆಯಲ್ಲಿ ದುಃಖಪಡುತ್ತಿತ್ತು. ಸಾರ್ವಭೌಮರ ಸ್ವೇಚ್ಛಾನುಸಾರವಾಗಿ ರಾಜಕೀಯ ಯೋಜನೆಗಳಲ್ಲಿ ಬದಲಾವಣೆಯಾದಂತೆ ಪ್ರಜೆಗಳ ಸುಖದುಃಖಗಳಲ್ಲಿಯೂ ಬದಲಾವಣೆಯಾಗುತ್ತಿತ್ತು. ಹಿಂದೀಯರ ಹಿಂದುಸ್ಥಾನವೆಂದು ಕರೆಯಲಾಗುತ್ತಿದ್ದ ದೇಶೀಯ ಸಂಸ್ಥಾನಗಳಲ್ಲಿ ಕೂಡ ಬ್ರಿಟಿಶರ

ಆಳಿಕೆಯು ಕರಿ ನೆರಳೇ ಕವಿದಿದ್ದು ಯಾರಿಗೂ ಸ್ವತಂತ್ರವಾಗಿ ಉಸುರಾಡಿಸಲು ಸಹ ಅವಕಾಶವಿರಲಿಲ್ಲ. ದಾಸ್ಯದ ಸಮಾನಶೃಂಖಲೆ, ಕಾಯಿದೆ ಕಾನೂನುಗಳ ಏಕರೂಪತೆ, ಒಂದೇ ಪಡಿಯಚ್ಚಿನ ಆಳರಸರ ಆಡಳಿತ ಇವೆಲ್ಲವೂ ಅಂದು ಬ್ರಿಟಿಶರ ಅಂಕೆಯಲ್ಲಿದ್ದ ಹಿಂದುಸ್ಥಾನಕ್ಕೆ ಐಕ್ಯವನ್ನು ಒದಗಿಸಿದವು. ಇದರಿಂದ ಎಲ್ಲರ ಹಿತ ಸಂಬಂಧಗಳು ಒಂದಾಗಿ ಸ್ವಾತಂತ್ರ್ಯದ ಹೋರಾಟದಲ್ಲಿ ಸರ್ವರೂ ಒಂದೆಡೆಗೆ ಸಂಘಟಿತರಾಗಲು ಅವಕಾಶವೊದಗಿತು.

ಹಿಂದೀಯರ ಸೈನಿಕ ಪ್ರಭಾವವು ೧೮೫೭ ರಲ್ಲಿ ಕೊನೆಗೊಮ್ಮೆ ಇಳಿಮುಖವಾದೊಡನೆ ಬ್ರಿಟಿಶರ ವರ್ಚಸ್ಸು ಏರತೊಡಗಿ ನೇರೆ ಮೀರಿತು. ಉಗ್ರ ದಬ್ಬಾಳಿಕೆ ಸರ್ವತ್ರ ನಡೆಯಿತು. ಪ್ರಜೆಗಳ ಹಿತವನ್ನು ಉತ್ತಮವಾಗಿ ನೋಡಿಕೊಳ್ಳುವೆವೆಂದೂ ದೇಶದಾದ್ಯಂತ ದಕ್ಷ ಆಡಳಿತವನ್ನು ಸ್ಥಾಪಿಸುವೆವೆಂದೂ ವಚನವಿತ್ತು ಜನತೆಯನ್ನು ರಮಿಸಲಾಯಿತು. ಹಿಂದೀ ಸೈನ್ಯವನ್ನೆಲ್ಲ ಸಂಪೂರ್ಣವಾಗಿ ಚೆದುರಿಸಿ ನುಚ್ಚುನೂರು ಮಾಡಲಾಯಿತು. ಮುಂಬರುವ ತತ್ಕಾಲದಲ್ಲಿ ಯಾರೂ ದಂಗೆಯೇಳದಂತೆ ಸದ್ದನ್ನೆಲ್ಲ ಅಡಗಿಸಲಾಯಿತು. ದೇಶದುದ್ದಕ್ಕೂ ನಾಗರಿಕರ ಕೈಯೊಳಗಿನ ಶಸ್ತ್ರಗಳನ್ನೆಲ್ಲ ಹಿಂದು ಮುಂದೆ ನೋಡದೆ ಕಸಿದುಕೊಂಡು ಅವರನ್ನು ನಪುಂಸಕರನ್ನಾಗಿ ಮಾಡಲಾಯಿತು. ಬ್ರಿಟಿಶರನ್ನು ವಿರೋಧಿಸಿದ ಎಲ್ಲ ಹಿಂದೀ ರಾಜರನ್ನೂ ಅವರ ಸೈನ್ಯವನ್ನೂ ಮಣ್ಣು ಮುಕ್ಕಿಸಲಾಯಿತು; ಹಾಗೂ ತಮ್ಮ ಬೆಂಬಲಕ್ಕೆ ನಿಂತವರಿಗೆಲ್ಲ ಆಮಿಷರೂಪದ ಬಹುಮಾನವನ್ನಿತ್ತರಾದರೂ ಅವರಲ್ಲಿ ಒಬ್ಬರೂ ತಮಗೆ ತೊಂದರೆ ಕೊಡದಂತೆ ಎಲ್ಲರನ್ನೂ ಅಸಹಾಯ ಸ್ಥಿತಿಯಲ್ಲಿ ಇಡಲಾಯಿತು. ಇಷ್ಟೆಲ್ಲ ಮಾಡಿದರೂ ಬ್ರಿಟಿಶ್ ರಾಜ್ಯಸತ್ತೆಯನ್ನು ವಿರೋಧಿಸುವ ಎಲ್ಲ ಶಕ್ತಿಗಳೇನೂ ಪೂರ್ಣವಾಗಿ ಅಡಗಲಿಲ್ಲ. ಅವು ಸುಪ್ತಸ್ಥಿತಿಯಲ್ಲಿ ಉಳಿದು ಹೊಸ ಹೊಸ ರೂಪ ತಾಳಿ ಹೊರಬೀಳತೊಡಗಿದವು. ೧೮೬೩ ರಲ್ಲಿ ವಹಬಿಗಳ ಬಂಡಾಯವೆದ್ದಿತು; ಇವರ ಕಾರಣಗಳು ಮಿಶ್ರವಾಗಿದ್ದು ಅರ್ಧ-ಧಾರ್ಮಿಕವಾಗಿಯೂ ಅರ್ಧ-ರಾಜಕೀಯವಾಗಿಯೂ ಇದ್ದವು. ೧೮೫೯ ರಲ್ಲಿಯೇ ಬಂಗಾಲದಲ್ಲಿ ಕೃಷಿಕರು ಅತಿ ದೊಡ್ಡ ಬಂಡು ಹೂಡಿದರು; ಆಗ ಲೆಫ್ಟೆನೆಂಟ ಗವ್ಹರ್ನರನಾಗಿದ್ದ ಗ್ರ್ಯಾಂಟ್ ಸಾಹೇಬನು ಕೃಷಿಕರಲ್ಲಿ ಉಂಟಾದ ಅದ್ಭುತ ಸಂಘಟನೆಯನ್ನು ಕಂಡು ತನಗೆ ಆಶ್ಚರ್ಯವಾಯಿತೆಂದು ಉದ್ಗಾರ ತೆಗೆದಿದ್ದಾನೆ. ಇದರಂತೆ ಮುಂಬಯಿ ಪ್ರಾಂತದಲ್ಲಿಯೂ ೧೮೭೪ ರಲ್ಲಿ ಒಕ್ಕಲಿಗರ ಬಂಡಾಯವೆದ್ದಿತು. ಆದರೆ ಈ ಎಲ್ಲ ಸ್ಫೋಟಗಳಲ್ಲಿ 'ಅಖಿಲ ಹಿಂದುಸ್ಥಾನ' ಸ್ವರೂಪವೆಂಬುದು ಸುತರಾಂ ಇರಲಿಲ್ಲವೆಂಬುದನ್ನು ಒಪ್ಪಲೇಬೇಕು. ಮೇಲಾಗಿ ಈ ಸ್ಫೋಟಗಳ ಸ್ವರೂಪವು ಹೆಚ್ಚಾಗಿ ಆರ್ಥಿಕವಾಗಿತ್ತೇ ವಿನಾ ರಾಜಕೀಯವಾಗಿದ್ದಿಲ್ಲ. ಇಂಥ ಸ್ಫೋಟಗಳಲ್ಲದೆ ಅಲ್ಲಲ್ಲಿ ನಿಗಿನಿಗಿ ಕೆಂಡಗಳು ಆಗೀಗ ಹೊತ್ತುತ್ತಲೇ ಇದ್ದವು.

ರೊಚ್ಚಿಗೆದ್ದ ಕೆಲವು ಗಂಡುಗಲಿಗಳಿಗೆ ಮುಂಬರುವ ರಾಜ್ಯಕ್ರಾಂತಿಯ ಸ್ವಪ್ನಗಳು ಆಗಲೇ ಬೀಳತೊಡಗಿದ್ದವು. ಭವಿಷ್ಯತ್ತಿನಲ್ಲಿ ಎದ್ದು ನಿಂತ ಕ್ರಾಂತಿಯ ಕೆಲವು ಮೊಳಕೆಗಳಿಗೆ ಮುಂಚಿನ ಈ ಕೆಲವು ಪ್ರಯತ್ನಗಳೇ ಬೀಜರೂಪವಾಗಿ ಪರಿ-ಣಮಿಸಿದವೆಂಬುದರಲ್ಲಿ ಸಂಶಯವಿಲ್ಲ. ಆದರೆ ಬ್ರಿಟಿಶರನ್ನು ಗಡಿಬಿಡಿಯಿಂದ ಗಾಬರಿಗೊಳಿಸಿ ಅವರ ತಲೆ ತಿನ್ನುವಷ್ಟು ಸಂಘಟಿತ ಸ್ವರೂಪದಲ್ಲಿದ್ದ ಯಾವ ಶಕ್ತಿಯೂ ಕ್ಷಿತಿಜದ ಮೇಲಾಗಲಿ ಕೆಳಗಾಗಲಿ ಕಂಡು ಬರಲಿಲ್ಲ. ಇದರಿಂದಾಗಿ ನೂತನ ರಾಜ್ಯಕರ್ತರಿಗೆ ಅನಾಯಾಸವಾಗಿ ದೊರಕಿದ ಈ ವಿಸ್ತಾರವಾದ ಹುಲ್ಲು-ಗದ್ದೆಯಲ್ಲಿ ನಿಶ್ಚಿಂತವಾಗಿ ಮೇಯುತ್ತ ನಿಧಾನವಾಗಿ ಮೆಲುಕಾಡಿಸಲು ಆಸ್ಪದ ದೊರೆಯಿತು.

ಆದರೆ ಸಾರ್ವಜನಿಕ ಅಭಿಪ್ರಾಯ, ಘಟನಾತ್ಮಕ ಚಳವಳಿ ಇವೇ ಪ್ರಮುಖ ವಾಗಿರುವ ಬೇರೊಂದು ಕ್ಷೇತ್ರದಲ್ಲಿ ನವಜಾಗ್ರತಿ ನಡೆದಿತ್ತು; ೧೮೮೫ ರಲ್ಲಿ ಕಾಂಗ್ರೆಸ ಸಂಸ್ಥೆ ಜನ್ಮ ತಾಳಿತ್ತು; ಎಂದರೆ ಅರವಿಂದ ಕುಮಾರರು ಇಂಗ್ಲಂಡ ದಿಂದ ಮರಳುವದಕ್ಕಿಂತ ಎಂಟೇ ವರ್ಷ ಮೊದಲು ಈ ಘಟನೆ ನಡೆಯಿತು. 'ಅಖಿಲ ಹಿಂದುಸ್ಥಾನ' ಸ್ವರೂಪದ ಈ ಸಂಸ್ಥೆ ಜನಿಸುವದಕ್ಕಿಂತಲೂ ಮುಂಚೆ ಕಲಕತ್ತೆ-ಮುಂಬಯಿ-ಮದ್ರಾಸಗಳಲ್ಲಿ ಮೂರು ಪ್ರಾಂತಿಕ ಸಂಸ್ಥೆಗಳು ಜನ್ಮವೆತ್ತಿ ಆಗಲೇ ತಮ್ಮ ಕಾರ್ಯ ನಡಿಸಿದ್ದವು. ಸಾರ್ವಜನಿಕ ಅಭಿಪ್ರಾಯವು ಸೌಮ್ಯರೂಪ ದಲ್ಲಾದರೂ ಈ ಸಂಸ್ಥೆಗಳ ಮುಖಾಂತರವೂ ವೃತ್ತಪತ್ರಿಕೆಗಳ ಮುಖಾಂತರವೂ ಆಗಾಗ ಹೊರಹೊಮ್ಮತೊಡಗಿತು. ಇಷ್ಟೊತ್ತಿಗೆ ೫೦೦ಕ್ಕಿಂತ ಹೆಚ್ಚು ಪತಿಕ್ರೆಗಳು ಅಸ್ತಿತ್ವದಲ್ಲಿ ಬಂದಿದ್ದವು. ೧೮೮೫ರೊಳಗಾಗಿ, ಈ ಮೂರು ಪ್ರಾಂತಿಕ ಸಂಸ್ಥೆಗಳಿಗೆ ಸಂಬಂಧಿಸಿದ ಸಾರ್ವಜನಿಕ ಉತ್ಸಾಹದ ಕಾರ್ಯಕರ್ತರಿಗೂ ಇನ್ನಿತರರಿಗೂ 'ಅಖಿಲ ಹಿಂದುಸ್ಥಾನ' ಸ್ವರೂಪದ ವೇದಿಕೆಯೊಂದು ಬೇಕೆಂದು ತೀವ್ರವಾಗಿ ಅನಿಸತೊಡ ಗಿತು. ಈ ವೇದಿಕೆಯು ಜಾತಿ ಪಂಗಡಗಳನ್ನು ಮೀರಿ ನಿಂತು ನಿಜವಾಗಿಯೂ ರಾಷ್ಟ್ರೀಯ ರೂಪ ಪಡೆಯಬೇಕೆಂದು ಅವರೆಲ್ಲರ ಅಭಿಪ್ರಾಯವಾಗಿತ್ತು. ಇದರ ಫಲವೇ ಕಾಂಗ್ರೆಸ್ ಸಂಸ್ಥೆ. ಅಂದಿನ ಅಧಿಕಾರಿಗಳು ತಮ್ಮ ಕೆಲವು ಕಾರಣಗಳಿ ಗಾಗಿ ಈ ಸಂಸ್ಥೆಯನ್ನು ಮೊದಮೊದಲು ಪ್ರೋತ್ಸಾಹಿಸಿದರು. ಹೀಗಾಗಿ ರಾಜ ಕೀಯ ಮತ್ತು ಇನ್ನಿತರ ಸಂಕಷ್ಟಗಳ ಸಂಬಂಧದಲ್ಲಿ ಅಂದಿನ ಸರಕಾರದ ವಿರುದ್ಧ ವಾಗಿ ತಮ್ಮ ಅಭಿಪ್ರಾಯಗಳನ್ನು ಈ ಕಾಂಗ್ರೆಸ್ಸಿನ ವಾರ್ಷಿಕ ಅಧಿವೇಶನದಲ್ಲಿ ವ್ಯಕ್ತ ಪಡಿಸುವ ರೂಢಿಯು ಬೆಳೆದು ಬಂದಿತು. ಬ್ರಿಟಿಶ್ ಸಾರ್ವಭೌಮರ ವಿಷಯದಲ್ಲಿ ರಾಜನಿಷ್ಠೆ ವ್ಯಕ್ತಪಡಿಸುವ ವಿಧಾನವು ಪ್ರತಿ ವರ್ಷದ ಲಕ್ಷಣವಾಗಿ ಅನೇಕ ವರ್ಷಗಳ ವರೆಗೆ ನಡೆದು ಬಂದಿತು. ಹೀಗಿದ್ದರೂ ತೀವ್ರ ಶಬ್ದಗಳಿಂದ ಕೂಡಿದ ವಿರೋಧ-ನಿಷೇಧಗಳ ಗೊತ್ತುವಳಿಗಳೂ ಸಾಕಷ್ಟು ಇರುತ್ತಿದ್ದವು. ಆದರೆ ಇಂಥ ಬಂಚೆ

ಗೊತ್ತುವಳಿಗಳಿಂದಲೂ ದೀನ ಅರ್ಜಿಗಳಿಂದಲೂ ಅಂದಿನ ತರುಣರಿಗೆ ಪೂರ್ಣ ತೃಪ್ತಿಯೆನಿಸಲಿಲ್ಲ. ಇದರ ಪರಿಣಾಮವಾಗಿ ಉಗ್ರ ಅಭಿಪ್ರಾಯದ ಪಂಥವೊಂದು ದೇಶದಲ್ಲಿ ನಿಧಾನವಾಗಿ ಬೆಳೆದು ಬಂದಿತು.

ಈ ಪ್ರಕಾರ, ಹಿಂಸಾತ್ಮಕ ದೇಶಾಭಿಮಾನವು ಇನ್ನೂ ಕಂಡು ಬರದಿದ್ದರೂ ಪರಕೀಯ ಪ್ರಭುತ್ವವನ್ನೂ ರಾಷ್ಟ್ರೀಯತ್ವಕ್ಕೆ ಅರದಾಳ ಬಡಿಯುವ ಅದರ ಪರಿಣಾಮಗಳನ್ನೂ ಎಂದೂ ಸಹಿಸದ ತರುಣ ಸಂತತಿಯೊಂದು ನಿಧಾನವಾದರೂ ನಿಶ್ಚಿತವಾಗಿ ಹುಟ್ಟಿ ಬಂದಿತು. ಅಟಲಿ-ಆಯರ್ಲಂಡಗಳಲ್ಲಿ ಹುಟ್ಟಿದಂತೆ ರಾಷ್ಟ್ರೀಯತ್ವದ ಉಕ್ಕು ನಮ್ಮ ದೇಶದಲ್ಲಿಯೂ ಹುಟ್ಟಿ ಅಂದಿನ ಯುವಕರ ಹೃದಯಗಳನ್ನು ಕಲಕಿತು. ಆರ್ಥಿಕ ಕಾರಣಗಳ ಮೂಲಕ ಕೆಲವರು ಕ್ಷೋಭೆಗೊಂಡರೆ ಅರವಿಂದ ಕುಮಾರರಂಥ ಬಿಸಿರಕ್ತದ ಇನ್ನು ಕೆಲವರು ಪರಕೀಯ ಪ್ರಭುತ್ವವು ಯಾವ ಸಾಧನದಿಂದಾದರೂ ಸರಿ ಹೇಗಾದರೂ ಕೊನೆಗೊಳ್ಳಲೇಬೇಕೆಂದು ಹಟತೊಟ್ಟರು. ಉತ್ಸಾಹ ಭರಿತರಾದ ತರುಣರ ಉತ್ಸುಕ ಜೀವಗಳಿಗೆ ಅಂದಿನ ದುಷ್ಟ ವಾತಾವರಣದಲ್ಲಿ ದೇಶಸೇವೆಗೈಯಲು ಯಾವ ಆಶೆ ಆಸ್ಪದಗಳೂ ತೋರಿಬರಲಿಲ್ಲ. ಬಹುಕಾಲ ಮುಂದುವರಿದ ಪರಕೀಯ ಪ್ರಭುತ್ವದ ಪರಿಣಾಮವಾಗಿ, ರಾಜ್ಯಕರ್ತರಲ್ಲಿ ತಾವೇ ಶ್ರೇಷ್ಠರೆಂಬ ದರ್ಪ ಹುಟ್ಟಿತ್ತು; ಕೃಪಾದೃಷ್ಟಿಯಿಂದ ಪ್ರಜೆಗಳಿಗೆ ಉಪಕಾರ ಮಾಡುವ 'ಮಾಬಾಪ' ಪ್ರವೃತ್ತಿಯು ಅವರಲ್ಲಿ ಬೆಳೆದಿತ್ತು; ಹಿಂದೀಯರ ಯಾವದೇ ವಸ್ತು-ಗುಣಗಳನ್ನೂ ತಿರಸ್ಕಾರ ಭಾವನೆಯಿಂದಲೇ ಅವರು ನೋಡುತ್ತಿದ್ದರು; ಹಿಂದುಸ್ಥಾನದ ಬಗ್ಗೆ ಅಗಾಧ ಅಜ್ಞಾನವು ಅವರಲ್ಲಿ ಆವರಿಸಿತ್ತು; ಈ ಎಲ್ಲ ಕಾರಣಗಳ ಮೂಲಕ ಹಿಂದೀಯರ ಹೃದಯಗಳು ರಾಷ್ಟ್ರೀಯ ಅಪಮಾನವೆಂಬ ಅಗ್ನಿಯಿಂದ ದಹಿಸುತ್ತಿದ್ದವು. ಜೀವನದ ಇತರ ಕ್ಷೇತ್ರಗಳಲ್ಲಿಯೂ ನವ ಜಾಗ್ರತಿಯುಂಟಾಗಿ, ಭಾರತವರ್ಷದ ಪ್ರಾಚೀನ ವೈಭವದ ವಿಷಯದಲ್ಲಿ ನವಚೇತನವು ಉಕ್ಕಿ ಬಂದು, ಉಗ್ರ ರಾಷ್ಟ್ರೀಯತ್ವದ ಶಕ್ತಿಗಳಿಗೆ ಬಲ ಬಂದಿತು. ಅರ್ಜಿಗಳನ್ನು ಕಳಿಸಿ ಕಳಿಸಿ, ಗೊತ್ತುವಳಿಗಳನ್ನು ಪಾಸುಮಾಡಿ ಮಾಡಿ, ಶಿಷ್ಟಮಂಡಲಗಳನ್ನು ವಿಲಾಯತಿಗೆ ಒಯ್ದು ಒಯ್ದು ಜನತೆ ಬೇಸತ್ತಿತು. ಪ್ರತ್ಯಕ್ಷ ಕ್ರಿಯೆಯ ಹಸಿವು ತರುಣರಲ್ಲಿ ಹುಟ್ಟಿ ಬೆಳೆಯಿತು. ಈ ಕ್ಷೋಭೆಯ ಮೂಲಕವೇ ದೊಡ್ಡ ಪ್ರಮಾಣದ ರಾಷ್ಟ್ರೀಯ ಚಳವಳಿಗಳು ಚೇತರಿಸಿಕೊಂಡಿದ್ದವು. ೧೯೦೬ರ 'ವಂಗಭಂಗ ಚಳವಳಿ'ಯಿಂದ ಮೊದಲ್ಗೊಂಡು ೧೯೪೨ರ 'ಚಲೇಜಾವ ಚಳವಳಿ'ಯವರೆಗೂ ಅಂದಿನ ಆ ಕ್ಷೋಭೆ ಹೊಸ ಹೊಸ ರೂಪದಿಂದ ಉಕ್ಕಿ ಬಂದಿತು. ಕಾಂಗ್ರೆಸ್ಸಿನ ಅಂದಿನ ಸೌಮ್ಯಮಾರ್ಗದಿಂದ ತಾಳ್ಮೆಗೆಟ್ಟ ತರುಣ ಸಂತಾನಕ್ಕೇನೆ ಶ್ರೀ ಅರವಿಂದರಾದರೂ ಸ್ವಭಾವತಃ ಸಹಜವಾಗಿ ಸೇರಿದವರು. ಸ್ವಾತಂತ್ರ್ಯವು ಜನ್ಮಸಿದ್ಧ ಹಕ್ಕೆಂದು ಪ್ರತಿಪಾದಿಸುವ ರಾಷ್ಟ್ರೀಯ ಚೇತನದಿಂದಲೇ ಈ ತರುಣ-

ಸಂತಾನವು ಪ್ರೇರಣೆ ಪಡೆದಿತ್ತು. ಬರಲಿರುವ ಜಗತ್ತಿನಲ್ಲಿ ಸಾಧಿಸಬೇಕಾದ ದೊಡ್ಡ ಧ್ಯೇಯವೊಂದು ಹಿಂದುಸ್ಥಾನಕ್ಕೆ ಇದೆಯೆಂದೂ ಈ ಧ್ಯೇಯ ಸಾಧನೆಯಲ್ಲಿ ಈ ದೇಶಕ್ಕೆ ಯಶಸ್ಸು ಸಿಗುವದು ದೈವೀಸಂಕಲ್ಪವಿದೆಯೆಂದೂ ಈ ತರುಣ-ಸಂತಾನವು ಶ್ರದ್ಧಾಪೂರ್ವಕವಾಗಿ ಭಾವಿಸಿತ್ತು. ಈ ಶ್ರದ್ಧೆಯೇ ಮುಂದಿನ ಮಹಾ ಜನಜಾಗ್ರತಿಗೆ ಶುಭಶಕುನವಾಗಿ ಪರಿಣಮಿಸಿತು. ಇಂಥ ಶ್ರದ್ಧೆಯ ಬಲದಿಂದಲೇ ನಮ್ಮ ಸ್ವಾತಂತ್ರ್ಯದ ಆಂದೋಲನಕ್ಕೆ ಅಂತಸ್ಥ ಹಾಗೂ ಬಾಹ್ಯ ವಿರೋಧವನ್ನೆಲ್ಲ ತುಳಿದು ಮೆಟ್ಟಿ ನಿಲ್ಲುವ ಸಾಮರ್ಥ್ಯವು ಪ್ರಾಪ್ತವಾಯಿತು.

ಇನ್ನು ಆರ್ಥಿಕ ಕ್ಷೇತ್ರಕ್ಕೆ ಹೋಗೋಣ.

ಬ್ರಿಟಿಶರು ಹಿಂದುಸ್ಥಾನಕ್ಕೆ ವ್ಯಾಪಾರಿಗಳಾಗಿ ಮೊದಲು ಬಂದರು. ಬಳಿಕ ಸಾಹಸಿಗರಾಗಿ ಯುದ್ಧ ಮಾಡಿದರು, ಮುತ್ಸದ್ದಿಗಳಾಗಿ ಕಾರಸ್ಥಾನ ಹೂಡಿದರು; ಕೊನೆಯಲ್ಲಿ ಆಡಾಡುತ್ತ ಒಂದು ದೊಡ್ಡ ಸಾಮ್ರಾಜ್ಯವೆ ಅವರ ಪದರಿಗೆ ಬಿತ್ತು. ಅವರ ಹಿಂದೀ ಸಾಮ್ರಾಜ್ಯವು ವಿಸ್ತಾರದಲ್ಲಿ ಅಶೋಕನ ಸಾಮ್ರಾಜ್ಯವನ್ನೂ ಮೀರಿ ಸಿತು; ವೈಭವದಲ್ಲಿ ಮೊಗಲರ ಸಾಮ್ರಾಜ್ಯವನ್ನೂ ಹಿಂದೆ ಹಾಕಿತು. ಆದರೆ ಅವರಲ್ಲಿ ಧೂರ್ತಶಿರೋಮಣಿಗಳಾದವರಿಗೆ ಸಹ 'ಸಾಮ್ರಾಜ್ಯ'ದ ಮೋಹವಿರಲಿಲ್ಲ. ಎಲ್ಲ ಸಾಮ್ರಾಜ್ಯಗಳಿಗೆ ಸಹಜವಾಗಿರುವ ಆಡಂಬರದ ಪ್ರದರ್ಶನವನ್ನು ಅವರೂ ಆಗೀಗ ಮಾಡಿದ್ದುಂಟು. ಹಾಗೆ ಮಾಡುವದು ಅಗತ್ಯವೆನಿಸಿ ಅಂಥ ಗೊಡವೆಗೆ ಅವರು ಹೋದರೇ ಹೊರತು ಆಡಂಬರಕ್ಕೆ ಮೋಹಗೊಂಡೂ ಅಲ್ಲ, ಮೆಚ್ಚಿಯೂ ಅಲ್ಲ. ಅವರಲ್ಲಿಯ ಬಣಜಿಗವೃತ್ತಿಯು ಎಂದಿಗೂ ಅಳಿಯಲಿಲ್ಲ. ಅದನ್ನು ಅವರು ಹೆಚ್ಚು ಹೆಚ್ಚಾಗಿ ಬೆಳೆಸಿಕೊಂಡು ಬಂದರು. ಯಾವಾಗಲೂ ರೂಪಾಯಿ-ಆಣೆ-ಪೈಗಳ ಮೇಲೆಯೇ ಅವರ ಕಣ್ಣು. ಸಾಮ್ರಾಜ್ಯಗಳನ್ನು ಕಟ್ಟುವದರಲ್ಲಿಯೇ ಸತತ ಮಗ್ನನಾದ ನೆಪೋಲಿಯನ್ ಬಾದಶಹನು ಇಂಗ್ಲಂಡೆಂದರೆ ಅಂಗಡಿಕಾರರ ದೇಶವೆಂದು ಅಣಕವಾಡಿದ್ದುಂಟು. ಆತನು ಕಟ್ಟಿದ ಸಾಮ್ರಾಜ್ಯಗಳು ಆತನ ಕಣ್ಮುಂದೆಯೇ ಕುಸ್ಸಳಿಸಿದವು. ಆದರೆ ಬ್ರಿಟಿಶರು ತಾವು ಹೂಡಿದ ಅಂಗಡಿ ಯನ್ನು ಭದ್ರವಾಗಿ ಬೆಳೆಸಿಕೊಂಡು ಬಂದು ಲೆಕ್ಕವಿಲ್ಲದಷ್ಟು ಲಾಭ ಮಾಡಿಕೊಂಡರು. ಮೊನ್ನೆ ಮೊನ್ನೆ ಅವರ ಹಿಂದೀ ಸಾಮ್ರಾಜ್ಯವು ಮುಳುಗುವ ಹೊತ್ತು ಬಂದೊಡನೆ ಬಹಳ ಸಭ್ಯರೀತಿಯಲ್ಲಿ ರಾಜ್ಯವನ್ನು ಒಪ್ಪಿಸಿಕೊಟ್ಟು ಹೋದರು. ಎಂದೂ ಮುಳುಗದ ಸಾಮ್ರಾಜ್ಯಸೂರ್ಯನೇನೊ ಮುಳುಗಿದ; ಹಣ ಹಾಕಿದ ಅಂಗಡಿ ಮಾತ್ರ ಮುಳುಗಲಿಲ್ಲ. ವ್ಯಾಪಾರದ ವ್ಯವಹಾರವು ಎಂದಿನಂತೆ ಮುಂದುವರಿ ದಿದೆ. ವ್ಯವಹಾರಕುಶಲರಾದ ಅವರು ಎರಡನ್ನೂ ಕಳೆದುಕೊಳ್ಳುವ ಗೋಜಿಗೆ ಹೋಗಲಿಲ್ಲ.

ಬ್ರಿಟಿಶರು ಈ ದೇಶದ ಒಡೆಯರಿದ್ದಾಗ ಅವರ ರಾಜನೀತಿಯ ಧೋರಣವು

ಕಡೆಯವರೆಗೂ ಆರ್ಥಿಕಶೋಷಣೆಯೇ ಆಗಿತ್ತು. ಇಂಗ್ಲಂಡದಲ್ಲಿ ಒದಗಿದ ಔದ್ಯೋಗಿಕ ಕ್ರಾಂತಿಯು ಈ ಕ್ರಮಕ್ಕೆ ಪುಟ ಕೊಟ್ಟಿತು. ಹಿಂದುಸ್ಥಾನವೆಂದರೆ ಇಂಗ್ಲಂಡಕ್ಕೆ ಹಸಿ ಸರಕುಗಳನ್ನು ಪೂರೈಸುತ್ತ ಅಲ್ಲಿ ಉತ್ಪನ್ನವಾಗುವ ಸಿದ್ಧ ವಸ್ತುಗಳನ್ನು ಕೊಳ್ಳುವ ಗಿರಾಕಿಗಳ ನಾಡೆಂದು ಬ್ರಿಟಿಶರ ಭಾವನೆಯಾಗಿತ್ತು. ಈ ತಮ್ಮ ಉದ್ದೇಶವನ್ನು ಸಾಧಿಸಿಕೊಳ್ಳುವಾಗ ಅವರು ಕಠೋರರೂ ನಿರ್ದಯರೂ ಆಗಿರುತ್ತಿದ್ದರು. ಈ ಅವಧಿಯಲ್ಲಿ, ಹಿಂದುಸ್ಥಾನದಲ್ಲಿ ಮುಂಚಿನಿಂದಲೂ ಭರ-ಭರಾಟೆಯಲ್ಲಿ ನಡೆಯುತ್ತ ಬಂದ ಅನೇಕ ಉದ್ಯೋಗಗಳು ನಾಶವಾದವು. ಇನ್ನು ಕೆಲವು ಹಾನಿಗೊಳಗಾದವು. ಇದರ ಪರಿಣಾಮವಾಗಿ, ವಿಲಾಯತಿಯಿಂದ ಬರುವ ಆಯಾತಗಳಿಗೆ ಅವಕಾಶವುಂಟಾಯಿತು. ಈ ದೇಶದಲ್ಲಿಯ ಯಾವ ಉದ್ಯೋಗ ಗಳಿಗೂ ಪ್ರೋತ್ಸಾಹ ದೊರೆಯಲಿಲ್ಲ. ಹಡಗ ಕಟ್ಟುವ ಉದ್ಯೋಗವಂತೂ ಹೇಳ ಹೆಸರಿಲ್ಲದೆ ಮಾಯವಾಯಿತು. ವ್ಯಾಪಾರದ ಮತ್ತು ಬ್ಯಾಂಕುಗಳ ಮುಖ್ಯ ಸೂತ್ರ ಗಳನ್ನೆಲ್ಲ ಬ್ರಿಟಿಶ್ ವರ್ತಕರೂ ಅವರ ಕಂಪನಿಗಳೂ ಸ್ವಾಧೀನ ಪಡಿಸಿಕೊಂಡವು. ಇಂತು ಹಿಂದುಸ್ಥಾನದ ಬಡತನದ ಬವಣೆಯು ದಿನದಿನಕ್ಕೆ ಹೆಚ್ಚಾಗುತ್ತ ನಡೆದು ಒಕ್ಕಲತನವನ್ನೇ ಹೆಚ್ಚಾಗಿ ಅವಲಂಬಿಸುವ ಪರಿಸ್ಥಿತಿಯು ಬೆಳೆಯಿತು. ರೇಲ್ವೆ ಗಳೂ ಇತರ ಸಂಪರ್ಕಗಳೂ ಬೆಳೆದುವೇನೋ ನಿಜ; ಆದರೆ ಅವನ್ನು ಬೆಳೆಸುವದ ರಲ್ಲಿ ಸೈನ್ಯದ ಭದ್ರತೆಯ ದೃಷ್ಟಿಯೂ ಬ್ರಿಟಿಶರ ಹಿತಕ್ಕಾಗಿ ಈ ದೇಶದ ಸಂಪತ್ತ-ನ್ನೆಲ್ಲ ಸೂರೆಗೈಯುವ ದೃಷ್ಟಿಯೂ ಮುಖ್ಯವಾಗಿದ್ದವು. ಬ್ರಿಟಿಶರ ಈ ಧೋರಣ ವನ್ನು ದಾದಾಭಾಯಿ ನವರೋಜಿಯವರೂ ರಮೇಶಚಂದ್ರ ದತ್ತರೂ ಉಗ್ರವಾಗಿ ಟೀಕಿಸಿದ್ದಾರೆ. ಅವರ ಅಂದಿನ ಉಜ್ವಲ ಲೇಖಗಳನ್ನು ಓದಿದರೆ ಇಂದಿಗೂ ಹಿಂದೀಯರ ಹೃದಯದಲ್ಲಿ ಸಂತಾಪವೇಳುತ್ತದೆ. ಬ್ರಿಟಿಶರು ತಮ್ಮ ರಾಜಕೀಯ ವರ್ಚಸ್ಸಿನ ಬಲದಿಂದ ಇಷ್ಟೊಂದು ದೊಡ್ಡ ಪ್ರಮಾಣದಲ್ಲಿ ಹಿಂದುಸ್ಥಾನದ ಆರ್ಥಿಕ ಶೋಷಣೆಯನ್ನು ಮಾಡಿದಷ್ಟು ಜಗತ್ತಿನಲ್ಲಿ ಯಾವ ರಾಜ್ಯ ಸಾಮ್ರಾಜ್ಯಗಳೂ ಮಾಡಿಲ್ಲ. ನಾವು ಪರಿಶೀಲಿಸಬೇಕಾಗಿರುವ ಈ ಅವಧಿಯಲ್ಲಿ ಆರ್ಥಿಕ ದೃಶ್ಯವು ಅತ್ಯಂತ ಕರುಣಾಜನಕವಾಗಿತ್ತು. ಏಕೆಂದರೆ ದೇಶವನ್ನು ಸುವ್ಯವಸ್ಥಿತವಾಗಿ ಸುಲಿಯುವದು ಒಂದೇ ಸವನೆ ಸಾಗಿತ್ತು. ದೇಶದೊಳಗಿನ ಹಸಿ ಸರಕುಗಳನ್ನು ಅಪರಿಮಿತ ಪ್ರಮಾಣದಲ್ಲಿ ಹೊರಗೆ ಸಾಗಿಸುವದು ನಡೆದೇ ಇತ್ತು. ಹಿಂದೊಮ್ಮೆ ಇದೇ ದೇಶದಲ್ಲಿ ತಯಾರಾಗುವ ವಸ್ತುಗಳನ್ನು ಸಹ ಇಂಗ್ಲಂಡದಿಂದ ಜನರು ತರಿಸಿ ಉಪಯೋಗಿಸುವಂತೆ ಒಂದೇ ಸವನೆ ಒತ್ತಾಯ ನಡೆದಿತ್ತು. ಹಲವೊಂದು ಉದ್ಯೋಗಗಳು ನಿರ್ನಾಮವಾದುವಲ್ಲದೆ ಮತ್ತೆ ಕೆಲವುಗಳ ಬೆಳಿಗೆಯೇ ಕುಗ್ಗಿ ಹೋಯಿತು. ಸ್ವಲ್ಪ ಜನರಲ್ಲಿಯಾದರೂ ಜಾಗ್ರತಿಯಾದೊಡನೆ ಸ್ವದೇಶಿ ಚಳವಳಿಯೇ ಇದಕ್ಕೆ ತಕ್ಕ ಪ್ರತಿಕ್ರಿಯೆಯಾಗಿ ಪ್ರಕಟವಾಯಿತು. ಬರಬರುತ್ತ

ಈ 'ಸ್ವದೇಶಿ' ಕಾರ್ಯಕ್ರಮವು ರಾಜಕೀಯ ಅಸ್ತ್ರವಾಗಿ ಪರಿಣಮಿಸಿ ಅದಕ್ಕೆ ವಿದೇಶಿ ವಸ್ತುಗಳ 'ಬಹಿಷ್ಕಾರ' ವೂ ಕೂಡಿಕೊಂಡು ಅದೊಂದು ಸ್ವರಾಜ್ಯದ ಆಂದೋಲನದ ಸಮರ್ಥ ಸಾಧನವಾಯಿತು.

ಬ್ರಿಟಿಶರು ರಾಜಕೀಯ ವರ್ಚಸ್ಸೇ ಮೊದಲಾದ ಸಕಲ ಸಾಧನಗಳಿಂದ ಈ ರಾಷ್ಟ್ರದ ಸಂಪತ್ತನ್ನು ನಿತ್ಯವೂ ಸೂರೆಗೈಯುವದನ್ನು ಕಂಡು ಯಾವ ರಾಷ್ಟ್ರಪ್ರೇಮಿಗೆ ಸಂಕಟವಾಗಲಿಕ್ಕಿಲ್ಲ? ಇದರಿಂದ ಸ್ವದೇಶ-ಸ್ವಜನ-ಸ್ವಸಂಸ್ಕೃತಿಗಳ ಬಗ್ಗೆ ಅಂದಿನ ವಿಚಾರವಂತರಲ್ಲಿ ಪ್ರಬಲವಾದ ಅಭಿಮಾನವು ಬೆಳೆದು ಬಂದು ದೇಶಾಭಿಮಾನದ ಸದ್ಭಾವನೆಯು ಬಲಿಯತೊಡಗಿತು. ಅಂತೆಯೇ ೧೯೦೬-೧೧ ರ ವರೆಗೆ ನಡೆದ ಸ್ವದೇಶಿ ಚಳವಳಿಯ ಕಾಲಕ್ಕೆ ಬ್ರಿಟಿಶರ ಆರ್ಥಿಕ ಧೋರಣದ ವಿರುದ್ಧವಾಗಿ ಅಷ್ಟೊಂದು ರಭಸದ ಉದ್ವೇಗವು ಬಿರುಗಾಳಿಯಂತೆ ಎದ್ದಿತು. ಇದರಿಂದ, ಸ್ವದೇಶದ ಸಂಪತ್ತಿನ ಸುಲಿಗೆಯಿಂದ ಅಂದಿನ ಜನತೆ ಎಷ್ಟೊಂದು ಕಸಿವಿಸಿಗೊಂಡಿತ್ತೆಂಬುದರ ಅರ್ಥವು ನಮಗಾಗುವದು. ಸ್ವದೇಶದಲ್ಲಿ ಸಿದ್ಧವಾದ ವಸ್ತುಗಳ ಬಗ್ಗೆ ಪ್ರೇಮ-ಪ್ರೋತ್ಸಾಹಗಳು ಬೆಳೆದು ಬಂದುದು ಅಂದಿನ ಚಳವಳಿಯ ಸೌಮ್ಯ, ವಿಧಾಯಕ ಸ್ವರೂಪವೇ ಸರಿ.

ಧಾರ್ಮಿಕ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ಮಾತ್ರ ಬ್ರಿಟಿಶರು ಕೈಹಾಕಲು ಪ್ರಯತ್ನಿಸಲಿಲ್ಲವೆಂಬುದು ನಿಜವೇ ಸರಿ. ಇಷ್ಟೇ ಅಲ್ಲ, ಸುಯೋಜಿತ ತಟಸ್ಥವೃತ್ತಿಯನ್ನು ಅವರು ಈ ವಿಷಯದಲ್ಲಿ ತಾಳಿದರು. ೧೮೫೭ ರಲ್ಲಿ ಹಿಂದೀಯರ ಧಾರ್ಮಿಕ ಭಾವನೆಗಳನ್ನು ಕೆರಳಿಸಿ ಅವರು ಕೈಸುಟ್ಟುಕೊಂಡಿದ್ದರು ; ಹಾಗೆ ಮಾಡುವದರಿಂದ ಎಂಥ ಸ್ಫೋಟಗಳು ಸಿಡಿದೇಳಬಲ್ಲವೆಂಬ ಕಹಿ ಅನುಭವವು ಅವರಿಗೆ ಇತ್ತು. ಇದಲ್ಲದೆ ಈ ಬಗ್ಗೆ ಅವರು ತಾಳುವ ತಟಸ್ಥವೃತ್ತಿಯಿಂದ ಅವರ ರಾಜಕೀಯ ಪ್ರಭುತ್ವಕ್ಕಾಗಲಿ, ಆರ್ಥಿಕ ಶೋಷಣಕ್ಕಾಗಲಿ, ಆಡಳಿತದ ದಕ್ಷತೆಗಾಗಲಿ ಯಾವ ಕೊರತೆಯೂ ಉಂಟಾಗುವಂತಿರಲಿಲ್ಲ. ಮೇಲಾಗಿ ಎಲ್ಲ ಧರ್ಮಗಳನ್ನು ತಾವು ಸಮಾನತೆಯಿಂದ ನೋಡುವೆವೆಂಬ ಕೀರ್ತಿಗೆ ಅವರು ಪಾತ್ರರಾದರು. ಈ ದೇಶದ ಧರ್ಮ, ಜನಾಂಗ, ಜಾತಿ ಮೊದಲಾದವುಗಳ ಬಗ್ಗೆ ಅವರು ಅತ್ಯಂತ ಅಪರಿಚಿತರಾದ್ದರಿಂದ ಈ ತಟಸ್ಥವೃತ್ತಿಯು ಅವರಿಗೆ ಸಹಾಯಕವೇ ಆಯಿತು. ಆದರೆ ಇದರಿಂದ ಅವರಿಗೆ ಈ ದೇಶದಲ್ಲಿ ಪ್ರಚಲಿತವಿದ್ದ ಹಿಂದೂ ಧರ್ಮ ಇಲ್ಲವೆ ಇಸ್ಲಾಂ ಮೊದಲಾದ ಯಾವದೇ ಧರ್ಮದ ಬಗ್ಗೆ ಅಷ್ಟೊಂದು ಆದರವಿತ್ತೆಂದೇನೂ ಅರ್ಥವಲ್ಲ. ಇಂಗ್ಲಂಡದಿಂದ ಇಲ್ಲಿಗೆ ಆಡಳಿತಗಾರರೆಂದು ಬಂದವರಲ್ಲಿ ಅನೇಕರಿಗೆ ಇಲ್ಲಿಯ ಧರ್ಮಗಳ ಬಗ್ಗೆ ಅಗಾಧ ಅಜ್ಞಾನವೇ ಇರುತ್ತಿತ್ತು ; ಕೆಲವರಂತೂ ಹಲವೊಂದು ಪೂರ್ವಗ್ರಹದೂಷಿತ ಭಾವನೆಗಳನ್ನು ತಲೆಯಲ್ಲಿ ತುಂಬಿಕೊಂಡೇ ಇಲ್ಲಿಗೆ ಬರುತ್ತಿದ್ದರು. ಪ್ರತ್ಯಕ್ಷವಾಗಿ ತಾವೇ ನಿರೀಕ್ಷಿಸಿ ಇಲ್ಲಿಯ ಧರ್ಮಗ್ರಂಥಗಳನ್ನು ಅಭ್ಯಾಸಮಾಡುವ ಲವಲವಿಕೆ ಅವರಲ್ಲಿ ಯಾರೊಬ್ಬರಿಗೆ

ಹುಟ್ಟಿದ್ದರೂ ಅವರಿಗೆ ತಿಳಿವಳಿಕೆ ಕೊಡುವ ಜನರೆಂದರೆ ಮಿಶನರಿಗಳನ್ನೂ ಅವರ ಮಿತ್ರರಾದ ಕೆಲವು ವಿದ್ವಾಂಸರನ್ನೂ ಬಿಟ್ಟರೆ ಬೇರೊಬ್ಬರಿರಲಿಲ್ಲ. ಈ ಹೊತ್ತಿನಲ್ಲಿ ಭಾರತ ಪ್ರಾಚ್ಯವಿದ್ಯಾಶಾಸ್ತ್ರ (Indology) ದ ಆಳವಾದ ಅಭ್ಯಾಸವನ್ನು ಬಹಳ ಜನ ವಿದ್ವಾಂಸರು ಇನ್ನೂ ಮಾಡಿರಲಿಲ್ಲವಾದ್ದರಿಂದ ಭಾರತೀಯ ಧರ್ಮ-ವೇದಾಂತಗಳನ್ನು ಕುರಿತು ಪ್ರಕಾಶ ಬೀರುವ ಅಪಾರ ವಿದ್ವತ್‌ಸಾಹಿತ್ಯವು ಇನ್ನೂ ಆಗ ಲಭ್ಯವಿರಲಿಲ್ಲ. ಈ ಕ್ಷೇತ್ರದಲ್ಲಿ ಭಾರತದ ದರ್ಶನವು ಪಶ್ಚಿಮದ ವಿದ್ವಾಂಸರಿಗೆ ಇನ್ನೂ ಆಗಿರಲಿಲ್ಲ. ಮೇಲಾಗಿ ಈ ದೇಶಕ್ಕೆ ಬಂದವರಿಗೆಲ್ಲ ಇದರ ಪೂರ್ಣ ಅಭ್ಯಾಸಮಾಡಲು ಸಾಕಷ್ಟು ಸಮಯವೇ ಸಿಗುತ್ತಿರಲಿಲ್ಲ. ಕೇವಲ ಸ್ಥೂಲ ನಿರೀಕ್ಷಣೆಗೈದ ಅನೇಕರಿಗೆ ಅನೇಕ ವಿಲಕ್ಷಣ ಅಂತರಗಳು ಕಂಡುಬಂದವು. ವಿಲಾಯತಿಯಿಂದ ಬಂದವರಲ್ಲಿ ಬಹುಜನರು ತಮ್ಮದೆಲ್ಲ ಶ್ರೇಷ್ಠವೆಂಬ ಅಹಂಭಾವನೆಯಿಂದಲೇ ಈ ದೇಶದ ಧರ್ಮ-ರೀತಿ-ನೀತಿಗಳನ್ನು ನೋಡುತ್ತಿದ್ದರು. ಹಿಂದುಸ್ತಾನವನ್ನು ತಾವು ಗೆದ್ದಿರುವೆವೆಂದ ಬಳಿಕ ಈ ದೇಶವು ಎಲ್ಲ ವಿಷಯಗಳಲ್ಲಿ ತಮಗಿಂತ ಕಡಿಮೆ ತರಗತಿಯದು ಇರಲೇಬೇಕೆಂದು ಸಹಜವಾಗಿ ಭಾವಿಸಿಕೊಳ್ಳುತ್ತಿದ್ದರು. ಈ ದೃಷ್ಟಿಕೋನದಿಂದ ನೋಡಿದಾಗ ಹಿಂದುಸ್ಥಾನದ ಧರ್ಮ-ಸಂಸ್ಕೃತಿ-ಸಮಾಜಗಳೆಲ್ಲ ವಿಕೃತರೂಪದಲ್ಲಿಯೇ ಅವರಿಗೆ ಕಂಡುಬರುತ್ತಿದ್ದವು.

ಆಗಿನ ಆಂಗ್ಲ ಅಧಿಕಾರಿಗಳು ಧಾರ್ಮಿಕ ವಿಷಯಗಳಲ್ಲಿ ಎಷ್ಟೇ ತಟಸ್ಥವೃತ್ತಿಯನ್ನು ತಾಳಿದ್ದರೂ ಕ್ರೈಸ್ತ ಧರ್ಮದ ಬಗ್ಗೆಯೂ ಈ ದೇಶದಲ್ಲಿರುವ ಅದರ ಪಾದ್ರಿಗಳ ಬಗ್ಗೆಯೂ ಅವರ ಅಂತಃಕರಣದಲ್ಲಿ ಕೋಮಲ ಭಾವನೆಯು ಉಕ್ಕಿ ಬರುತ್ತಿತ್ತು. ಇದು ಸಹಜವೇ ಸರಿ. ಏಕೆಂದರೆ ಅವರೂ ಕ್ರೈಸ್ತಧರ್ಮದವರಾಗಿದ್ದು ಇಲ್ಲಿಗೆ ಬರುತ್ತಿದ್ದ ಪಾದ್ರಿಗಳು ಚಿರಪರಿಚಿತರಾಗಿ ಸ್ವಕೀಯರೆನಿಸುತ್ತಿದ್ದರು. ಈ ದೇಶಕ್ಕೆ ಹೊಸದಾಗಿ ಬಂದ ತಮ್ಮ ಧರ್ಮಕ್ಕೂ ಧರ್ಮಪ್ರಚಾರಕರಿಗೂ ಪ್ರೋತ್ಸಾಹ-ಮೀಯಬೇಕೆಂಬ ಸ್ವಜನಾಭಿಮಾನವು ಸಹಜವಾಗಿ ಅವರಲ್ಲಿ ಮೂಡುತ್ತಿತ್ತು. ಅಂದು ಹಿಂದುಸ್ಥಾನದಲ್ಲಿ ಧರ್ಮವೆಂಬ ಹೆಸರಿನಲ್ಲಿ ಯಾವದು ರೂಢಿಯಲ್ಲಿತ್ತೋ ಅದಕ್ಕಿಂತ ತಮ್ಮ ಧರ್ಮವು ಮೇಲಾದುದೆಂದು ಆಂಗ್ಲ ಅಧಿಕಾರಿಗಳು ಭಾವಿಸಿದ್ದರು. ವ್ಯವಹಾರಕುಶಲರಾದ ಕ್ರೈಸ್ತ ಮಿಶನರಿಗಳು ಪ್ರಭುತ್ವದವರೆದುರಿಗೆ ತಮಗೆ ಅನುಕೂಲವಾಗುವಂತೆಯೇ ಹಿಂದೂ ಧರ್ಮವನ್ನು ಚಿತ್ರಿಸುತ್ತಿದ್ದರು. ಅದರಿಂದ ಅವರ ಮನಸ್ಸಿನ ಮೇಲೆ ಕಾಲೋಚಿತ ಪರಿಣಾಮವೂ ಆಗುತ್ತಿತ್ತು. ಆದರೆ ಹಿಂದೂ ಧರ್ಮಕ್ಕೆ ಮಾತ್ರ ಅನ್ಯಾಯವಾಗುತ್ತಿತ್ತು.

'ಸತಿ'-ಬಾಲ್ಯವಿವಾಹಗಳಂಥ ಸಾಮಾಜಿಕ ವಿಷಯಗಳಲ್ಲಿ ಅಂದಿನ ಆಂಗ್ಲ ಪ್ರಭುಗಳು ಒಳ್ಳೇ ಮನಸ್ಸು ಹಾಕಿದರು; ಸ್ಥಳೀಯ ಸುಧಾರಕರ ಬೆಂಬಲಕ್ಕೆ ನಿಂತು ಅಗತ್ಯವಾದ ಕಾನೂನುಗಳನ್ನು ಮಾಡಿ ಸಕಾಲಕ್ಕೆ ಜಾರಿಯಲ್ಲಿ ತಂದರು.

ಈ ದೃಷ್ಟಿಯಿಂದ ಸರ್ವಸಾಧಾರಣವಾಗಿ ಅಂದಿನ ಪಾಶ್ಚಿಮಾತ್ಯರೂ ಆಂಗ್ಲ ಪ್ರಭುಗಳೂ ಧಾರ್ಮಿಕ-ಸಾಮಾಜಿಕ ವಿಷಯಗಳ ಕಡೆಗೆ ನೋಡುತ್ತಿರುವಾಗ, ಪ್ರತ್ಯಕ್ಷ ಹಿಂದೂ ಧರ್ಮದಲ್ಲಿಯೇ ಅಂತಃಕ್ಷೋಭೆ ನಡೆದಿತ್ತು. ಶ್ರೀರಾಮಕೃಷ್ಣ ಪರಮಹಂಸರು ತಮ್ಮ ಜೀವನಕಾರ್ಯವನ್ನು ಇಷ್ಟರಲ್ಲಿ ಆರಂಭಿಸಿದ್ದರು. ಪಶ್ಚಿಮದ ಪದಿಯಚ್ಚಿನಲ್ಲಿ ಮೈದಾಳಿದ ಕೆಲವು ಸುಧಾರಕ ಪಂಥಗಳು ಮುಂದೇನೆಂದು ಆಶ್ಚರ್ಯಗೊಂಡಿದ್ದವು. ಬ್ರಹ್ಮಸಮಾಜದವರೂ ಪ್ರಾರ್ಥನಾ ಸಮಾಜದವರೂ ಕ್ರೈಸ್ತ ಧರ್ಮದ ಮಾದರಿಯಲ್ಲಿ ಹಿಂದೂ ಧರ್ಮವನ್ನು ಸುಧಾರಿಸಲು ಹೊರಟಿದ್ದರು. ಇಂಗ್ಲಿಷ್ ಶಿಕ್ಷಣವನ್ನು ಪಡೆದ ಅಂದಿನ ಅನೇಕ ಸುಶಿಕ್ಷಿತರು ಈ ಪಂಥಗಳ ಅನುಯಾಯಿಗಳಾಗಿದ್ದರು. ಆದರೆ ಶ್ರೀರಾಮಕೃಷ್ಣರು ಗೈದ ಸಾಧನವೂ ಪಡೆದ ಸಿದ್ಧಿಯೂ ಲೋಕಕ್ಕೆ ಸಮನ್ವಯ-ಯೋಗದ ನವದೃಷ್ಟಿಯನ್ನೇ ತಂದು ಕೊಟ್ಟು ಕಲಿತವರಲ್ಲಿಯೂ ಕಲಿಯದವ-ರಲ್ಲಿಯೂ ನವಚೈತನ್ಯವನ್ನು ಉಂಟುಮಾಡಿತು. ಧರ್ಮದ ವಿಷಯಗಳಲ್ಲಿ ಸಹಾನು-ಭೂತಿಯ ದೃಷ್ಟಿಕೋನವು ಅವಶ್ಯವಿದೆಯೆಂದೂ ಎಲ್ಲ ಧರ್ಮಗಳಿಗೂ ಮೂಲಭೂತ ತತ್ತ್ವಗಳು ಸಮಾನವಾಗಿವೆಯೆಂದೂ ಮಾನವನು ಉಚ್ಚ ಉದಾತ್ತ ಚೇತನವನ್ನು ಪಡೆಯುವ ಕಾರ್ಯದಲ್ಲಿ ಹಿಂದೂ ಧರ್ಮವೂ ಯೋಗಶಾಸ್ತ್ರವೂ ಭಕ್ತಿಯೂ ಯೋಗ್ಯ ಮಾರ್ಗದರ್ಶನ ಗೈಯಲು ಸಮರ್ಥವಾಗಿವೆಯೆಂದೂ ಪರಮಹಂಸರು ತಮ್ಮ ಅಧಿಕಾರ-ವಾಣಿಯಿಂದ ಪ್ರಪಂಚಕ್ಕೇನೇ ಸಾರಿ ಹೇಳಿದರು. ಅವರ ಈ ಸರಳ ಉಪದೇಶವು ಎಲ್ಲರ ಹೃದಯಗಳನ್ನು ತನ್ನತ್ತ ಸೆಳೆಯಿತು. ಅವರ ಶಿಷ್ಯಗಣದ ಸಂಖ್ಯೆ ದಿನ ದಿನಕ್ಕೆ ಬೆಳೆಯುಹತ್ತಿತು. ಕೊನೆಯಲ್ಲಿ ಅವರ ಶಿಷ್ಯೋತ್ತಮನಾದ ನರೇನ್‌ಬಾಬುವು ವೇದಾಂತದ ಪ್ರಥಮ ಪ್ರಸಾರಕನಾಗಿ ಹೊರಟು, ಪೂರ್ವ-ಪಶ್ಚಿಮಗಳೆರಡನ್ನೂ ತನ್ನ ಗುರುವಿನ ಪಾದಕ್ಕೆ ತಲೆಬಾಗುವಂತೆ ಮಾಡಿ ವಿವೇಕಾನಂದನೆನಿಸಿಕೊಂಡನು. ಯೋಗದ ಭದ್ರ ತಳಹದಿಯ ಮೇಲೆ ವೇದಾಂತವು ನೆಲೆಯೂರಿ ನಿಂತಿತು. ಇಂತು ಶ್ರೀ ಪರಮಹಂಸರು ಮಾನವಕುಲಕ್ಕೇನೇ ಸಮನ್ವಯ ದೃಷ್ಟಿಯ ಮಾನವ-ಕರುಣೆಯ ಒಂದು ಹೊಸ ಕಣ್ಣನ್ನೇ ಕೊಟ್ಟು ಎಲ್ಲ ಧರ್ಮ-ಜಾತಿ-ಪಂಥ-ಲಿಂಗ-ರಾಷ್ಟ್ರೀಯತೆಗಳನ್ನೆಲ್ಲ ಸಮಗ್ರ, ಸರ್ವವ್ಯಾಪಕ ಭಾವನೆಯಿಂದ ನೋಡಲು ಕಲಿಸಿದರು. ಅಂತೆಯೇ ಎಲ್ಲರಿಗೂ ಅವರ ಉಪದೇಶವು ಸರಿಯೆನಿಸಿತು.

'ಆರ್ಯಸಮಾಜ'ದ ಸ್ಥಾಪಕರಾದ ಸ್ವಾಮೀ ದಯಾನಂದರೂ ಇಷ್ಟರಲ್ಲಿ ತಮ್ಮ ಕಾರ್ಯವನ್ನು ಆರಂಭಿಸಿದ್ದರು. ಹಿಂದೂಧರ್ಮ-ಸಂಸ್ಕೃತಿಗಳನ್ನು ಹಿಂಪೂಡುತ್ತಿದ್ದ ಪಾಶ್ಚಾತ್ಯ ಹಾಗೂ ಇಸ್ಲಾಂ ಸಂಸ್ಕೃತಿಗಳೆರಡರ ವಿರುದ್ಧವಾಗಿಯೂ ಅವರು ಹೋರಾಡಿದರು. ಅವರ ಜೀವನದ ಧ್ಯೇಯವು ದ್ವಿಮುಖವಾಗಿತ್ತು : ಹೇಗೆಂದರೆ, ಪರಕೀಯ ಸಂಸ್ಕೃತಿಗಳ ಆಕ್ರಮಣದ ವಿರುದ್ಧವಾಗಿ ಅವರು ಹೋರಾಡಿದರಲ್ಲದೆ, ಹಿಂದೂಧರ್ಮದಲ್ಲಿಯ ಅಂತಃಸ್ಥ ಶತ್ರುಗಳೆಂದು ಯಾವವುಗಳಿಗೆ ಅವರು ಕರೆಯು

ವರೋ ಅಂಥ ದುಷ್ಟ ರೂಢಿಗಳ ವಿರುದ್ಧವಾಗಿಯೂ ಅವರು ಅವಿಶ್ರಾಂತವಾಗಿ ಕಾದಾಡಿದರು. ಅವರ ವಿಚಾರಸರಣಿಯು ಸತ್ತ್ವತಃ ದೇಶಪ್ರೇಮದಿಂದಲೂ ರಾಷ್ಟ್ರೀಯತ್ವದಿಂದಲೂ ಪ್ರೇರಿತವಾಗಿತ್ತು. ಇದಲ್ಲದೆ ಶ್ರೇಷ್ಠ ತರಗತಿಯ ಸುಧಾರಕರೂ ಅವರಾಗಿದ್ದರು. ಹಿಂದುತ್ವದ ರಕ್ಷಣೆಗಾಗಿ ಅವರು ತಮ್ಮ ಶಕ್ತಿಸರ್ವಸ್ವವನ್ನೆಲ್ಲ ಒಬ್ಬ ಮಲ್ಲನಂತೆ ಧಾರೆಯೆರೆದರು. ಅದರಂತೆಯೇ ಶುದ್ಧ ವೈದಿಕ ಆರ್ಯಧರ್ಮದಲ್ಲಿ ನಡುವೆ ನುಗ್ಗಿದ ಪ್ರಕ್ಷಿಪ್ತ ಅಂಶಗಳನ್ನೆಲ್ಲ ಹೊಡೆದೋಡಿಸಲು ತಮ್ಮ ಸುತ್ತಿಗೆಯಿಂದ ಘಾಣದ ಏಟುಗಳನ್ನು ಒಂದೇ ಸವನೆ ಹಾಕಿದರು. ಮೂರ್ತಿಪೂಜೆಯ ಎಲ್ಲ ಪ್ರಕಾರಗಳನ್ನೂ ಖಂಡಿಸಲಾಯಿತು; ಪುರಾಣಗಳನ್ನೂ ಪೌರಾಣಿಕ ದೇವತೆಗಳನ್ನೂ ನಿಷ್ಠುರವಾಗಿ ನಿಷೇಧಿಸಲಾಯಿತು. ಅವರು ಸ್ಥಾಪಿಸಿದ ಆರ್ಯ ಸಮಾಜವು ವೇದಗಳನ್ನೂ ವೇದ ಕಾಲದ ಹೋಮವನ್ನೂ ಪುನರುಜ್ಜೀವನಗೊಳಿಸಿತು. ಈ ಪಂಥವು ನಾಲ್ಕೇ ವರ್ಣಗಳನ್ನು ಮಾನ್ಯಮಾಡುತ್ತ ಅಂದೂ ಇಂದೂ ರೂಢಿಯಲ್ಲಿದ್ದ ನೂರಾರು ಜಾತಿ-ಉಪಜಾತಿಗಳನ್ನು ಕಿತ್ತಿಹಾಕಿತು. ಬ್ರಹ್ಮಚರ್ಯ-ಶೀಲಸಂವರ್ಧನೆಗಳಿಗೆ ಪ್ರಾಶಸ್ತ್ಯವನ್ನಿತ್ತು ಪ್ರಾಚೀನಕಾಲದ ತಪೋವನಪದ್ಧತಿಯ ಶಿಕ್ಷಣವನ್ನು ಎತ್ತಿಹಿಡಿದಿದ್ದರಿಂದ ಅನೇಕ "ಗುರುಕುಲ"ಗಳು ಸ್ಥಾಪಿತವಾಗಿ ಕಾರ್ಯ ನಡಿಸಿದವು. ಸಂಸ್ಕೃತದ ಅಧ್ಯಯನಕ್ಕೆ ಅಗ್ರಮರ್ಯಾದೆ ಕೊಡಲಾಯಿತು.

ಹೀಗೆ, ಕ್ರೈಸ್ತ ಧರ್ಮವನ್ನು ಮೆಚ್ಚಿ ಅದರ ಮಾದರಿಯಲ್ಲಿ ಹಿಂದೂಧರ್ಮವನ್ನು ಸುಧಾರಿಸಬೇಕೆಂಬ ಪ್ರವೃತ್ತಿಯುಂಟಾದ ಕಾಲವು ಹಿಂದೆ ಬಿತ್ತು. ಈ ಕಾಲವೆಂದರೆ ಅಂದಿನ ಅಂತಃಕ್ಷೋಭೆಯ ಪ್ರಥಮಾವಸ್ಥೆಯು. ಭಾರತದ ಧಾರ್ಮಿಕ ವಿಚಾರ-ಪರಂಪರೆಯಲ್ಲಿ ಉತ್ತಮವಾದುದಾವುದೋ ಅದನ್ನು ಮೆಚ್ಚಿ ಪುರಸ್ಕರಿಸಬೇಕೆಂಬ ಸ್ವತ್ತ್ವಪ್ರೇಮದ ಎರಡನೆಯ ಅವಸ್ಥೆಯು ಈಗ ಆರಂಭವಾಗಿತ್ತು. ನಡುವೆ ಬಂದು ಸೇರಿಕೊಂಡ ಪ್ರಕ್ಷಿಪ್ತ ಅಂಶಗಳನ್ನೂ ಬಹುಕಾಲದಿಂದ ಬೇರುಬಿಟ್ಟ ದುಷ್ಟರೂಢಿಗಳನ್ನೂ ಬೇರ್ಪಡಿಸಿ, ಅಧ್ಯಾತ್ಮವಿದ್ಯೆಯಲ್ಲಿಯೂ ವೇದಾಂತದರ್ಶನಗಳಲ್ಲಿಯೂ ಸ್ಮೃತಿಗ್ರಂಥಗಳಂಥ ಧರ್ಮಶಾಸ್ತ್ರಗಳಲ್ಲಿಯೂ ಅಡಕವಾದ ಮೂಲಭೂತ ಮೌಲಿಕ ಅಂಶಗಳನ್ನು ಹೆಕ್ಕಿ ತೆಗೆದು ಪರ್ಯಾಲೋಚಿಸುವ ಪರಿಪಾಠವು ಬೆಳೆದು ಬಂದಿತು. ಶ್ರೀ ಅರವಿಂದರ ವಿಚಾರಪ್ರಣಾಲಿಯು ಅಂದಿನ ದಿನಗಳಲ್ಲಿ ಪ್ರಚಲಿತವಿದ್ದ ಇತರ ಮಾರ್ಗಗಳಿಗಿಂತ ಶ್ರೀರಾಮಕೃಷ್ಣರ ಮಾರ್ಗಕ್ಕೇ ಹೆಚ್ಚಾಗಿ ಹೊಂದಿಕೊಳ್ಳುತ್ತದೆ. ಇವರಿಬ್ಬರಲ್ಲಿ ಇರುವ ಸ್ಪಷ್ಟ ಅಂತರವನ್ನೂ ನಾವು ಲಕ್ಷಿಸಬಹುದು. ಶ್ರೀ ಅರವಿಂದರಲ್ಲಿ ಕಂಡುಬರುವ ಪಶ್ಚಿಮದ ವಿದ್ಯೆಯ ಅಪಾರ ಜ್ಞಾನ-ಅನುಭವಗಳ ಹಿನ್ನೆಲೆಯು ಶ್ರೀ ರಾಮಕೃಷ್ಣರ ಚರಿತ್ರೆಯಲ್ಲಿ ಕಂಡುಬರುವದಿಲ್ಲ. ಭಾರತದ ಅಧ್ಯಾತ್ಮಕ್ಷೇತ್ರದಲ್ಲಿಯ ಶ್ರೀಮದೂರ್ಜಿತ ಅಂಶಗಳ ವಿಷಯವಾಗಿ ವ್ಯಕ್ತವಾಗುವ ಸಹಜಸ್ನೇಹದಲ್ಲಿಯೂ ಅಂಥ ದೈವೀತೇಜದ ಸಾಕ್ಷಾತ್ಕಾರದಲ್ಲಿ ಕಂಡುಬರುವ

ಅಂತರ್‌ಜ್ಞಾನದ ಅನುಭವದಲ್ಲಿಯೂ ಪ್ರಪಂಚದ ಸಕಲ ಧರ್ಮಗಳ ಬಗ್ಗೆ ಇರುವ ಸಮನ್ವಯ ದೃಷ್ಟಿಯಲ್ಲಿಯೂ ಆ ದೃಷ್ಟಿಯ ದಾರಿಯಲ್ಲಿ ಸಾಧನಗೈಯಬೇಕೆಂಬ ಮಾನವೀಯ ಸಾಹಸದಲ್ಲಿಯೂ ಶ್ರೀ ಅರವಿಂದರು ಆ ಕಾಲದ ಇತರ ಪಂಥಗಳ ನಾಯಕರಿಗಿಂತಲೂ ಶ್ರೀ ರಾಮಕೃಷ್ಣರಿಗೇ ಹೆಚ್ಚು ಸಮೀಪದವರಾಗಿದ್ದಾರೆ. ಸಾಮಾಜಿಕ ಸುಧಾರಣೆಗಳ ಸಂಬಂಧದಲ್ಲಿ ಪರಮಹಂಸರು ಯಾವ ವಿಶಿಷ್ಟ ವಿಚಾರ ಗಳನ್ನಾಗಲಿ ಸಿದ್ಧಾಂತವನ್ನಾಗಲಿ ಎಲ್ಲಿಯೂ ವ್ಯಕ್ತ ಪಡಿಸಿಲ್ಲ. ವೇದಾಂತ ಮತ್ತು ತಂತ್ರ - ಇವೆರಡೇ ಮಾರ್ಗಗಳ ಸಿದ್ಧಾಂತಗಳನ್ನು ಅವರ ಆಚರಣೆಯು ಅವಲಂಬಿ ಸಿತ್ತು. ಮಾನವರೆಲ್ಲರಲ್ಲಿ ಸಮಾನ ಯೋಗ್ಯತೆಯುಂಟೆಂದೂ ಅಂತೆಯೇ ಎಲ್ಲರನ್ನು ಪೂಜ್ಯಭಾವದಿಂದ ಕಾಣಬೇಕೆಂದೂ ಅವರು ನುಡಿದು ನಡೆದು ತೋರಿಸಿದರು. ಕಾಲೀಮಾತೆಯು ಶಕ್ತಿಸ್ವರೂಪಿಣಿಯಾಗಿದ್ದು ಆಕೆಯನ್ನು ನಾವು ಸದಾ ಪೂಜಿಸ ಬೇಕೆಂದು ಅವರು ಹೇಳುವಲ್ಲಿ ಸ್ತ್ರೀಯರ ಬಗ್ಗೆ ಅವರೂ ಅವರ ಶಿಷ್ಯರೂ ಎಷ್ಟೊಂದು ಗೌರವಾದರಗಳನ್ನು ತಾಳಿದ್ದರೆಂಬುದು ಕಂಡು ಬರುತ್ತದೆ.

ಇನ್ನು ಶಿಕ್ಷಣದ ಕ್ಷೇತ್ರಕ್ಕೆ ಬರೋಣ. ಮೆಕಾಲೆ ಸಾಹೇಬನ ಸುಪ್ರಸಿದ್ಧ ಶಿಫಾರಸ್ಸಿನ ಮೇರೆಗೆ ಆಂಗ್ಲ ಸರಕಾರದವರು ಶಿಕ್ಷಣದ ವಿಷಯದಲ್ಲಿ ಹೊಸ ಧೋರಣವನ್ನು ನಿಶ್ಚಯಿಸಿದರಷ್ಟೆ. ಈ ಧೋರಣದಿಂದ ಭಾರತೀಯ ವಿದ್ಯೆಗಳಿಗೂ ಶೈಕ್ಷಣಿಕ ಆದರ್ಶಗಳಿಗೂ ವಜ್ರಾಘಾತವಾದಂತಾಯಿತು. ಅಂದಿನ ವರೆಗೂ ನಡೆದು ಕೊಂಡು ಬಂದ ಪರಂಪರೆಗಳನ್ನು ಪೂರ್ಣವಾಗಿ ಬಿಟ್ಟುಕೊಟ್ಟಂತಾಯಿತು. ಕೇವಲ ಬೌದ್ಧಿಕವಾಗಿರುವ, ಪಶ್ಚಿಮದ ಪಡಿಯಚ್ಚಿನಲ್ಲಿ ಎರಕ ಹೊಯ್ದ ನವೀನ ಶಿಕ್ಷಣ-ಪದ್ಧತಿಯು ರೂಢಿಯಲ್ಲಿ ಬಂದು ಇದಕ್ಕೇನೇ 'ಉದಾರ ಶಿಕ್ಷಣ'ವೆಂದು ಕರೆಯ ಲಾಯಿತು. ಇದರಲ್ಲಿ, ಇಂಗ್ಲಿಷ್ ಭಾಷೆಯಲ್ಲಿ ಪ್ರಭುತ್ವ ಪಡೆಯುವ ಮಾತಿಗೆ ಪ್ರಾಶಸ್ತ್ಯ ಕೊಡಲಾಯಿತು. ಇಂಗ್ಲಿಷ್ ಭಾಷೆಯ ಅಧ್ಯಯನವೇ ಪ್ರಧಾನವಾಗಿ ಉಳಿದುವೆಲ್ಲವೂ ಗೌಣ ವಿಷಯಗಳಾದವು. ನವೀನ ಶಿಕ್ಷಣಕ್ರಮಕ್ಕೇನೇ ಸರಕಾರ ದವರು ಸರ್ವವಿಧದ ಪ್ರೋತ್ಸಾಹ-ಪುರಸ್ಕಾರ-ಮನ್ನಣೆಗಳನ್ನು ಇತ್ತದ್ದರಿಂದ ಪೂರ್ವದ ಹಿಂದೂ ಇಲ್ಲವೆ ಮುಸ್ಲಿಂ ಶಿಕ್ಷಣಪದ್ಧತಿಗಳು ನಷ್ಟವಾಗತೊಡಗಿದವು. ಇದರ ಪರಿಣಾಮವಾಗಿ, ಭಾರತದ ಪ್ರಾಚೀನ ಪರಂಪರೆಯ ಗಂಧವೂ ಇಲ್ಲದ, ಇಂಗ್ಲಿಷ್ ಕಲಿತ ಬೌದ್ಧಿಕ ವರ್ಗವೊಂದು ಸಮಾಜದಲ್ಲಿ ಹುಟ್ಟಿಬಂದಿತು. ಇಂಥ ಸುಶಿಕ್ಷಿತರ ಹೊಸಜಾತಿಯೇ ಒಂದು ನಿರ್ಮಾಣವಾಗಿ, ಸದಾ ಆಂಗ್ಲ ಪ್ರಭುಗಳ ಕೃಪೆಯನ್ನು ಸಂಪಾದಿಸುವದೇ ಇವರ ಜೀವನದ ಏಕಮಾತ್ರ ಧ್ಯೇಯವಾಯಿತು. ಇವರಿಗೆ ಘನತೆವೆತ್ತ ತಮ್ಮ ಪುರಾತನ ಸಂಸ್ಕೃತಿಯ ಬಗ್ಗೆ ಯಾವ ಜ್ಞಾನವೂ ಇಲ್ಲದ್ದರಿಂದ— ತಮ್ಮ ಸಮಾಜ ಬಂಧುಗಳ ಇಲ್ಲವೆ ಪೂರ್ವಜರ ಇಷ್ಟೇ ಏಕೆ ತಮ್ಮ ತಾಯಿತಂದೆಗಳ ಆಚಾರ ವಿಚಾರಗಳನ್ನೂ ರೀತಿ-ನಡತೆಗಳನ್ನೂ ಕಂಡರೆ

ಇವರು ಅಸಹ್ಯಪಡುತ್ತಿದ್ದರು. ಈ ಜನರು ದೇಹದಿಂದ ಭಾರತೀಯರಾದರೂ ಸಂಸ್ಕಾರಗಳಿಂದ ವಿದೇಶೀಯರೆನಿಸಿಕೊಂಡು ರಾಷ್ಟ್ರಧರ್ಮಕ್ಕೆ ಪೂರ್ಣವಾಗಿ ಎರವಾಗಿ-ದ್ದರು. ಪಶ್ಚಿಮದ ಮಾನಸಪುತ್ರರೆಂದೂ ಇವರಿಗೆ ಒಮ್ಮೊಮ್ಮೆ ಕರೆಯಲಾಗುತ್ತಿತ್ತು. ಇಂಗ್ಲಿಷ್ ಭಾಷೆಯೇ ಶಿಕ್ಷಣದ ಮಾಧ್ಯಮವಾಗಿಬಿಟ್ಟಿದ್ದರಿಂದ ರಾಷ್ಟ್ರದ ಹತ್ತಾರು ದೇಶೀಯ ಭಾಷೆಗಳ ಬೆಳಿಗೆ ಬಹಳ ಕುಂಠಿತವಾಯಿತು. ಎಲ್ಲ ಭಾರತೀಯ ಭಾಷೆಗಳಿಗೆ ಆಧಾರಭೂತವಾಗಿದ್ದು ಅವಕ್ಕೆಲ್ಲ ಪ್ರೇರಣೆಯನ್ನಿತ್ತ ಸಂಸ್ಕೃತವು ಹಿಂದೆ ಬಿದ್ದಿತಲ್ಲದೆ ಇತರ ಭಾಷೆಗಳೂ ಅನಾಥ ಶಿಶುಗಳಂತೆ ಕಂಗೆಟ್ಟವು. ಕೇಂದ್ರದಲ್ಲಿಯೂ ಪ್ರಾಂತಗಳಲ್ಲಿಯೂ ಇಂಗ್ಲಿಷೇ ಕೋರ್ಟು-ಕಚೇರಿಗಳ ಭಾಷೆಯಾಯಿತು. ಶಾಲೆ-ಕಾಲೇಜುಗಳಲ್ಲಿಯೂ ಅದಕ್ಕೇನೇ ಪಟ್ಟ ಕಟ್ಟಲಾಯಿತು. ಇಂತು ರಾಜಕೀಯ ಮತ್ತು ಶೈಕ್ಷಣಿಕ ಕ್ಷೇತ್ರಗಳೆರಡರಲ್ಲಿಯೂ ದೇಶೀಯ ಭಾಷೆಗಳಿಗೆ ಗೌರವದ ಸ್ಥಾನವಿಲ್ಲದಾಗಿ ಅವು ಹಿಂದೆ ಬಿದ್ದವು.

ಶಿಕ್ಷಣ ಕ್ಷೇತ್ರದಲ್ಲಿ ನಡೆದದ್ದು ದೇಶೀಯ ಕಲಾಕ್ಷೇತ್ರಕ್ಕೂ ಅನ್ವಯಿಸುತ್ತದೆ. ಏತದ್ದೇಶೀಯ ಕಲಾಕೃತಿಗಳನ್ನು ಕಂಡಾಗ ಆಂಗ್ಲಪ್ರಭುಗಳು ಸೋಜಿಗಗೊಂಡು ಕೌತುಕಪಡುತ್ತಿದ್ದರೇ ಹೊರತು ಅವುಗಳ ಬಗ್ಗೆ ಪ್ರೇಮಾದರಗಳನ್ನು ತಾಳಲಿಲ್ಲ. ಸಾಮ್ರಾಜ್ಯದ ಮದಪ್ರವೃತ್ತಿಗಳು ಇಲ್ಲಿಯೂ ಕಾಣಿಸಿಕೊಂಡವು. ಭಾರತೀಯ ಕಲೆಗಳಿಗೆ ಕೃಪಾದೃಷ್ಟಿಯಿಂದ ಅಲ್ಪಸ್ವಲ್ಪ ಮನ್ನಣೆ ಆಗೀಗ ದೊರೆಯುತ್ತಿತ್ತಾ-ದರೂ ಅವುಗಳ ನಿಜವಾದ ಬೆಲೆಯನ್ನರಿತು ಗುಣಗ್ರಹಣ ಮಾಡುವವರೇ ಇಲ್ಲ-ದಾಯಿತು. ಚಿತ್ರಶಿಲ್ಪ, ವಾಸ್ತುಶಿಲ್ಪ, ಸಂಗೀತ, ಸಾಹಿತ್ಯ ಇವೇ ಮೊದಲಾದ ಕಲೆಗಳನ್ನೂ ಹಸ್ತಿದಂತದಲ್ಲಿ ಇಲ್ಲವೆ ಶ್ರೀಗಂಧದ ಕಟ್ಟಿಗೆಯಲ್ಲಿ ಕೈಯಿಂದ ಕೊರೆದು ಸುಂದರ ಮೂರ್ತಿಗಳನ್ನು ಪ್ರತಿಭಾಯುಕ್ತವಾಗಿ ಕುಸುರಿಸುವ ನೂರಾರು ಕುಶಲ ಕೈಗಾರಿಕೆಗಳನ್ನೂ ಕಣ್ಣೆತ್ತಿ ನೋಡುವವರೇ ಇಲ್ಲದಾಯಿತು. ಪಶ್ಚಿಮದ ಮೋಹಕ್ಕೆ ಬಲಿಬೀಳದ ಕೆಲವು ರಾಜಮಹಾರಾಜರ ಆಸ್ಥಾನದಲ್ಲಿ ಮಾತ್ರ ಇಂಥ ದೇಶೀಯ ಕಲೆಗಳಿಗೆ ಆಶ್ರಯವು ದೊರೆತು ಅಲ್ಲಿಯೇ ಅವು ಜೀವಂತ ಉಳಿದವು. ಇವಕ್ಕೆ ಆಗೀಗ ತಕ್ಕ ಮನ್ನಣೆಯೂ ದೊರೆಯಿತು. ಅತ್ಯಂತ ದುಃಖದ ಮಾತೇನೆಂದರೆ ಇಡೀ ಶಿಕ್ಷಣಕ್ರಮದಲ್ಲಿ ಇಂಥ ಲಲಿತಕಲೆಗಳಿಗೆ ಎಲ್ಲಿಯೂ ಸ್ಥಾನವೇ ದೊರೆಯದಿದ್ದುದು. ಶಾಲೆ ಕಾಲೇಜುಗಳಿಂದ ಹೊರಬಿದ್ದ ಸುಶಿಕ್ಷಿತರೆಂಬವರಿಗೆ ತಮ್ಮ ದೇಶದ ಕಲಾಸೌಂದರ್ಯದ ಅಮೌಲ್ಯ ಭಾಂಡಾರದ ಅರಿವೂ ಇಲ್ಲದಾಯಿತು. ಸಾಲ-ದ್ದಕ್ಕೆ ಹೊಸ ಬೆಡಗಿನ ಈ ಜನರಲ್ಲಿ ಪಶ್ಚಿಮದ ಅಗ್ಗ ವಸ್ತುಗಳನ್ನೇ ಹುಂಬರಂತೆ ಮೆಚ್ಚುವ ಕೀಳುಮಟ್ಟದ ರುಚಿಯೊಂದು ಬೆಳೆದುಬಂದಿತು.

ಇಂತಿದು ಸರ್ವಸಾಮಾನ್ಯವಾಗಿ ಅಂದಿನ ಸ್ಥಿತಿಗತಿಗಳ ದುಃಖದ ಕಥೆ. ಹೀಗಿದ್ದರೂ, ಇಂಗ್ಲಂಡ-ಯುರೋಪಗಳಿಂದ ಬಂದ ಕೆಲವು ವಿದ್ವಾಂಸರೂ ಕಲಾವಿಮರ್ಶ

ಕರೂ ಭಾರತೀಯ ಪುನರುಜ್ಜೀವನಕ್ಕಾಗಿ ಮನಮೆಚ್ಚಿ ದುಡಿದುದನ್ನು ನಾವು ಮರೆಯಲಾರೆವು. ಸಾಹಿತ್ಯಸಂಸ್ಕೃತಿಗಳ ಅಭ್ಯಾಸದ ದೃಷ್ಟಿಯಿಂದ ಸಂಸ್ಕೃತಕ್ಕಿರುವ ನಿಜವಾದ ಬೆಲೆಯನ್ನು ಅವರು ಗುರುತಿಸಿದರು. ಭಾರತದ ಇತರ ಭಾಷೆಗಳಲ್ಲಿಯೂ ಇರುವ 'ವಾಗ್ದೇವಿಯ ಭಾಂಡಾರದ ಮುದ್ರೆ'ಯನ್ನು ಒಡೆದು ಒಳಗಿನ ಸಂಪತ್ತನ್ನು ಅವರು ತೋರಿಸಿಕೊಟ್ಟರು. ಭಾರತದ ಕಲೆ-ಕೈಗಾರಿಕೆಗಳಲ್ಲಿರುವ ಸೌಂದರ್ಯದ ದರ್ಶನವನ್ನು ಈ ಕಲೋಪಾಸಕರು ಲೋಕಕ್ಕೆ ಮಾಡಿಸಿಕೊಟ್ಟರು. ಹಲವು ಜನ ಭಾರತೀಯ ವಿದ್ವಾಂಸರೂ ಈ ಕಾರ್ಯದಲ್ಲಿ ಪುರೋಧರಾದರು. ಇವರೆಲ್ಲರ ಪರಿಶ್ರಮದ ಫಲವಾಗಿ ಭಾರತೀಯ ಪುನರುಜ್ಜೀವನದ ಧ್ವಜವು ಸ್ವಚ್ಛಂದವಾಗಿ ಭಾರತೀಯ ಆಕಾಶದಲ್ಲಿ ಫಡಫಡಿಸತೊಡಗಿತು. ಈ ಪುನರುಜ್ಜೀವನದ ಬೆಲೆಯನ್ನರಿತು ಅದನ್ನು ನಿಷ್ಠೆಯಿಂದ ಪುರಸ್ಕರಿಸಿದ ಧುರೀಣರಲ್ಲಿ ಶ್ರೀ ಅರವಿಂದರು ಪ್ರಮುಖರಾಗಿದ್ದಾರೆ. ಅವರು ಸಾರ್ವಜನಿಕ ಜೀವನದಲ್ಲಿ ಅಗ್ರಣಿಗಳಾಗಿ ನಿಂತಾಗ ಅವರ ಪ್ರಭಾವಯುಕ್ತ ಲೇಖನಿಯಿಂದ ಈ ಸಾಂಸ್ಕೃತಿಕ ಆಂದೋಲನಕ್ಕೆ ಜೀವಕಳೆ ಬಂತು.

ಈ ಪ್ರಕಾರ, ಒಟ್ಟಾರೆ ಮಾತನಾಡುವದಾದರೆ, ಈ ಅವಧಿಯಲ್ಲಿ ಬ್ರಿಟಿಶರು ಸೈನ್ಯಬಲದ ವಿಜಯದಿಂದಾಗಿ ಇಲ್ಲಿ ತಳವೂರಿದ್ದರು. ಅವರ ಆಡಳಿತದ ಯಂತ್ರವು ಹೆಚ್ಚು ಭದ್ರವಾಗಿದ್ದರೂ ಅವರ ನೂತನ ಶಿಕ್ಷಣಕ್ರಮವು ಕೋಟಿಗಟ್ಲೆ ಜನಸಾಮಾನ್ಯರ ಮಧ್ಯದಲ್ಲಿ 'ಕಂದು ಬ್ರಿಟಿಶ'ರೆಂಬ ನವಜಾತಿಯನ್ನೇ ನಿರ್ಮಿಸಿದ್ದರೂ ದೇಶೀಯವೆಂಬುದು-ಅದು ಕಲೆಯೇ ಇರಲಿ, ಧರ್ಮವೇ ಇರಲಿ, ಸಾಹಿತ್ಯವೇ ಇರಲಿ ತತ್ತ್ವಜ್ಞಾನವೇ ಇರಲಿ ಅದೆಲ್ಲ ತಿರಸ್ಕಾರದ ವಿಷಯವಾಗಿದ್ದರೂ ಇದಕ್ಕೆ ಪ್ರಬಲತರ ಸುಭದ್ರ ಪ್ರತಿಕ್ರಿಯೆಯೊಂದು ನಿರ್ಮಾಣವಾಗಿ ಶಾಂತವಾಗಿ ಕಾರ್ಯವನ್ನು ಆರಂಭಿಸಿತು. ಮಾನವೀ ವ್ಯವಹಾರದ ಎಲ್ಲ ಕ್ಷೇತ್ರಗಳಲ್ಲಿಯೂ ಶ್ರದ್ಧೆಯನ್ನೂ ನಿಶ್ಚಿತ ದರ್ಶನವನ್ನೂ ಪಡೆದ ಪ್ರತಿಭಾಶಾಲಿಗಳು ಕಾರ್ಯರಂಗಕ್ಕೆ ಇಳಿದರು. ಇವರು ಭಾರತದ ಆತ್ಮಶಕ್ತಿಯ ಮೇಲೆ ಆದ ಆಕ್ರಮಣದ ವಿರುದ್ಧವಾಗಿ ಯಶಸ್ವಿಯಾಗಿ ಹೋರಾಡುತ್ತ ಭಾರತೀಯ ಸಂಸ್ಕೃತಿಯಲ್ಲಿ ಉತ್ತಮವೂ ಉದಾತ್ತವೂ ಸತ್ತ್ವಯುಕ್ತವೂ ಆದುದನ್ನೆಲ್ಲ ಸಂರಕ್ಷಿಸಿಕೊಳ್ಳಲು ಸತತ ಪ್ರಯತ್ನಿಸಿದರು. ಭಾರತೀಯ ಪರಂಪರೆಗಳನ್ನು ಆಧರಿಸಿ ಪ್ರಗತಿಯ ಹೊಸ ದಾರಿಗಳನ್ನು ಇವರು ಹುಡುಕತೊಡಗಿದರು. ಇಂತು ಪುನರುಜ್ಜೀವನವು ಆಗಲೇ ಸತ್ಯಸಂಗತಿಯಾಯಿತು. ಸುದೈವದಿಂದ ಈ ಕಾರ್ಯರಂಗದಲ್ಲಿ ಇಳಿದವರಲ್ಲಿ ಬಹುಶಃ ಎಲ್ಲರೂ ಪಶ್ಚಿಮದಲ್ಲಿ ಉತ್ತಮವಾದುದನ್ನು ಅಲಕ್ಷಿಸದೆ ಅದನ್ನು ನಮ್ಮಲ್ಲಿ ಅಳವಡಿಸಿಕೊಳ್ಳಲೂ ಹಿಂದೆ ಮುಂದೆ ನೋಡಲಿಲ್ಲ. ಇವರಲ್ಲಿ ಭಾರತೀಯವೆಂಬುದೆಲ್ಲ ಶ್ರೇಷ್ಠವೇ ಎಂಬ ಸಂಕುಚಿತ ಅಂಧ ಅಭಿಮಾನವೂ ಇರಲಿಲ್ಲ.

ಇನ್ನು, ಸುಮಾರಾಗಿ ಈ ಅವಧಿಯಲ್ಲಿಯೇ ಜಗತ್ತಿನಲ್ಲಿ ಪ್ರಭಾವ ಬೀರುತ್ತಿದ್ದ ಶಕ್ತಿಗಳನ್ನು ಕುರಿತು ಸ್ವಲ್ಪ ಪರಿಶೀಲಿಸೋಣ. ಭಾರತವು ಕಾಣಲಿಕ್ಕೆ ಒಂದು ಭೌಗೋಲಿಕ ಚೌಕಟ್ಟಾಗಿದ್ದರೂ ಪ್ರಾಚೀನ ಕಾಲದಿಂದಲೂ ಅನೇಕಾನೇಕ ವಿದೇಶ ಗಳೊಡನೆ ಸಜೀವ ಸಂಪರ್ಕ ಬೆಳಸುತ್ತ ಜಗತ್ತಿನ ವಿಚಾರಪ್ರಣಾಲಿಯೊಡನೆ ಅದು ವಿನಿಮಯ ನಡೆಸುತ್ತ ಬಂದಿದೆ. ಇತಿಹಾಸದ ಬೇರೆ ಬೇರೆ ಕಾಲಾವಧಿಗಳಲ್ಲಿ ಈ ಸಂಪರ್ಕದ ಪ್ರಮಾಣವು ಹೆಚ್ಚುಕಡಿಮೆ ಆಗಿರಬಹುದು. ಒಮ್ಮೊಮ್ಮೆ ಅತಿ ಸ್ವಲ್ಪ ವೆನಿಸುವಷ್ಟೂ ಇದ್ದಿರಬಹುದು. ಆದರೆ ಎಲ್ಲ ಕಾಲದಲ್ಲೂ ಆ ಸಂಪರ್ಕವಿತ್ತೆಂಬುದು ಮುಖ್ಯ ಮಾತು; ಅದನ್ನು ಯಾರೂ ಅಲ್ಲಗಳೆಯಲಾರರು. ಇತಿಹಾಸಪೂರ್ವಕಾಲ ದಲ್ಲಿಯೂ ಇತಿಹಾಸದ ಆರಂಭಕಾಲದಲ್ಲಿಯೂ ಭಾರತವು ಭೂ-ಜಲ ಮಾರ್ಗಗಳೆ-ರಡರಿಂದಲೂ ಫೊನೀಶಿಯನ್ ಜನರೊಡನೆಯೂ ಇಜಿಪ್ತ-ಬೆಬಿಲೋನ್-ಪರ್ಸಿಯಾ ದೇಶಗಳ ಜನರೊಡನೆಯೂ ವಾಣಿಜ್ಯಸಂಬಂಧವನ್ನಿಟ್ಟುಕೊಂಡಿತ್ತು. ಆ ಬಳಿಕ ಗ್ರೀಕ್-ರೋಮನ್-ಅರಬ ಜನರೊಡನೆಯೂ ಅತಿ ನಿಕಟ ಸಂಪರ್ಕವು ಬೆಳೆಯಿತು. ವ್ಯಾಪಾರವಂತೂ ಸರಿಯೇ ಸರಿ, ಅದರೊಡನೆ ವಿಚಾರವಿನಿಮಯವೂ ವಿಪುಲವಾಗಿ ನಡೆಯುತ್ತಿತ್ತೆಂಬುದರಲ್ಲಿ ಸಂಶಯವಿಲ್ಲ. ಬೌದ್ಧ ಧರ್ಮದ ಉದಯವಾದೊಡನೆ ವಿಶೇಷತಃ ಮಹಾಯಾನಪಂಥವು ಪ್ರಸಾರಹೊಂದುತ್ತಿದ್ದಾಗ ಭಾರತದ ಸ್ನೇಹವು ತಿಬೇಟ್-ಚೀನಗಳೊಡನೆ ಗಾಢವಾಗಿ ಬೆಳೆದು ಸಾವಿರಾರು ವರುಷಗಳವರೆಗೆ ಸಾಗಿ ಬಂದಿತು. ಆಗ್ನೇಯ ಏಶಿಯದಲ್ಲಿ ಇಂದಿಗೂ ಜೀವಂತವಿರುವ ಹೆಸರುಗಳೂ ಭಾಷೆಗಳೂ ಅದರಂತೆ ಅಲ್ಲಿ ತಲೆಯೆತ್ತಿ ನಿಂತಿರುವ ಭವ್ಯ ಗುಡಿಗೋಪುರಗಳೂ ಪೂರ್ವದ ದೇಶಗಳೊಡನೆ ಈ ಧರ್ಮಭೂಮಿಯು ಬೆಳಿಸಿದ ಸಲಿಗೆಯ ಸಂಕೇತಗಳಾ ಗಿವೆ. ಭಾರತದ ಸಂಸ್ಕೃತಿಯು ಇಷ್ಟೊಂದು ವೈಭವಸಂಪನ್ನವಾದುದೇನೂ ಆಶ್ಚರ್ಯದ ಮಾತಲ್ಲ. ಈ ಕರ್ಮಭೂಮಿಯು ಎಂದಿಗೂ ತನ್ನಷ್ಟಕ್ಕೆ ತಾನೆ ಸಿಡಿದು ನಿಲ್ಲದೆ ಪೃಥ್ವಿಯ ಮೇಲಿನ ಅನೇಕ ದೇಶಗಳೊಡನೆ ಸಜೀವ ಸಂಬಂಧವನ್ನು ಬೆಳಿಸಿದ್ದರ ಫಲವಾಗಿ ಬಹು ವಿಧದ ಕ್ರಿಯೆ-ಪ್ರತಿಕ್ರಿಯೆಗಳು ನಡೆದುವೆಂಬುದಕ್ಕೆ ಇತಿಹಾಸವೇ ಸಾಕ್ಷಿ. ಈ ದೇಶವು ವಿದೇಶಗಳ ಆಚಾರವಿಚಾರಗಳ ಬಗ್ಗೆ ಅಂಥ ವಿರೋಧವನ್ನು ವ್ಯಕ್ತಪಡಿಸುತ್ತ ಎಂದಿಗೂ ತನ್ನ ಬಾಗಿಲು ಮುಚ್ಚಿಕೊಂಡಿಲ್ಲ. ಹಾಗಾಗಿದ್ದರೆ ಎಷ್ಟೋ ಕಡೆಗೆ ನಡೆದಂತೆ ಈ ದೇಶದಲ್ಲಿ ಸಹ ಶಾರೀರಿಕ ಹ್ರಾಸವೂ ನೈತಿಕ ಪತ ನವೂ ಆಧ್ಯಾತ್ಮಿಕ ಅವನತಿಯೂ ಉಂಟಾಗುತ್ತಿದ್ದವು. ಆದರೆ ಅತಿ ಪ್ರಾಚೀನ ಕಾಲದಿಂದ ಇಂದಿನವರೆಗೂ ಈ ದೇಶದ ಸಂಸ್ಕೃತಿಯು ಸಜೀವವಾಗಿ ನಿಂತು ವಿಶಾಲವೂ ಬಹುಮುಖವೂ ಆಗಿದೆ.

ಈ ಮೊದಲೇ ಸೂಚಿಸಿದಂತೆ, ಈಗ ನಾವು ಪರಿಶೀಲಿಸುತ್ತಿದ್ದ ಕಾಲಾವಧಿ ಯನ್ನು ಆರಿಸಿಕೊಂಡ ಉದ್ದೇಶವು ಒಬ್ಬ ಮಹಾಪುರುಷನ ಚರಿತ್ರೆಯ ವಿಶಿಷ್ಟ

ಒನ್ನೆಲೆಯನ್ನು ತಿಳಿದುಕೊಳ್ಳುವದೇ ಆಗಿದೆ. ಆದುದರಿಂದ ಇತಿಹಾಸದ ಯಾವುದೇ ವಿಶಿಷ್ಟ ಕಾಲಾವಧಿಗೆ ಆದರ ಪ್ರತ್ಯಕ್ಷ ಸಂಬಂಧವೇನೂ ಇಲ್ಲ. ಆದರೆ ಸುಮಾರಾಗಿ ಇದೇ ಹೊತ್ತಿನಲ್ಲಿ ವಿಶಾಲ ಜಗತ್ತಿನಲ್ಲೆಲ್ಲ ಯಾವ ಯಾವ ನವ ವಿಚಾರಗಳೂ ನವಶಕ್ತಿಗಳೂ ರೂಪುಗೊಂಡು ಕಾರ್ಯಪ್ರವೃತ್ತವಾಗಿದ್ದವೆಂಬುದನ್ನು ನಾವು ಸುಲಭವಾಗಿ ಅರಿಯಬಹುದು.

ರಾಜಕೀಯ ವಿಚಾರಕ್ಷೇತ್ರದಲ್ಲಿ ೧೭೭೬ ರಲ್ಲಿ ಅಸ್ತಿತ್ವದಲ್ಲಿ ಬಂದ ಅಮೇರಿಕೆಯ ಸ್ವಾತಂತ್ರ್ಯವೂ ೧೭೮೯ ರಲ್ಲಿ ಘಟಿಸಿದ ಫ್ರೆಂಚ್ ರಾಜ್ಯಕ್ರಾಂತಿಯೂ ಸಮಗ್ರ ಬದಲಾವಣೆಗಳನ್ನೇ ಉಂಟುಮಾಡಿದ್ದವು. ಅರಸೊತ್ತಿಗೆ, ಸರಂಜಾಮಿ ಪದ್ಧತಿ, ವಸಾಹತುಗಳನ್ನು ಕಟ್ಟಿ ಆಳುವ ಸಾಮ್ರಾಜ್ಯವೃತ್ತಿ, ನಿರಂಕುಶ-ನಿಷ್ಠುರ-ನಿರ್ದಯ ರಾಜ್ಯಕಾರಭಾರ, ಕೆಲವೊಂದು ವಿಶಿಷ್ಟವರ್ಗದವರ ರಾಜಕೀಯ ಪ್ರಾಬಲ್ಯ, ಆಳಿಸಿಕೊಳ್ಳುವವರ ಒಪ್ಪಿಗೆಯಿಲ್ಲದೆ ನಡೆಯುವ ಆಡಳಿತ ಈ ಮೊದಲಾದ ರಾಜಕೀಯ ಪ್ರವೃತ್ತಿಗಳ ಬೇರುಗಳೆಲ್ಲ ವಿಚಾರಕ್ರಾಂತಿಯೆಂಬ ಬಿರುಗಾಳಿಗೆ ಸಿಕ್ಕು ತತ್ತರಿಸತೊಡಗಿದ್ದವು. ಪ್ರಜಾಪ್ರಭುತ್ವದ ಹಾಗೂ ಗಣರಾಜ್ಯದ ನವಕಲ್ಪನೆಗಳು ಎಲ್ಲ ಕಡೆಗೂ ಅಂಕುರಿಸಲು ಈಗಾಗಲೇ ಅರಂಭವಾಗಿತ್ತು.

ರಾಜಕೀಯ ಕ್ಷೇತ್ರದಲ್ಲಿ ಒದಗಿದ ಇನ್ನೊಂದು ಅತಿ ಮಹತ್ವದ ಘಟನೆಯೆಂದರೆ ಆಧುನಿಕ ರಾಷ್ಟ್ರೀಯತ್ವದ ಜನ್ಮವಾದುದು. ಇಟಲಿಯ ಪ್ರಸಿದ್ಧ ದೇಶಭಕ್ತನಾದ ಜೋಸೆಫ್ ಮ್ಯಾಝಿನಿಯು ಇದಕ್ಕೊಂದು ಪ್ರಾದೇಶಿಕ ಧರ್ಮದ ಹೊಸ ಸ್ವರೂಪವನ್ನು ಕೊಟ್ಟು, ವಿಕಾಸಗೊಳಿಸಿದನು. ಇದರಿಂದ ಇತರ ದೇಶಗಳಲ್ಲೆಲ್ಲ ನಡೆದ ಸ್ವಾತಂತ್ರ್ಯದ ಆಂದೋಲನಗಳಿಗೆ ದೊಡ್ಡ ಚಾಲನೆ ದೊರೆತು ಅವುಗಳಲ್ಲಿ ಅಪೂರ್ವ ಉತ್ಸಾಹ ತುಂಬಿ ಬಂತು. ಅವನಿಗೆ ನಿಜವಾಗಿಯೂ 'ರಾಷ್ಟ್ರಧರ್ಮದ ಪ್ರವಾದಿ' ಯೆಂದು ಕರೆಯಬಹುದು. ಪ್ರತಿಯೊಂದು ರಾಷ್ಟ್ರಕ್ಕೂ ಈ ಜಗತ್ತಿನಲ್ಲಿ ಒಂದು ವಿಶಿಷ್ಟ ಧ್ಯೇಯವಿದೆಯೆಂದೂ ಅದನ್ನು ಸಾಧಿಸಲು ಆ ದೇಶದ ದೈವಶಕ್ತಿಯೇ ಸಂಕಲ್ಪವನ್ನು ಕೈಕೊಳ್ಳುವದೆಂದೂ ಆ ಸಂಕಲ್ಪವನ್ನು ಸಿದ್ಧಿಗೊಯ್ಯುವ ಸಾಹಸದ ಕಾರ್ಯವನ್ನು ಆಯಾ ರಾಷ್ಟ್ರದ ಜನತೆ ಮಾಡಲೇಬೇಕೆಂದೂ ಆತನು ಉಪದೇಶಿಸಿದನು. ಈ ಸಾಹಸಕ್ಕೆ ಉದ್ಯುಕ್ತರಾಗುವ ಮೊದಲ ಹೆಜ್ಜೆಯೆಂದರೆ ತಮ್ಮ ತಮ್ಮ ದೇಶವನ್ನು ಪರಕೀಯ ಪ್ರಭುತ್ವದಿಂದ ಮುಕ್ತಗೊಳಿಸುವದೇ ಎಂದೂ ಆತನು ಸಾರಿದನು. 'ಪ್ರತಿ ರಾಷ್ಟ್ರ' ದ ವ್ಯಾಖ್ಯೆಯನ್ನು ಅವನು ಹೀಗೆ ಹೇಳುತ್ತಾನೆ: ಒಂದಾನೊಂದು ಭೌಗೋಲಿಕ ಪ್ರದೇಶದಲ್ಲಿ ವಾಸವಾಗಿದ್ದುಕೊಂಡ ಒಂದು ಜನತೆಗೆ ಜನಾಂಗ-ಭಾಷೆ-ಸಂಸ್ಕೃತಿಗಳು ಒಂದೇ, ಒಂದೇ ಇತಿಹಾಸ, ಒಂದೇ ಸ್ಮರಣೆ, ಒಂದೇ ವಿಪತ್ತು, ಇವೆಲ್ಲವುಗಳಿಗಿಂತ ಮುಖ್ಯವಾಗಿ ಆರ್ಥಿಕ-ಸಾಮಾಜಿಕ-ರಾಜಕೀಯ ಹಿತಸಂಬಂಧಗಳೂ ಒಂದೇ ಇದ್ದ ಪಕ್ಷದಲ್ಲಿ ಆ ಜನರ ಒಂದು ರಾಷ್ಟ್ರವೆಂದೆನಿಸಿಕೊಳ್ಳುವದು. ಇಷ್ಟೇ

ಎಂದು ಗೆರೆ ಕೊರೆದ ವಿಶಿಷ್ಟ ಭೌಗೋಲಿಕ ಮೇರೆಗಳನ್ನು ಪಡೆದ ಜನತೆಯಲ್ಲಿ ಸರ್ವ ಸಾಧಾರಣವಾದ ಸಮರಸತೆ ಇದ್ದೇ ತೀರಬೇಕೆಂಬುದೇ 'ರಾಷ್ಟ್ರ' ಶಬ್ದದಲ್ಲಿಯ ಮುಖ್ಯ ಕಲ್ಪನೆ. ಇಂಥ ರಾಷ್ಟ್ರೀಯತ್ವದ ಪ್ರಸಾರದಿಂದ ದೇಶವೆಂಬುದು ಕೇವಲ ಒಂದು ಭೌಗೋಲಿಕ ಪ್ರದೇಶವಾಗಿ ಉಳಿಯದೆ ಅದಕ್ಕೆ ಒಂದು ರಾಷ್ಟ್ರದ ರೂಪ ಬಂತು. ಅಲ್ಲಿಯ ಸರ್ವಸಾಮಾನ್ಯ ಜನತೆಯಲ್ಲೆಲ್ಲ ಎಲ್ಲರಿಗೂ ಸಾಮಾನ್ಯವಾಗಿ ರುವ ಹಿತಸಂಬಂಧಗಳ ವಿಷಯದಲ್ಲಿ ಭಾವನಾಯುಕ್ತ ಜಾಗ್ರತಿಯು ಉಂಟಾಗಿ ಸಾಧ್ಯವಿದ್ದಷ್ಟು ಹೆಚ್ಚು ಸಾಮಾನ್ಯ ಬಂಧನಗಳ ಆಧಾರದ ಮೇಲೆ ಬಾಂಧವ್ಯವು ಬೆಳೆದು ಬಂತು. ಹೀಗೆ ರಾಷ್ಟ್ರೀಯತ್ವದ ಕಲ್ಪನೆಯು ಒಂದು ಧರ್ಮದ ಸ್ವರೂಪ ವನ್ನು ತಾಳಿತು. ಈ ದೊಡ್ಡ ಕಲ್ಪನೆಯು ಕಳೆದ ಶತಮಾನದಲ್ಲಿ ಜಗತ್ತಿನಲ್ಲಿಯ ಪ್ರತಿಯೊಂದು ದೇಶದ ಮೇಲೆಯೂ ಪ್ರತಿಯೊಂದು ಜನಾಂಗದ ಮೇಲೆಯೂ ಪ್ರಭಾವ ಬೀರಿತು. ವಸ್ತುಸ್ಥಿತಿಯೇನೆಂದರೆ, ವಿವಿಧ ದೇಶಗಳಲ್ಲಿಯ ಪ್ರತಿಯೊಂದು ರಾಜಕೀಯ ಜಾಗ್ರತಿಗೆ ಈ ರಾಷ್ಟ್ರೀಯತ್ವದ ಉಕ್ಕೇ ಕಾರಣವಾಯಿತು. ಸ್ವಯಂ ನಿರ್ಣಯ ಮತ್ತು ಸ್ವಾಯತ್ತತೆ ಇವುಗಳನ್ನೊಳಗೊಂಡ ಪ್ರಜಾಪ್ರಭುತ್ವಕ್ಕೆ ಸಾರರೂಪ ದಿಂದ ಆಧಾರಭೂತವಾದುದೂ ಈ ರಾಷ್ಟ್ರೀಯತ್ವವೇ.

ಯುರೋಪದಲ್ಲಿಯ ಇತರ ದೇಶಗಳಿಗಿಂತ ಇಟಲಿ ಮತ್ತು ಆಯರ್ಲಂಡ ಈ ಎರಡು ದೇಶಗಳಲ್ಲಿಯ ಸ್ವಾತಂತ್ರ್ಯ ಸಮರಗಳು ಭಾರತೀಯ ದೇಶಭಕ್ತರನ್ನು ಹೆಚ್ಚಾಗಿ ಪ್ರೇರಿಸಿದವು. ಈ ಎರಡೂ ದೇಶಗಳಲ್ಲಿ ರಾಷ್ಟ್ರೀಯತ್ವದ ನವಶಕ್ತಿಯೇ ಜನತೆಯಲ್ಲಿ ಅಪೂರ್ವ ಜಾಗ್ರತಿಯನ್ನು ಉಂಟು ಮಾಡಿತು; ಸ್ವಾತಂತ್ರ್ಯಕ್ಕಾಗಿ ಎಂಥ ಅತಿಮಾನವ ತ್ಯಾಗಗಳನ್ನೂ ಮಾಡಬಲ್ಲ ದೊಡ್ಡ ಧೈರ್ಯವನ್ನು ಜನಸಾಮಾನ್ಯ ರಲ್ಲಿಯೂ ಹುಟ್ಟಿಸಿತು. ಸ್ವಭಾಷೆ-ಸ್ವಸಂಸ್ಕೃತಿ-ಸ್ವದೇಶಬಾಂಧವರು ಸ್ವದೇಶಿ ಸರಕು ಇವೆಲ್ಲವುಗಳ ಬಗ್ಗೆ ಅಗಾಧ ಪ್ರೇಮ — ಪ್ರಾಚೀನ ಕಲೆ ಮತ್ತು ಪರಂಪರೆ ಇವನ್ನು ಪುನರುಜ್ಜೀವಿಸಬೇಕೆಂಬ ವಿಷಯದಲ್ಲಿ ಅಪ್ರತಿಮ ಸಾಹಸ, — ಜನತೆಯ ಪ್ರತಿಭೆಯನ್ನರಿತು ಸ್ವದೇಶದ ಚರಿತ್ರೆಯ ಬಗ್ಗೆ ಯೋಗ್ಯ ಅಭಿಮಾನವನ್ನು ಜಾಗ್ರತ ಗೊಳಿಸುವ ಗಂಭೀರ ಪ್ರಯತ್ನ— ಈ ಮೊದಲಾದ ರೂಪಗಳನ್ನು ರಾಷ್ಟ್ರೀಯತೆಯು ಈ ಎರಡು ದೇಶಗಳಲ್ಲಿ ಧರಿಸಿತು. ಭಾರತದಲ್ಲಿಯೂ ಹೊಸದಾಗಿ ಹುಟ್ಟಿದ ಈ ಶಕ್ತಿಯು ಇದೇ ಬಗೆಯ ಸ್ವರೂಪವನ್ನು ತಾಳಿತು. ಆಯರ್ಲಂಡದ ಡಿ ವ್ಹೆಲೆರಾ ಮತ್ತು ಮೈಕೆಲ್ ಕಾಲಿನ್ಸ, ಇಟಲಿಯ ಮ್ಯಾಝಿನಿ ಮತ್ತು ಗ್ಯಾರಿಬಾಲ್ಡಿ ಈ ಹೆಸರುಗಳು ಅಂದಿನ ಉದಿತೋದಿತ ರಾಷ್ಟ್ರಭಕ್ತರ ಬಾಯಲ್ಲಿ ಬಹುಕಾಲದ ವರೆಗೆ ನಲಿಯುತ್ತಿದ್ದವು.

ಆರ್ಥಿಕ ಕ್ಷೇತ್ರದಲ್ಲಿ, ಆಧುನಿಕ ವಿಜ್ಞಾನದ ಪ್ರಗತಿಯೂ ಉಗಿಯ ಯಂತ್ರ-ವಿದ್ಯುತ್‌ಶಕ್ತಿಗಳ ಶೋಧವೂ ಏಕಕಾಲಕ್ಕೆ ನಡೆದು ಚಿರಪರಿಚಿತವಾಗಿರುವ

ಔದ್ಯೋಗಿಕ ಕ್ರಾಂತಿಗೆ ದಾರಿ ಮಾಡಿಕೊಟ್ಟಂತಾಗಿತ್ತು. ಯುರೋಪ್-ಅಮೇರಿಕೆಗಳಲ್ಲಿಯ ಆರ್ಥಿಕ ಹಾಗೂ ಸಾಮಾಜಿಕ ಜೀವನದ ಬುಡಕಟ್ಟೇ ಸಮಗ್ರವಾಗಿ ಬದಲಿಸತೊಡಗಿತ್ತು. ಭಾರತವನ್ನಾಳುತ್ತಿದ್ದ ಇಂಗ್ಲಂಡೇ ಈ ವಿಷಯದಲ್ಲಿ ಅಗ್ರ-ಸ್ಥಾನವನ್ನು ಪಡೆದಿತ್ತು. ಭಾರತವು ಸ್ವತಂತ್ರ ದೇಶವಾಗಿದ್ದು ಜಪಾನಿನಂತೆ ಪಶ್ಚಿಮದ ರೀತಿ-ನೀತಿಗಳನ್ನೆಲ್ಲ ಅನುಸರಿಸಿದ್ದರೆ ಏನಾಗುತ್ತಿತ್ತೋ ಎಂದು ಲೆಕ್ಕ ಹಾಕಿದರೆ ಮನಸ್ಸಿನಲ್ಲಿ ಮಂಡಿಗೆ ತಿಂದಂತೆಯೇ ಸರಿ. ಇದ್ದ ಮಾತನ್ನು ಇದ್ದಂತೆಯೇ ಹೇಳುವದೆಂದರೆ, ಇಂಗ್ಲಂಡಿನಲ್ಲಿ ಔದ್ಯೋಗಿಕ ಪ್ರಗತಿಯಾಯಿತೆಂದರೂ ಒಂದೇ, —ಭಾರತದ ಸಂಪತ್ತಿನ ಸುಲಿಗೆಯಾಯಿತೆಂದರೂ ಒಂದೇ. ಹಸಿ ಸರಕುಗಳನ್ನೆಲ್ಲ ಇಂಗ್ಲಂಡಕ್ಕೆ ಮಾರಿ ಅಲ್ಲಿಯೇ ತಯಾರಾಗುವ ಸಿದ್ಧವಸ್ತುಗಳನ್ನೆಲ್ಲ ಕೊಳ್ಳುವ ಪೇಟೆಯನ್ನಾಗಿ ಈ ದೇಶವನ್ನು ಇಂಗ್ಲಂಡವು ಮಾಡಿತ್ತಷ್ಟೇ. ಈ ಪ್ರಕ್ರಿಯೆಯಿಂದ ಕೊನೆಯಲ್ಲಿ ಎಷ್ಟೊಂದು ಘೋರ ಪರಿಣಾಮಗಳು ಘಟಿಸಿದವೆಂಬುದು ನಮಗೆ ಈಗಾಗಲೇ ಗೊತ್ತಾಗಿದೆ. ಈ ಮಾತು ಹೇಗೇ ಇರಲಿ; ಸರಕುಗಳ ತಯಾರಿಕೆ-ಗಾಗಿಯೂ ಸಾರಿಗೆ-ಸಂಪರ್ಕಗಳಿಗಾಗಿಯೂ ವಿದ್ಯುತ್ತಿನ ಉಪಯೋಗವಾದ ಮೂಲಕ, ಎಂಜಿನಿಯರಿಂಗ್ ವಿಷಯದ ತಾಂತ್ರಿಕ ವಿಭಾಗದಲ್ಲಿ ಸಾಕಷ್ಟು ಪ್ರಗತಿಯಾದ ಮೂಲಕ, ಒಟ್ಟಿನಲ್ಲಿ ಆಧುನಿಕ ವಿಜ್ಞಾನ ಕ್ಷೇತ್ರದಲ್ಲಿ ಅದ್ಭುತ ಪ್ರಗತಿಯಾದ ಮೂಲಕ ಸರಕುಗಳ ತಯಾರಿಕೆ-ಹಂಚುವಿಕೆಗಳ ಸಾಧನದಲ್ಲಿ ಆಮೂಲಾಗ್ರ ಬದಲಾವಣೆಗಳಾದವು. ಇವುಗಳಿಂದ ಉಂಟಾದ ತಾತ್ಕಾಲಿಕ ಪರಿಣಾಮವೇನೆಂದರೆ ಸಂಪತ್ತಿನ ಜೊತೆಗೆ ತಯಾರಿಕೆ-ಹಂಚುವಿಕೆಗಳ ಅಧಿಕಾರವೆಲ್ಲವೂ ಒಂದೆಡೆಗೆ ಕೆಲವೇ ಜನರಲ್ಲಿ ಕೇಂದ್ರೀಕೃತವಾಗತೊಡಗಿತು. ಕೆಲವು ಔದ್ಯೋಗಿಕ ಕೇಂದ್ರಗಳಲ್ಲಿ ಕೂಲಿಕಾರರೂ ಇತರ ಶ್ರಮಜೀವಿಗಳೂ ಗುಂಪುಗೂಡತೊಡಗಿದರು. ಇದರಿಂದಾಗಿ ಸಮತಾವಾದದ ಕಲ್ಪನೆಗಳು ಹುಟ್ಟಬೆಳೆದವು. ಮಾರ್ಕ್ಸ ಮತ್ತು ಎಂಜೆಲ್ ಇವ-ರಂಥ ಬುದ್ಧಿಶಾಲಿಗಳು ಆ ಕಲ್ಪನೆಗಳ ಸಹಾಯದಿಂದ ಶುದ್ಧ ಆದಿಭೌತಿಕ, ಆತ್ಮ ರಹಿತ ತತ್ತ್ವಜ್ಞಾನವೊಂದನ್ನು ಸ್ಥಾಪಿಸಿದರು. ೧೮೪೮ರಲ್ಲಿ ಪ್ರಥಮ ಬಾರಿ ಪ್ರಕಟಿಸಲ್ಪಟ್ಟ 'ಕಮ್ಯುನಿಸ್ಟ ಘೋಷಣೆ'ಯು 'ಜಗತ್ತಿನ ಎಲ್ಲ ಕಾರ್ಮಿಕರನ್ನು' ಉದ್ದೇಶಿಸಿ ಮಾಡಿದ ಘೋಷಣೆಯೇ ಆಗಿತ್ತು. 'ನೂತನ ಸಮಾಜರಚನೆಗಾಗಿ ಸಂಘಟಿತರಾಗಿ ನವಸೃಷ್ಟಿಯನ್ನೇ ನಿರ್ಮಿಸಿರಿ' ಎಂದು ಸಕಲ ಕಾರ್ಮಿಕರಿಗೂ ಭೋಂಕನೆ ಊದಿದ ಕಹಳೆಯೇ ಈ ಘೋಷಣೆಯು. ಈ ತತ್ತ್ವಜ್ಞಾನವು ಕೂಡಲೆ ಬೇರು ಹಿಡಿಯಲಿಲ್ಲವಾದರೂ ಸುಮಾರು ಅರ್ಧ ಶತಮಾನವಾದ ಮೇಲೆ ರಶಿಯದಲ್ಲಿ ಪರಿಸ್ಥಿತಿಯು ಪಕ್ವವಾದಾಗ ಲೆನಿನ್-ಸ್ಟಾಲಿನ್ ದ್ವಯದ ದುಂದು-ಭಿಯು ಮೊಳಗುವಂತೆ ಪ್ರೇರಣೆಯನ್ನು ಹುಟ್ಟಿಸಿತು. ಏನೇ ಇರಲಿ, ನಾವು ಪರಿಶೀಲಿಸುತ್ತಿರುವ ಕಾಲಾವಧಿಯಲ್ಲಿ ಘಟಿಸಿದ ಮಹತ್ವದ ಸಂಗತಿಯೆಂದರೆ:

ರಾಜಕೀಯ ಕ್ಷೇತ್ರದಲ್ಲಿ ನಿರಂಕುಶತೆ-ನಿಷ್ಠುರತೆಗಳು ಹೇಗೆ ನಿರ್ನಾಮವಾದವೊ, ಸಾಮಾಜಿಕ ಕ್ಷೇತ್ರದಲ್ಲಿ ಕುಲಾಗತ ಹಕ್ಕುಗಳೂ ವಿಶಿಷ್ಟ ವರ್ಗಸ್ಥ ಸುಖಸೌಕರ್ಯಗಳೂ ಹೇಗೆ ಕಣ್ಮರೆಯಾದವೊ ಹಾಗೆಯೇ ಔದ್ಯೋಗಿಕ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಗುತ್ತಿಗೆ-ಗಂಟುಗಾರಿಕೆಗಳೂ ಹಳೆಯ ಮಾತಾಗತೊಡಗಿದವು.

ಪಾಶ್ಚಾತ್ಯ ಪ್ರಪಂಚದಲ್ಲಿ ಈ ಎಲ್ಲ ಕಲ್ಪನೆಗಳೂ ಶಕ್ತಿಗಳೂ ಇಂತು ಕಾರ್ಯಪ್ರವೃತ್ತವಾದಾಗ, ಇದೇ ಅವಧಿಯಲ್ಲಿ ಪುನರುಜ್ಜೀವಿತ ಭಾರತವು ನವೋನವ-ರೂಪವನ್ನು ತಾಳತೊಡಗಿತ್ತು. ಒಂದೇ ಒಂದು ಅಂತರವೇನೆಂದರೆ ಈ ದೇಶಕ್ಕೆ ಬಾಹ್ಯಜಗತ್ತಿನ ಪ್ರತ್ಯಕ್ಷ ಸಂಬಂಧವಿರಲಿಲ್ಲ. ಜಾಗತಿಕ ಪ್ರಭಾವಗಳು ನಮ್ಮಲ್ಲಿ ಒಡಮೂಡಬೇಕಾದರೆ ಇಂಗ್ಲಂಡದ ಮುಖಾಂತರವೆ ಇಂಗ್ಲಿಷ್ ಭಾಷೆಯ ದ್ವಾರದಿಂದಲೆ ಒಳಗೆ ಬರಬೇಕಾಯಿತು; ಏಕೆಂದರೆ ಇಷ್ಟರಲ್ಲಿ ರಾಜಕೀಯ ಮತ್ತು ಆರ್ಥಿಕದೃಷ್ಟಿಯಿಂದ ಭಾರತವು ಸಂಪೂರ್ಣವಾಗಿ ಇಂಗ್ಲಂಡಕ್ಕೆ ಅಧೀನವಾಗಿತ್ತು.

ಇಂತು ಇವೆಲ್ಲ ಶಕ್ತಿಗಳ ಸಂಘರ್ಷಣೆ ನಡೆದ ಸಮಯದಲ್ಲಿಯೆ ಭಾರತದಲ್ಲಿ ಅರವಿಂದವೊಂದು ಅರಳಿತು. ಆ ಕಾಲದ ಉತ್ಸಾಹಭರಿತ ದೇಶವತ್ಸಲ ಯುವಕರಿಗೆ ಅಂದಿನ ದಿನಗಳು ಹೇಗೆ ಕಂಡವು ಎಂಬುದರ ಯಥಾರ್ಥ ಚಿತ್ರವು ನಮ್ಮ ಕಣ್ಮುಂದೆ ಈಗ ಇರುವದರಿಂದ, ಶ್ರೀ ಅರವಿಂದರ ದೃಷ್ಟಿಕೋನವಾವುದು, ಅಂದಿನ ಸ್ಥಿತಿಗತಿಗಳ ಬಗ್ಗೆ ಅವರ ನಿಲುಮೆಯೇನು ಎಂಬುದರ ಅರ್ಥವನ್ನು ನಾವೀಗ ಸರಿಯಾಗಿ ಗ್ರಹಿಸಿಕೊಳ್ಳಬಹುದು. ಹಾಗು ಕರ್ಮಕ್ಷೇತ್ರದಿಂದ ತಪೋ-ಜ್ಞಾನಗಳ ಕ್ಷೇತ್ರಕ್ಕೆ ಅವರು ತೆರಳುವತನಕ ಅವರ ವಿಚಾರಪ್ರಣಾಲಿಯ ಧಾಟಿಯಾವುದಿತ್ತು, ಕರ್ಮಕ್ಷೇತ್ರದಲ್ಲಿ ಅವರು ವಹಿಸಿದ ಪಾತ್ರದ ಕೌಶಲ್ಯವೆಂತಹದು ಎಂಬೀ ಮಾತುಗಳ ಸ್ವಾರಸ್ಯವನ್ನು ನಾವೀಗ ಸುಲಭವಾಗಿ ಸವಿಯಬಲ್ಲೆವು.

## ೨ ಪರಿಸ್ಥಿತಿ ಮತ್ತು ವಂಶವೃತ್ತ

ನಾವು ಪರಿಶೀಲಿಸುತ್ತಿರುವ ಕಾಲಾವಧಿಯಲ್ಲಿ ಭಾರತೀಯ ಹಾಗು ಜಾಗತಿಕ ಜೀವನದ ಮತ್ತು ವಿಚಾರಧಾರೆಯ ಸಾಮಾನ್ಯ ಓಘವು ಹೇಗೆ ಸಾಗಿತ್ತೆಂಬುದರ ರೂಪರೇಖೆಯನ್ನು ಹಿಂದಿನ ಪ್ರಕರಣದಲ್ಲಿ ಕೊಟ್ಟದ್ದಾಗಿದೆ. ಶ್ರೀ ಅರವಿಂದರ ಜನ್ಮ ಹಾಗು ಬಾಲ್ಯಜೀವನ, ಈ ಅವಧಿಯಲ್ಲಿ ಅಂದರೆ ಸುಮಾರು ೧೮೭೨ ರಿಂದ ೧೮೮೦ ರ ವರೆಗೆ ಬಂಗಾಲದಲ್ಲಿದ್ದ ಅವರ ನಿಕಟ ಪರಿಸ್ಥಿತಿಯ ಚಿತ್ರಣದತ್ತ ನಾವೀಗ ತುಸು ಕಣ್ಣಾಡಿಸಿ ನೋಡುವಾ.

ಹತ್ತೊಂಬತ್ತನೆಯ ಶತಕದ ಕೊನೆಯ ಪಾದದಲ್ಲಿ ಭಾರತದ ಪುನರುಜ್ಜೀವನವು ಅದಾಗಲೇ ತುಂಬ ಏರಿಕೆಯಲ್ಲಿದ್ದಿತು. ಆಗ ಮಹಾ ಪುರುಷರನೇಕರು ಪ್ರತಿಯೊಂದು ಭಾರತೀಯ ವಿಚಾರರಂಗದಲ್ಲಿಯೂ ತಮ್ಮ ತಮ್ಮ ರೀತಿಯಲ್ಲಿ ಸೇವೆ ಸಲ್ಲಿಸಿ ಸಾರ್ವತ್ರಿಕ ಜಾಗ್ರತಿಯನ್ನು ಉಂಟುಮಾಡಿದ್ದರು. ಒಂದು ಬಗೆಯ ಹೊಸ ದೃಷ್ಟಿಕೋನವನ್ನೇ ಅವರು ನಿರ್ಮಿಸಿದ್ದರೆನ್ನಬೇಕು. ಇಂಗ್ಲಿಷನ್ನು ಕಲಿತಂಥ ಮೊದಲಿನ ಎರಡು ಮೂರು ತಲೆಮಾರಿನವರಲ್ಲಿ ನೆಲಸಿದ್ದ ವಿಶೇಷ ವೈಗುಣ್ಯವೇನೆಂದರೆ, ಬ್ರಿಟಿಷರ ಮತ್ತು ಪಾಶ್ಚಾತ್ಯರ ಪ್ರತಿಯೊಂದು ಸಂಗತಿಯ ಬಗ್ಗೆ ಅನುಪಮ ಅನುರಾಗ ಮತ್ತು ಭಾರತೀಯರ ಪ್ರತಿಯೊಂದು ಸಂಗತಿಯ ಬಗ್ಗೆ ಲಘುಭಾವ ಹಾಗು ಅವಹೇಲನ. ಈ ವೈಗುಣ್ಯವು ಅಂದಿನ ನವಜಾಗ್ರತಿಯ ಮೂಲಕ ಕಡಿಮೆಯಾಗಿತ್ತು. ಪಾಶ್ಚಾತ್ಯಭಾಷೆ, ವಿಚಾರಧಾರೆ ಹಾಗು ಸಂಸ್ಕೃತಿ ಇವುಗಳನ್ನು ಇದ್ದಕ್ಕಿದ್ದಂತೆ ಸ್ವೀಕರಿಸುವದಾಗಲಿ ಅಥವಾ ನಮ್ಮದೆನ್ನುವದನ್ನೆಲ್ಲ ಬುಡಮೇಲು ಮಾಡುವದಾಗಲಿ ಅವ್ಯವಹಾರ್ಯವೆಂದೂ ಅನಿಷ್ಟಕರವೆಂದೂ ಅನವಶ್ಯಕವೆಂದೂ ಮನವರಿಕೆಯಾಗಿತ್ತು. ಭಾರತೀಯವೆನಿಸಿಕೊಂಡ ಅನೇಕ ವಿಷಯಗಳಿಗೆ ಒಂದು ಭದ್ರ ತಳಹದಿಯುಂಟೆಂಬ ಬಗೆಗೆ ಸಾಮಾನ್ಯ ಗ್ರಹಿಕೆಯು ತಲೆದೋರಿತ್ತಾದರೂ ಆಧುನಿಕ ವಿಚಾರಧಾರೆ-ವಿಜ್ಞಾನಗಳ ಬೆಳಕಿನಲ್ಲಿ ಅವನ್ನು ಪುನಃ ತಿಳಿಸಿ ಹೇಳುವದು, ಪುನಃ ನಿವೇಶನಗೊಳಿಸುವದು, ಅವಕ್ಕೆ ಪುನಃ ಪ್ರಾಣ ತುಂಬುವದು ಅವಶ್ಯವಿತ್ತು. ಭಾರತಕ್ಕೆ ತೀರ ಹೊಸದಾದ ಅನೇಕ ಸಂಗತಿಗಳನ್ನು—ಅದರಲ್ಲಿಯೂ ಆಧುನಿಕ ವಿಜ್ಞಾನದ ವಿಷಯವನ್ನು—ಭಾರತವು ತನ್ನ ಸ್ಥಿತಿಗತಿಗಳಿಗೆ ಹೊಂದುಗೂಡುವಂತೆ ಸ್ವೀಕರಿಸಿಕೊಳ್ಳುವದು ಅತ್ಯಗತ್ಯವಾಗಿತ್ತು. ಐತಿಹಾಸಿಕ ದೃಷ್ಟಿ, ರಾಷ್ಟ್ರೀಯ ಮನೋವೃತ್ತಿ, ಆಧುನಿಕ ಪ್ರಜಾಪ್ರಭುತ್ವದ ಪ್ರವೃತ್ತಿ, ಶಾಸ್ತ್ರಶುದ್ಧವಾದ ಸಮಾಲೋಚನೆಯ ಪದ್ಧತಿ ಇವೇ ಮೊದಲಾದ ಆಧುನಿಕ ಪ್ರಪಂಚದ ಕೆಲವೊಂದು ಮುಖ್ಯ ಮುಖ್ಯ ಸಂಗತಿಗಳು ಭಾರತದ ಪ್ರಮುಖ ಧುರೀಣರ ಹಾಗು ಸಾರ್ವಜನಿಕ ಸೇವಾನಿರತ ಜನರ ಮನಸ್ಸನ್ನು ಸೆಳೆದಿದ್ದವು. ನಿಜವೇನೆಂದರೆ, ಪೌರ್ವಾತ್ಯ ಪಾಶ್ಚಾತ್ಯ ದೇಶಗಳಲ್ಲಿ ಅಡಕವಾಗಿದ್ದ ಅತ್ಯುತ್ತಮ ಅಂಶಗಳ ಸುವ್ಯವಸ್ಥಿತ ಸಮನ್ವಯಕ್ಕೆ ಭಾರತವೇ ತಕ್ಕ ರಂಗಸ್ಥಳವೆಂಬ ಸಿದ್ಧಾಂತಕ್ಕೆ, ಬಹುಶಃ ಅಂದಿನ ಪ್ರತಿಯೊಬ್ಬ ಪ್ರಗತಿಪರ ವಿಚಾರಶೀಲ ವ್ಯಕ್ತಿಯೂ ಬಂದಿದ್ದನು. ವಿವಿಧ ಕಾರಣಗಳ ಮೂಲಕ, ಬಂಗಾಲವೇ ಭಾರತದ ಸಾರ್ವತ್ರಿಕ ಪುನರುಜ್ಜೀವನದಲ್ಲಿ ಪ್ರಮುಖ ಪಾತ್ರ ವಹಿಸಿತ್ತು ; ಬಂಗಾಲವೇ ಶ್ರೀ ಅರವಿಂದರ ಜನ್ಮಭೂಮಿಯಾಗಿತ್ತು. ಹಾಗು ಮುಂದೆ ಅದನ್ನೇ ಅವರು ತಮ್ಮ ಸಾರ್ವಜನಿಕ ಜೀವನದ ಕರ್ಮಭೂಮಿಯನ್ನಾಗಿ ಆರಿಸಿದರು.

ಪುನರುಜ್ಜೀವನಗೊಂಡ ಬಂಗಾಲದಲ್ಲಿ ಹೊಸ ದಾರಿ ತೋರಿದ ಕೆಲವು ಮುಖ್ಯ

ಮಹಾಪುರುಷರ ಹೆಸರುಗಳು, ಶ್ರೀ ಅರವಿಂದರ ಜನನಬಾಲ್ಯಗಳ ಕಾಲದ ಬಂಗಾಲ ದಲ್ಲಿಯ ವಾತಾವರಣದ ಕಲ್ಪನೆಯನ್ನು ನಮಗೆ ಮಾಡಿಕೊಡುವವು. ಆ ಮಹನೀ- ಯರಲ್ಲಿ ಅನೇಕರು ಸಮಗ್ರ ಭಾರತದ ಪುನರುಜ್ಜೀವನಕಾರ್ಯದಲ್ಲಿಯೂ ಮಹತ್ತರ ವಾದ ಪಾತ್ರ ನಿರ್ವಹಿಸಿದ್ದುಂಟು. ಬಂಗಾಲದ ಮಾತೆತ್ತುವ ಮೊದಲು, ಇನ್ನುಳಿದ ಪ್ರಾಂತಗಳಲ್ಲಿದ್ದ ಅಷ್ಟೇ ದೊಡ್ಡ ಪ್ರಮುಖ ವ್ಯಕ್ತಿಗಳಿಗೆ ನಮ್ಮ ಗೌರವವನ್ನು ಸಲ್ಲಿಸುವ. ಶ್ರೀಮತಿ ಎನಿಬೆಝೆಂಟ್, ಸುಬ್ರಹ್ಮಣ್ಯ ಅಯ್ಯರ, ಕಸ್ತೂರಿ ರಂಗ- ಯ್ಯಂಗಾರ, ಝ. ಟಿ. ತೇಲಂಗ, ಎಮ್. ಜಿ. ರಾನಡೆ, ಜಿ.ಕೆ. ಗೋಖಲೆ, ಲೋಕ- ಮಾನ್ಯ ಟಿಳಕ, ಸ್ವಾಮಿ ದಯಾನಂದ, ಲಾಲಾ ಲಜಪತರಾಯ, ದಾದಾಭಾಯಿ ನವರೋಜಿ, ಫೆರೋಜಶಹ ಮೇಥಾ, ಆನಂದಕುಮಾರಸ್ವಾಮಿ ಹಾಗು ಇನ್ನುಳಿದ ಹಲವಾರು ಮಹನೀಯರು ಬೇರೆ ಬೇರೆಪ್ರಾಂತಗಳಲ್ಲಿ ಪುನರುಜ್ಜೀವನೋನ್ಮುಖ ಭಾರತದ ಆತ್ಮವನ್ನು ಚೇತರಿಸುವ ಕಾರ್ಯದಲ್ಲಿ ತುಂಬ ನೆರವು ನೀಡಿದ್ದಾರೆ. ರಾಷ್ಟ್ರೀಯ ಭಾವನೆಯನ್ನು ಉದ್ದೀಪಿಸುವದರಲ್ಲಿ, ಗತವೈಭವದ ಮಹತ್ ಕಾರ್ಯ ಗಳತ್ತ ಜನತೆಯ ಚಿತ್ತವನ್ನು ಸೆಳೆಯುವದರಲ್ಲಿ, ಎಚ್ಚತ್ತು ಮುನ್ನುಗ್ಗಲು ಬೇಕಾದ ಪರಮ ಸಾಹಸಕ್ಕಾಗಿ ಹೊಸಬಗೆಯ ಹುರುಪು ಹುಮ್ಮಸ ತುಂಬುವದರಲ್ಲಿ, ನವೀನ ವಿಚಾರಸರಣಿಯನ್ನೂ ಆಧುನಿಕ ವಿಜ್ಞಾನವನ್ನೂ ಮುಕ್ತ ಮನಸ್ಸಿನಿಂದ ಬರಮಾಡಿಕೊಳ್ಳಲು ಜನತೆಯನ್ನು ಪ್ರಚೋದಿಸುವದರಲ್ಲಿ ಈ ಮಹನೀಯರೇ ಮೊದಲಿಗರು. ವಿವಿಧ ಪ್ರಮಾಣದಲ್ಲಿ ವಿವಿಧ ಕಾರ್ಯಕ್ಷೇತ್ರಗಳನ್ನು ಪ್ರತಿನಿಧಿಸುತ್ತ ನವೋದಿತ ಭಾರತದ ಮೂರ್ತಿಮಂತ ಸಾರಸರ್ವಸ್ವವೇ ಅವರಾಗಿದ್ದರು. ಅವರಲ್ಲಿ ಅನೇಕರು ಖ್ಯಾತಿವೆತ್ತ ವಿದ್ವಾಂಸರು. ಕೆಲವರಂತೂ ಸಂಸ್ಕೃತವನ್ನೂ ಭಾರತದ ಗತ ಇತಿಹಾಸವನ್ನೂ ಚೆನ್ನಾಗಿ ಅಭ್ಯಾಸಮಾಡಿದವರಾಗಿದ್ದರು. ಭಾರತದ ಅಮೂಲ್ಯ ಪರಂಪರೆಗಳನ್ನು ಅವರು ತುಂಬ ಮೆಚ್ಚಿ ಅವುಗಳ ಬಗೆಗೆ ಗೌರವ ತಳೆದವರಾಗಿದ್ದರು. ಪಾಶ್ಚಾತ್ಯರ ಬಗೆಗೂ ಅವರ ಆಧುನಿಕ ಪ್ರಗತಿ-ಸಫಲತೆಗಳ ಬಗೆಗೂ ಅವರಲ್ಲಿ ಆದರಭಾವವಿತ್ತು. ಅವರು ಭಾರತವನ್ನೂ ಭಾರತದ ಜನತೆ ಯನ್ನೂ ಅಂತಃಕರಣಪೂರ್ವಕವಾಗಿ ಪ್ರೀತಿಸುತ್ತಿದ್ದರು. ಪಾಶ್ಚಾತ್ಯ ತತ್ತ್ವಗಳನ್ನು ರಕ್ತಗತಮಾಡಿಕೊಂಡು ತಕ್ಕ ರೀತಿಯಲ್ಲಿ ಅವನ್ನು ಸ್ವೀಕರಿಸುವದರಲ್ಲಿಯೂ ಮಹತ್ತರವಾದ ಪುರಾತನ ಪರಂಪರೆಯ ಭದ್ರ ಅಚಲ ತಳಹದಿಯ ಮೇಲೆಯೇ ಭಾರತೀಯ ಜೀವನವನ್ನು ಮತ್ತೆ ರೂಪಿಸುವದರಲ್ಲಿಯೂ ಅರ್ಥವಿಲ್ಲದೆ ಬೆಳೆದುಬಂದ ಅವಿಚಾರಗಳನ್ನು ಬಿಟ್ಟುಕೊಡುವದರಲ್ಲಿಯೂ ಭಾರತದ ಉಜ್ವಲ ಭವಿತವ್ಯವಿದೆ ಯೆಂದು ಅವರಿಗೆ ಅನಿಸುತ್ತಿತ್ತು.

ಬಂಗಾಲದಲ್ಲಿ ರಾಜಾ ರಾಮಮೋಹನ ರಾಯರು ಇದಕ್ಕೂ ಮೊದಲೇ, ಅಂಗ್ಲ ಶಿಕ್ಷಣ ಹಾಗೂ ಸಾಮಾಜಿಕ ಸುಧಾರಣೆ ಇವುಗಳ ವಿಷಯದಲ್ಲಿ ಮಾರ್ಗದರ್ಶನ

ಮಾಡಿದ್ದರು. ಈಶ್ವರಚಂದ್ರ ವಿದ್ಯಾಸಾಗರರು ಸ್ತ್ರೀಶಿಕ್ಷಣವನ್ನು ಬಹು ಬಲವತ್ತರವಾಗಿ ಪುರಸ್ಕರಿಸಿದ್ದರು. ರಾಷ್ಟ್ರೀಯ ಜಾಗ್ರತಿಯ ಕಾಲದಲ್ಲಿ, ತಮ್ಮ ತಮ್ಮ ಮಾತೃಭಾಷೆಯ ಅರಿವು-ಅಭಿಮಾನಗಳೇ ವಾಡಿಕೆಯಾಗಿ ಜನತೆಯನ್ನು ಮೊದ ಮೊದಲು ಚೇತರಿಸುವದುಂಟು. ಮಾಯ್ಕೆಲ್ ಮಧುಸೂದನ ದತ್ತ ಮತ್ತು ಬಂಕಿಮ ಚಂದ್ರ ಇವರೇ ಬಂಗಾಲದಲ್ಲಿ ಈ ನಿಟ್ಟಿನಲ್ಲಿ ಮೊದಲಿಗರಾಗಿದ್ದರು. ಆಮೇಲೆ ರವೀಂದ್ರನಾಥರು ವಂಗಭಾಷೆಗೆ ಹಾಗೂ ಆಂಗ್ಲಭಾಷೆಗೆ ಅಮೌಲ್ಯ ಸೇವೆ ಸಲ್ಲಿಸುತ್ತ ಏಶಿಯಾಖಂಡದ ಕವಿ ಎಂಬುದಾಗಿ ಖ್ಯಾತಿಪಡೆದರು. ಧಾರ್ಮಿಕ ಸುಧಾರಣೆಯ ಕ್ಷೇತ್ರದಲ್ಲಿ ದೇವೇಂದ್ರನಾಥರೂ ಕೇಶವಚಂದ್ರ ಸೇನರೂ ಬ್ರಹ್ಮೋ ಚಳವಳಿಯ ಆಧಾರಸ್ತಂಭರಾಗಿದ್ದರು. ಆ ಬಳಿಕ ಅದರಲ್ಲಿ ಕವಲುಂಟಾಯಿತು, ಆ ಮಾತು ಬೇರೆ. ಆದರೆ ಗಭೀರ ಆತ್ಮಜ್ಞಾನಿಗಳಾದ ಶ್ರೀ ರಾಮಕೃಷ್ಣ ಪರಮಹಂಸರೂ ಪ್ರಚಂಡ ಶಕ್ತಿಶಾಲಿಯಾಗಿದ್ದು ವಾಕ್ಪಟುವಾದ ಅವರ ಶಿಷ್ಯ ವಿವೇಕಾನಂದರೂ ವೇದಾಂತ ಯೋಗ ಮಾರ್ಗಗಳ ಶ್ರೇಷ್ಠತೆಯನ್ನು ಪ್ರಸ್ಥಾಪಿಸಿದರಲ್ಲದೆ, ಪರಂಪರಾ-ಗತವಾಗಿ ಬಂದ ಪೂಜಾಪದ್ಧತಿ-ಭಕ್ತಿಮಾರ್ಗಗಳಲ್ಲಿ ಅಡಕವಾಗಿದ್ದ ಉತ್ತಮಾಂಶ ಗಳನ್ನು ಮತ್ತೆ ದೃಢೀಕರಿಸಿದರು. ವಿಶೇಷವಾಗಿ ವಿವೇಕಾನಂದರಂತೂ ಧರ್ಮ ಪ್ರಸಾರಕರ ಉತ್ಸಾಹದಿಂದ ಪ್ರೇರಿತರಾಗಿ ವೇದಾಂತದ ಮತ್ತು ಯೋಗದ ಸಂದೇಶ ವನ್ನು ಸುದೂರ ದೇಶಗಳಿಗೂ ಒಯ್ದು ಮುಟ್ಟಿಸುತ್ತ ಅವನ್ನು ಪುನರುಜ್ಜೀವನ ಗೊಳಿಸಿದರು. ಕಲಾಕ್ಷೇತ್ರದಲ್ಲಿ ಹ್ಯಾವೆಲ್ಲರೂ ಅವನೀಂದ್ರನಾಥರೂ ಮಾರ್ಗದರ್ಶಕ ರಾಗಿ ಭಾರತೀಯ ಚಿತ್ರಕಲಾ ಪದ್ಧತಿಯನ್ನು ಯಥಾವತ್ತಾಗಿ ಪುನರುಜ್ಜೀವನ ಗೊಳಿಸಿ ಭದ್ರವಾದ ತಳಹದಿಯಮೇಲೆ ನಿಲ್ಲಿಸಿದರು. ಆಧುನಿಕ ವಿಜ್ಞಾನಕ್ಷೇತ್ರ ದಲ್ಲಿಯಂತೂ ಪ್ರಫುಲ್ಲಚಂದ್ರ ರಾಯರ ಹಾಗು ಜಗದೀಶಚಂದ್ರ ಬೋಸರ ಹೆಸರು ಗಳು ಮನೆಮಾತಾಗಿ ಹೋಗಿದ್ದವು. ಹೀಗೆ, ಹತ್ತೊಂಬತ್ತನೆಯ ಶತಕದ ಕೊನೆಯ ಪಾದದಲ್ಲಿ ಬಂಗಾಲವು ಭಾರತದ ಪುನರುಜ್ಜೀವನದ ಪ್ರತಿಯೊಂದು ಕಾರ್ಯರಂಗ ದಲ್ಲಿಯೂ ಅಗ್ರೇಸರಪಟ್ಟ ಪಡೆದಿತ್ತು. ಹೊಸ ಜೀವನ, ಹೊಸ ಆಶೆ-ಆಕಾಂಕ್ಷೆ, ಹೊಸ ಹೊಸ ಅಲೆತ-ಒಲೆತಗಳಿಂದ ತುಂಬಿ ತುಳುಕುತ್ತಿದ್ದ ವಾತಾವರಣದ ಸ್ಫುರಣವನ್ನು ತಪ್ಪಿಸಿ ಇರುವದು ಅದಾರಿಗೆ ಸಾಧ್ಯ?

ಯಥಾರ್ಥ ಪುನರುಜ್ಜೀವನವೆಂಬುದು ಯಾವಾಗಲೂ ಆತ್ಮಸಾಕ್ಷಾತ್ಕಾರ-ದತ್ತಲೂ ಸಮಗ್ರ ಜನಾಂಗದ ಪೂರ್ಣ ಆತ್ಮಾವಿಷ್ಕರಣದತ್ತಲೂ ಕರೆದೊಯ್ಯುವ ನೈಜ ಆತ್ಮಶೋಧನೆಯೇ ಆಗಿರುತ್ತದೆ. ಮುಖ್ಯವಾಗಿ ಇಂಗ್ಲಂಡದ ಮತ್ತು ಇಂಗ್ಲಿಷ್ ಭಾಷೆಯ ಮುಖಾಂತರ ಪಶ್ಚಿಮದೊಡನೆ ಬಂದ ಸರ್ವತೋಮುಖ ಸಂಪರ್ಕ, ರಾಜಕೀಯ ವಿಚಾರದ ಪ್ರಗತಿ, ರಾಷ್ಟ್ರೀಯತೆಯ ಸ್ಫೂರ್ತಿಪ್ರದ ಸಾಫಲ್ಯ, ಆಧುನಿಕ ವಿಜ್ಞಾನದ ಕಣ್ಣುಕುಕ್ಕಿಸುವಂಥ ವಿಜಯಗಳು ಇವೇ ಮೊದ

ಲಾದವುಗಳು ಸುಶಿಕ್ಷಿತ ಭಾರತೀಯರ ಮನಸ್ಸಿನಲ್ಲಿ,—ರಾಷ್ಟ್ರೀಯ ಸ್ವಾತಂತ್ರ್ಯದ, ನಾಗರಿಕ ಹಕ್ಕು ಬಾಧ್ಯತೆಗಳ ಮತ್ತು ಭೌತಿಕ ಪ್ರಗತಿಯ ಕಲ್ಪನೆಗಳನ್ನು ತುಂಬು ವದರಲ್ಲಿ ನೆರವಾದವೆಂಬ ಸಂಗತಿಯು ನಿಜವೇ. ಆದರೆ, ಭಾರತದ ಅಂತರಾತ್ಮ ವನ್ನೇ ಅಲ್ಲಾಡಿಸಿಬಿಟ್ಟಿದ್ದ ಪುನರುಜ್ಜೀವನದ ಶಕ್ತಿಯೆಂದರೆ ಇದೇ ತಾನೆಂದು ಮಾತ್ರ ಯಾರೂ ತಪ್ಪಾಗಿ ತಿಳಿದುಕೊಳ್ಳಕೂಡದು. ನಿಜವಾದ ಪ್ರೇರಣೆಯು ಇದಕ್ಕಿಂತ ಆಳದಿಂದ ಬಂದುದಾಗಿತ್ತು. ಆಂತರಿಕ ದೌರ್ಬಲ್ಯದ ಫಲವಾಗಿ ಬಂದ ಪರಕೀಯ ದಾಸ್ಯದಿಂದ ಬಿಡುಗಡೆ ಪಡೆವ ಬಯಕೆಯಿಷ್ಟೇ ಅದಕ್ಕೆ ಇರಲಿಲ್ಲ; ಆದರೆ ಕೆಸರೆಂಬುದೆಲ್ಲದರಿಂದ ಬಿಡುಗಡೆ, ಶತಕಾನುಶತಕಗಳಿಂದ ಹಕ್ಕಳಿಗಟ್ಟಿ ನಿಂತ ಹೊಲಸಿನಿಂದ ಬಿಡುಗಡೆ—ಇದೇ ಆ ಪ್ರೇರಣೆಯ ಬಯಕೆಯಾಗಿತ್ತು. ಏಕೆಂದರೆ, ಇದರ ಪರಿಣಾಮವಾಗಿಯೇ ಭಾರತದ ಅಂತರಾತ್ಮನು ತನ್ನ ಅಂತರ್ನಿಹಿತ ವೈಭವ ದಿಂದ ಒಡಗೂಡಿ ಸಮುಜ್ಜ್ವಲವಾಗಿ ಹೊಳೆದರೆ ಹೊಳೆಯಬೇಕು ಎಂಬ ಆಶಯ ವಿತ್ತು. ಬ್ರಿಟಿಶ್ ಆಡಳಿತೆಯಿಂದ ಬಿಡುಗಡೆ ಎಂಬುದು ಆ ಪ್ರೇರಣೆಯ ಒಂದು ಅಂಗಮಾತ್ರವಾಗಿತ್ತು ಅಷ್ಟೇ.

ಪಾಶ್ಚಾತ್ಯ ಮತ್ತು ಭಾರತೀಯ ಮಹಾ ವಿದ್ವಾಂಸರ ಸಂಶೋಧನೆಗಳಿಂದ ಈ ಸ್ಫೂರ್ತಿಗೆ ಪುಟವೇರಿ ಅದು ಉದ್ದೀಪನೆ ಪಡೆಯಿತು. ಪಾಶ್ಚಾತ್ಯ ವಿದ್ವಾಂಸರಲ್ಲಿ ಈ ಹೆಸರುಗಳನ್ನು ಉಲ್ಲೇಖಿಸಬಹುದು: ಮೋನಿಯರ ವಿಲಿಯಂ ಜೋನ್ಸ, ವಿಲ್‌ಸನ್ ಕೋಲೆಬ್ರೂಕ್, ರೋಥ್, ಶ್ಲೆಗೆಲ್, ಬಾಪ್, ಮ್ಯಾಕ್ಸಮುಲ್ಲರ ಹಾಗೂ ಇನ್ನಿತರರು. ಭಾರತೀಯ ವಿದ್ವಾಂಸರಾದರೂ ಅವರಿಗಿಂತ ಕಡಿಮೆ ಯೋಗ್ಯತೆಯುವ ರಾಗಿರಲಿಲ್ಲ. ಅವರಲ್ಲಿ ಕೆಲವರೆಂದರೆ: ರಾಜೇಂದ್ರಲಾಲ ಮಿತ್ರ, ಭಾವು ದಾಜಿ, ಭಾಂಡಾರಕರ, ರಮೇಶಚಂದ್ರ ದತ್ತ, ಮಣಿಶಂಕರ ಜಟಾಶಂಕರ, ಟಿಳಕ, ದಯಾನಂದ ಮೊದಲಾದವರು.

ಭಾರತೀಯ ಪುನರುಜ್ಜೀವನವು ಕೇವಲ ಒಂದು ತೋರಿಕೆಯ ಮೇಗರೆಯ ತೆರೆಯಾಗಿರದೆ, 'ಗಭೀರತೆಯೇ ಗಭೀರತೆಯನ್ನು ಕರೆವ ಕೂಗು' ಇದಾಗಿತ್ತು. ಈ ಮಾತಿಗೆ ಭಾರತೀಯ ಹಾಗೂ ವಿದೇಶೀಯ ಬರೆಹಗಾರರೇ ಸಾಕ್ಷಿಯಾಗಿದ್ದಾರೆ. ಆರ್. ಡಬ್ಲ್ಯೂ. ಫ್ರೇಜರ್ ಎಂಬವರು ತಮ್ಮ 'ಭಾರತೀಯ ಸಾಹಿತ್ಯದ ಇತಿಹಾಸ (Literary History of India)' ಎಂಬ ಪುಸ್ತಕದ ೪೪೬-೪೪೭ ನೆಯ ಪುಟ ಗಳಲ್ಲಿ ಅರ್ಥಗರ್ಭಿತವಾಗಿ ಹೀಗೆ ಹೇಳಿದ್ದಾರೆ. 'ರಾಮಮೋಹನ ರಾಯ, ಕೇಶವ ಚಂದ್ರ ಸೇನ, ಮಾಯ್ಕೆಲ್ ಮಧುಸೂದನ ದತ್ತ, ಬಂಕಿಮಚಂದ್ರ ಚತರ್ಜಿ, ಕಾಶೀನಾಥ ತ್ರ್ಯಂಬಕ ತೆಲಂಗ, ಇವರೇ ಮೊದಲಾದ ಮಹನೀಯರು ಪಾಶ್ಚಾತ್ಯ ನಾಗರಿಕತೆಯ ಜಾರಜ ಶಿಶುಗಳಾಗಿರಲಿಲ್ಲ. ಅವರೆಲ್ಲರೂ ಪ್ರತಿಭಾಸಂಪನ್ನ ಪ್ರತ್ಯುತ್ಪನ್ನಮತಿಗಳಾಗಿದ್ದರು; ಭಾರತೀಯ ಇತಿಹಾಸದಲ್ಲಿ ಅವರೆಲ್ಲ —

ಕಾಳಿದಾಸ, ಚೈತನ್ಯ, ಜಯದೇವ, ತುಳಸೀದಾಸ ಮತ್ತು ಶಂಕರಾಚಾರ್ಯರಂತಹ ಹಳೆಯ ಮಹಾವಿಭೂತಿಗಳ ಜೊತೆಗೆ ಸರಿಸಮನಾಗಿ ನಿಲ್ಲಬಲ್ಲ ಯೋಗ್ಯತೆಯುಳ್ಳವ-ರಾಗಿದ್ದರು. ಅಲ್ಲದೆ ಹಳೆಯದೂ ಹೊಸದೂ ಬೆರೆತು ಸಮರಸವಾಗುವ ಅಗ್ನಿಮಯ ಉಲ್ಬಣದಲ್ಲಿ ಸಿಡಿದೆದ್ದ ಮೊದಲ ಕಿಡಿಗಳಾಗಿ ಭವಿಷ್ಯದ ಗರ್ಭದಲ್ಲಿ ಸ್ಫುಟವಾಗಿ ಹೊಳೆಯುವ ಸುದೈವವು ಅವರದಾಗಿತ್ತು.' ರ್ಯಾಮ್ಸೇ ಮ್ಯಾಕ್‌ಡೋ-ನಾಲ್ಡರು ತಮ್ಮ 'ಹಿಂದುಸ್ಥಾನದ ಸರಕಾರ (Government of India)' ಎಂಬ ಗ್ರಂಥದಲ್ಲಿ ಭಾರತೀಯರ ರಾಷ್ಟ್ರೀಯತ್ವದ ವಿಷಯಕ್ಕೆ ಬರೆಯುತ್ತ ಹೀಗೆ ಉಲ್ಲೇಖಿಸುತ್ತಾರೆ. 'ಅದು ಐತಿಹಾಸಿಕ ಪರಂಪರೆಯ ಪುನರುಜ್ಜೀವನವಾಗಿದೆ, ಒಂದು ಜನಾಂಗದ ಆತ್ಮವಿಮೋಚನೆಯಾಗಿದೆ.' ಎನಿಬೆಸೆಂಟ್ ಹೀಗೆ ಅಂದಿದ್ದಾರೆ: 'ಬೆಳಗಾಗುತ್ತಲೇ ಬೆಳೆದು ನಿಲ್ಲುವ ನಾಯಿಕೊಡೆಯ ಬೆಳವಣಿಗೆಯು ಇದಲ್ಲ. ಆದರೆ ಸಾವಿರಾರು ವರುಷಗಳ ಬಲವಿರುವ ಗಗನಚುಂಬಿತ ವನವೃಕ್ಷವಿದು.' ರವೀಂದ್ರನಾಥರ ಕಾವ್ಯದ ವಿಷಯಕ್ಕೆ ರ್ಯಾಮ್ಸೇ ಮ್ಯಾಕ್‌ಡೋನಾಲ್ಡರು ಕಾವ್ಯಮಯ ಭಾಷೆಯಲ್ಲಿ ಉತ್ಸಾಹದಿಂದ ಉಬ್ಬಿ ಉದ್ಗರಿಸುತ್ತಾರೆ: 'ಟಾಗೋರರ ಕಾವ್ಯವೇ ಹಿಂದುಸ್ಥಾನವಾಗಿದೆ. ಅದು ಕೇವಲ ಒಬ್ಬ ವ್ಯಕ್ತಿಯ ಭಾವೋದ್ವೇಗ-ಮಾತ್ರವಾಗಿರದೆ, ಒಂದು ಜನಾಂಗದ ಆತ್ಮಸ್ಫುರಣವೇ ಅದಾಗಿದೆ; ಅದು ಕೇವಲ ಒಂದು ಕಾವ್ಯಮಯ ಮನೋಲಹರಿ ಮಾತ್ರವಾಗಿರದೆ, ಸುವ್ಯವಸ್ಥಿತವಾದ ಜೀವನ-ದರ್ಶನವೇ ಅದಾಗಿದೆ; ಅದು ಕೇವಲ ಒಂದು ರಾಗಧ್ವನಿಯಾಗಿರದೆ ಒಂದು ಸಂಸ್ಕೃತಿಯೇ ಅದಾಗಿದೆ'.

ಇಲ್ಲಿ ಅಷ್ಟೇ ಪ್ರಬಲವಾಗಿ ಒಂದು ಸಂಗತಿಯನ್ನು ಒತ್ತಿ ಒತ್ತಿ ಹೇಳಲಿಕ್ಕೆ ಬೇಕು. ಅದೆಂದರೆ, ಈ ನವಚೈತನ್ಯವು ಸಂಕುಚಿತ ರಾಷ್ಟ್ರೀಯ ಭಾವದಿಂದ ಕೂಡಿ-ದ್ದಾಗಿರಲಿಲ್ಲ, ಸ್ವಾರ್ಥಪ್ರೇರಿತವಾಗಿರಲಿಲ್ಲ ಅಥವಾ ಕೇವಲ ಪ್ರಾದೇಶಿಕವೂ ಆಗಿರಲಿಲ್ಲವೆಂಬ ಮಾತು. ಸರೋಜಿನಿ ನಾಯಡು ಅವರು, ರಾಮಮೋಹನ ರಾಯರಿಗೆ ಗೌರವ ಸಲ್ಲಿಸುತ್ತ ಹೀಗೆ ಉಲ್ಲೇಖಿಸಿದ್ದಾರೆ. "... ರಾಜಾ ರಾಮಮೋಹನ ರಾಯರು ಈ ಅಮೋಘವಾದ ಸಭ್ಯತೆಯ ಸಂದೇಶವನ್ನು ಪ್ರಪಂಚಕ್ಕೆಲ್ಲ ಬಿತ್ತರಿಸಿದರು. ಅವರಲ್ಲಿ ಪ್ರತ್ಯೇಕತಾಭಾವವಿರಲಿಲ್ಲ. ಎಲ್ಲವನ್ನೂ ಒಳಗೊಳ್ಳುವ ಗುಣವಿತ್ತು ಅವರಲ್ಲಿ; ಹಾಗು ಭಾರತೀಯ ಆದರ್ಶದ ವೈಶಿಷ್ಟ್ಯಪೂರ್ಣ ಸರ್ವಗ್ರಾಹಿ ಗುಣವೂ ಅದೇ ಆಗಿದೆ." ಸ್ವಾಮಿ ವಿವೇಕಾನಂದರು ೧೮೯೭ರ ಸಪ್ಟೆಂಬರ ೨೦ನೆಯ ದಿನಾಂಕದಲ್ಲಿ ಲಂಡನ್ ನಗರದ ತಮ್ಮೊಬ್ಬ ಶಿಷ್ಯರಿಗೆ—"ನನ್ನ ಲಕ್ಷ್ಯ-ಪ್ರಯೋಜನಗಳೆಲ್ಲವೂ ಕೇವಲ ಭಾರತೀಯವಾಗಿರದೆ ಅಂತಾರಾಷ್ಟ್ರೀಯವಾಗಿವೆಯೆಂಬ ಸಂಗತಿಯನ್ನು ನೀನು ಸರ್ವಥಾ ಮರೆಯಕೂಡದು" ಎಂದು ಬರೆದಿದ್ದಾರೆ. ಅನಂತರದಲ್ಲಿ ಗಾಂಧೀಜಿಯವರೂ ಹೀಗೆಯೇ ಒತ್ತಿ ಹೇಳಿದ್ದಾರೆ: "ನಮ್ಮ ರಾಷ್ಟ್ರೀಯತೆಯು

ಬೇರೆ ರಾಷ್ಟ್ರಗಳಿಗೆ ಗಂಡಾಂತರವಾಗಿರಲಾರದು; ಯಾವ ಪ್ರಕಾರವಾಗಿ ನಾವು ನಮ್ಮ ಪ್ರಯೋಜನಕ್ಕಾಗಿ ಇನ್ನೊಬ್ಬರನ್ನು ಸುಲಿಯಬಯಸುವದಿಲ್ಲವೋ ಅದೇ ಪ್ರಕಾರವಾಗಿ ಇನ್ನೊಬ್ಬರು ನಮ್ಮನ್ನು ಸುಲಿಯುಲಿಕ್ಕೆ ನಾವು ಆಸ್ಪದ ಕೊಡುವದಿಲ್ಲ. ಸ್ವರಾಜ್ಯದ ಮುಖಾಂತರವಾಗಿ ನಾವು ಇಡಿ ಜಗತ್ತಿಗೇ ಸೇವೆ ಸಲ್ಲಿಸತಕ್ಕವರು".

ಪುನರುಜ್ಜೀವನದ ರೀತಿಯೂ ಅಂದಿನ ಸರ್ವಸಾಧಾರಣ ವಾತಾವರಣವೂ ಈ ಬಗೆಯಾಗಿ ಇರುತ್ತಿರಲು, ಶ್ರೀ ಅರವಿಂದರ ತಂದೆ ಡಾ. ಕೃಷ್ಣಧನ ಘೋಷರು ಮೊದಮೊದಲು ಬ್ರಹ್ಮಸಮಾಜದಲ್ಲಿದ್ದುಕೊಂಡಿದ್ದರೂ ಬರಬರುತ್ತ ಪಾಶ್ಚಾತ್ಯವೆನ್ನಿಸಿಕೊಂಡ ಪ್ರತಿಯೊಂದು ಸಂಗತಿಯಲ್ಲಿಯೂ ದೃಢವಿಶ್ವಾಸವುಳ್ಳವರಾದರು. ಇದೊಳ್ಳೆ ಸೋಜಿಗದ ಸಂಗತಿಯು. ಕಲ್ಕತ್ತೆಯಿಂದ ಕೇವಲ ಹನ್ನೊಂದು ಮೈಲು ದೂರವಿರುವ ಹುಗಳಿ ಜಿಲ್ಹೆಯ ಕೊನ್ನಾಗರ ಎಂಬ ಹಳ್ಳಿಯ ಒಂದು ಕುಟುಂಬದಲ್ಲಿ ಅವರು ಹುಟ್ಟಿದರು. ಅವರು ವೈದ್ಯಕಶಾಸ್ತ್ರವನ್ನು ಆಯ್ದುಕೊಂಡು ಹೆಚ್ಚಿನ ಅಭ್ಯಾಸಕ್ಕಾಗಿ ಇಂಗ್ಲಂಡಕ್ಕೆ ತೆರಳಿದರು. ಅವರ ಧರ್ಮನಿಷ್ಠ ಮಾವಂದಿರಾದ ರಾಜನಾರಾಯಣ ಬೋಸರು ಪಾಶ್ಚಾತ್ಯ ಸಭ್ಯತೆಯ ಮೆರುಗು ಮಾಟಕ್ಕೆ ಮನಸೋಲಬಾರದೆಂದು ಕಟ್ಟುನಿಟ್ಟಾಗಿ ಎಚ್ಚರಿಕೆ ಹೇಳಿದ್ದರೂ ತದ್ವಿರುದ್ಧವಾಗಿಯೇ ಡಾ. ಕೃಷ್ಣಧನರು ನಾಸ್ತಿಕರಾಗಿ, ಆಮೂಲಾಗ್ರ ಆಂಗ್ಲ ಮುಖವಾಡವನ್ನು ಧರಿಸಿಕೊಂಡು, ರಾಷ್ಟ್ರಾಭಿಮಾನಚ್ಯುತರಾಗಿ ಸ್ವದೇಶಕ್ಕೆ ಮರಳಿದರು. ಅವರು ಇಂಗ್ಲಂಡದ, ಆಂಗ್ಲಶಿಕ್ಷಣದ, ಆಂಗ್ಲ ಸಂಪ್ರದಾಯದ, ಆಂಗ್ಲ ರೀತಿನೀತಿಗಳ ಮತ್ತು ಆಂಗ್ಲ ಪದ್ಧತಿಗಳ ಉಪಾಸಕರಾಗಿಬಿಟ್ಟರು. ಅವರು ಎಂ.ಡಿ. ಪದವಿಯನ್ನು ಪಡೆದ ಸ್ಥಳವಾದ ಅಬರ್ಡೀನ್ (ಸ್ಕಾಟ್ಲಂಡ) ಎಂಬಲ್ಲಿಂದ ಹಿಂತಿರುಗಿ ಬಂದ ಮೇಲೆ ಅವರಿಗೆ ಪ್ರಾಯಶ್ಚಿತ್ತ ಮಾಡಿಕೊಳ್ಳಲು ಹೇಳಲಾಯ್ತು. ಅವರು ನೈತಿಕ ಎದೆಗಾರಿಕೆಯಿಂದ ಅದನ್ನು ಅಲ್ಲಗಳೆದರು; ಹಾಗು ಹಳ್ಳಿಯಲ್ಲಿದ್ದ ತಮ್ಮ ಸೊತ್ತನ್ನೆಲ್ಲ ಬಲು ಸುಲಭ ಬೆಲೆಗೆ ಮಾರಿ ಊರು ಬಿಟ್ಟುಬಿಡುವದೇ ಲೇಸೆಂದು ಬಗೆದು ಅದರಂತೆ ಕಲಕತ್ತೆಗೆ ಬಂದುಬಿಟ್ಟರು. ಆದರೆ ತಮ್ಮ ತಾಯಿಯ ಬಗೆಗೆ ಅವರ ಹೃದಯದಲ್ಲಿ ಒಂದು ಗೌರವದ ಸ್ಥಾನವಿತ್ತು. ತಮ್ಮ ತಾಯಿಯ ಮರಣಾನಂತರ, ಅವರ ಬಯಕೆ ಮೇರೆಗೆ ಕಾಶಿಯಲ್ಲಿ ಒಂದು ಸಾವಿರ ರೂಪಾಯಿಗಳನ್ನು ಅವರು ವೆಚ್ಚಮಾಡಿದರು. ಆದರೆ, ಅವರ ಸ್ವಭಾವಗತವಾದ ಕಾರುಣ್ಯ,—ಹೆರವರ ದುಃಖವನ್ನು ಕಂಡಾಗ ಉಂಟಾಗುವ ಮಿಡುಕು ಅವರಲ್ಲಿ ಒಂದು ಬಗೆಯ ಧರ್ಮಸ್ವರೂಪವನ್ನೇ ತಳೆಯುವಷ್ಟು ಹೆಚ್ಚಾಗಿ ಇದ್ದುಬಿಟ್ಟಿತ್ತು. ಕಷ್ಟಕ್ಕೆ ಗುರಿಯಾದವರಿಗೆ ನೆರವು ನೀಡುವಾಗ, ಅವರು ತಮ್ಮ ಇಡಿ ಜೀವಮಾನದಲ್ಲೆಲ್ಲ ತಮ್ಮ ಶ್ರಮವನ್ನಾಗಲಿ ಹಣವನ್ನಾಗಲಿ ಉಳಿಸಿಕೊಂಡವರಲ್ಲ. ಅವರು ಮೂರು ಜಿಲ್ಹೆಗಳಲ್ಲಿ ಸಿವ್ಹಿಲ್ ಸರ್ಜನ್‌ರೆಂದು ಕೆಲಸ ಮಾಡಿದರು. ಸಾರ್ವಜನಿಕ ಸೇವಾಬುದ್ಧಿ ಹಾಗೂ ಬಡವರ ಬಗ್ಗೆ ಇದ್ದ ಅನುರಾಗ

ಇವುಗಳ ಮೂಲಕವಾಗಿ ಅವರು ಎಲ್ಲ ಕಡೆಗೂ ತುಂಬ ಜನಪ್ರಿಯರಾಗಿದ್ದರು. ಭಾಗಲಪುರ, ರಂಗಪುರ, ಖುಲನಾ ಮೊದಲಾದ ಸ್ಥಳಗಳಲ್ಲಿ ಅವರು ಮಾಡಿದ ಕೆಲಸವನ್ನು ಬಹುಕಾಲದ ವರೆಗೆ ಜನರು ನೆನಿಸಿಕೊಳ್ಳುತ್ತಿದ್ದರು. ಅವರ ಕೊನೆ-ಕೊನೆಯ ವರುಷಗಳು ಅವರ ಪತ್ನಿಯ ಉನ್ಮಾದರೋಗದ ಮೂಲಕವಾಗಿಯೂ ಅರ್ಥಾಭಾವದ ಮೂಲಕವಾಗಿಯೂ ತುಸುಮುಟ್ಟಿಗೆ ತಲೆದೋರಿದ ಸ್ವಭಾವ-ಶೈಥಿಲ್ಯದ ಮೂಲಕವಾಗಿಯೂ ಒಂದಿಷ್ಟು ದುಃಖಮಯವಾಗಿಯೂ ಕಹಿಗೂಡಿ-ದ್ದಾಗಿಯೂ ಇದ್ದವು. ಅವರು ತಮ್ಮ ದುಃಖದುಮ್ಮಾನಗಳನ್ನು ಮರೆಯಲೆಂದು ತುಸು ತುಸು ಕುಡಿಯಲು ಸಹ ಕೈಯಿಕ್ಕಿದರೆಂದು ಹೇಳುತ್ತಾರೆ.

ಭಾರತೀಯ ವಿಷಯಗಳ ಬಗೆಗಿದ್ದ ಅವರ ಗ್ರಹಿಕೆಗಳು ಕೊನೆತನಕ ಬದಲಾಗ ಲಿಲ್ಲ. ಅವರು ಇವುಗಳ ಬಗೆಗೆ ಕರುಣೆಯನ್ನು ವ್ಯಕ್ತಗೊಳಿಸುತ್ತಿದ್ದರಲ್ಲದೆ, ಎಷ್ಟೋ ಸಲವಂತೂ ಇವನ್ನೆಲ್ಲ ಹೀಯಾಳಿಸಿಯೂ ಬಿಡುತ್ತಿದ್ದರು. ಹಾಗು ಆಂಗ್ಲ ಮತ್ತು ಪಾಶ್ಚಾತ್ಯವೆಂಬುದು ಏನೇ ಇದ್ದರೂ ಅದನ್ನು ಮುಗಿಲಿಗೇರಿಸಿ ಮನಸೋಕ್ತವಾಗಿ ಹೊಗಳುತ್ತಿದ್ದರು. ಈ ಬಗೆಯ ಪ್ರವೃತ್ತಿಯು ಅವರಲ್ಲಿ ಅದೆಷ್ಟು ಬೆಳೆದು ಬಂದಿತ್ತೆಂದರೆ, ಅವರ ಮಕ್ಕಳ ಶಿಕ್ಷಣದ ಪ್ರಶ್ನೆ ತಲೆಯೆತ್ತಿದಾಗ, ಬುದ್ಧಿಪುರಸ್ಸರ ವಾಗಿಯೇ ಅವರನ್ನು ಕ್ರೈಸ್ತರ ಶಾಲೆ (Convent)ಗೆ ಹಾಕಿದರು ಮತ್ತು ಚಿಕ್ಕ ವಯಸ್ಸಿನಲ್ಲಿಯೇ ಮಕ್ಕಳನ್ನು ಇಂಗ್ಲಂಡಕ್ಕೆ ಕಳಿಸಿಕೊಟ್ಟರು! ಇಂಗ್ಲಂಡಕ್ಕೆ ಕರೆದೊಯ್ದಾಗ ಅರವಿಂದಕುಮಾರನಿಗೆ ಕೇವಲ ಏಳು ವರ್ಷ ಮಾತ್ರ ವಯಸ್ಸಿತ್ತು.

ತೀರ ಅಯುಕ್ತವೆನಿಸಿಕೊಳ್ಳುವಷ್ಟು ಇದ್ದ ಪಶ್ಚಿಮವಿಷಯಕವಾದ ಅವರ ಅತಿಪ್ರೇಮಕ್ಕೆ ಸರಿತೂಕವಾಗಿರಲೆಂದೋ ಎಂಬಂತೆ ಅವರು ಇನ್ನೂ ಮೆಡಿಕಲ್ ಕಾಲೇಜದಲ್ಲಿದ್ದಾಗಲೆ, ಋಷಿ ರಾಜನಾರಾಯಣ ಬೋಸರ ಜ್ಯೇಷ್ಠ ಪುತ್ರಿಯಾದ ಸ್ವರ್ಣಲತಾದೇವಿಯನ್ನು ಲಗ್ನವಾಗಿದ್ದರು. ಋಷಿ ರಾಜನಾರಾಯಣರು ಬ್ರಹ್ಮ-ಸಮಾಜದ ಮುಂದಾಳು, ಮತ್ತು ವೇದಾಂತ, ಇಸ್ಲಾಮ ಹಾಗೂ ಪಾಶ್ಚಾತ್ಯ ವಿಚಾರ ಇವುಗಳ ತಿಳಿವಳಿಕೆಯಲ್ಲಿ ಸರಿಸಮಾನವಾಗಿ ನಿಷ್ಣಾತರಾದವರು, ಮುಳು ಮುಳುಗಿ ಎದ್ದಂಥವರು. ಒಂದು ದೃಷ್ಟಿಯಿಂದ ಆಗಿನ ಕಾಲದಲ್ಲಿ ಭಾರತದ ಮೇಲೆ ಪ್ರಭಾವ ಬೀರುತ್ತಿದ್ದ ವಿವಿಧ ಸಾಂಸ್ಕೃತಿಕ ವಿಚಾರಪ್ರವಾಹಗಳಲ್ಲಿ ಮಿಂದು ಅವನ್ನೆಲ್ಲ ಅವರು ತಮ್ಮಲ್ಲಿ ಒಟ್ಟಾಗಿ ಅಳವಡಿಸಿಕೊಂಡಿದ್ದರೆನ್ನಬಹುದು. ಆದರೂ ವೇದಾಂತ-ಪ್ರಣೀತ ಬ್ರಹ್ಮವಿದ್ಯೆಯದೇ ಮೇಲುಗೈ ಇತ್ತು. ಅವರು ಉಪನಿಷತ್ತುಗಳನ್ನು ಕೂಲಂಕಷವಾಗಿ ಅಭ್ಯಾಸಮಾಡಿದಂಥವರು. ಅನೇಕಸಲ ಅವರು ಸಭೆ ಸಮ್ಮೇಲನ ಗಳಲ್ಲಿ ನಿರರ್ಗಲವಾಗಿ ಭಾಷಣಮಾಡಬಲ್ಲವರಾಗಿದ್ದರು; ಪ್ರಸಂಗ ಬಂದಾಗಲೆಲ್ಲ ಬರೆಯುತ್ತಲೂ ಇದ್ದರು. "ಹಿಂದುಧರ್ಮೇರ ಶ್ರೇಷ್ಠತಾ" ಎಂಬ ಅವರ ಭಾಷಣ ವನ್ನು ವಿಮರ್ಶಿಸುತ್ತ ಬಿಪಿನಚಂದ್ರ ಪಾಲರು, ಅತ್ಯಂತ ಪ್ರಭಾವಶಾಲಿಯಾದ

ಪಕ್ಷಪ್ರತಿಪಾದನವೆಂದು ಗುಣಲಕ್ಷಣ ವಿವರಣೆ ಮಾಡಿದ್ದಾರೆ. ದೇವೇಂದ್ರನಾಥ ಠಾಕೂರರ ತರುವಾಯ ರಾಜನಾರಾಯಣರೇ ಕಲಕತ್ತೆಯ ಬ್ರಹ್ಮಸಮಾಜದ ಅಧ್ಯಕ್ಷ ಪದವನ್ನು ಸ್ವೀಕರಿಸಿದರು.

ಅವರ ಮಗಳಾದ ಸ್ವರ್ಣಲತಾದೇವಿಯು ಸುಶಿಕ್ಷಿತ ಮಹಿಳೆ. ಕಥೆಗಳನ್ನೂ ನಾಟಕಗಳನ್ನೂ ಬರೆಯಬಲ್ಲ ಶಕ್ತಿ ಇವರಲ್ಲಿತ್ತು. ಆದರೆ ದುರ್ದೈವದಿಂದ ಅವರ ಮನೆತನದಲ್ಲಿ ಉನ್ಮಾದರೋಗವಿದ್ದ ಕಾರಣದಿಂದ ಇವರಲ್ಲಿದ್ದ ಆ ಶಕ್ತಿಯ ಪ್ರಕಟನೆಗೆ ಸಾಕಷ್ಟು ಅನುಕೂಲ ಸಂಧಿಸಮಯಗಳೇ ದೊರೆಯಲಿಲ್ಲ. ಶ್ರೀಮತಿ-ಯವರು ವಿಶೇಷತಃ ತಮ್ಮ ಕೊನೆಕೊನೆಯ ದಿನಗಳಲ್ಲಿಯಂತೂ ಆ ಆನುವಂಶಿಕ ರೋಗಕ್ಕೆ ಗುರಿಯಾದರು. ಎಷ್ಟೋ ಪ್ರಸಂಗಗಳಲ್ಲಿ ಅವರು ತುಂಬ ಉಗ್ರ ಸ್ವರೂಪ ಸಹ ತಾಳಿ ಮಕ್ಕಳನ್ನು ಹೊಡೆಯುತ್ತಿದ್ದರು. ಒಮ್ಮೆ ಶ್ರೀ ಅರವಿಂದರ ಅಣ್ಣ ಮನಮೋಹನರನ್ನು ಹೀಗೆ ಥಳಿಸುತ್ತಿರುವಾಗ ಅರವಿಂದಕುಮಾರರು ಸದ್ದಿಲ್ಲದೆ ಹೊರಬಿದ್ದರೆಂದು ಹೇಳುತ್ತಾರೆ! ಆದರೆ ಸ್ವರ್ಣಲತಾದೇವಿಯವರು ತಮ್ಮ ಜೀವನದುದ್ದಕ್ಕೂ ತಮ್ಮ ತಂದೆಯವರಂತೆ ಏಕನಿಷ್ಠೆಯನ್ನೂ ಧಾರ್ಮಿಕಪ್ರವೃತ್ತಿಯನ್ನೂ ಸದಾ ಕಾಪಾಡಿಕೊಂಡೇ ಇದ್ದರು.

ಡಾ. ಕೃಷ್ಣಧನರು ಹಾಗೂ ಶ್ರೀಮತಿ ಸ್ವರ್ಣಲತಾದೇವಿಯವರು ೧೮೬೪ ರಲ್ಲಿ ಮದುವೆಯಾದರು. ಆಗ ಅವರಿಬ್ಬರಿಗೂ ಅನುಕ್ರಮವಾಗಿ, ಹತ್ತೊಂಬತ್ತು ಹಾಗು ಹನ್ನೆರಡು ವರ್ಷ ವಯಸ್ಸಿತ್ತು. ಅವರು ತಮ್ಮ ಶಿಕ್ಷಣವನ್ನು ಮುಗಿಸಿಕೊಂಡು ೧೮೭೧ ರಲ್ಲಿ ಇಂಗ್ಲೆಂಡದಿಂದ ಮರಳಿದರು. ಈ ಮದುವೆಯು, ಒಂದು ದೃಷ್ಟಿಯಿಂದ ಬಂಗಾಲದ ಅಂದಿನ ಜೀವನವಾಹಿನಿಯಲ್ಲಿದ್ದ ಎರಡು ಬೇರೆ ಬೇರೆ ಶಕ್ತಿಗಳ ಸಂಗಮವಾಗಿತ್ತು ಎಂದರೂ ಸಲ್ಲುವದು. ಆದರೂ ಕಟ್ಟಕಡೆಗೆ ಎರಡನೆಯ ಶಕ್ತಿಯ ಕೈಯೇ ಮೇಲಾಯ್ತು. ಒಂದು ವೇಳೆ ಹೀಗೆ ಹೇಳಬಹುದಾದರೆ, ಶ್ರೀ ಅರವಿಂದರು, ಕರ್ಮಕ್ಷೇತ್ರದಲ್ಲಿ ಮುನ್ನುಗ್ಗುವ ಹುರುಪು ಹುಮ್ಮಸಗಳೊಡನೆ ತನ್ನ ಸಮಸ್ತ ಬಲ-ಸಮೇತವಾಗಿ ಜಾಗ್ರತವಾದ ಅದೊಂದು ಆತ್ಮಪ್ರಧಾನ ಶಕ್ತಿಯ ಪ್ರತೀಕಸ್ವರೂಪರಾಗಿದ್ದರು ಎಂದು ಹೇಳಬಹುದು.

## ೩ ಜನ್ಮ, ಬಾಲ್ಯ ಮತ್ತು ಶಿಕ್ಷಣ

ಶ್ರೀ ಅರವಿಂದರು ಡಾ. ಕೃಷ್ಣಧನ ಘೋಷ ಮತ್ತು ಸ್ವರ್ಣಲತಾದೇವಿ ಇವರ ಮೂರನೆಯ ಮಗನಾಗಿ ಕಲಕತ್ತೆಯಲ್ಲಿ ಜನ್ಮವೆತ್ತಿದರು. ಬಿನಯಭೂಷಣ ಮತ್ತು

ಮನಮೋಹನ ಎಂಬವರು ಇಬ್ಬರು ಅಣ್ಣಂದಿರು. ಈ ಹೊಸ ಶಿಶುವು ಈ ಭೂಮಿಯಮೇಲೆ ಉಸಿರಾಡಿಸತೊಡಗಿದುದು ಕ್ರಿ. ಶ. ೧೮೭೨ ಅಗಸ್ಟ ೧೫ ನೆಯ ದಿನ ನಸುಕಿನಲ್ಲಿ ೪-೫೦ ಕ್ಕೆ. ಶ್ರೀ ರಾಮಕೃಷ್ಣ ಪರಮಹಂಸರ ಮಹಾಸಮಾಧಿಯ ನಿಮಿತ್ತದಿಂದ ಈ ಮೊದಲೇ ಪುನೀತವಾದ ದಿನವಿದು. ಶ್ರೀ ಅರವಿಂದರೇ ಒಮ್ಮೆ ಅಗಸ್ಟ ೧೫ ರ ಆಧ್ಯಾತ್ಮಿಕ ಮಹತ್ವವನ್ನು ತಿಳಿಸಿದ್ದುಂಟು: "ಅಗಸ್ಟ ೧೫ ಕ್ಕೆ ಒಂದು ವಿಶಿಷ್ಟ ಮಹತ್ವವಿದೆ— ಈ ದಿನವೇ ವ್ಹರ್ಜಿನ್ ಮೇರಿ (Virgin Mary) ಸ್ವರ್ಗಾರೋಹಣ ಮಾಡಿದ್ದು; ಜಡಪ್ರಕೃತಿಯು ದಿವ್ಯತ್ವವನ್ನು ಹೊಂದಿತೆಂದು ಇದು ಸೂಚಿಸುತ್ತದೆ. ವ್ಹರ್ಜಿನ್ ಮೇರಿ ಎಂದರೆ ಮೂಲಪ್ರಕೃತಿ; ಜೀಜಸ್ ಮಾನವಕುಲದಲ್ಲಿ ಜನಿಸಿದ ದಿವ್ಯಾತ್ಮ. ಅವನು ಮಾನವಪುತ್ರನೂ ಅಹುದು, ದೇವಪುತ್ರನೂ ಅಹುದು." (ಪು.೪, Mother India Aug.1952). ಭಾರತೀಯ ಐತಿಹಾಸಿಕ ಘಟನೆಗಳಲ್ಲಿ ೧೯೪೭ ರಿಂದ ಭಾರತದ ಸ್ವಾತಂತ್ರ್ಯಸಿದ್ಧಿಯ ದಿನವೆಂದು ಈ ದಿನವೇ ಚಿರಸ್ಮರಣೀಯವಾಗುವ ಶುಭಯೋಗವಿತ್ತು. ಅರವಿಂದ ಎಂದರೆ ಕಮಲ ಎಂಬ ಅಸಾಮಾನ್ಯವಾದ ಹೆಸರನ್ನು ತಂದೆಯೇ ತನ್ನ ಮಗನಿಗಾಗಿ ಆಯ್ದಿದ್ದರು. ಆ ವರೆಗೆ ಈ ಹೆಸರನ್ನು ಇಟ್ಟದ್ದು ತೀರ ವಿರಲ. ಆದರೆ ಈ ಹೆಸರು ಈಗ ಬಹಳ ಬಳಕೆಯಲ್ಲಿ ಬಂದಿದ್ದು ಮಕ್ಕಳಿಗಷ್ಟೇ ಅಲ್ಲ ಅನೇಕ ಸಾರ್ವಜನಿಕ ಸಂಸ್ಥೆ-ಸಮಿತಿಗಳಿಗೂ ಇದನ್ನು ಇಡುತ್ತಿದ್ದಾರೆ.

ಖುಲನಾ ಎಂಬಲ್ಲಿ ತನ್ನ ತಂದೆ ತಾಯಿಗಳ ಬಳಿಯಲ್ಲಿದ್ದ ಈ ಅಸಾಮಾನ್ಯ ಶಿಶುವಿನ ಚಿಕ್ಕಂದಿನ ವಿವರಗಳು ಹೆಚ್ಚಾಗಿ ತಿಳಿದುಬಂದಿಲ್ಲ. ಆದರೆ ತಂದೆಯವರು ಆಪಾದಮಸ್ತಕ 'ಸಾಹೇಬ'ರಾಗಿದ್ದಕಾರಣ ಬಂಗಾಲಿ ಭಾಷೆ ಬಲ್ಲ ಆಳುಗಳನ್ನು ಸಹ ಮನೆಯಲ್ಲಿ ಇಟ್ಟುಕೊಂಡಿರಲಿಲ್ಲ. ಆ ಆಳುಮಕ್ಕಳು ಇಂಗ್ಲಿಷನ್ನೋ ಹಿಂದಿಯನ್ನೋ ಆಡುತ್ತಿದ್ದರು. ಇಬ್ಬರು ಬಂಧುಗಳ ಜೊತೆಗೆ ಅರವಿಂದಕುಮಾರನನ್ನೂ ಯುರೋಪಿಯನ್ನರ ಶಾಲೆಗೆ ಹಾಕಲಾಯ್ತು. ಭಾರತೀಯತೆಯ ಗಾಳಿ ಕೂಡ ಸೋಂಕದ ಶಾಲೆಯದು. ದಾರ್ಜಿಲಿಂಗದಲ್ಲಿದ್ದ ಲಾರೆಟ್ಟೊ ಕಾನ್‌ವೆಂಟ್‌ಸ್ಕೂಲ್ ಎಂಬಲ್ಲಿ ಅಲ್ಲಿಯೇ ವಾಸವಾಗಿದ್ದು ಕಲಿಯುವ ಹುಡುಗರೊಂದಿಗೆ ಅರವಿಂದ ಕುಮಾರನನ್ನು ಇಡಲಾಯ್ತು. ಯುರೋಪಿಯನ್ ಮಕ್ಕಳಿಗಾಗಿ ಯುರೋಪಿಯನ್‌ರಿಂದಲೇ ನಡೆಸಲ್ಪಟ್ಟ ಶಾಲೆಯದು. ಕಲಿಸಲು ಬಳಸುವ ಭಾಷೆ ಸಹ ಇಂಗ್ಲಿಷ್! ಭಾರತೀಯ ಭಾಷೆ ಕಲಿಸಲು ಒಂದು ನಿಮಿಷ ಸಹ ವೆಚ್ಚವಾಗದಂತೆ ಎಚ್ಚರಿಕೆ ವಹಿಸುವ ಶಾಲೆಯದು! ಹೀಗೆ ಈ ಮೂವರು ಭಾರತೀಯ ಬಂಧುಗಳು ಶಾಲೆಯಲ್ಲಿಯೂ ವಸತಿಗೃಹದಲ್ಲಿಯೂ ಆಂಗ್ಲ ಬಾಲಕರ ಸಹವಾಸದಲ್ಲಿ ಆಂಗ್ಲ ಭಾಷೆಯನ್ನೇ ಏಕಮಾತ್ರ ವಿನಿಮಯ ಭಾಷೆಯನ್ನಾಗಿ ಬಳಸಿಕೊಂಡು ಇರುತ್ತಿದ್ದರು. ಎಂದಮೇಲೆ ಶ್ರೀ ಅರವಿಂದರು ತಮ್ಮ ಮಾತೃಭಾಷೆಯಾದ ಬಂಗಾಲಿ

ಯನ್ನು ೧೮೯೩ರಲ್ಲಿ ಇಂಗ್ಲೆಂಡದಿಂದ ಬಡೋದೆಗೆ ಮರಳಿ ಬಂದಾಗ ಹೊಸದಾಗಿ ಕಲಿಯಬೇಕಾಗಿ ಬಂದಿತೆಂದರೆ ಅದರಲ್ಲಿ ಸೋಜಿಗವೇನು? ಅವರು ಆಯ್.ಸಿ.ಎಸ್. ಪರೀಕ್ಷೆಗೆ ಕುಳಿತಾಗ ಬಂಗಾಲಿಯು ಅವರಿಗೆ ತೊದಲುತೊದಲಾಗಿ ಮಾತ್ರ ಬರುತ್ತಿತ್ತು.

ದುರ್ದೈವದಿಂದ ಈ ಸಮಯದಲ್ಲಿ ಸಹ ಸ್ವರ್ಣಲತಾದೇವಿಯವರ ಮೈಯಲ್ಲಿ ಆಗೀಗ ಗಾಳಿ ( ವಾತಪ್ರಕೋಪದ ರೋಗ ) ಹೊಕ್ಕು ಎಷ್ಟೋ ಸಲ ಅವರು ಅಸು-ಗೊಳ್ಳದಿರುತ್ತಿದ್ದರು. ಈ ಹುಡುಗರು ತಮ್ಮ ಬಿಡುವಿನ ದಿನಗಳನ್ನು ಖುಲನಾದಲ್ಲಿ ಇಲ್ಲವೆ ದೇವಘರದಲ್ಲಿದ್ದ ತಮ್ಮ ತಾಯಿಯ ಕಡೆಯ ಅಜ್ಜನ ಬಳಿಯಲ್ಲಿ ಇದ್ದು ಕಳೆಯುತ್ತಿದ್ದರು. ಈ ದಿನಗಳ ನೆನಪು ಶ್ರೀ ಅರವಿಂದರಿಗೆ ಏನೂ ಇರಲಿಲ್ಲ. ಆದರೆ ದಾರ್ಜಿಲಿಂಗದಲ್ಲಿದ್ದಾಗ ಬಿದ್ದ ಒಂದು ಕನಸು ಅರ್ಥಪೂರ್ಣವಾಗಿದ್ದು ಅದನ್ನು ಮಾತ್ರ ಅವರು ನೆನಪಿನಲ್ಲಿಟ್ಟಿದ್ದರು. ಒಂದು ರಾತ್ರಿ ನಿದ್ರೆಯಲ್ಲಿದ್ದಾಗ ನಿಬಿಡವಾದ ತಮೋರಾಶಿಯು ಇವರೆಡೆಗೆ ಧಾವಿಸಿ ಬಂದು ಇವರಲ್ಲಿ ಪ್ರವೇಶಮಾಡಿತು; ಅದು ಇವರನ್ನು ಸುತ್ತುವರಿಯಿತು. ಇಂಗ್ಲೆಂಡದಲ್ಲಿದ್ದಾಗಲೂ ಈ ಅನುಭವವು ಕೆಲ ಸಲ ಬರುತ್ತಿತ್ತು. ೧೮೯೩ರಲ್ಲಿ ಅವರು ಭಾರತಕ್ಕೆ ಬಂದು ತಲುಪಿದಾಗ ಮಾತ್ರ ಈ ಅನುಭವವು ಅವರಿಂದ ತೊಲಗಿತು. ಹಾಗು ಆಗ ಅವರಿಗೆ ಬೇರೊಂದು ಬಗೆಯ ಅನುಭವವೇ ಉಂಟಾಗಿ ಅದು ಅವರನ್ನು ಬಹುಕಾಲ ಬಿಟ್ಟಿರಲಿಲ್ಲ.

ಈ ಹುಡುಗರು ದಾರ್ಜಿಲಿಂಗದಲ್ಲಿ ಎರಡು ವರ್ಷವೂ ಇದ್ದಿರಲಿಕ್ಕಿಲ್ಲ, ಅಷ್ಟರಲ್ಲಿ ೧೮೭೯ಕ್ಕೆ ಅವರ ತಂದೆ ತಾಯಿ ಶಿಕ್ಷಣಕ್ಕಾಗಿ ಅವರನ್ನು ಸಹೋದರಿ ಸರೋಜಿನಿಯೊಡನೆ ಇಂಗ್ಲೆಂಡಿಗೆ ಕರೆದೊಯ್ದರು. ಭಾರತೀಯ ಜೀವನದ ಇಲ್ಲವೆ ಸಂಸ್ಕೃತಿಯ ಸಂಪರ್ಕವೂ ಇರದ ಉತ್ತಮ ಆಂಗ್ಲವಿದ್ಯೆಯ ಫಲರೂಪವಾಗಿ ಮೆರೆಯುವ ಶಿಕ್ಷಣವನ್ನೇ ತಮ್ಮ ಮಕ್ಕಳು ಹೊಂದಬೇಕೆಂಬುದಾಗಿ ಡಾ. ಕೃಷ್ಣಧನರ ಅಭಿಲಾಷೆಯಾಗಿತ್ತು. ಇವರೆಲ್ಲರು ಇಂಗ್ಲೆಂಡದಲ್ಲಿ ಇದ್ದಾಗಲೆ ಸ್ವರ್ಣಲತಾದೇವಿಯವರಿಗೆ ಶ್ರೀ ಅರವಿಂದರ ತಮ್ಮ ಬಾರೀಂದ್ರ ಕುಮಾರನು ಹುಟ್ಟಿದುದು. ೧೯೦೮ರಲ್ಲಿ ನಡೆದ ಅಲಿಪೂರ ಬಾಂಬ ಪ್ರಕರಣದ ವಿಚಾರಣೆಯ ಕಾಲಕ್ಕೆ ಇವರ ವಕೀಲರು ಇವರ ಈ ಆಂಗ್ಲ ಜನ್ಮದ ಘಟನೆಯ ಲಾಭ ಪಡೆದದ್ದುಂಟು.

ಶ್ರೀ ಅರವಿಂದರ ಇಬ್ಬರು ಅಣ್ಣಂದಿರು ಮ್ಯಾಂಚೆಸ್ಟರದಲ್ಲಿದ್ದ ಗ್ರಾಮರ ಸ್ಕೂಲಿಗೆ ಹೋದರು. ಹಾಗು ಆಗ ಎಲ್ಲರಿಗಿಂತ ಚಿಕ್ಕವರಾಗಿದ್ದ ೭ ವರುಷದ ಅರವಿಂದಕುಮಾರರು ಡ್ರೂವೆಟ್ ಎಂಬ ದಂಪತಿಗಳ ವಶಕ್ಕೆ ಒಪ್ಪಿಸಲ್ಪಟ್ಟು ಅವರ ವಾತ್ಸಲ್ಯದ ರಕ್ಷಣೆಯಲ್ಲಿ ಬೆಳೆಯತೊಡಗಿದರು. ಶ್ರೀಯುತ ಡ್ರೂವೆಟ್ಟರು ಉತ್ತಮ ಲ್ಯಾಟಿನ್ ಪಂಡಿತರು. ಈ ಚಿಕ್ಕ ಭಾರತೀಯನು ಲ್ಯಾಟಿನ್ ಭಾಷೆಯ ಬಗ್ಗೆ ಒಳ್ಳೆ ಅಭಿಲಾಷೆಯುಳ್ಳ ಚುರುಕು ವಿದ್ಯಾರ್ಥಿಯೆಂದು ಅವರಿಗೆ ಕಂಡುಬಂದಿತು.

[illegible]

The time for your turning to the spiritual life depends upon your own aspiration. A sincere aspiration brings always its response, and if there is continuity in the will, the result cannot fail.

Sri Aurobindo

[illegible]

[illegible]

ಶಿಕ್ಷಣವೆಲ್ಲವೂ ಮನೆಯಲ್ಲಿಯೆ ನಡೆಯುತಿದ್ದುದರಿಂದ ಈ ಬಾಲವಿದ್ಯಾರ್ಥಿಗೆ ಸಾಕಷ್ಟು ಸಮಯವು ಸಿಗುತಿತ್ತು; ಹೀಗೆ ಸಿಕ್ಕ ಸಮಯವನ್ನೆಲ್ಲ ಆತನು ಬಾಯ್‌ಬಲ್ಲನ್ನೂ ಶೆಕ್ಸಪಿಯರ್, ಶೆಲೆ, ಕೀಟ್ಸ ಮೊದಲಾದವರ ಕೃತಿಗಳನ್ನೂ ಓದುವದರಲ್ಲಿ ಉಪಯೋಗಿಸುತಿದ್ದನು. ಆಗ ಅರವಿಂದಕುಮಾರನಲ್ಲಿ ಧರ್ಮದ ಬಗೆಗಾಗಲಿ ತತ್ತ್ವಜ್ಞಾನದ ಬಗೆಗಾಗಲಿ ಯಾವ ಒಲವೂ ಇರಲಿಲ್ಲ. ಈ ಬಾಲಕನ ಕಣ್ಣಿಗೆ ಭಾರತೀಯರು ಬೀಳತಕ್ಕದ್ದಲ್ಲವೆಂದೂ ಭಾರತೀಯ ವಿಷಯಗಳ ಸಂಪರ್ಕವೆ ಇವನಿಗೆ ಬರತಕ್ಕದ್ದಲ್ಲವೆಂದೂ ಡ್ರ್ಯೂವೆಟ್ ದಂಪತಿಗಳಿಗೆ ಕಟ್ಟುನಿಟ್ಟಾಗಿ ತಿಳಿಸ-ಲಾಗಿತ್ತು. ಬಾಲ ಅರವಿಂದನಿಗೆ ಕ್ರೈಸ್ತ ದೀಕ್ಷೆ ಕೊಡುವ ಒಂದು ಸಣ್ಣ ಪ್ರಯತ್ನ-ವನ್ನು ಶ್ರೀಮತಿ ಡ್ರ್ಯೂವೆಟ್ ಮಾಡಿದರು. ಆದರೆ ಅವರ ಪತಿಯು ಅದಕ್ಕೆ ಪ್ರೋತ್ಸಾಹಕೊಡಲಿಲ್ಲ. ಕೆಲಕಾಲ ಅರವಿಂದಕುಮಾರನನ್ನು ಅರವಿಂದ ಅಕ್ರಾಯಿಡ್ ಘೋಷ ಎಂದು ಕರೆಯಲಾಗುತಿತ್ತು. ಏಕೆಂದರೆ ಆ ಹೆಸರಿನ ಒಬ್ಬ ಶಿಕ್ಷಕರ ಬಳಿಯಲ್ಲಿ ಆತನ ಶಿಕ್ಷಣವು ನಡೆದಿತ್ತು. ಈ ಹೆಸರು ತಂದೆಗೆ ಬಹಳ ಸೇರುತಿ-ತ್ತಾದರೂ ಮುಂದೆ ಶ್ರೀ ಅರವಿಂದರೆ ಈ ಹೆಸರಿಗೆ ಹೇಸಿ ಅದನ್ನು ಬಿಟ್ಟುಕೊಟ್ಟರು.

ಅರವಿಂದಕುಮಾರರು ಬಹು ಬೇಗ ಬೇಗ ಲ್ಯಾಟಿನ್ ಕಲಿತು ಅದರಲ್ಲಿ ಬಹಳ ಪ್ರಗತಿಯನ್ನು ಹೊಂದಿದರು. ಡ್ರ್ಯೂವೆಟ್ ದಂಪತಿಗಳು ಆಸ್ಟ್ರೇಲಿಯಕ್ಕೆ ತೆರಳಿದ ಬಳಿಕ ೧೮೮೪ರಲ್ಲಿ ಲಂಡನ್ ನಗರದ ಸೆಂಟ್ ಪಾಲ್ ಸ್ಕೂಲಿನಲ್ಲಿ ಶ್ರೀ ಅರವಿಂದರು ಪ್ರವೇಶ ಪಡೆದಾಗ ಆ ಶಾಲೆಯ ಮುಖ್ಯಾಧ್ಯಾಪಕರು ಈ ಬಾಲಕನ ಶೀಘ್ರ ಗ್ರಹಣಶಕ್ತಿಗೆ ಬೆರಗಾಗಿ, ಅತ್ಯಂತ ಪ್ರೀತಿಯಿಂದ ಸ್ವಯಂಪ್ರೇರಣೆಯಿಂದಲೆ ಬಾಲ ಅರವಿಂದರಿಗೆ ಗ್ರೀಕ್ ಭಾಷೆ ಕಲಿಸಲು ಮೊದಲು ಮಾಡಿದರು. ಈ ಬೃಹತ್ ಭಾಷೆಯಲ್ಲಿ ಸಹ ಇವರ ಪ್ರಗತಿಯು ಆಶ್ಚರ್ಯಕಾರಕವಾಗಿ ಸಾಗಿ ಬೇಗ ಬೇಗ ವರ್ಗದಿಂದ ವರ್ಗಕ್ಕೆ ಅತಿ ಸುಲಭವಾಗಿ ಏರುತ್ತ ನಡೆದರು.

ಇಷ್ಟು ಚಿಕ್ಕ ವಯಸ್ಸಿನಲ್ಲಿ ಇಂಗ್ಲಿಷಲ್ಲದೆ ಲ್ಯಾಟಿನ್-ಗ್ರೀಕ್ ಭಾಷೆಗಳಲ್ಲಿಯೂ ಪ್ರಭುತ್ವ ಗಳಿಸಿದ್ದನ್ನೂ ಶಾಲೆಯಲ್ಲಿ ಸುಲಭ ಪ್ರಗತಿಯನ್ನು ಸಾಧಿಸಿದ್ದನ್ನೂ ನೋಡಿದರೆ ಒಂದು ಸಂಗತಿಯು ಅತ್ಯಂತ ಸ್ಪಷ್ಟವಾಗಿ ಗೋಚರಿಸುವದು ; ಅದೆಂದರೆ ಅವರ ಅಸಾಮಾನ್ಯ ಬುದ್ಧಿಮತ್ತೆ ಮತ್ತು ಭಾಷೆಗಳನ್ನು ಕಲಿಯುವ ಅವರ ಅಗಾಧ ಸಾಮರ್ಥ್ಯ. ಅವರ ಸ್ವಭಾವದ ಹಾಗು ಹೃದಯಗುಣದ ಬಗ್ಗೆ ಎಲ್ಲಿಯೂ ಉಲ್ಲೇಖವಿಲ್ಲದಿದ್ದರೂ ಅವರು ಸೌಮ್ಯ, ಪ್ರೇಮಲ ಸ್ವಭಾವದವರೆಂದೂ ತನ್ನದೇ ಸರಿ ತನ್ನದೇ ನಡೆಯಬೇಕೆಂಬ ದುರಾಗ್ರಹಕ್ಕೆ ಎಂದೂ ತುತ್ತಾದವರಲ್ಲವೆಂದೂ ಪ್ರತೀತಿಯಿದೆ. ಅವರದು ನಾಲ್ಕು ಜನರೊಡನೆ ಬೆರೆತು ಚೆಲ್ಲಾಟವಾಡುವ ಪ್ರವೃತ್ತಿಯಲ್ಲ, ಸಂಯಮದ ಸ್ವಭಾವ ; ಅವರು ಹೆಚ್ಚಾಗಿ ಏಕಾಂತಪ್ರಿಯರು, ಅವರು ಅಭ್ಯಾಸಮಗ್ನ ಶಾಂತ ವಿದ್ಯಾರ್ಥಿ, ಮತ್ತು ಸದಾ ಕಲ್ಪನಾಲೋಕದಲ್ಲಿಯೂ ಆದರ್ಶ-

ಗಳಲ್ಲಿಯೂ ತಲ್ಲೀನರಾದವರು. ಆ ವಯಸ್ಸಿನಲ್ಲಿ ಅವರು ಅಂತರ್ಮುಖಿಯೆಂದೂ ಧ್ಯಾನಲೀನರೆಂದೂ ವರ್ಣಿಸಿದರೆ ಅದು ಅತಿಶಯೋಕ್ತಿಯೆಂದು ತೋರಬಹುದು. ಆದರೆ ಅವರು ಆ ವರ್ಗಕ್ಕೆ ಸೇರಿದವರಲ್ಲದೆ ಇನ್ನು ಬೇರೆ ವರ್ಗಕ್ಕಲ್ಲ ಎಂಬಲ್ಲಿ ಯಾವ ಸಂದೇಹವೂ ಇಲ್ಲ. ಈ ಸಂದರ್ಭದಲ್ಲಿ ಒಂದು ಸಂಗತಿಯನ್ನು ಎತ್ತಿ ತೋರಿಸ ಬಹುದಾಗಿದೆ. ಹದಿಮೂರು ವರ್ಷದವರಿರುವಾಗಲೆ ಅವರಿಗೆ ಸ್ವಾರ್ಥವನ್ನು ಕಳಚಿ ಎಸೆಯಬೇಕೆಂಬ ಪ್ರೇರಣೆಯಾಗಿ ತ್ಯಾಗದ ಪ್ರವೃತ್ತಿಯು ಪ್ರಾರಂಭವಾಯ್ತು.

ಮ್ಯಾಂಚೆಸ್ಟರದಲ್ಲಿ ಡ್ರೂವೆಟ್ ದಂಪತಿಗಳ ಬಳಿಗಿದ್ದಾಗಲೂ ಲಂಡನದಲ್ಲಿ ಸೆಂಟ್ ಪಾಲ್ ಸ್ಕೂಲಿನಲ್ಲಿದ್ದಾಗಲೂ ಈ ಬಾಲ ವಿದ್ವಾಂಸನು ತನ್ನ ಅಪ್ರತಿಮ ಮೇಧಾಬಲದಿಂದ, ಸೌಮ್ಯ ಸುಸ್ವಭಾವದಿಂದ ತಾನೇ ತಾನಾಗಿ ಮಿನುಗು ತಿದ್ದನು. ಈ ಎಲ್ಲ ಸಹಜ ಸದ್ಗುಣಗಳ ಮೂಲಕ, ಸೆಂಟ್ ಪಾಲ್ ಶಾಲೆಯಲ್ಲಿ ನಾಲ್ಕನೆಯ ವರುಷದ ಕೊನೆಗೆ ೧೮೮೯ ರಲ್ಲಿ ಹದಿನೇಳು ವರುಷಗಳಷ್ಟು ಎಳೆಯ ವಯಸ್ಸಿನಲ್ಲಿಯೆ, ಕೆಂಬ್ರಿಜ್ ಕಿಂಗ್ಸ ಕಾಲೇಜದ 'ಸೀನಿಯರ್ ಕ್ಲಾಸಿಕಲ್ ಸ್ಕಾಲರಶಿಪ್' ಎಂಬ ಉಚ್ಚ ಶ್ರೇಣಿಯ ಗ್ರೀಕ್-ಲ್ಯಾಟಿನ್ ಸಂಬಂಧದ ಶಿಷ್ಯವೇತನವನ್ನು ಸಂಪಾದಿಸಿದರು. ಅದರ ವಾರ್ಷಿಕ ಮೌಲ್ಯ ೮೦ ಪೌಂಡು ಗಳಷ್ಟು. ಕೇಂಬ್ರಿಜದಲ್ಲಿ ಇವರು ಪ್ರವೇಶಿಸುತ್ತಲೆ ಆ ವಿಶ್ವವಿದ್ಯಾಲಯದಲ್ಲಿ ವಿಖ್ಯಾತರಾಗಿದ್ದ ಆಸ್ಕರ್ ಬ್ರೌನಿಂಗ್ ಎಂಬವರು ಇವರ ಪ್ರಖರ ಬುದ್ಧಿಮತ್ತೆ ಯನ್ನು ಕಂಡುಹಿಡಿದರು.

ಮ್ಯಾಂಚೆಸ್ಟರದಲ್ಲಿದ್ದಾಗಲೂ ಸೆಂಟ್ ಪಾಲ್ ಶಾಲೆಯಲ್ಲಿದ್ದಾಗಲೂ ಇಂಗ್ಲಿಷ್ ಭಾಷೆಯ ಮತ್ತು ಗ್ರೀಕ್-ಲ್ಯಾಟಿನ್ ಅಭಿಜಾತ ಸಾಹಿತ್ಯದ ಅಭ್ಯಾಸದತ್ತ ಗಮನ-ವಿತ್ತಿದ್ದರು. ಬರಬರುತ್ತ ತಮ್ಮ ವರ್ಗದ ಅಭ್ಯಾಸದ ಬಗ್ಗೆ ಸಂಪೂರ್ಣ ಭರವಸೆ ಯುಂಟಾಗುತ್ತಲೆ ಅವರು ತಮ್ಮ ವಾಚನದ ಪರಿಮಿತಿಯನ್ನು ಇನ್ನೂ ಹೆಚ್ಚಿಸಿ ಸಾಹಿತ್ಯ ಹಾಗು ಇನ್ನುಳಿದ ಸಾಮಾನ್ಯ ವಿಷಯಗಳಲ್ಲದೆ ಇಂಗ್ಲಿಷ್ ಮತ್ತು ಫ್ರೆಂಚ್ ಸಾಹಿತ್ಯದ ಜೊತೆಗೆ ಯುರೋಪದ ಆಮೂಲಾಗ್ರ ಇತಿಹಾಸವನ್ನು ಅಭ್ಯಸಿಸಲು ವಿಶೇಷ ಲಕ್ಷ್ಯ ಹಾಕಿದರು. ಇಟಾಲಿಯನ್, ಜರ್ಮನ್, ಭಾಷೆಗಳನ್ನು ಅಭ್ಯಸಿಸಲಿಕ್ಕೂ ಅವರು ಕೆಲ ಕಾಲವನ್ನು ಮುಡುಪಿಟ್ಟರು. ಸ್ಫುಟವಾಗಿ ಕಾಣುವ ಒಂದು ಮಹತ್ವದ ಸಂಗತಿಯೆಂದರೆ ಅವರು ಕೇವಲ ಹದಿನಾಲ್ಕು ವರುಷದವರಿದ್ದಾಗಲೆ ಕವಿತೆ ಕಟ್ಟಲು ತೊಡಗಿ ಅದಕ್ಕಾಗಿ ಅವರು ಸಾಕಷ್ಟು ಸಮಯವನ್ನು ಮೀಸಲಿಟ್ಟರು. 'ಹೆಕ್ಯೂಬಾ (Hecuba)' ಎಂಬುದು ಅವರ ಮೊದಲ ಕವನವಾಗಿದ್ದು ಅದು ಲಾರೆನ್ಸ ಬಿನಿಯನ್ ಎಂಬವರಿಗೆ ತುಂಬ ಮೆಚ್ಚಿಗೆ-ಯಾಯ್ತೆಂದು ತೋರುತ್ತದೆ.

ಶಾಲೆ ಕಾಲೇಜಿನ ಅಭ್ಯಾಸದಲ್ಲಿ ಇಷ್ಟೊಂದು ವ್ಯಗ್ರತೆಯುಂಟಾಗಿದ್ದರೂ ಕಿಂಗ್ಸ

ಕಾಲೇಜಿನ ಆ ವರ್ಷದ ಗ್ರೀಕ್ ಲ್ಯಾಟಿನ್ ಕಾವ್ಯದ ಬಗ್ಗೆ ಇಟ್ಟ ಎಲ್ಲ ಮೆಚ್ಚುಗಳನ್ನು ಇವರೇ ದೊರಕಿಸಿಕೊಂಡು ಬಿಟ್ಟರು. ಬಹುದೂರದ ಬ್ರಿಟಿಶ್ ವಿಶ್ವವಿದ್ಯಾಲಯದಲ್ಲಿ ತೀರ ವಿದೇಶೀಯ ಭಾಷೆಗಳಲ್ಲಿ ಅವರ ಕೈ ಎಷ್ಟು ಪಳಗಿತ್ತೆಂಬುದಕ್ಕೂ ಅವನ್ನವರು ಎಷ್ಟೊಂದು ಸುಲಭವಾಗಿ ಅವಗತಮಾಡಿಕೊಂಡಿದ್ದರೆಂಬುದಕ್ಕೂ ಅವರ ಈ ವಿಜಯವೆ ಸಾಕ್ಷಿ. ಬಾಲ್ಯದಲ್ಲಿಯೆ ಪರಿಪಕ್ವವಾದ ಅವರ ಧೀಶಕ್ತಿಗೂ ಯುರೋಪದ ಪ್ರಾಚೀನ ಭಾಷೆಗಳ ಸತ್ತ್ವವನ್ನೆ ಅಳವಡಿಸಿಕೊಂಡ ಅವರ ಸಾಮರ್ಥ್ಯಕ್ಕೂ ಪ್ರಮಾಣವೇ ಬೇಕಿದ್ದರೆ ಇದುವೆ ಪ್ರಮಾಣವಲ್ಲದೆ ಮತ್ತೇನು? ಗ್ರೀಕ್-ಲ್ಯಾಟಿನ್ ಭಾಷೆಗಳಲ್ಲಿ ಹೀಗೆ ಇವರು ವಿಶೇಷ ಪ್ರಾವೀಣ್ಯ ಪಡೆದರು. ಇನ್ನು ಅವರ ನಿತ್ಯದ ನಿರ್ದಿಷ್ಟ ಅಭ್ಯಾಸಕ್ರಮವು ಹೇಗೆ ಸಾಗಿತ್ತೆಂಬುದನ್ನಷ್ಟು ನೋಡುವಾ.

ಕ್ರೆಂಬ್ರಿಜ್ಜಿನಲ್ಲಿ ಟ್ರಾಯಪಾಸ್ (Tripos) ದ ಪ್ರಥಮ ಭಾಗವನ್ನು ಪ್ರಥಮ ಶ್ರೇಣಿಯ ಮೇಲ್ಮೆಯೊಂದಿಗೆ ಉತ್ತೀರ್ಣರಾದರು. ಸಾಮಾನ್ಯವಾಗಿ ಬಿ. ಏ. ಪದವಿಯು ಈ ಪ್ರಥಮ ಭಾಗದಲ್ಲಿ ತೇರ್ಗಡೆಯಾಗುತ್ತಲೆ ಕೊಡಲ್ಪಡುತ್ತದೆ; ಆದರೆ ಅದನ್ನು ಮೂರನೆಯ ವರ್ಷದಲ್ಲಿ ಪಡೆದುಕೊಳ್ಳಬೇಕು. ಆ ಕಾಲೇಜಿನಲ್ಲಿ ಸೇರಿದ ಮೇಲೆ ಅವರಿಗೆ ಅಲ್ಲಿ ಎರಡೇ ವರ್ಷ ಇದ್ದ ಕಾರಣ ಅವರು ಆ ಪರೀಕ್ಷೆಯಲ್ಲಿ ಎರಡನೆಯ ವರ್ಷವೆ ತೇರ್ಗಡೆ ಹೊಂದಿದ್ದರು. ವಿದ್ಯಾರ್ಥಿಯು ಹೀಗೆ ಎರಡನೆಯ ವರ್ಷವೆ ತೇರ್ಗಡೆ ಹೊಂದಿದ ಸಂದರ್ಭದಲ್ಲಿ ಟ್ರಾಯಪಾಸದ ದ್ವಿತೀಯ ಭಾಗದ ಪರೀಕ್ಷೆಗೆ ನಾಲ್ಕನೆಯ ವರ್ಷ ಕಟ್ಟಿ ಆ ಪದವಿಗೆ ಅರ್ಹತೆಯನ್ನು ಪಡೆಯಬೇಕಾಗುತ್ತದೆ. ಈ ಪದವಿಯನ್ನು ಪಡೆಯುವ ಇನ್ನೊಂದು ಮಾರ್ಗವೆಂದರೆ ಅದಕ್ಕಾಗಿ ಬರೆದು ಬೇಡಿಕೊಳ್ಳುವದು. ಆದರೆ ಅವರು ಹಾಗೆಲ್ಲ ಮಾಡುವ ಗೋಜಿಗೆ ಹೋಗಲಿಲ್ಲವೆಂಬುದು ಸ್ಪಷ್ಟವೆ ಇದೆ; ಏಕೆಂದರೆ ಅವರಿಗೆ ವಿಶ್ವವಿದ್ಯಾಲಯದಲ್ಲಿ ಅಧ್ಯಾಪನವ್ಯವಸಾಯವನ್ನು ಅನುಸರಿಸುವ ಇಚ್ಛೆಯೆ ಇರಲಿಲ್ಲ. ವಿಶ್ವವಿದ್ಯಾಲಯದ ಸೀಮೆಯ ಹೊರಗೆ ಈ ಬಗೆಯ ಪದವಿಗಳಿಗೆ ಇಂಗ್ಲಂಡದಲ್ಲಿ ಬೆಲೆಯೆ ಇಲ್ಲ.

ಆನುಷಂಗಿಕವಾಗಿ ಒಂದು ಸಂಗತಿಯನ್ನು ಹೇಳುವದು ಅಗತ್ಯವಾಗಿದೆ. ತಂದೆಯ ಇಚ್ಛೆಯ ಮೇರೆಗೆ ಹಾಗು ಯಾವ ಶಿಕ್ಷಕರ ಸಹಾಯವೂ ಇಲ್ಲದೆ ಶ್ರೀ ಅರವಿಂದರು 'ಇಂಡಿಯನ್ ಸಿವಿಲ್ ಸರ್ವಿಸ್' ದ ಬಹಿರಂಗ ಸ್ಪರ್ಧೆಯಲ್ಲಿ ಭಾಗವಹಿಸಿ ಅದರಲ್ಲಿ ಶ್ರೇಷ್ಠ ಶ್ರೇಣಿಯಲ್ಲಿ ಉತ್ತೀರ್ಣರಾದರು. ಆದರೆ ಅಶ್ವಾರೋಹಣದ ವಿಷಯದಲ್ಲಿ ಅವರು ಅಷ್ಟೊಂದು ಲಕ್ಷ್ಯ ಪೂರೈಸಿದ್ದಿಲ್ಲ. ತತ್ಪರಿಣಾಮವಾಗಿ ಅವರು ಈ ವಿಷಯದ ಪ್ರಥಮ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಲಿಲ್ಲ. ಬಹುತರವಾಗಿ ಎರಡನೆಯ ಸಲ ಇನ್ನೊಂದು ಅವಕಾಶವನ್ನು ಕೊಡುವ ಪರಿಪಾಠವಿರುತ್ತದೆ; ಆದರಲ್ಲೂ ವಿದ್ಯಾರ್ಥಿಯು ಇನ್ನುಳಿದ ವಿಷಯಗಳಲ್ಲಿ ತೇಜಸ್ವಿಯಾಗಿದ್ದರೆ ಎರಡನೆಯ ಅವಕಾಶ ನಿಶ್ಚಿತ. ಇವರಂಥ ಸರ್ವಶ್ರೇಷ್ಠ ವಿದ್ಯಾರ್ಥಿಗಂತೂ ಅದು ಕೇವಲ

ಕೇಳಿದಾಕ್ಷಣವೆ ದೊರೆಯುತಿತ್ತು. ಆದರೆ ಅವರು ಅದನ್ನು ಗಣನೆಗೆ ಸಹ ತಾರದೆ ಹೋದರೆಂಬುದು ಮೇಲೆಯೆ ಕಾಣುತ್ತದೆ. ಅವರಿಗೆ ಈ ಪರೀಕ್ಷೆಯ ಫಲಿತಾಂಶವು ಗೊತ್ತಾಗುತ್ತಲೆ ಬಂಧು ಬಿನಯನಿಗೆ ತಿಳಿಸಿದರು. ಇಬ್ಬರೂ ನಿರ್ಲಿಪ್ತರಾಗಿ ಇಸ್ಪೀಟಾಡುತ್ತ ಈ ಮಾತನ್ನು ತಂಬಾಕಿನ ಹೊಗೆಯಲ್ಲಿ ಹಗುರಾಗಿ ಹಾರಿಸಿಬಿಟ್ಟರು. ಮನಮೋಹನನು ಮಾತ್ರ ಈ ವಿಫಲತೆಯನ್ನು ಗಂಭೀರವಾಗಿ ಗ್ರಹಿಸಿ ಅವರನ್ನು ತುಂಬ ಬೈದನು. ತಂದೆಯು ಆಯ್. ಸಿ. ಎಸ್. ಜೀವನಕ್ರಮ ವನ್ನೆ ಮಗನಿಗಾಗಿ ಗೊತ್ತುಪಡಿಸಿಕೊಟ್ಟಿದ್ದರೂ ಶ್ರೀ ಅರವಿಂದರು ಆ ಬಗ್ಗೆ ಅಷ್ಟೊಂದು ಆಸ್ಥೆ ವಹಿಸಿದ್ದಿಲ್ಲವೆಂದು ತೋರುತ್ತದೆ. ವಸ್ತುತಃ ಅಶ್ವಾರೋಹಣದ ಪರೀಕ್ಷೆಯಲ್ಲಿ ಅವರು ಬೇಕೆಂದೆ ಸೋತರೆಂದೂ ತನ್ಮೂಲಕ ಆ ಆಯ್. ಸಿ. ಎಸ್. ಜೀವನಕ್ರಮವನ್ನು ಬೇಕೆಂದೆ ತಪ್ಪಿಸಿಕೊಂಡರೆಂದೂ ಗ್ರಹಿಕೆಯಿದೆ. ಹೀಗೆ ಅವರು ಬೇರೊಂದು ಬಗೆಯ ಧ್ಯೇಯಸಿದ್ಧಿಗಾಗಿ ನಿಯೋಜಿತರಾಗಿದ್ದರೆಂದು ಹೇಳಬೇಕಾಗು ವದು. ಬಹುತರವಾಗಿ ಅವರ ಆ ಜೀವನಧ್ಯೇಯವೆ ತನ್ನ ದಾರಿಯನ್ನು ಅಡ್ಡಗಟ್ಟುವ ಅಡ್ಡಿ ಆತಂಕಗಳನ್ನೆಲ್ಲ ತೊಲಗಿಸುತಿತ್ತೆಂದು ಎನ್ನಬಹುದಾಗಿದೆ.

ಅಂತೂ ತಮ್ಮ ಮಾತೃಭಾಷೆ ಅಥವಾ ಇನ್ನಾವ ಭಾರತೀಯ ಭಾಷೆ ಬಾರ ದಿದ್ದರೂ ಕ್ರಿ. ಶ. ೧೮೯೩ ರಲ್ಲಿ ಅಂದರೆ ವಯಸ್ಸಿನ ೨೧ನೆಯ ವರ್ಷದ ಹೊತ್ತಿಗೆ, ಇಂಗ್ಲಿಷ್ ಭಾಷೆಯ ಜೊತೆಗೆ ಯುರೋಪದ ಎರಡು ಅತ್ಯಂತ ವೈಭವಸಂಪನ್ನ ಭಾಷೆಗಳಾದ ಲ್ಯಾಟಿನ್-ಗ್ರೀಕಗಳ ಮೇಲೆ ಪ್ರಭುತ್ವ ಸಂಪಾದಿಸಿಕೊಂಡು ಇನ್ನುಳಿದ ಬೌದ್ಧಿಕ ವಿದ್ಯಾಬಲವನ್ನೂ ಸ್ವಾಧೀನ ಮಾಡಿಕೊಂಡಿದ್ದರು. ಅಲ್ಲದೆ ಯುರೋಪದ ಅಂದಿನ ಮಹತ್ವದ ಭಾಷೆಗಳಾದ ಫ್ರೆಂಚ್, ಇಟಾಲಿಯನ್, ಮತ್ತು ಜರ್ಮನ್ ಭಾಷೆಗಳನ್ನು ಸಾಕಷ್ಟು ಚೆನ್ನಾಗಿ ಅರಿತುಕೊಂಡಿದ್ದರು. ಇಂಗ್ಲಿಷ ಲ್ಯಾಟಿನ್ ಗ್ರೀಕ ಭಾಷೆಗಳ ಮೇಲಿನ ಅವರ ಪ್ರಭುತ್ವವಂತೂ ಅಸಾಮಾನ್ಯವೆ ಆಗಿತ್ತು. ಆಗಲೆ ಇಂಗ್ಲಿಷ್ ಭಾಷೆಯಲ್ಲಿ ಉತ್ತಮ ತರಗತಿಯ ಕವಿತಾರಚನೆಯನ್ನು ಧಾರಾಳ ವಾಗಿ ಮಾಡುತಿದ್ದರಲ್ಲದೆ, ಗ್ರೀಕ್-ಲ್ಯಾಟಿನ್ ಭಾಷೆಗಳಲ್ಲಿ ಸಹ ತಾವು ನಿರಾಯಾಸವಾಗಿ ಕಾವ್ಯ ರಚಿಸಬಲ್ಲವರೆಂಬುದನ್ನು ತಮ್ಮ ಅಧ್ಯಾಪಕ ವರ್ಗದ ಗಮನಕ್ಕೆ ತಂದುಕೊಟ್ಟಿದ್ದರು. ಟ್ರಾಯ್‌ಪಾಸ್‌ದಲ್ಲಿ ಉತ್ತುಂಗ ಶ್ರೇಣಿಯಲ್ಲಿ ಉತ್ತೀರ್ಣರಾಗಿ ಅಶ್ವಾರೋಹಣವನ್ನೊಂದು ಉಳಿದು ಆಯ್. ಸಿ. ಎಸ್. ಸ್ಪರ್ಧಾ-ಪರೀಕ್ಷೆಯಲ್ಲಿ ಅಸಾಧಾರಣ ವಿಜಯಪಡೆದಿದ್ದರು. ಅವರ ವಿದ್ಯಾರ್ಥಿಜೀವನದ ಪ್ರಾರಂಭವು ದಾರ್ಜಿಲಿಂಗಿನ ಕಾನ್‌ವ್ಹೆಂಟ್ ಸ್ಕೂಲಿನ ವಿದ್ಯಾರ್ಥಿನಿಲಯದಲ್ಲಿ ಬ್ರಿಟಿಶ ಮಕ್ಕಳ ಸಹವಾಸದಲ್ಲಿ ಹಿಮಾಲಯದ ನಯನಮನೋಹರ ಪರಿಸರದಲ್ಲಿ ಕಳೆ ಯಿತು. ಆ ಬಳಿಕ, ಕೆಲ ಅವಧಿಯು ಮ್ಯಾಂಚೆಸ್ಟರದಲ್ಲಿ ಡ್ರೂವೆಟ್ ದಂಪತಿಗಳ ವಾತ್ಸಲ್ಯದ ರಕ್ಷಣೆಯಲ್ಲಿ ಕಳೆಯಿತು. ಆಮೇಲೆ ಅವರು ಲಂಡನ್ನಿನಲ್ಲಿ ಸೆಂಟ್

ಪಾಲ್ ಶಾಲೆಗೂ ಕೊನೆಗೆ ಕೇಂಬ್ರಿಜ್ಜಿನ ಕಿಂಗ್ಸ್ ಕಾಲೇಜಕ್ಕೂ ಹೋದರು. ಅವರ ಅಂದಿನ ಇಪ್ಪತ್ತೊಂದು ವರ್ಷಗಳ ಜೀವನದಲ್ಲಿ ಹದಿನಾಲ್ಕು ವರ್ಷಗಳಷ್ಟು ಕಾಲವು ಇಂಗ್ಲೆಂಡದಲ್ಲೇ ಕಳೆಯಿತು. ಅದರಲ್ಲೂ ಕೆಲ ವರ್ಷ ಇಂಗ್ಲಿಷ್ ಸದ್ಗೃಹಸ್ಥರೊಬ್ಬರ ಮನೆಯಲ್ಲಿ, ಇನ್ನು ಕೆಲ ವರ್ಷ ಬ್ರಿಟಿಶರ ವಿದ್ಯಾರ್ಥಿನಿಲಯಗಳಲ್ಲಿ. ಹಿಂದುಸ್ಥಾನದಲ್ಲಿ ಕಳೆದ ಚಿಕ್ಕಂದಿನ ಏಳು ವರ್ಷಗಳಲ್ಲಿ ಎರಡು ವರ್ಷ ಒಂದು ಕಾನ್ವೆಂಟ್ ಶಾಲೆಯಲ್ಲಿದ್ದುಬಿಟ್ಟಿದ್ದರು! ಈ ಬಗೆಯಾಗಿ ತಿದ್ದಿದಂತೆ ರೂಪ ತೊಡುವ ಬಾಲ್ಯ ಕೌಮಾರ್ಯಗಳನ್ನು ಶ್ರೀ ಅರವಿಂದರು ಇಂಗ್ಲೆಂಡದಲ್ಲಿಯೊ ಇಲ್ಲವೆ ಹಿಂದುಸ್ಥಾನದಲ್ಲಿದ್ದರೂ ಇಂಗ್ಲಿಷರ ಪ್ರಭಾವವುಳ್ಳ ಪರಿಸರದಲ್ಲಿಯೊ ಕಳೆದರು. ಹಾಗು ಈ ಅವಧಿಯುದ್ದಕ್ಕೂ ಆಂಗ್ಲ ಇಲ್ಲವೆ ಐರೋಪ್ಯ ಭಾಷಾವ್ಯಾಸಂಗದಲ್ಲಿಯೆ ತೊಡಗಿದ್ದರು. ಆಗ ಅವರು ಭಾರತೀಯ ಗ್ರೀಕ ಅಥವಾ ಜರ್ಮನ್ ತತ್ತ್ವಜ್ಞಾನದ ಅಭ್ಯಾಸ ಮಾಡಿದವರಲ್ಲ; ಪ್ಲೇಟೋನ 'ರಿಪಬ್ಲಿಕ್ (Republic)' ಮತ್ತು 'ಸಿಂಪೋಜಿಯಂ (Symposium)' ಗ್ರಂಥಗಳನ್ನು ಮಾತ್ರ ಓದಿಕೊಂಡಿದ್ದರು. ಹೆರಾಕ್ಲಿಟಸ್ (Heraclitus), ಸಂಸ್ಕೃತ ಹಾಗು ಇನ್ನಿತರ ವಿಷಯಗಳ ಅಭ್ಯಾಸವು ನಡೆದುದು ಅವರು ಹಿಂದುಸ್ಥಾನಕ್ಕೆ ಮರಳಿ ಬಂದ ಮೇಲೆಯೆ. ಅವರು ತಮ್ಮ ಮನೆಯಲ್ಲಿ ಇರಬೇಕಾಗಿ ಬಂದಾಗಲೂ ಮನೆಯ ವಾತಾವರಣವೆಲ್ಲ ಬ್ರಿಟಿಶ್ ಮತ್ತು ಯುರೋಪಿಯನ್ ವಿಷಯಗಳ ಮೇಲಿನ ಪ್ರೇಮಾಭಿಮಾನಗಳಿಂದ ತುಂಬಿ ತುಳುಕುತಿತ್ತು. ಅವರ ತಂದೆಯವರಂತೂ ಪಕ್ಕಾ ಸಾಹೇಬರು. ಈ ಮೂಲಕವಾಗಿಯೊ ಅಥವಾ ಇದರಿಂದುಂಟಾದ ತೀವ್ರ ಪ್ರತಿಕ್ರಿಯೆಯ ಮೂಲಕವಾಗಿಯೊ ಮುಂದೆ ಶ್ರೀ ಅರವಿಂದರು 'ಭಾರತೀಯ ಸಂಸ್ಕೃತಿಯ ಸಮರ್ಥನೆಗಾಗಿ' ತಮ್ಮ ಉಜ್ವಲ ವಾಗ್ವೈಖರಿಯನ್ನು ಹೊರಹೊಮ್ಮಿಸಿದರು. ಆದರೆ ಅವರ ಆ ಸ್ವರದಲ್ಲಿ ಪಾಶ್ಚಾತ್ಯರ ವಿಷಯಕ್ಕೆ ತಿರಸ್ಕಾರಭಾವವು ಸ್ವಲ್ಪವಾದರೂ ಇರಲಿಲ್ಲ; ಇಷ್ಟೆ ಅಲ್ಲ, ಪಾಶ್ಚಾತ್ಯ ಸಂಸ್ಕೃತಿಯ ಮತ್ತು ಸಭ್ಯತೆಯ ಕೆಲವೊಂದು ಅಂಶಗಳಬಗ್ಗೆ ತುಂಬ ಮೆಚ್ಚುಗೆಯೂ ಮಮತೆಯೂ ಅಲ್ಲಿ ವ್ಯಕ್ತವಾದುದು ಕಂಡುಬರುತ್ತದೆ. ಅವರ ದೃಷ್ಟಿಯು ಓರ್ವ ಪರಿಣತ ವ್ಯಕ್ತಿಯ ಸರ್ವವ್ಯಾಪಕವಾದ ಸಹಾನುಭೂತಿಪರ ಉದಾರ ದೃಷ್ಟಿಯು. ಅವರದು ಕೇವಲ ಪೌರ್ವಾತ್ಯರ ಪ್ರಸ್ಥವನ್ನೆ ಎತ್ತಿಹಿಡಿಯುವ ಸ್ವರವಾಗಿದ್ದಿಲ್ಲ. ಪೌರ್ವಾತ್ಯರ ಉತ್ತಮಾಂಶಗಳನ್ನು ಕೊಂಡಾಡುತಿರುವಂತೆಯೆ ಸಮಸ್ತ ಮಾನವಕೋಟಿಯ ಕಲ್ಯಾಣಕ್ಕಾಗಿ ಪೂರ್ವ ಪಶ್ಚಿಮಗಳ ಪೂರ್ಣ ಸಮನ್ವಯಕ್ಕಾಗಿ ಎತ್ತಿದ ಸ್ವರವದು. ಅವರು ಪೌರ್ವಾತ್ಯರನ್ನು ಪ್ರೀತಿಸಿದಂತೆ ಪ್ರವೃತ್ತಿಮಾರ್ಗದ ಪಾಶ್ಚಾತ್ಯರನ್ನು ಅಷ್ಟೇ ಬಲವಾಗಿ ಮೆಚ್ಚಿದ್ದಾರೆ. ಅವರ ದೃಷ್ಟಿಯಲ್ಲಿ ಜಡವೂ ಜಡತಾವಾದವೂ ಆತ್ಮತತ್ತ್ವದ ಅವಸ್ಥಾಭೇದ ಮಾತ್ರ. ಮಾನವ ಜೀವನದ ಸಫಲತೆ-ಪರಿಪೂರ್ಣತೆಗಳು, ಶಾಸ್ತ್ರಶುದ್ಧವಾಗಿ ಸಾಗುವ

ಆಧ್ಯಾತ್ಮಿಕ ವಿಕಾಸಕ್ರಮದಲ್ಲಿಯೆ ಉಂಟೆಂಬುದು ಅವರ ನಂಬಿಗೆ. ಈ ಬಗೆಯ ವಿಕಾಸಕ್ರಮವೆ ಆಂತರಿಕ ಜೀವನವನ್ನೂ ಆಧ್ಯಾತ್ಮಿಕ ದೃಷ್ಟಿಯನ್ನೂ ಮಾರ್ಪಡಿಸುವದಲ್ಲದೆ ಬಹಿರಂಗ ಜೀವನವನ್ನೂ ಭೌತಿಕ ಅಸ್ತಿತ್ವವನ್ನೂ ಪರಿವರ್ತನಗೊಳಿಸುವದೆಂಬುದು ಅವರ ಮನವರಿಕೆ.

ಇಂಗ್ಲಂಡದಲ್ಲಿ ಶ್ರೀ ಅರವಿಂದರು ನಡೆಸಿದ ಬೌದ್ಧಿಕ ಹಾಗೂ ಇನ್ನುಳಿದ ವಿಷಯಗಳ ವ್ಯಾಸಂಗವಲ್ಲದೆ ಅಂದಿನ ಅವರ ಮನಃಪ್ರವೃತ್ತಿಯನ್ನು ಅರಿತುಕೊಳ್ಳುವದೂ ಅಲ್ಲಿ ಅವರ ಮನಸ್ಸನ್ನು ಸೆಳೆದ ಕೆಲವು ವಿಚಾರಲಹರಿಗಳನ್ನೂ ಘಟನೆಗಳನ್ನೂ ಉಲ್ಲೇಖಿಸುವದೂ ಚಿತ್ತಾಕರ್ಷಕ ವಿಷಯಗಳೆ ಸರಿ. ಇವುಗಳನ್ನು ನಾವು ಅವರ ಅಂದಿನ ಜೀವನಕ್ರಮದಿಂದಲೂ ಕವಿತೆ-ಲೇಖನಗಳಿಂದಲೂ ಇತರ ಚಟುವಟಿಕೆಗಳಿಂದಲೂ ಬಹುತರವಾಗಿ ಅನುಮಾನಿಸಿ ತಿಳಿಯಬಹುದಾಗಿದೆ.

ಇವರ ತಂದೆಯವರು ಸಾಮಾನ್ಯತಃ ಧಾರ್ಮಿಕರೆಂದು ಹೇಳಲು ಬರುವಂತಿಲ್ಲವಾದರೂ ಇನ್ನೊಂದು ದೃಷ್ಟಿಯಿಂದ ನೋಡಿದಾಗ ಇವರು ನಿಜವಾಗಿಯೂ ಧಾರ್ಮಿಕ ಪ್ರವೃತ್ತಿಯುಳ್ಳವರೆಂದು ಕಂಡುಬಂದಿದೆ. ಬಂದ ರೋಗಿಗಳನ್ನು ನಿಷ್ಠೆಯಿಂದ ಚಿಕಿತ್ಸೆಮಾಡುವದಲ್ಲದೆ ಎಷ್ಟೋ ಬಾರಿ ತಮ್ಮ ಹಣವನ್ನೆಲ್ಲ ರೋಗಿಗಳ ಸಲುವಾಗಿ ವೆಚ್ಚಮಾಡಿಬಿಡುತಿದ್ದರು. ಇದರಿಂದ ಇಂಗ್ಲಂಡದಂಥ ದೂರ ದೇಶದಲ್ಲಿದ್ದ ತಮ್ಮ ಮಕ್ಕಳಿಗೆ ನಿಯಮಿತವಾಗಿ ಹಣ ಕಳಿಸುವದು ಕೂಡ ಕಠಿಣವಾಗುತಿತ್ತು. ಇದರ ಪರಿಣಾಮವಾಗಿ ಎಷ್ಟೋ ಸಾರೆ ಶ್ರೀ ಅರವಿಂದರೂ ಅವರ ಅಣ್ಣಂದಿರೂ ಬಹಳ ಕಷ್ಟದಿಂದ ಕಾಲವನ್ನು ನೂಕಬೇಕಾಗಿ ಬರುತಿತ್ತು. ಹೀಗೆ ಅಲ್ಲಿ ಅವರು ಬಡತನ, ಕೊರತೆ ಎಂದರೆ ಏನೆಂಬುದರ ಅನುಭವವನ್ನು ಚೆನ್ನಾಗಿಯೆ ಪಡೆದಿದ್ದರೆನ್ನಬೇಕು. ಅರವಿಂದಕುಮಾರರು ಮಾತ್ರ ತಮ್ಮ ಈ ದುರವಸ್ಥೆಯನ್ನು ಮೌನವಾಗಿ ಸಹಿಸಿಕೊಳ್ಳುತಿದ್ದರಲ್ಲದೆ ದೂರಿಕೊಂಡು ಒಂದು ಮಾತನ್ನೂ ಸಿಟ್ಟೆಂದು ಆಡಿದವರಲ್ಲ. ಇವರೂ ಇವರ ಅಣ್ಣಂದಿರೂ ಚಳಿಯ ನಿಲುವಂಗಿಯಿಲ್ಲದೆ ಕಟ ಕಟ ನಡುಗಿ ಕಾಲ ಕಳೆದಿದ್ದಾರೆ. ನಿತ್ಯದ ಊಟ ಕೂಡ ಇವರಿಗೆ ದೊರೆಯದೆ ಹೋಗಿದೆ. ಒಂದು ತುಣುಕು ಮಾಂಸ, ಚಹಾ, ರೊಟ್ಟಿಯ ಕೆಲ ಚೂರು ಇಷ್ಟರಿಂದಲೆ ಇವರೆಲ್ಲ ತಮ್ಮ ಹಸಿವೆಯನ್ನು ಹಿಂಗಿಸಿಕೊಳ್ಳಬೇಕಾಗುತಿತ್ತು. ಇವರೊಬ್ಬ ಅಣ್ಣ ನಿರ್ವಾಹವಿಲ್ಲದೆ ಮುಂದೆ ಅರ್ಧ ದಿನ ದುಡಿಯುವ ಒಂದು ನಿತ್ಯದ ಕೆಲಸವನ್ನೆ ಹಿಡಿಯಬೇಕಾಯ್ತು.

ಚಿಕ್ಕ ವಯಸ್ಸಿನಲ್ಲಿಯೆ ಅರವಿಂದಕುಮಾರರ ಪ್ರವೃತ್ತಿಯು ಕವಿತಾರಚನೆಯಲ್ಲಿತ್ತೆಂಬುದರ ಉಲ್ಲೇಖವನ್ನು ಈ ಮೊದಲೆ ಮಾಡಲಾಗಿದೆಯಷ್ಟೆ. ಅವರ ಈ ಒಲವು ಕೇವಲ ಇಂಗ್ಲಿಷ್ ಕವಿತೆ ರಚಿಸುವದರಲ್ಲಷ್ಟೆ ಅಲ್ಲ, ಲ್ಯಾಟಿನ್ ಗ್ರೀಕ ಭಾಷೆಗಳಲ್ಲಿ ಸಹ ಅವರು ಕವಿತೆ ಬರೆಯುತಿದ್ದರೆಂಬ ಮಾತನ್ನೂ ಈ ಮೊದಲು ಹೇಳಿದೆ. ಅವರು ಬಡೋದೆಗೆ ಬಂದ ಬಳಿಕ ಅಲ್ಲಿ ಅಭ್ಯಾಸಪೂರ್ವಕವಾಗಿ ಹೊಸ

ದಾಗಿ ಕಲಿಯುವ ವರೆಗೆ ಅವರಿಗೆ ಭಾರತೀಯ ಭಾಷೆಗಳು ಯಾವವೂ ಬರುತಿರಲಿಲ್ಲ; ಮತ್ತು ಭಾರತೀಯ ರೂಪಕ (Imagery) ಗಳ ಇಲ್ಲವೆ ಅಲಂಕಾರಾದಿಗಳ ಕಲ್ಪನೆಯೆ ಅವರಿಗೆ ಇರಲಿಲ್ಲ. ಆದ್ದರಿಂದ ಅವರು ಆ ಕಾಲಕ್ಕೆ ಬರೆದ ಕವಿತೆಗಳಲ್ಲಿ ಹೆಚ್ಚಾಗಿ ಗ್ರೀಕ್ ರೋಮನ್ ಪೌರಾಣಿಕ ಹೆಸರುಗಳನ್ನೂ ತದ್ದೇಶೀಯ ರೂಪಕಾದಿಗಳನ್ನೂ ಕಾಣುವದು ಸಹಜವಾಗಿದೆ. ಅವರು ಬಡೋದೆಯಲ್ಲಿ ನೆಲಿಸಿದ ಬಳಿಕ ಅವರ ಪೂರ್ವವಯಸ್ಸಿನ ಕವಿತೆಗಳನ್ನು ಪ್ರಕಟಗೊಳಿಸಲಾಯ್ತು. ಅವುಗಳಲ್ಲಿ ಅಗಾಧವಾದ ಜಾಣ್ಮೆ ಕಂಡುಬರುವದಲ್ಲದೆ ಇಂಗ್ಲಿಷ್ ಭಾಷೆಯ ಮೇಲೂ ಆಂಗ್ಲ ಪದಗುಂಫನದ ಕೌಶಲದ ವಿಷಯಕ್ಕೂ ರೂಪಕವಿಚಾರದಲ್ಲಿಯೂ ಅವರಿಗೆ ಎಷ್ಟೊಂದು ಪ್ರಭುತ್ವವಿತ್ತೆಂಬುದು ವ್ಯಕ್ತವಾಗುತ್ತದೆ; ಜೊತೆಜೊತೆಗೆ ಕಾವ್ಯರಚನಾತಂತ್ರದ ಅವರ ಕೌಶಲ್ಯವು ಹೇಗೆ ಕುದುರುತ್ತ ಸಾಗಿತ್ತೆಂಬ ಸಂಗತಿಯೂ ತಿಳಿಯುತ್ತದೆ. ಹೀಗಿರಲು, ಅವರ ಕಲ್ಪನಾವಾಹಿನಿಯು ಮೊದಮೊದಲು ಉಗಮದಲ್ಲಿ ಒಂದು ಸಣ್ಣ ಝರಿಯಂತಿದ್ದರೂ ಬರಬರುತ್ತ ಅದು ಹಿಗ್ಗುತ್ತ ಅದರ ಪಾತ್ರವು ವಿಸ್ತೀರ್ಣವಾಗುತ್ತ ಭವ್ಯವಾಗಿ ಅನುಪಮವಾಗಿ ಅವರ 'ಸಾವಿತ್ರಿ' ಯಂತಹ ಮಹಾಕಾವ್ಯದಲ್ಲಿ ಪರಿಣತಿಗೊಂಡಿತೆಂಬಲ್ಲಿ ಆಶ್ಚರ್ಯವೇನು? ಅವರ ಅಂತರಂಗಜೀವನದ ಅಭಿವ್ಯಕ್ತಿಯಂತಿದ್ದ ಈ ಮಹಾಕಾವ್ಯವು ಕೇವಲ ಅವರ ಪ್ರಾರಂಭಿಕ ವಿದೇಶೀಯ ರೂಪಕಾದಿಗಳ ವೈಭವದಿಂದಷ್ಟೇ ಸ್ಫುರಿಸುತ್ತಿಲ್ಲ; ಆದರೆ ಅದು ಭಾರತೀಯ ವೈಶಿಷ್ಟ್ಯದಿಂದ ಕೂಡಿದ ಕಲ್ಪನಾವೈಖರಿಯಿಂದಲೂ ಸಂಸ್ಕೃತಸಾಹಿತ್ಯದಲ್ಲಿ ಕಂಡುಬರುವ ರೂಪಕಾದಿಗಳಿಂದಲೂ ಅರ್ಥಗರ್ಭಿತ ಸಮುಜ್ವಲ ವಾಕ್‌ಸರಣಿಯಿಂದಲೂ ತುಂಬಿ ತುಳುಕುತ್ತಿದೆ. 'ಸಾವಿತ್ರಿ' ಯಲ್ಲಿ ನೆರವೇರಿಸಬೇಕಾದಷ್ಟು ಕಷ್ಟಕರ ಕಾರ್ಯಭಾರವನ್ನು ನೆರವೇರಿಸುವ ಪ್ರಸಂಗವು ಆಂಗ್ಲಭಾಷೆಗೆ ಸಹಸಾ ಈ ಮೊದಲು ಇನ್ನೆಂದೂ ಬಂದಿಲ್ಲವೆಂದು ಧಾರಾಳವಾಗಿ ಹೇಳಬಹುದು. ಅದರಲ್ಲಿ ಓರ್ವ ಅಸಾಮಾನ್ಯ ಆಧ್ಯಾತ್ಮಿಕ ಸಾಹಸಿಯ ವಿಶಾಲ ಹಾಗೂ ಅದ್ವಿತೀಯವಾದ ಅನುಭವಗಳನ್ನು ವ್ಯಕ್ತಪಡಿಸಲಾಗಿದೆ. ಅದೂ ವಿದೇಶೀಯ ಭಾಷೆಯಲ್ಲಿ. ಅನೇಕಾನೇಕ ವರ್ಷಗಳಿಂದ ಸಂಸ್ಕೃತಕ್ಕೆ ಮಾತ್ರ ಮೀಸಲಾಗಿದ್ದ, ಪರಕೀಯ ಭಾಷೆಗೆ ಸಹಸಾ ಅಪರಿಚಿತವಿದ್ದ ರೂಪಕಾದಿಗಳಿಂದ ತುಂಬಿದ ಭಾಷೆ ಅದರಲ್ಲಿ ಬಳಸಲಾಗಿದೆ.

ಘೋಷ ಮನೆತನದಲ್ಲಿ ಇಬ್ಬಗೆಯ ಸಂಸ್ಕಾರಗಳು ಸಂಮಿಲಿತವಾಗಿದ್ದವೆಂಬುದನ್ನು ನಾವಾಗಲೆ ಅರಿತುಕೊಂಡಿದ್ದೇವೆ. ಒಂದು, ತಾಯಿ ಸ್ವರ್ಣಲತಾದೇವಿಯವರಿಗೆ ಅವರ ತಂದೆಯಾದ ಋಷಿ ರಾಜನಾರಾಯಣ ಬೋಸರ ಕಡೆಯಿಂದ ಬಂದ ಶುದ್ಧ ಭಾರತೀಯ ಸಂಸ್ಕಾರ; ಇನ್ನೊಂದು, ಬ್ರಿಟಿಶ್ ಮತ್ತು ಯುರೋಪಿಯನ್ ಸಂಸ್ಕಾರ—ತಂದೆ ಡಾ. ಕೃಷ್ಣಧನರು ತಾವು ಅಭ್ಯಾಸಕ್ಕಾಗಿ ಇಂಗ್ಲಂಡದೊಳಗೆ

ಅಬೆರ್ಡೀನ್ ನಗರದಲ್ಲಿದ್ದಾಗ ಸ್ವತಃ ಬೆಳೆಯಿಸಿಕೊಂಡು ಬಂದಂತಹದು. ವಿನಮ್ರ ಆಜ್ಞಾಧಾರಕ ತಾಯಿಯು ಮನೆಯಲ್ಲಿ ತನ್ನದನ್ನೆ ನಡೆಸಲು ಹೋಗಲಿಲ್ಲ, ಅಥವಾ ಆಕೆಗೆ ತನ್ನದನ್ನೆ ನಡೆಸುವದು ಆಗಲಿಲ್ಲವೆಂದರೂ ಸರಿ. ಅಂತೂ ಮಕ್ಕಳನ್ನು ಕೊನೆಗೆ ಬುದ್ಧಿಪುರಸ್ಸರವಾಗಿ ಭಾರತೀಯ ಪರಿಕರದಿಂದಲೂ ಶಿಕ್ಷಣದಿಂದಲೂ ದೂರಿರಿಸಲಾಯ್ತಷ್ಟೇ ಅಲ್ಲ, ಚಿಕ್ಕಂದಿನಲ್ಲಿಯೆ ಅವರನ್ನು ಇಂಗ್ಲಂಡಕ್ಕೆ ಅಟ್ಟಲಾಯ್ತು !

ಇದರರ್ಥ, ಡಾ. ಕೃಷ್ಣಧನರಿಗೆ ತನ್ನ ದೇಶವಾದ ಭಾರತದ ಬಗ್ಗೆ ಅಭಿಮಾನ, ಪ್ರೀತಿ ಇದ್ದಿಲ್ಲವೆಂದೇ? ಛೇ, ಹಾಗೆಂದೂ ಸರ್ವಥಾ ಅಲ್ಲ. ತಿರುಗಿ ಕೇಳಿದರೆ, ತನ್ನ ದೇಶದ ವಿಮೋಚನೆಯು ಪಾಶ್ಚಾತ್ಯ ಜೀವನ ಪದ್ಧತಿಯನ್ನೂ ರೀತಿಗಳನ್ನೂ ಇದ್ದಕಿದ್ದಂತೆ ಬರಮಾಡಿಕೊಳ್ಳುವದರಲ್ಲಿಯೆ ಇದೆಯೆಂದು ಅವರು ನಂಬಿದ್ದರು. ಮಕ್ಕಳು ಇಂಗ್ಲಂಡದಲ್ಲಿದ್ದಾಗ ಅವರಿಗೆ ಇವರು ಬರೆದ ಪತ್ರಗಳೆ ಇವರ ಭಾರತದ ಕಲ್ಯಾಣಚಿಂತನಕ್ಕೂ ಇವರ ದೇಶಪ್ರೇಮಕ್ಕೂ ಸಾಕ್ಷಿ. ಆ ಪತ್ರಗಳ ತುಂಬೆಲ್ಲ, ಕಟುಭಾಷೆಯಲ್ಲಿ, ಹಿಂದುಸ್ಥಾನದೊಳಗೆ ಬ್ರಿಟಿಶ್ ಸರಕಾರವು ನಡೆಸಿದ ಅನ್ಯಾಯದ ಉಲ್ಲೇಖವೇ. ಡಾ. ಕೃಷ್ಣಧನರ ಮಾತನ್ನೆ ಬಳಸಿ ಹೇಳುವದಾದರೆ-'ಬ್ರಿಟಿಶ್ ಸರಕಾರದ ಅನ್ಯಾಯ, ಕಠೋರತೆ, ಹೃದಯಹೀನತೆ' ಇವುಗಳ ವಿರುದ್ಧ ಕೇವಲ ದೂರಿಕೊಂಡದ್ದೆ ದೂರಿಕೊಂಡದ್ದು. ಎಷ್ಟೋ ಸಲ, ಅವರು ತಮ್ಮ ಮಕ್ಕಳಿಗೆ 'ಬಂಗಾಲಿ' ಎಂಬ ಆಂಗ್ಲ ವೃತ್ತಪತ್ರಿಕೆಯ ಲೇಖಾಂಶಗಳನ್ನು ಕತ್ತರಿಸಿ ಕಳಿಸಿಕೊಡು-ತಿದ್ದರು. ಸರಕಾರದ ವಿರುದ್ಧ ಅವರು ಎತ್ತಿದ ಆಪಾದನೆಗಳನ್ನು ಅವು ಸಮರ್ಥಿಸುತಿದ್ದವು. ಇವು, ದೇಶಾಭಿಮಾನದ ಬಗ್ಗೆ ಅವರು ತಮ್ಮ ಮಕ್ಕಳಿಗೆ ಕೊಟ್ಟ ಪ್ರಥಮ ಪಾಠಗಳೆಂದು ಹೇಳಬಹುದು. ಎಂಥ ವಿರೋಧಾಭಾಸವಿದು ! ಸ್ವತಃ ತಾವು ದೇಶೀಯತೆಯಿಂದ ಚ್ಯುತರಾಗಿ ತಮ್ಮ ಮಕ್ಕಳನ್ನು ಸಹ ಅದೇ ಪಡಿಯಚ್ಚಿನಲ್ಲಿ ಎರಕ ಹೊಯ್ಯಲು ಉದ್ಯುಕ್ತರಾದವರೊಬ್ಬರು ಮಾಡುವ ಕೆಲಸವೇ ಇದು? ಕಾಲವು ತನ್ನ ಸೇಡನ್ನು ತೀರಿಸಿಕೊಳ್ಳದೆ ಬಿಡದು; ಅದೂ ಬಹು ವಿಲಕ್ಷಣ ರೀತಿಯಲ್ಲಿ. ಇದರಿಂದ ಒಂದು ಸಂಗತಿಯು ಸ್ಪಷ್ಟವಾಗಿ ಕಾಣುತ್ತದೆ. ಆಂಗ್ಲರ ಜೀವನರೀತಿಯ ಬಗ್ಗೆ ಡಾ. ಕೃಷ್ಣಧನರಿಗಿದ್ದ ಮೋಹ-ಮೆಚ್ಚುಗೆಗಳು, ಭಾರತ ಭೂಮಿಯನ್ನು ನಿಷ್ಕರುಣೆಯಿಂದ ಸುಲಿದು ಸೂರೆಗೊಳ್ಳುವ ಬ್ರಿಟಿಶರ ರಾಜ್ಯಪದ್ಧತಿಯ ವಿರುದ್ಧ ಅವರಲ್ಲಿ ಕ್ರುದ್ಧ ಭಾವವನ್ನು ಹುಟ್ಟಿಸುವಲ್ಲಿ ಅಡ್ಡ ಬರಲಿಲ್ಲ. ಮೇಲಿಂದ ಮೇಲೆ ತಪ್ಪದೆ ತನ್ನ ಮಕ್ಕಳಿಗೆ ಬರೆದು ಅವರನ್ನು ಪ್ರೇರೇಪಿಸುವಷ್ಟು ಈ ಬಗೆಯ ಭಾವವು ಈ ತಂದೆಯಲ್ಲಿ ಬೆಳೆದು ನಿಂತಿತು.

ಹೀಗೆ, ಭಾವಗಳು ಬಲು ಸುಲಭವಾಗಿ ಪಡಿಮೂಡಬಲ್ಲ ಚಿಕ್ಕ ಪ್ರಾಯದಲ್ಲಿಯೆ ಶ್ರೀ ಅರವಿಂದರ ಬಾಲಮನದಲ್ಲಿ ದೇಶಾಭಿಮಾನದ ಬೀಜಗಳು ಬಿದ್ದವು.

ಅವರು ಕೇಂಬ್ರಿಜ್ಜದಲ್ಲಿ ೧೮೯೧ ರಲ್ಲಿ ಸ್ಥಾಪಿತವಾದ 'ಇಂಡಿಯನ್ ಮಜಲಿಸ್' ದ ಕಾರ್ಯದರ್ಶಿಯಾದರು ; ಮೇಲಿಂದ ಮೇಲೆ ಅದರ ಚರ್ಚಾಕೂಟದ ಸಭೆಗಳಲ್ಲಿ ಭಾಗವಹಿಸುತಿದ್ದರು. ಕೇಂಬ್ರಿಜ್ಜದಲ್ಲಿ ಆ ಸಮಯಕ್ಕೆ, ಕೆ. ಜಿ. ದೇಶಪಾಂಡೆ, ಹರಿಸಿಂಗ ಗೌರ, ಬೀಚ್‌ಕ್ರಾಫ್ಟ್, ಫೆಲಿಕ್ಸ ಡಿಸೋಜಾ, ಪೆರೀರಾ ಮೊದಲಾದವರು ಇವರ ಸಂಗಡಿಗರಾಗಿದ್ದರು. ಇವರು ತಮ್ಮ ಭಾಷಣಗಳಲ್ಲಿ, ಹಿಂದುಸ್ಥಾನದೊಳಗಿನ ಬ್ರಿಟಿಶ್ ಸಾರ್ವಭೌಮ ಪ್ರಭುತ್ವವನ್ನು ಖಂಡಿಸಿ ಮಾತನಾಡುತಿದ್ದರು. ಎಷ್ಟೋ ಸಲವಂತೂ ಮಾತು ಮೇರೆಯನ್ನು ಮೀರಿ ಉಗ್ರವಾಗುತಿತ್ತು. ಅಂದಿನ ಅವರ ಕೆಲ ಉಕ್ತಿಗಳಿಗೆ ಕ್ರಾಂತಿಕಾರಕವೆಂದು ಸುಲಭವಾಗಿ ಮುದ್ರೆ ಹಾಕಬಹುದಿತ್ತು. ಈ ಭಾಷಣಗಳ ಮೂಲಕವೆ ಅವರ ಆಯ್. ಸಿ. ಎಸ್. ಪ್ರವೇಶಕ್ಕೆ ಉತ್ತೇಜನ ಸಿಕ್ಕಿರಲಿಲ್ಲವೆಂದೂ ಅಶ್ವಾರೋಹಣದ ಘಟನೆಯು ಈ ಸಂದರ್ಭದಲ್ಲಿ ಒಂದು ಅನುಕೂಲ ನೆವವಾಗಿ ಪರಿಣಮಿಸಿತೆಂದೂ ಹೇಳುವದುಂಟು. ಶ್ರೀ ಅರವಿಂದರೂ ಅವರ ಬಂಧುಗಳೂ ಅಂತಃಸ್ಫೂರ್ತಿಯಿಂದ, ಇಂಗ್ಲಂಡದಲ್ಲಿದ್ದ ಜ್ವಲಂತ ಯುವಕ ಸಂಘದಲ್ಲಿ ಸೇರಿಕೊಂಡರು ; ದಾದಾಭಾಯಿ ನವರೋಜಿಯಂಥ ಮುಂದಾಳುಗಳ ಸೌಮ್ಯ ಉದಾರ ಅಭಿಪ್ರಾಯಗಳ ಬಗ್ಗೆ ಬಹಿರಂಗವಾಗಿ ಸದಾ ತಮ್ಮ ತಿರಸ್ಕಾರವನ್ನೂ ಅಸಂತೋಷವನ್ನೂ ವ್ಯಕ್ತಗೊಳಿಸುತಿದ್ದರು. ಈ ಹುಮ್ಮಸದ ಯುವಕರು ಕೇವಲ ತಮ್ಮ ಸಿಡುಕನ್ನಷ್ಟೆ ಹೊರಪಡಿಸಿ ಸುಮ್ಮನಿರಲಿಲ್ಲ. ಅಲ್ಲಿದ್ದ ಅವರ ಕೊನೆಕೊನೆಯ ದಿನಗಳಲ್ಲಿ, ಪ್ರತ್ಯಕ್ಷ ಕಾರ್ಯಕ್ಕೆ ಕೈ ಇಕ್ಕಬೇಕೆಂಬ ಉಗ್ರಮತವಾದಿಗಳಾದ ಕೆಲವು ಭಾರತೀಯರು ಲಂಡನ್ನಿನಲ್ಲಿ ಸಭೆ ಸೇರಿ ಗುಪ್ತ ಸಂಘವೊಂದನ್ನು ರಚಿಸಿಕೊಂಡರು ; ಅದಕ್ಕೆ "ಕಮಲ ಮತ್ತು ಕೃಪಾಣ (Lotus and Dagger)" ಎಂಬುದಾಗಿ ನಾಮಕರಣವಾಯ್ತು. ಶ್ರೀ ಅರವಿಂದರು ಅದರಲ್ಲಿ ಕೂಡಿಕೊಂಡರು. ಹಿಂದುಸ್ಥಾನದಲ್ಲಿ ಪರಕೀಯ ರಾಜ್ಯವು ನಿರ್ಮೂಲವಾಗುವಂತೆ ಏನಾದರೊಂದು ಉಪಾಯ ಹೂಡತಕ್ಕದ್ದೆಂದು ಆ ಸಂಘದ ಪ್ರತಿಯೊಬ್ಬ ಸದಸ್ಯನೂ ಪ್ರತಿಜ್ಞೆಮಾಡಿದನು. ಆ ಸಂಘವು ಮುಂದೆ ಕಾರ್ಯಪ್ರವೃತ್ತವಾಗಲಿಲ್ಲ ; ಆದರೆ ಅದರ ಕೆಲವು ಸದಸ್ಯರು, ತತ್ರಾಪಿ ಶ್ರೀ ಅರವಿಂದರು ತಮ್ಮ ಮುಂದಿನ ಜೀವನದಲ್ಲಿ ಆ ಪ್ರತಿಜ್ಞೆಯನ್ನು ಪಾಲಿಸಿದರಲ್ಲದೆ ಪ್ರತ್ಯಕ್ಷ ಕಾರ್ಯವನ್ನೂ ಮಾಡಿದರು.

ಚಿಕ್ಕಂದಿನಿಂದಲೆ ಶ್ರೀ ಅರವಿಂದರಿಗೆ ಭಾರತೀಯ ಭಾಷೆಗಳ ಮತ್ತು ಸಂಸ್ಕೃತಿಯ ಸಂಪರ್ಕವು ತಪ್ಪಿಹೋಗಿದ್ದರೂ, ಅವರ ವಿದ್ಯಾರ್ಥಿಜೀವನದುದ್ದಕ್ಕೂ ದೇಶಾಭಿಮಾನದಿಂದ ಪರಾವೃತ್ತಗೊಳಿಸುವ ಅತ್ಯಂತ ಪ್ರಬಲ ಶಕ್ತಿಗಳಿಗೆ ಅವರು ತುತ್ತಾಗಿದ್ದರೂ ಅವರ ತಂದೆ ಸ್ವದೇಶದಿಂದ ಬರೆದ ಪತ್ರಗಳ ದ್ವಾರಾ ಅವರ ಮನೋಭೂಮಿಕೆಯಲ್ಲಿ ಬಿದ್ದ ಉಜ್ವಲ ದೇಶಾಭಿಮಾನದ ಬೀಜಗಳು ಸ್ಥಿರವಾಗಿ ಭರದಿಂದ ಬೆಳೆಯುತಿದ್ದವು. ಈ ಮೂಲಕವಾಗಿಯೆ, ಭಾರತದ ಅಂದಿನ ರಾಜ

ಕಾರಣೆಗಳ ಸೌಮ್ಯ ವಿಚಾರಪ್ರಣಾಲಿಯು ಅವರಿಗೆ ತುಂಬ ಅಸಹನೀಯವಾಯ್ತು. ಈ ಕಾರಣದಿಂದಲೆ, ಶಾಶ್ವತ ಅಪಮಾನದ ಕಲಂಕದಂತಿದ್ದ ಪರಕೀಯ ರಾಜ್ಯಭಾರದ ವಿರುದ್ಧ ಆಕ್ರಮಣಶೀಲ ರಾಷ್ಟ್ರೀಯತೆಯ ಅಡಿಗಲ್ಲು ಹಾಕಲ್ಪಟ್ಟಿತಲ್ಲದೆ, ತಾತ್ಕಾಲಿಕ ಫಲಪ್ರದವಾದ, ಹಾಗು ಶಾಂತಿಯುತವಾಗಿರಬಹುದಾದರೂ ತೀಕ್ಷ್ಣವಾದ ಉಪಾಯಗಳನ್ನು ಕೈಕೊಳ್ಳುವ ತೀವ್ರ ದಾಹವು ಅವರಿಗೆ ಉಂಟಾಯಿತು.

ಅವರು ಇಂಗ್ಲಂಡದಲ್ಲಿದ್ದ ಹದಿನಾಲ್ಕು ವರ್ಷಗಳ ಅವಧಿಯಲ್ಲಿ ಇಂಗ್ಲಿಷ್ ಭಾಷೆ ಮತ್ತು ಕಾವ್ಯಗಳ ಬಗ್ಗೆ ಸಂಪೂರ್ಣ ಪ್ರೇಮಭಾವವನ್ನು ಅಳವಡಿಸಿಕೊಂಡಿದ್ದು ನಿಜ. ಆದರೆ ಇಂಗ್ಲಂಡದ ವಿಷಯಕ್ಕೆ ಅಥವಾ ಆ ದೇಶದ ರಾಜಕೀಯ ಧೋರಣೆಗಳ ವಿಷಯಕ್ಕೆ ಅವರಲ್ಲಿ ಎಳ್ಳಷ್ಟೂ ಆದರಭಾವವುಂಟಾಗಲಿಲ್ಲ. ತದ್ವಿಪರೀತವಾಗಿ, ಆಯರ್ಲಂಡದ ವಿಷಯಕ್ಕೂ ಆ ನಾಡಿನ ಸ್ವಾತಂತ್ರ್ಯಸಂಗ್ರಾಮದ ವಿಷಯಕ್ಕೂ ಅದರ ನಾಯಕ ಪಾರ್ನೆಲ್ಲನ ವಿಷಯಕ್ಕೂ ಅವರಲ್ಲಿ ತುಂಬ ಮೆಚ್ಚಿಗೆಯುಂಟಾಯ್ತು. ಆ ನಾಯಕನು ೧೮೯೧ ರಲ್ಲಿ ತೀರಿಕೊಂಡಾಗ ಅವನನ್ನು ಕುರಿತು ಒಂದು ಪ್ರಶಂಸಾಪರ ಗೀತವನ್ನೆ ಬರೆದರು. ಫ್ರೆಂಚ್ ಕ್ರಾಂತಿಯ ಬಗೆಗಿದ್ದ ಅವರ ಪ್ರೀತಿ, ಆಯರ್ಲಂಡದ ದೇಶಭಕ್ತರ ಬಗೆಗಿದ್ದ ಅವರ ಮೆಚ್ಚುಗೆ ಮತ್ತು ಭಾರತ ಸ್ವಾತಂತ್ರ್ಯದ ಬಗೆಗಿದ್ದ ಅವರ ತೀಕ್ಷ್ಣ ಆಕಾಂಕ್ಷೆ ಇವೇ ಮೊದಲಾದ ಭಾವಗಳ ಒತ್ತಡಕ್ಕೆ ಸಿಲುಕಿ ಅವರು 'ಕಮಲ ಮತ್ತು ಕೃಪಾಣ' ಸೇರಿದ್ದು. ಇದು, ಮಾತೃಭೂಮಿಗೆ ಮರಳಿದ ಬಳಿಕ ಅವರು ಯಾವ ದಾರಿಯನ್ನು ಅನುಸರಿಸುವರೆಂಬುದಕ್ಕೆ ಸಂಕೇತದಂತಿತ್ತು.

ಆಯ್. ಸಿ. ಎಸ್. ಪರೀಕ್ಷೆಗೆ ಕುಳಿತುಕೊಳ್ಳಬೇಕೆಂದು ಮಗನಿಗೆ ನಿರ್ದೇಶ ಮಾಡುವಲ್ಲಿ ಆ ವಿದ್ಯಾಸಂಪನ್ನ ಪ್ರೇಮಲ ತಂದೆಯ ಉದ್ದೇಶವು ಅದೇನೇ ಇದ್ದರೂ ಶ್ರೀ ಅರವಿಂದರು ಮಾತ್ರ ಅದಕ್ಕೆ ಅಪಾತ್ರರಾಗಲೆಂದೇ ಹವಣಿಸಿದರೆನ್ನಬೇಕು. ಹಿಂದುಸ್ಥಾನದಲ್ಲಿ ಬ್ರಿಟಿಶರ ಉಕ್ಕಿನ ರಾಜ್ಯಯಂತ್ರದ ಒಂದು ಭಾಗ ತಾವಾಗಲಿಲ್ಲವೆಂದು ಅವರಿಗೆ ಒಳಗೊಳಗೆ ಸಂತೋಷವೆ ಎನಿಸಿರಲಿಕ್ಕೆ ಬೇಕು. ವಿಶ್ವವಿದ್ಯಾಲಯದ ಪ್ರಶಸ್ತಿ ಪಡೆದು, ಅಭ್ಯಾಸ ಪೂರೈಸಿ, ಅವರು ತಮ್ಮ ಹೃದಯದ ಅಂತರಾಳದಲ್ಲಿ ಸೂಜಿಗಲ್ಲಿನಂತೆ ಸೆಳೆಯುತ್ತಿದ್ದ ತಮ್ಮ ಭಾರತ ದೇಶಕ್ಕೆ ಮರಳಬೇಕೆಂಬ ಮನಸ್ಸಿನಲ್ಲಿ ಸ್ವಾಭಾವಿಕವಾಗಿ ಎಣಿಕೆ ಹಾಕುತಿದ್ದರು; ಸರಸ್ವತಿಯ 'ಕಮಲಾಯತನ (Lotus Heaven)' ದ ಕರೆ, 'ಸನಾತನ ಹಿಮಪ್ರದೇಶ (The regions of eternal snow)' ದ ಕರೆ, ಭಾಗೀರಥಿಯ ಕರೆ ಇವುಗಳ ಗುಂಜಾರವವು ಅವರ ಕಿವಿಯಲ್ಲಿ ಇದ್ದೇ ಇತ್ತು. ಒಡನೆಯೆ ಮಾತೃಭೂಮಿಗೆ ಮರಳಲು ಅಣಿಯಾದರು. ಅವರ ಜೀವನದ ಈ ಮುಂದಿನ ಹದಿಮೂರು ವರ್ಷಗಳು ಅಂದರೆ ಕ್ರಿ. ಶ. ೧೮೯೩ ರಿಂದ ೧೯೦೬ ರ ವರೆಗೆ, ಬಡೋದಾ ಸಂಸ್ಥಾನದಲ್ಲಿ

ಹೆಚ್ಚಾಗಿ ಶಿಕ್ಷಣರಂಗದಲ್ಲಿ ಗತಿಸಿದವು. ಈ ಅವಧಿಗೆನ್ನಬಹುದು, ಬರಲಿರುವ ಅಧ್ಯಾತ್ಮನಿಷ್ಠ-ರಾಜಕೀಯ ಜೀವನದ ಪೂರ್ವಸಾಧನದ ಸಮಯವೆಂದು.

ಜಯಶೀಲನಾದ ತಮ್ಮ ಮಗನ ಪುನರಾಗಮನವನ್ನು ಕಾಣಲು ಪಾಪ, ದುರ್ದೈವದಿಂದ ತಂದೆ ಇರಲಿಲ್ಲ. ಮಗನು ಸ್ವದೇಶಕ್ಕೆ ಮರಳುವ ತುಸು ಮುನ್ನವೆ ಡಾ. ಕೃಷ್ಣಧನರು ತಮ್ಮ ಬೀಗನಿಗೆ ಅರವಿಂದಕುಮಾರನ ಬಗ್ಗೆ ಅತ್ಯಂತ ಪ್ರಶಂಸಾಪರ ಪತ್ರವೊಂದನ್ನು ಬರೆದಿದ್ದರು. ಅವರು ತಮ್ಮೆಲ್ಲ ಮಕ್ಕಳ ವಿಷಯಕ್ಕೆ ತುಂಬ ಹೆಮ್ಮೆ ಪಡುತಿದ್ದರು, ಅದರಲ್ಲೂ ತಮ್ಮ 'ಅರೋ'ನ ವಿಷಯಕ್ಕೆ. 'ಅರೋ' ಎಂಬುದು ಅವರ ಅಚ್ಚಿಯ ಹೆಸರು. ಒಂದು ದುರಂತ ತಪ್ಪಿನ ಮೂಲಕ ಗ್ರಾಯಿಂಡ್‌ಲೇ ಎಂಡ್ ಸನ್ಸ್ ಎಂಬ ಅವರ ಬ್ಯಾಂಕರರು ಡಾ. ಕೃಷ್ಣಧನರಿಗೆ ಅವರ ಪುತ್ರ ಆಗಲೆ ಹಡಗ ಹತ್ತಿದ್ದಾರೆಂದೂ ಆ ಹಡಗವು ಲಿಸ್‌ಬನ್‌ದ ಆಚೆಗೆ ಅಪಘಾತಕ್ಕೆ ಗುರಿಯಾಗಿ ಮುಳುಗಿತೆಂದೂ ತಿಳಿಸಿದರು. ಈ ಸುದ್ದಿ ಕೇಳುತ್ತಲೆ ಆ ವೃದ್ಧ ತಂದೆ 'ಅರವಿಂದ' 'ಅರವಿಂದ' ಎಂದು ಕನಕರಿಸುತ್ತ ಹೃದಯಕ್ರಿಯೆ ನಿಂತು ತೀರಿಕೊಂಡರು. ವಸ್ತುತಃ ಶ್ರೀ ಅರವಿಂದರು, ಲಂಡನದಿಂದ ಆ ಮೇಲೆ ಹೊರಟ 'ಕಾರ್ಥೇಜ್' ಎಂಬ ಬೇರೊಂದು ಉಗಿಹಡಗವನ್ನು ಹತ್ತಿ ಮುಂಬಯಿಗೆ ಸುರಕ್ಷಿತ-ವಾಗಿ ಫೆಬ್ರುವರಿ ೧೮೯೩ ರಲ್ಲಿ ಬಂದು ತಲ್ಪಿದರು.

ಬಡೋದೆಯ ಗಾಯಕವಾಡರಾದ ದಿವಂಗತ ಸಯಾಜಿರಾಯರು ತಮಗೆ ಬೇಕಾದ ಜನರನ್ನು ಒಳ್ಳೆ ಜಾಗರೂಕತೆಯಿಂದಲೂ ಚಾಣಾಕ್ಷತೆಯಿಂದಲೂ ಆಯ್ದುಕೊಳ್ಳುವದರಲ್ಲಿ ಹೆಸರಾಗಿದ್ದರು. ನಿಜವಾಗಿಯೂ ಅವರ ಸಂಸ್ಥಾನವು ಆಧುನಿಕ ರೀತಿಯಲ್ಲಿ ಪಡೆದ ಬಹುಮುಖ ಪ್ರಗತಿಯು ಗುಟ್ಟೇ ಇದಾಗಿತ್ತು. ಸರ್ ಹೆನ್ರೀ ಕಾಟನ್ನರ ಬಂಧು ಶ್ರೀ ಜೇಮ್ಸ್ ಕಾಟನ್ನರ ಮುಖಾಂತರ ಅವರು 'ಅರವಿಂದ' ಎಂಬ ಹೆಸರಿನ ಓರ್ವ ನವಯುವಕ ತಮ್ಮ ಬಳಿಗೆ ಬರಲು ಒಪ್ಪಿದ್ದಾರೆ ಎಂಬ ಸಂಗತಿಯನ್ನು ಮೊಟ್ಟಮೊದಲು ಅರಿಯುತ್ತಲೆ ಅವರು ಗಕ್ಕನೆ ಈ ಸಂಧಿಯನ್ನು ಸಾಧಿಸಿಕೊಂಡರು. ಆಗ ಇಂಗ್ಲಂಡದಲ್ಲಿಯೆ ಇದ್ದ ಮಹಾರಾಜರೊಡನೆ ಸಂದರ್ಶನ ನಡೆದು, ಶ್ರೀ ಅರವಿಂದರು ಮಹಾರಾಜರನ್ನು ಕೂಡಿಕೊಳ್ಳುವ ವಿಷಯದ ನಿರ್ಧಾರ ವಾಯಿತು. ಹೀಗೆ ಶ್ರೀ ಅರವಿಂದರು ಬಡೋದೆಯ ಸಂಸ್ಥಾನದ ಸೇವೆಯಲ್ಲಿ ಸೇರಿ ೧೮೯೩ ಫೆಬ್ರುವರಿಯಲ್ಲಿ ಸ್ವದೇಶಕ್ಕೆ ಕಡಲಪಯಣ ಬೆಳೆಸಿದರು. ಆ ತರುವಾಯ ಶ್ರೀ ಅರವಿಂದರ ಉದಯೋನ್ಮುಖ ಜೀವನದ ಹೊಸ ಅಧ್ಯಾಯವೂ ಮತ್ತೊಂದು ಯುಗವೂ ಪ್ರಾರಂಭವಾದವು.

# ೪ ಅಮೋಘ ಸಿದ್ಧತೆ

ಶ್ರೀ ಅರವಿಂದರು ತಮ್ಮ ವಿದ್ಯಾಭ್ಯಾಸವನ್ನು ಇಂಗ್ಲಂಡದಲ್ಲಿ ಮುಗಿಸಿದರು, ಭಾರತಕ್ಕೆ ಮರಳಿದರು, ೧೮೯೩ರಲ್ಲಿ ಬಡೋದೆಯಲ್ಲಿ ನೆಲಸಿದರು ಎಂಬ ಸಂಗತಿಯು ನಿಜ. ಆದರೆ ಇದು, ಅವರ ನಿಜವಾದ ಅಭ್ಯಾಸ-ಸಮಾಪ್ತಿಯೂ ಅಲ್ಲ; ಒಂದು ಭದ್ರವಾದ, ಸ್ಥಿರವಾದ ಉಪಜೀವನವೃತ್ತಿಯಲ್ಲಿ ಕೊನೆತನಕ ನೆಲಸಿಕೊಂಡಿರುವದೂ ಅಲ್ಲ. ನಿಜವಾಗಿಯೂ ಇದು, ಇನ್ನುಳಿದ ಕಾರ್ಯವ್ಯಾಪದ ಜೊತೆಗೆ, ಪೌರ್ವಾತ್ಯ ಮತ್ತು ಭಾರತೀಯವೆಂದೆನಿಸಿಕೊಳ್ಳುವ ಸಮಸ್ತ ವಿಷಯಗಳ ಅಭ್ಯಾಸದ ಪ್ರಾರಂಭಕಾಲ ಮಾತ್ರವಾಗಿತ್ತು. ಭಾರತೀಯ ಭಾಷೆಗಳ, ಇತಿಹಾಸ-ಸಂಸ್ಕೃತಿಗಳ ಅಭ್ಯಾಸವು ಅವರ ಮನಸ್ಸನ್ನು ಸೂಜಿಗಲ್ಲಿನಂತೆ ಸೆಳೆದುಕೊಂಡಿತು. ಅವರು ಬಡೋದೆಯಲ್ಲಿ ಇದ್ದಷ್ಟು ದಿನವೆಲ್ಲ ಆ ವಿಷಯಗಳ ಅಭ್ಯಾಸದಲ್ಲಿಯೆ ಮಗ್ನರಾಗಿದ್ದರು. ಅಲ್ಲಿಯ ಅವರ ಜೀವನವೆಲ್ಲ,—ಮೊದಲಿಗೆ ಸಂಕ್ಷಿಪ್ತವಾದರೂ ಸೋಜಿಗವೆನಿಸುವಷ್ಟು ಅತ್ಯುಜ್ವಲವಾದ ಅವರ ಬಂಗಾಲದಲ್ಲಿಯ ದೇಶಭಕ್ತಿಯ ಜೀವನಕ್ಕಾಗಿಯೂ ತದನಂತರ ಪಾಂಡಿಚೆರಿಯಲ್ಲಿಯ ಅವರ ಯೋಗಕ್ಕಾಗಿಯೂ—ಒಂದು ಅಮೋಘ ಸಿದ್ಧತೆಯಾಗಿತ್ತು. ಅವರ ದೇಶ ಭಕ್ತಿಯ ಪ್ರಕಾರವೆ ಬೇರೆ. ಅದು ಕೇವಲ ಗತಾನುಗತಿಕವಾಗಿರದೆ ಅದರ ಬೇರುಗಳು ಆಧ್ಯಾತ್ಮಿಕತೆಯಲ್ಲಿ ನೆಲೆಗೊಂಡಿದ್ದವು. ೧೮೯೩ ರಿಂದ ೧೯೧೦ರ ವರೆಗಿನ ಅವರ ಜೀವನಕ್ರಮಕ್ಕೆ ಕೇವಲ ರಾಜಕೀಯವೆಂದು ಸಾಮಾನ್ಯಾರ್ಥದಲ್ಲಿ ಹೇಳುವದಕ್ಕಿಂತ ಅಧ್ಯಾತ್ಮನಿಷ್ಠ-ರಾಜಕೀಯವೆಂದು ಕರೆಯುವದೆ ಹೆಚ್ಚು ಯುಕ್ತ. ಅವರು ಪ್ರತ್ಯಕ್ಷವಾಗಿ ಬಹಿರಂಗ ರಾಜಕೀಯ ರಂಗದಲ್ಲಿ ಅಡಿಯಿಡುವ ಮೊದಲಿಗೆ, ಈ ಹದಿಮೂರು ವರ್ಷಗಳ ಕಾಲವನ್ನು ಸಮಗ್ರ ಸರ್ವಾಂಗೀಣ ಆಧ್ಯಾತ್ಮಿಕತೆಯ ಜೀವನದ ಮೂಲಭೂತ ತಳಹದಿಯಾಗುವಂತೆ ಮಾಡಿಕೊಳ್ಳಲು, ವಿದೇಶೀಯ ಆಧ್ಯತೆಯನ್ನು ಯಾವ ವಿಧದಲ್ಲಿಯೂ ಸಹಿಸದ ದೇಶಭಕ್ತಿಯನ್ನು ಪುಟಗೊಳಿಸಿಕೊಳ್ಳಲು, ತಾವು ಅನುಸರಿಸಬೇಕೆಂದ ಅತ್ಯುಗ್ರವಾಗಿದ್ದರೂ ದೃಢವಾದ ರಾಜಕೀಯ ಧೋರಣೆಗಳನ್ನು ರೂಪಿಸಿಕೊಳ್ಳಲು, ಮತ್ತು ತಮ್ಮ ಜನಾಂಗದ ವಿಷಯಕ್ಕೂ ಆ ಜನಾಂಗದ ಸಂಸ್ಕೃತಿಯ ವಿಷಯಕ್ಕೂ ಆಳವಾದ ಅನುರಾಗವನ್ನು ಹೆಚ್ಚಿಸಿಕೊಳ್ಳಲು ಏಕೋಭಾವದಿಂದ ಬಳಸಿಕೊಳ್ಳಲಾಯ್ತೆಂದು ಹೇಳಲಡ್ಡಿಯಿಲ್ಲ.

ಈ ವರೆಗೆ ಶ್ರೀ ಅರವಿಂದರ ಜೀವನಕ್ಕೆ ಎಳ್ಳಷ್ಟೂ ಭಾರತೀಯ ಅಥವಾ

ಪೌರ್ವಾತ್ಯ ಸಂಪರ್ಕವೆ ಬಂದಿರಲಿಲ್ಲ. ಆಂಗ್ಲ ಭಾಷೆ, ಪಾಶ್ಚಾತ್ಯ ಸಭ್ಯತೆ ಎಂಬವು ಇವರ ಕೈವಾಡಕ್ಕೆ ಕಾಯ್ದು ಕೈಯೊಳಗಿನ ಮೇಣದಂತಿದ್ದವು. ಇದೇ ಅವರ ತಂದೆಯವರ ಅಭಿಲಾಷೆಯಾಗಿದ್ದಿತು. ಅವರ ಈ ಅಭಿಲಾಷೆಯು ಸಂಪೂರ್ಣ ವಾಗಿಯೆ ಸಫಲವಾಗಿತ್ತೆಂದು ಹೇಳಬಹುದು. ಶ್ರೀ ಅರವಿಂದರು ಭಾರತಕ್ಕೆ ಮರಳಿ ಬಂದಾಗ, ಆಯ್. ಸಿ. ಎಸ್. ಪರೀಕ್ಷೆಯ ನಂತರ ಪ್ರೊಬೇಶನರ ಇದ್ದಾಗ ಕಲಿಯಲೇಬೇಕಾಗಿ ಬಂದ ಹರಕುಮುರಕು ಬಂಗಾಲಿ ಮಾತ್ರವಲ್ಲದೆ ಇನ್ನಾವ ಭಾರತೀಯ ಭಾಷೆಯೂ ಅವರಿಗೆ ಬರುತಿರಲಿಲ್ಲ. ಭಾರತೀಯ ಜೀವನದ ಇಲ್ಲವೆ ಸಂಸ್ಕೃತಿಯ ಮಾತಂತೂ ದೂರವೆ ಉಳಿಯಿತು. ಅದೇನೇ ಇರಲಿ, ಇಂಗ್ಲಂಡದಲ್ಲಿಯ ಅವರ ಶಿಕ್ಷಣದಿಂದ,—ಅವರಿಗೆ ಪಾಶ್ಚಾತ್ಯ ವಿಚಾರಪ್ರಣಾಲಿ, ಪಾಶ್ಚಾತ್ಯ ಜೀವನರೀತಿ ಮತ್ತು ಪಾಶ್ಚಾತ್ಯ ಸಭ್ಯತೆ ಇವು ದೃಢಮೂಲವಾಗಿ ಹೋಗಿದ್ದವು. ಅವರ ಕಾಲದ ಒಳ್ಳೆ ಸುಸಂಪನ್ನ ಧೀಮಂತನೆನಿಸಿಕೊಂಡ ಯಾವ ಐರೋಪ್ಯನನ್ನೂ ಸರಿಗಟ್ಟಬಲ್ಲಷ್ಟು ಪಾಶ್ಚಾತ್ಯತೆಯು ಅವರಿಗೆ ಪ್ರತಿಯೊಂದು ವಿಷಯ ದಲ್ಲೂ ಅಳವಟ್ಟು ಹೋಗಿತ್ತು. ಈ ಬಗೆಯ ತನ್ಮಯತೆಯ ಮೂಲಕವೆ ಅವರ ಪಾರದರ್ಶಕ ದೂರದೃಷ್ಟಿಗೆ ಪಾಶ್ಚಾತ್ಯ ಸಭ್ಯತೆಯ ಛಿದ್ರಗಳೆಲ್ಲವೂ ತೆರೆದು ತೋರಿಸಿ ಕೊಂಡವು. ಪಾಶ್ಚಾತ್ಯರ ವೈಜ್ಞಾನಿಕ ದೃಷ್ಟಿ-ಪದ್ಧತಿಗಳನ್ನು, ಸಂಘಟನಾಸಾಮರ್ಥ್ಯ ವನ್ನು, ಶಿಸ್ತಿನ ಮಹತ್ವವನ್ನು, ಭವ್ಯವೂ ಬೃಹತ್ತರವೂ ಜಟಿಲವೂ ಆದ ಆ ಸಭ್ಯ ತೆಯ ರಚನೆಯನ್ನು ಅವರು ತುಂಬ ಮೆಚ್ಚಿ ಹೊಗಳಿದ್ದಾರೇನೊ ನಿಜ; ಆದರೆ ತಿಳಿವಿನ ತವುರಾದ ಆತ್ಮತತ್ತ್ವದ ವಿಷಯಕ್ಕಿದ್ದ ಪಾಶ್ಚಾತ್ಯರ ಕೊರತೆಯ ಅರಿವು, ಹಾಗೂ ಮಾನವಕುಲವು ವಿಕಾಸಕ್ರಮದ ಮುಂದಿನ ಹಂತಕ್ಕೆ ಹತ್ತಬೇಕಾದರೆ ಅವರಿಗೆ ಅತ್ಯಗತ್ಯವೆನಿಸಿದ ಉನ್ನತ ದೃಷ್ಟಿಕೋನವು ಪಾಶ್ಚಾತ್ಯರಲ್ಲಿ ತೀರ ವಿರಲವೆಂಬ ಅರಿವು ಅವರಿಗೆ ಸಾಕಷ್ಟು ಇತ್ತು. ಅವರದು ಯಾವಾಗಲೂ ಸಹಾನುಭೂತಿಪರ ವೃತ್ತಿ, ಹೊಂದಿಕೊಂಡು ಹೋಗುವ ಸ್ವಭಾವ, ವ್ಯಾಪಕವಾದ ದೃಷ್ಟಿ. ಆದ್ದರಿಂದ ಪಾಶ್ಚಾತ್ಯವೆನಿಸಿಕೊಂಬ ಯಾವುದನ್ನೂ ಅವರು ಎಂದೂ ನಿರಾಕರಿಸದೆ ಅಥವಾ ಅಗ್ರಾಹ್ಯವೆನ್ನದೆ ಇದ್ದರಿಷ್ಟೇ ಅಲ್ಲ, ಪೌರ್ವಾತ್ಯ ಪಾಶ್ಚಾತ್ಯ ಸಂಸ್ಕೃತಿಗಳೆರಡೂ ಸಮ- ನ್ವಯಗೊಳ್ಳುವದು ಅಗತ್ಯವೆಂದು ಅವರು ಭಾವಿಸಿದ್ದರು. ಈ ಹಿನ್ನೆಲೆಯಲ್ಲಿ ಅವರು ತಾತ್ಪೂರ್ತಿಕವಾಗಿ ಬಡೋದೆಯಲ್ಲಿ ನೆಲೆಸಿದಾಗ, ಅಲ್ಲಿ ಅವರಿಗೆ ಪೌರ್ವಾತ್ಯ ಪರಂಪರೆ ಯನ್ನು ಅದರಲ್ಲಿಯೂ ಭಾರತೀಯ ಪರಂಪರೆಯನ್ನು ಅಭ್ಯಸಿಸಲು ಸಾಕಷ್ಟು ಸಂಧಿಯು ದೊರಕಿತು. ಈ ಅಭ್ಯಾಸ ಮೂಲಕವಾಗಿಯೆ ಮುಂದೆ ಅವರು ಸಮನ್ವಯಪರ ದೃಷ್ಟಿಯನ್ನು ಮಂಡಿಸಿದರು; ಈ ದೃಷ್ಟಿಯ ಮೂಲಕವೆ ಪೌರ್ವಾತ್ಯ-ಪಾಶ್ಚಾತ್ಯವೆಂಬುದರ ಮೌಲ್ಯವನ್ನು ಜನರು ಯಥೋಚಿತವಾಗಿ ಅರಿಯಲು ಸಾಧ್ಯವಾಯಿತು.

ಬಡೋದೆಯೆಂದರೆ ಆಗ ಗುಜರಾಥದಲ್ಲಿಯ ಭಾರತೀಯ ಸಂಸ್ಥಾನವೊಂದರ ಸುಂದರ ರಾಜಧಾನಿ. ಪ್ರಗತಿಪರರೆಂದು ಹೆಸರಾದ ಸಯಾಜಿರಾವ ಗಾಯಕವಾಡ ಮಹಾರಾಜರು ಅದನ್ನಾಳುವ ಪ್ರಭು ಎಂಬ ಹೆಮ್ಮೆ ಅದಕ್ಕೆ. ಇಂದಿನ ಅರ್ಥದ ಪ್ರಜಾಪ್ರಭುತ್ವವೆಂಬುದು ಹಿಂದುಸ್ಥಾನದಲ್ಲಿ ಆಗ ಕೇವಲ ಕನಸಿನ ಮಾತಾಗಿತ್ತು. ಎಂದ ಮೇಲೆ, ಸರ್ವಾಧಿಕಾರದ ಕೇಂದ್ರಸ್ಥಾನವಾಗಿಯೂ ಸರ್ವತಂತ್ರಸ್ವತಂತ್ರನಾಗಿಯೂ ಮೆರೆಯುವ ಮಹಾರಾಜನಿಗೆ ಆಗರವಾಗಿದ್ದ ಇಂಥ ಒಂದು ಸಂಸ್ಥಾನದಲ್ಲಿ ಪ್ರಜಾಪ್ರಭುತ್ವವುಂಟೆಂದು ಕಲ್ಪಿಸುವದು ಎದೆಗಾರಿಕೆಯಲ್ಲವೆ ? ಆಗಿನ ಕಾಲದಲ್ಲಿ ಹಿಂದೀ ಸಂಸ್ಥಾನಗಳಲ್ಲೆಲ್ಲ ಅವುಗಳ ಅಧಿಪತಿಗಳೆಂಬವರು, ನಿಶ್ಚೇತನಗೊಳಿಸುವ, ಪ್ರಾಣವನ್ನೆ ಹಿಂಡುವ, ಬ್ರಿಟಿಶರ ಸಾರ್ವಭೌಮತ್ವದ ಪ್ರತಿನಿಧಿಯಾದ 'ರೆಸಿಡೆಂಟ' ನೆಂಬ ಆಂಗ್ಲ ಅಧಿಕಾರಿಯ ಕೈಗೊಂಬೆಗಳಾಗಿ ಕುಣಿಯುತಿದ್ದರೆಂಬ ಮಾತು ಬೇರೆ. ಇಂಥ ನಿರುತ್ಸಾಹದ ವಾತಾವರಣದಲ್ಲಿಯೂ ತಮ್ಮ ಪ್ರಜೆಗಳನ್ನು ಪ್ರೀತಿಸುತ್ತ ಅವರ ಕಲ್ಯಾಣಕ್ಕೆ ಹವಣಿಸುವ ಕೆಲ ಸಂಸ್ಥಾನಿಕರು ತೀರ ವಿರಲವಾದರೂ ಅಲ್ಲಲ್ಲಿ ಕಂಡುಬರುತಿದ್ದರು. ಅಂಥ ಪ್ರಬುದ್ಧ ನಿರ್ಭೀತ ಸಂಸ್ಥಾನಿಕರಲ್ಲಿ ಖಂಡಿತವಾಗಿ ಸಯಾಜಿರಾಯರು ಪ್ರಮುಖರು. ಅವರು ಸ್ವತಃ ಒಳ್ಳೆ ಸುಶಿಕ್ಷಿತರು ; ದೇಶದೇಶಾಂತರಗಳನ್ನು ಸುತ್ತಿ ಅನುಭವ ಪಡೆದುಕೊಂಡವರು. ಉತ್ತಮ ರಾಜ್ಯಭಾರದ ವಿಷಯದಲ್ಲಿಯೂ ತಮ್ಮ ಪ್ರಜೆಗಳು ಸುಶಿಕ್ಷಿತರಾಗಬೇಕೆಂಬ ವಿಷಯದಲ್ಲಿಯೂ ಅವರು ತುಂಬ ಶ್ರದ್ಧೆವಹಿಸಿದವರು. ಅವರು ಅನೇಕ ಸುಧಾರಣೆಗಳನ್ನು ಪ್ರಚಾರದಲ್ಲಿ ತಂದರು, ಶಿಕ್ಷಣದ ಸೌಕರ್ಯವನ್ನು ವಿಸ್ತರಿಸಿದರು, ಗ್ರಂಥಾಲಯಗಳ ಪ್ರಸಾರವನ್ನು ಕೈಕೊಂಡರು, ಕಲಾಭುವನವನ್ನು ಸ್ಥಾಪಿಸಿದರು, ಹಿಂದುಳಿದವರ ಹಾಗೂ ಹೆಣ್ಣುಮಕ್ಕಳ ಪ್ರಗತಿಗಾಗಿ ಪ್ರಯಾಸಪಟ್ಟರು. ಕಾರ್ಯಕ್ಷಮ ಯೋಗ್ಯತಾಸಂಪನ್ನ ಜನರ ಬೆಲೆಯು ಅವರಿಗೆ ತಿಳಿದಿತ್ತು. ವಿದೇಶೀಯ ಶಿಕ್ಷಣದ ಮಹತ್ವವು ಅವರಿಗೆ ಮನವರಿಕೆಯಾಗಿತ್ತು. ತಮ್ಮ ದಿವಾಣರನ್ನು ಆಯ್ದುಕೊಳ್ಳುವದರಲ್ಲಿ ಅವರು ತುಂಬ ಜಾಗರೂಕರಾಗಿರುತಿದ್ದರು. ತಮ್ಮ ಈ ಪ್ರಗತಿಪರ ದೃಷ್ಟಿಯ ಫಲವಾಗಿಯೆ ಅವರು ಇಂಗ್ಲಂಡದಲ್ಲಿ ಮಿ. ಕಾಟನ್‌ರಿಂದ ಅರಿಯುತ್ತಲೆ ಶ್ರೀ ಅರವಿಂದರನ್ನು ತಮ್ಮ ಸಂಸ್ಥಾನದ ಸೇವೆಯಲ್ಲಿ ಸೇರ್ಪಡಿಸಿಕೊಳ್ಳಲು ನಿರ್ಧರಿಸಿದರು. ಶ್ರೀ ಅರವಿಂದರಿಗೂ ಈ ಸ್ಥಳವು ತುಂಬ ಹೊಂದಿಕೆಯಾಗಿ ಅವರ ಅಭ್ಯಾಸಕ್ಕೆ ಅನುಕೂಲವೆನಿಸಿತು ; ತಮ್ಮ ನಿತ್ಯದ ಅಧಿಕಾರ-ನಿಯೋಗದ ಜೊತೆಗೂ ಇನ್ನುಳಿದ ಕಾರ್ಯ ಕಲಾಪಗಳ ಜೊತೆಗೂ ಬಹುಮುಖವೂ ವಿಶಾಲವೂ ಆದ ಜ್ಞಾನವನ್ನು ಸಂಚಯಿಸುವ ಕಾರ್ಯದಲ್ಲಿಯೂ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವ ಕಾರ್ಯದಲ್ಲಿಯೂ ಅವರು ಉದ್ಯುಕ್ತರಾದರು. ಶ್ರೀ ದಿನೇಂದ್ರಕುಮಾರ ರಾಯ ಎಂಬವರು ತಮ್ಮ 'ಅರವಿಂದ ಪ್ರಸಂಗ' ಎಂಬ

ಬಂಗಾಲಿ ಪುಸ್ತಕದಲ್ಲಿ "ಕೇವಲ ಜ್ಞಾನ ಸಂಚಯವೆ ಆಗ ಅವರ ಜೀವನದ ಏಕಮಾತ್ರ ಧ್ಯೇಯವಾಗಿತ್ತು" ಎಂದು ಉಲ್ಲೇಖಿಸಿದ್ದಾರೆ.

ಬಡೋದಾ ಸಂಸ್ಥಾನದ ಸೇವೆಯಲ್ಲಿ ಶ್ರೀ ಅರವಿಂದರು ಪ್ರಾರಂಭಕ್ಕೆ ಪ್ರತಿ ತಿಂಗಳ ೨೦೦ ರೂ. ಸಂಬಳದ ಮೇಲೆ ನಿಯುಕ್ತರಾಗಿ, "ರೆವ್ಹೆನ್ಯೂ ಸೆಟ್ಲಮೆಂಟ್" ಶಾಖೆಯಲ್ಲಿ ಉಮೇದವಾರರಾಗಿದ್ದರು; ಆ ಮೇಲೆ ಕೆಲ ಕಾಲ "ಸ್ಟಾಂಪ್ಸ ಎಂಡ್ ರೆವ್ಹೆನ್ಯೂ" ಶಾಖೆಯಲ್ಲಿ ಕೆಲಸ ಮಾಡಿದರು. ಕೆಲ ಕಾಲ "ಸೆಕ್ರೆಟೇರಿಯೆಟ್" ಕಚೇರಿಯಲ್ಲಿ ಕಾಗದಪತ್ರಗಳನ್ನು ದಾಟಿಸುವ ಕೆಲಸದಲ್ಲಿಯೂ ವರದಿಗಳನ್ನು ಬರೆಯುವದರಲ್ಲಿಯೂ ತೊಡಗಿಕೊಂಡಿದ್ದರು. ಆದರೆ ಬರಬರುತ್ತ ವಿದ್ಯಾವಿಷಯಕ ಮತ್ತು ಅಧ್ಯಾಪನ ವಿಷಯಕ ಕಾರ್ಯದತ್ತ ಆಕರ್ಷಿತರಾದರು; ಅರ್ಥಾತ್ ಆ ಕೆಲಸವು ಅವರಿಗೆ ತುಂಬ ಸಲಿಗೆಯದೆಂದೆನಿಸಿತು. ಅವರು ಮೊದಲು ಕಾಲೇಜದಲ್ಲಿ ಫ್ರೆಂಚ್ ಲೆಕ್ಚರರೆಂದು ಕೆಲಸ ಪ್ರಾರಂಭಿಸಿ, ಒಡನೆಯೆ ಇಂಗ್ಲಿಷ್ ಪ್ರೊಫೆಸರರೆಂಬ ಹುದ್ದೆಯನ್ನು ವಹಿಸಿದರು. ಕೊನೆಗೆ ೧೯೦೬ ರಲ್ಲಿ ಕಲಕತ್ತೆಗೆ ತೆರಳುವಾಗ ಆಗ ತಾನೆ ಬಡೋದಾ ಕಾಲೇಜದ ವ್ಹಾಯಿಸ್ ಪ್ರಿನ್ಸಿಪಾಲರೆಂದು ನಿಯುಕ್ತರಾಗಿದ್ದರು. ಆಗ ಅವರ ಮಾಸಿಕ ವೇತನವು ೭೫೦ ರೂ. ಇತ್ತು. ಅವರ ವಿಷಯಕ್ಕೆ ಮಹಾರಾಜರ ಮಮತೆ-ಮೆಚ್ಚುಗೆಗಳು ಎಷ್ಟಿದ್ದವೆಂಬುದು ಸ್ವಯಂ ಸ್ಪಷ್ಟವಿದೆ. ಏಕೆಂದರೆ, ಸಂಸ್ಥಾನದ ಅತಿ ಮಹತ್ವದ ಗುಪ್ತ ಕಾಗದಗಳನ್ನು ಸಿದ್ಧಪಡಿಸಿಕೊಡುವ ಕಾರ್ಯವನ್ನು ಆಗಾಗ ಅವರಿಗೇ ಒಪ್ಪಿಸಲಾಗುತಿತ್ತು. ಎಷ್ಟೋ ಸಲವಂತೂ ಮಹಾರಾಜರ ತೀರ ಖಾಸಗಿ ಕಾರ್ಯಕ್ಕಾಗಿ ಅವರಿಗೆ ಬಿನ್ನವಿಸಿಕೊಳ್ಳಲಾಗುತಿತ್ತು. ಅವರ ಏಕಾಂತಪ್ರಿಯತೆ, ಸಲಿಗೆಯನ್ನರಿಯದ ಅವರ ಮುಖಹೀನ ಸ್ವಭಾವ ಇವುಗಳ ಮೂಲಕವೂ ಕೃತಾರ್ಥ ರಾಜಭೃತ್ಯನಿಗೆ ಅವಶ್ಯವಾಗಿ ಇರಬೇಕಾಗಿದ್ದ ಕೆಲವೊಂದು ವಿಶೇಷ ಅರ್ಹತೆಗಳು ಅವರ ಪ್ರಕೃತಿಯಲ್ಲಿಯೆ ಇರದ ಮೂಲಕವೂ ಈ ದರ್ಬಾರಿ ದಿಶೆಯಲ್ಲಿ ಅವರಿಗೆ ಏಳಿಗೆಯಾಗಲಿಲ್ಲ. ಆದರೆ ಈ ಬಗ್ಗೆ ಅವರಿಗೆಂದೂ ಮಿಡುಕುಂಟಾಗಲಿಲ್ಲ. ಎಷ್ಟೋ ಸಲವಂತೂ ಅವರು ರಾಜಭೋಜನಗಳಿಗೆ ಸಹ ಹೋಗುತಿರಲಿಲ್ಲ; ಯಾವುದೋ ವಿಶೇಷ ಕಾರ್ಯವೊಂದು ತಮಗಾಗಿ ಕಾದಿದೆಯೆಂದು ತೋರಿದ ಸಂದರ್ಭಗಳಲ್ಲಿ ಮಾತ್ರ ರಾಜಭೋಜನದ ಪಂಕ್ತಿಲಾಭ ಪಡೆಯುತಿದ್ದರು. ಅಪ್ರತಿಮನೂ ತೇಜಸ್ವಿಯೂ ಕಾರ್ಯಕ್ಷಮನೂ ಆದ ತಮ್ಮ ಈ ಅಧಿಕಾರಿಯ ನ್ಯೂನತೆ ಏನೆಂಬುದು ಮಹಾರಾಜರಿಗೆ ಕಾಲಾಂತರದಲ್ಲಿ ಗೊತ್ತಾಗಲು ಅವರು ಶ್ರೀ ಅರವಿಂದರಿಗೆ ತಮ್ಮ ಹಾದಿಯನ್ನೆ ಅನುಸರಿಸಲು ಅನುವು ಮಾಡಿಕೊಟ್ಟರು; ವಿದ್ಯಾವಿಭಾಗದಲ್ಲಿಯೆ ಅವರನ್ನು ನಿರಾತಂಕವಾಗಿ ಇರಗೊಟ್ಟರು. ಅವರು ತಮ್ಮ ವಿದ್ಯಾರ್ಥಿಗಳಿಗೂ ಸಹಾಧ್ಯಾಪಕರಿಗೂ ಅತಿ ಪ್ರಿಯರಾಗಿದ್ದರು; ಅವರು ಇದಕ್ಕೂ ವಿಸ್ತಾರದ ಹಾಗೂ ಪ್ರಕ್ಷುಬ್ಧ ಕಾರ್ಯರಂಗದಲ್ಲಿ

ಕಾಲಿಕ್ಕಿ ಅಲ್ಲಿಂದ ವೈದೆಗೆಯುವವರೆಗೆ ಅವರೆಲ್ಲರ ಸುಮಧುರ ಸ್ನೇಹಾದರಗಳಿಗೆ ಪಾತ್ರರಾಗಿದ್ದರು.

ಮೇಲ್ಕಾಣಿಸಿದ ಅಧಿಕಾರಜೀವನವನ್ನು ಸಾಮಾನ್ಯರೀತಿಯಲ್ಲಿ ಸಾಗಿಸಿಕೊಂಡು ಹೋಗುತ್ತಿರುವಂತೆ ಕಂಡರೂ ಒಳಗೊಳಗೆ ಅವರು ತಮ್ಮ ಅಂತಃಪ್ರೇರಣೆಯನ್ನೇ, ತಮ್ಮ ಸ್ವಭಾವಸ್ವಧರ್ಮಗಳನ್ನೇ ಅನುಸರಿಸುತಿದ್ದರು. ಪ್ರತಿಯೊಂದು ವಿಷಯದ ಅಂತರ್ಭೂತ ಸಾರಸತ್ತ್ವವನ್ನೇ ನಿಷ್ಠುರತೆಯಿಂದ ಶೋಧಿಸಿ ತೆಗೆಯುವ ವಿಧಾನವೆಂದು ಇದನ್ನು ವರ್ಣಿಸಿ ಹೇಳಬಹುದು. ಕೇವಲ ನಾಮ-ರೂಪಗಳಿಂದ, ಬರಿ ತೋರಿಕೆಗಳಿಂದ, ಬಾಹ್ಯ ಅಭಿವ್ಯಕ್ತಿಗಳಿಂದ ಅವರಿಗೆಂದೂ ಸಮಾಧಾನವೆನಿಸುತಿರಲಿಲ್ಲ. ಅವರು ಯಾವಾಗಲೂ ಪ್ರತಿಯೊಂದು ಸಂಗತಿಯ ಮೂಲಕ್ಕೆ ಕೈಯಿಕ್ಕುವರು. ಪಾಶ್ಚಾತ್ಯ ಸಭ್ಯತೆಯ ಮೂಲಭೂತ ಉಗಮಾಗರಗಳ ಸ್ಪಷ್ಟ ಚಿತ್ರವು ಅವರ ಕಣ್ಣೆದುರಿಗಿದ್ದಿತಲ್ಲದೆ ಅದು ಏನನ್ನು ಪ್ರತಿನಿಧಿಸುತಿದೆಯೆಂಬುದರ ನಿಶ್ಚಿತ ಕಲ್ಪನೆಯೂ ಅವರಿಗಿತ್ತು. ಈಗ ಅವರು ಭಾರತೀಯ ಜೀವನದ ಹಾಗೂ ಪ್ರಾಚೀನ ಕಾಲದಿಂದಲೂ ಪರಂಪರಾಗತವಾಗಿ ಸಾಗಿ ಬಂದ ಅದರ ಸಂಸ್ಕೃತಿಯ ಮಹೋದಧಿಯಲ್ಲಿ ಮುಳುಗಿ ಮೀಯಲು ಮನಸ್ಸು ಮಾಡಿ ಆ ಜೀವನವನ್ನು, ಆ ಸಂಸ್ಕೃತಿಯನ್ನು, ಸದಾ ಸಜೀವವಾಗಿ ನವೋನವವಾಗಿ ನಳನಳಿಸುವಂತಿಟ್ಟ ಆ ಸನಾತನ ಸ್ಫೂರ್ತಿಯನ್ನು ಸ್ವತಃ ಕಂಡು ಹಿಡಿಯಲು ಬಯಸಿದರು. ಭಾರತಕ್ಕೆ ಮಹತ್ತರವಾದ ಸಾಂಸ್ಕೃತಿಕ ಪರಂಪರೆಯುಂಟೆಂದು ಅವರಿಗೆ ತುಂಬ ಅಭಿಮಾನವೆನಿಸಿದರೂ ದೇಶವು ಲಜ್ಜಾಸ್ಪದ ರಾಜಕೀಯ ದಾಸ್ಯದಲ್ಲಿದೆಯೆಂಬುದು ಅವರಿಗೆ ತುಂಬ ನೋವನ್ನುಂಟು ಮಾಡಿತು. ಅವರು ಈಗ ಭಾರತದಲ್ಲಿಯೆ ಇದ್ದ ಕಾರಣ, ಭಾರತವನ್ನು ಈ ದಾಸ್ಯಪಂಕದಲ್ಲಿ ನೂಕಿದ ದೌರ್ಬಲ್ಯದ ಅಂತರ್ಭೂತ ಕಾರಣಗಳೇನು ಎಂಬುದನ್ನು ಶೋಧಿಸತೊಡಗಿದರು. ಭಾರತದ ಲಕ್ಷಾನುಲಕ್ಷ ಜನರ ಶೋಚನೀಯ ದಾರಿದ್ರ್ಯದ ಅರಿವು ಅವರಿಗಿತ್ತಾಗಿ, ಮೂಲತಃ ಈ ದಾರಿದ್ರ್ಯಕ್ಕೆ ಕಾರಣವಾಗಿದ್ದ ಆರ್ಥಿಕ ಹಾಗೂ ಇನ್ನುಳಿದ ಸಂಗತಿಗಳನ್ನು ತಿಳಿದುಕೊಳ್ಳಲು ತವಕಿಸಿದರು. ಭಾರತೀಯ ಸಾಮಾಜಿಕ ಹಾಗೂ ಇನ್ನುಳಿದ ಅನಿಷ್ಟ ಸಂಪ್ರದಾಯಗಳ ಮೇಲೆ ಬಹು ದೀರ್ಘಕಾಲದ ಧೂಳಿ ಮುಸುಕಿ ಜೀವನವನ್ನು ಮುಸುಕು ಮಾಡಿದೆಯೆಂಬುದು ಅವರಿಗೆ ತಿಳಿದು ಬಂತು; ಮತ್ತು ಇದನ್ನು ಉಚ್ಚಾಟನಗೊಳಿಸಲು ಎತ್ತ ಸೊನ್ನೆಯನ್ನಿಕ್ಕಬೇಕೆಂಬುದಕ್ಕೆ ತುಡುಕತೊಡಗಿದರು. ಆದರೆ ಎಲ್ಲಕ್ಕೂ ಮಿಗಿಲಾಗಿ ಅವರು ಹುಡುಕತೊಡಗಿದುದು ನಿಜ ಸ್ವರೂಪವನ್ನು, ಸರ್ವಾಂತರ್ಗತವಾದ ಆತ್ಮವನ್ನು, ಸರ್ವವ್ಯಾಪಿಯಾದ ಸರ್ವದರ ಜ್ಞಾನ ಮಾಡಿಕೊಡುವ ಏಕಮೇವಾದ್ವಿತೀಯವಾದ ಆ ಸತ್‌ಸ್ವರೂಪವನ್ನು. ಈ ಸಂಶೋಧನೆಯೆ ಮಿಕ್ಕೆಲ್ಲವನ್ನೂ ಮೀರಿ ನಿಂತಿತು.

ಎಷ್ಟೋ ಸಲವಂತೂ ಅವರು ಇನ್ನುಳಿದ ಅನ್ವೇಷಣಗಳನ್ನು ಬದಿಗಿರಿಸಿದಂತೆ ಭಾಸವಾಗುತಿತ್ತು. ಆದರೆ ಹಾಗೆಂದೂ ಇರಲಿಲ್ಲ. ಅವರ ಮುತ್ತಿಗೆ, ಕವಲು ಕವಲಾಗಿ ನಾಲ್ಕೂ ನಿಟ್ಟಿನಿಂದ ಸುತ್ತುವರಿವ ಮುತ್ತಿಗೆ, ಅವರು ಅದಾವ ಅನ್ವೇಷಣದಲ್ಲಿ ತೊಡಗಿದರೂ ಅದು ತಮ್ಮನ್ನು ಕೇಂದ್ರಸ್ಥ ಸತ್ಯದತ್ತಲೇ ಕರೆದೊಯ್ಯುವದೆಂದು ಅವರಿಗೆ ಮನವರಿಕೆಯಾಗಿತ್ತು; ಆ ಸತ್ಯಜ್ಞಾನವು ಒಮ್ಮೆ ಆಗಿಹೋದರೆ ಉಳಿದೆಲ್ಲದರ ಜ್ಞಾನವು ತಾನಾಗಿ ಆಗಿ ಹೋಗುವದು. 'ಯಸ್ಮಿನ್ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ'. ಹೀಗೆ ಅವರ ಜೀವನಪ್ರವಾಹವು ಇಬ್ಬಗೆಯಾಗಿ ಹರಿಯ ತೊಡಗಿತು. ಒಂದು ಬಹಿರ್ಮುಖವಾದುದು, ಕಣ್ಣಿಗೆ ಕಾಣುವಂತಹದು — ಅದೆಂದರೆ ಅವರ ಅಧಿಕಾರಜೀವನ ಹಾಗೂ ಬಹುಮುಖ ಸಾಹಿತ್ಯ ಮತ್ತು ಇನ್ನಿತರ ಚಟುವಟಿಕೆಗಳಿಂದ ಕೂಡಿದ ಜೀವನ. ಅವರ ಜೀವನದ ಇನ್ನೊಂದು ಪ್ರವಾಹ ಗುಪ್ತಗಾಮಿಯಾದುದು ಮತ್ತು ಪ್ರಬಲವಾದುದು; ಅದು ತನ್ನ ಗುರಿಯತ್ತ ನಿಶ್ಚಿತವಾಗಿ ವೇಗದಿಂದ ಸಾಗಿದಂತಹದು; ಅದು ಹೆರವರ ಕಣ್ಣಿಗೆ ಕಾಣಿಸದು; ಆದರೆ ಅದುವೆ ನಿಜ ಅರವಿಂದರನ್ನು ತನ್ನ ವಕ್ಷದಲ್ಲಿಟ್ಟು ಅಸ್ಖಲಿತವಾಗಿ ಅನುದಿನವೂ ತೇಲಿಸಿಕೊಂಡು ಹೋಗಿ ಅವರನ್ನು 'ಯೋಗೇಶ್ವರ' ನ ಪದಕ್ಕೆ ಮುಟ್ಟಿಸಿತು.

ಇವರ ಈ ಮಹಾ ಅನ್ವೇಷಣಕ್ಕೆ, ಜಗದ ಉತ್ಪತ್ತಿ-ಸ್ಥಿತಿಗಳ ಕಾರಣವನ್ನು ತಿಳಿಯಬೇಕೆಂಬ ಬೌದ್ಧಿಕ ಪಿಪಾಸೆ ಮಾತ್ರವೆಂದು ತಪ್ಪಾಗಿ ಗ್ರಹಿಸಲಾಗದು. ಸರ್ವಥಾ ಆ ಬಗೆಯ ಪಿಪಾಸೆ ಅವರಿಗೆ ಇರಲಿಲ್ಲ. ಅವರು ಸತ್ಯದ ಅನುಸಂಧಾನವನ್ನು ತಮ್ಮ ಸಮಸ್ತ ಜೀವಿತದ ಸತ್ತ್ವದಿಂದ ತಮ್ಮ ಇರವನ್ನೆ ಪಣಕ್ಕಿಟ್ಟು ಮಾಡಿದ್ದಾರೆ. ಆ ಅನ್ವೇಷಣವು, ತತ್ತ್ವಜ್ಞಾನಿಯ ವಿಶ್ವವಿಷಯಕ ಕೇವಲ ಬೌದ್ಧಿಕ ಸಿದ್ಧಾಂತದ ಮಾದರಿಯುದಲ್ಲ. ಅದು ತನ್ನ ಆರಾಧ್ಯ ದೈವತದ ಬಗೆಗಿದ್ದ ಭಕ್ತನ ಪಿಪಾಸೆ; ಅದು ನರನು ನಾರಾಯಣನಿಗಾಗಿ ನಡೆಸಿದ ಸಂಧಾನ. ಅದು ಕೇವಲ ವೈಯಕ್ತಿಕ ಮುಕ್ತಿಗಾಗಲಿ ನಿರ್ವಾಣಕ್ಕಾಗಿಯಾಗಲಿ ಇದ್ದುದಲ್ಲ. ಆದರೆ ಅದು ಇದ್ದುದು, ಆ ಮೇಲೆ ಪ್ರಕಟಪಡಿಸಿದಂತೆ ಅಖಿಲ ಮನುಕುಲದ ಆಧ್ಯಾತ್ಮಿಕ ಪ್ರಗತಿಗಾಗಿ, ವಿಕಾಸ ಕ್ರಮದ ಮುಂದಿನ ಹೆಜ್ಜೆಗಾಗಿ, ಈ ಭೂಲೋಕದ ಸಮಸ್ತ ಮಾನವಜೀವನವನ್ನೆ ದಿವ್ಯವಾಗಿ ಮಾರ್ಪಡಿಸುವದಕ್ಕಾಗಿ.

ಅವರ ಅಮೋಘ ಸಿದ್ಧತೆಯನ್ನು ನಾವು ಈ ದೃಷ್ಟಿಕೋನದಿಂದ ಪರಿಶೀಲಿಸಬೇಕು. ಇನ್ನು ಮುಂದಿನ ೧೪ ವರುಷಗಳ ಅವರ ಜೀವಿತವು ಅಧಿಕಾರಕ್ಕೆ ಸಂಬಂಧಪಟ್ಟ ಕಾರ್ಯಗಳ ಜೊತೆಗೆ ಇನ್ನುಳಿದ ನಾನಾ ಚಟುವಟಿಕೆಗಳಿಂದ ತುಂಬಿತ್ತೇನೊ ನಿಜ. ಆದರೆ ಆಧ್ಯಾತ್ಮಸಾಧನದ ಗುಪ್ತಪ್ರವಾಹವೆ ಯಾವಾಗಲೂ ಹರಿಯುವ ಪ್ರಭಾವಶಾಲಿ ಪ್ರವಾಹವಾಗಿತ್ತು. ಅವರ ರಾಜಕಾರಣ-ದೇಶಭಕ್ತಿಗಳು ಸಹ

ಅವರ ಆ ಸಾಧನದ ರೂಪಗಳಲ್ಲದೆ ಇನ್ನು ಬೇರೆ ಅಲ್ಲ. ಈ ಸಂಗತಿಯು ಒಡೆದು ಕಾಣಬೇಕಾದರೆ ಕೆಲವು ಕಾಲ ಹಿಡಿಯಿತು ಅಷ್ಟೇ. ಅವರು ಪ್ರತ್ಯಕ್ಷವಾಗಿ ರಾಜಕಾರಣದಲ್ಲಿ ಅಡಿಯಿಡುವ ಬಹು ಪೂರ್ವದಲ್ಲಿಯೆ ಈ ಆಧ್ಯಾತ್ಮಪ್ರವೃತ್ತಿಯು ಅವರ ಮನವನ್ನು ಭದ್ರವಾಗಿ ಆವರಿಸಿಕೊಂಡುಬಿಟ್ಟಿತ್ತು. ಅವರ ದೇಶಭಕ್ತಿಯೂ ರಾಜಕಾರಣವೂ ಆಧ್ಯಾತ್ಮಿಕತೆಯಿಂದ ವ್ಯಾಪ್ತವಾಗಿದ್ದವು. ಶ್ರೀ ಅರವಿಂದರ ವಿಚಾರಧಾರೆಯಲ್ಲಾಗಲಿ ಅವರ ಜೀವನಧಾರೆಯಲ್ಲಾಗಲಿ ಆಧ್ಯಾತ್ಮಿಕತೆಯನ್ನು ಕಡೆಗಣಿಸುವದೆಂದರೆ ಅವರ ಸತ್ತ್ವದ ಸಾರಸರ್ವಸ್ವವನ್ನೆ ಕಡೆಗಣಿಸಿದಂತೆ.

ಇನ್ನು, ಬಡೋದೆಯಲ್ಲಿ ಶ್ರೀ ಅರವಿಂದರು ಕೈಕೊಂಡ ಚಟುವಟಿಕೆಗಳೇನು, ಬೆಂಬತ್ತಿದ ಗುರಿಗಳಾವುವು ಎಂಬುದನ್ನಷ್ಟು ಈಗ ನೋಡುವಾ. ಅಲ್ಲಿಯ ಅವರ ಜೀವಿತವೆಂದರೆ, —ಸಂಸ್ಥಾನದ ಸೇವೆ, ಆಳವಾದ ಅಭ್ಯಾಸ, ಗುಪ್ತಸ್ವರೂಪದ ರಾಜಕೀಯ ಚಟುವಟಿಕೆ, ದಿನ ಕಳೆದಂತೆ ಉಗ್ರವಾಗಿ ಸ್ಫುಟವಾಗುತ್ತ ಸಾಗಿದ ಅವರ ಸಾಧನೆ ಹಾಗೂ ಅವರ ಕುಟುಂಬಜೀವನ ಎಂಬುದಾಗಿ ವಿಂಗಡಿಸಿ ಹೇಳಬಹುದು. ಮೊದಲನೆಯದಾಗಿ, ಅವರು ತಮ್ಮ ಸಮಯದ ಬಹುಭಾಗವನ್ನು ಸಂಸ್ಕೃತದ ಹಾಗೂ ಇತರ ಭಾರತೀಯ ಭಾಷೆಗಳನ್ನು ಕಲಿಯುವದರಲ್ಲಿ ಕಳೆದರು. ಭಾಷಾಪ್ರಭುತ್ವದ ವಿಷಯದಲ್ಲಿ ಶ್ರೀ ಅರವಿಂದರಿಗೆ ಸಹಜಪಟುತ್ವವೆ ಇತ್ತೆಂದು ಕಾಣುತ್ತದೆ. ಕೌಲೆತ್ತಿನಂತೆ ತಲೆ ಹಾಕುವಷ್ಟು ಮಾತ್ರ ಬರುತ್ತಿದ್ದ ಬಂಗಾಲಿಯನ್ನು ಚೆನ್ನಾಗಿ ಕಲಿಯಲು ಮೊದಲಿಗೆ ಪ್ರಾರಂಭಿಸಿದರು. ಈ ಕಲಿಕೆ ಹೆಚ್ಚಾಗಿ ಸ್ವಯಂಪ್ರಯತ್ನದಿಂದಲೆ ಸಾಗಿತ್ತಾದರೂ ೧೮೯೮ರಲ್ಲಿ ಈ ಬಗ್ಗೆ ನೆರವು ನೀಡಲು ದಿನೇಂದ್ರಬಾಬುಗಳ ಸಲಹೆ ಕೋರಲಾಯ್ತು; ವಿಶೇಷತಃ ಬಂಗಾಲಿಯ ಶುದ್ಧ ಉಚ್ಚಾರದ ವಿಷಯದಲ್ಲಿ, ಅದರ ಪ್ರಚಲಿತ ಗಾದೆ-ನಾಣ್ಣುಡಿಗಳ ವಿಷಯದಲ್ಲಿ ಮತ್ತು ಸಾಹಿತ್ಯವಿಚಾರದಲ್ಲಿ. ಅವರ ಮನಸ್ಸಿನ ಮೇಲೆ ವಿಶೇಷ ಪರಿಣಾಮಮಾಡಿದ ಲೇಖಕರೆಂದರೆ ಇಬ್ಬರು; ಒಬ್ಬರು ಅರ್ವಾಚೀನ ವಂಗಕಾವ್ಯದ ಪುರಸ್ಕರ್ತರಾದ ಮಾಯ್ಕೆಲ್ ಮಧುಸೂದನ ದತ್ತರು, ಇನ್ನೊಬ್ಬರು ಶ್ರೇಷ್ಠ ವಂಗ ಕಾದಂಬರಿಕಾರರೂ ವಿಖ್ಯಾತ ಗದ್ಯಲೇಖಕರೂ ಆದ ಬಂಕಿಮಚಂದ್ರರು. ದತ್ತರಿಗೆ ಶ್ರೀ ಅರವಿಂದರು ಸಲ್ಲಿಸಿದ ಗೌರವವು ಅವರ ಒಂದು ದ್ವಿಪದಿಯಲ್ಲಿ ಹೀಗೆ ವ್ಯಕ್ತವಾಗಿದೆ:

* "ಕಾವ್ಯಸ್ಫೂರ್ತಿಯನಿತ್ತನು ಕವಿ ಕೌಶಲದಲಿ ವಂಗಕ್ಕೆ ।
ದಿವ್ಯ ಸ್ಪರ್ಶದಿ ವಂಗ ವಾಣಿಯದು ಮುಟ್ಟಿತು ಶೃಂಗಕ್ಕೆ" ॥

ಗದ್ಯದ ಪ್ರಭು ಬಂಕಿಮರ ಬರೆಹಗಳನ್ನೂ ಅವರು ಅಷ್ಟೇ ಮೆಚ್ಚಿದ್ದರು.

* 'Poet who first with skill inspired did teach
Greatness to our divine Bengali Speech. . .'

† ಸುಂದರ ಹೃದಯದ ಮಂದಾರದಿ ಮರುಭೂಮಿಯ ಬಿತ್ತಿದನು ।
ಎಂದೂ ನುಡಿಸದ ಮಧುಮಯ ಗದ್ಯದ ಸ್ವರವನ್ನೆತ್ತಿದನು " ॥

ಪುಣೆಯ 'ಇಂದುಪ್ರಕಾಶ' ಎಂಬ ಆಂಗ್ಲ-ಮರಾಠಿ ನಿಯತಕಾಲಿಕೆಯಲ್ಲಿ ಅವರು ೧೮೯೪ ರಷ್ಟು ಹಿಂದಕ್ಕೆ ಬಂಕಿಮಚಂದ್ರರ ಬಗ್ಗೆ ಅಭ್ಯಾಸಪೂರ್ಣ ಲೇಖಮಾಲೆಯನ್ನು ಸಹ ಬರೆದರು. ದಿನೇಂದ್ರಬಾಬುಗಳ ಸಹಾಯದಿಂದ ಒಂದು ವರುಷದ ಅವಧಿಯಲ್ಲಿ ಅಂದರೆ ೧೮೯೮-೯೯ ರಲ್ಲಿ ಬಂಗಾಲಿ ಭಾಷೆಯನ್ನು ಚೆನ್ನಾಗಿ ಕಲಿತುಕೊಂಡರು. ಮುಂದೆ ೧೯೦೯ ರಲ್ಲಿ ಅವರು 'ಧರ್ಮ' ಎಂಬ ಬಂಗಾಲಿ ಸಾಪ್ತಾಹಿಕವನ್ನು ನಡೆಸಲು ಸಮರ್ಥರಾದರು ಹಾಗು ಆ ಪತ್ರಿಕೆಯಲ್ಲಿಯ ಲೇಖನಗಳ ಬಹುಭಾಗವನ್ನು ಸ್ವತಃ ತಾವೇ ಬರೆಯುತಿದ್ದರು. ಆದರೆ ಬಂಗಾಲಿಗಿಂತ ಅವರ ಇಂಗ್ಲಿಷ್ ಭಾಷಾಪ್ರಭುತ್ವವೆ ಎಂದಿಗಾದರೂ ಮಿಗಿಲಾಗಿತ್ತೆಂಬ ಸಂಗತಿಯನ್ನು ಹೇಳಲೇಬೇಕು! ಸಾರ್ವಜನಿಕ ಸಭೆಗಳಲ್ಲಿ ಬಂಗಾಲಿಯಲ್ಲಿ ಮಾತನಾಡತಕ್ಕದ್ದೆಂಬ ವಿಚಾರ ಸಹ ಸಹಸಾ ಅವರ ಮನಸ್ಸಿನಲ್ಲಿ ಸುಳಿಯುತ್ತಿರಲಿಲ್ಲ.

ಅವರು ಸ್ವಾಧೀನಪಡಿಸಿಕೊಂಡ ಇನ್ನೊಂದು ಭಾಷೆಯೆಂದರೆ ಸಂಸ್ಕೃತ. ಭಾರತೀಯ ಮೂಲ ವಿಚಾರಪರಂಪರೆ-ಸಂಸ್ಕೃತಿ-ತತ್ತ್ವಜ್ಞಾನಗಳ ಉಗಮವನ್ನು ಅರಿತುಕೊಳ್ಳಲು ಈ ಪ್ರಾಚೀನ ಬೃಹತ್ ಭಾಷೆಯ ಜ್ಞಾನವು ಅತ್ಯಂತ ಅವಶ್ಯವೆಂಬುದು ಸ್ಪಷ್ಟವಿದೆ. ಅವರ ಸಂಸ್ಕೃತದ ಅಭ್ಯಾಸವು ಗಂಭೀರವಾಗಿತ್ತಷ್ಟೇ ಅಲ್ಲ, ಅದು ಸತತವೂ ಸಾಗಿತ್ತು. ಪ್ರಾಚೀನತಮವೂ ಅತ್ಯಂತ ವೈಭವಸಂಪನ್ನವೂ ಆದ ಈ ಭಾಷೆಯ ಭಾಂಡಾರದಲ್ಲಿದ್ದ ರತ್ನಪ್ರಭೆಯ ಪರಿಣಾಮವು ಅವರಲ್ಲಿ ಎಂದೂ ಮಾಜದಂತಿತ್ತು. ಆಧ್ಯಾತ್ಮಿಕ ವಿಷಯಗಳಲ್ಲಿ, ಉಪನಿಷತ್ತುಗಳೂ ಗೀತೆಯೂ ಅವರ ಮಾರ್ಗದರ್ಶಕ ಪಾರಾಯಣಗ್ರಂಥಗಳಾಗಿದ್ದವು. ಅವರು ಭಾರತೀಯ ವಿಚಾರ ಚರ್ಚೆಯನ್ನು ಕುರಿತು ಅಥವಾ ಭಾರತೀಯ ಮೂಲಭೂತ ಕಲ್ಪನೆಗಳನ್ನು ಕುರಿತು ಬರೆಯತೊಡಗಿದರೆಂದರೆ ಸಂಸ್ಕೃತ ಶಬ್ದಪ್ರಯೋಗಗಳು, ಅವತರಣಿಕೆಗಳು, ಮಹತ್ವದ ಬೀಜಶಬ್ದಗಳು ತಾವಾಗಿ ಅವರಿಗೂ 'ಗೊತ್ತಾಗದಂತೆ' ಅವರ ಲೆಕ್ಕಣಿಕೆಯ ತುದಿಗೆ ಜಾರಿ ಬರುತಿದ್ದವು. ಕ್ರತು, ಋತ, ಸ್ವಭಾವ, ಸ್ವಧರ್ಮ ಈ ಮುಂತಾದ ವ್ಯಾಪಕ ವ್ಯಂಜಕಾರ್ಥದ ಕೆಲ ಶಬ್ದಗಳನ್ನು ಬೇರೆ ಪದಪ್ರಯೋಗಗಳಿಂದ ಅಥವಾ ಕೇವಲ ಭಾಷಾಂತರದಿಂದ ಇಂಗ್ಲಿಷಿನಲ್ಲಿ ವ್ಯಕ್ತಪಡಿಸುವದು ದುಸ್ತರವೆಂಬುದು ಅವರಿಗೆ ಗೊತ್ತಿತ್ತು. ಇಂತಹ ಅರ್ಥಗರ್ಭಿತ ಪ್ರಯೋಗಗಳ ಇಂಗಿತವನ್ನು ಸ್ಪಷ್ಟಪಡಿಸಲು ಅವರು ಸದಾ

† 'He sowed the desert with ruddy-hearted rose,
The sweetest voice that ever spoke in prose'

ಕೂಲಂಕಷ ವಿವರಣೆಯನ್ನೆ ಕೊಡುತ್ತಿದ್ದರು. ಅವರ ಸಂಸ್ಕೃತದ ಅಭ್ಯಾಸವು ಕೇವಲ ಧಾರ್ಮಿಕ ಇಲ್ಲವೆ ತತ್ತ್ವವಿಷಯಕ ಗ್ರಂಥಗಳಿಗಷ್ಟೇ ಪರಿಮಿತವಾಗಿರಲಿಲ್ಲ. ವೇದ ಉಪನಿಷತ್ತು-ಗೀತೆ-ಮನುಸ್ಮೃತಿಗಳಷ್ಟೆ ಕಾಲಿದಾಸ-ಭವಭೂತಿಯರ ಕೃತಿಗಳೂ ರಾಮಾಯಣ-ಮಹಾಭಾರತಗಳೂ ಅವರಿಗೆ ಅಂಗೈನೆಲ್ಲಿಯಾಗಿ ಹೋಗಿದ್ದವು. ಭಾರತೀಯ ಸಾಂಸ್ಕೃತಿಕ ವಿಚಾರಧಾರೆಯ ಹಾಗೂ ಅದರ ನಾನಾಮುಖ ಅಭಿವ್ಯಕ್ತಿಯ ವಿಷಯಕ್ಕೆ ಅವರು ಮಾಡಿದ ಗುಣಗಾನವೂ ಸಮರ್ಥನೆಯೂ ಮತ್ತೊಬ್ಬರಿಂದ ಕಡ ತಂದಂತಹದೂ ಅಲ್ಲ, ಇಲ್ಲವೆ ಇನ್ನೊಬ್ಬರ ಪದಿನುಡಿಯೂ ಅಲ್ಲ. ಮಹಾನ್ ಮಹಾನ್ ಋಷಿಮುನಿಗಳು, ಸಾಹಿತ್ಯಕರು ತಮ್ಮ ಅಂತಃಸ್ಫೂರ್ತಿಯಿಂದಲೂ ಅಂತರ್‌ಜ್ಞಾನದ ಅನುಭವದಿಂದಲೂ ಬರೆದಿಟ್ಟುದನೆಲ್ಲ ಆಕಲನ ಮಾಡಿಕೊಂಡ ಜ್ಞಾನದ ಖನಿಯಿಂದ ಅದು ಓತಪ್ರೋತವಾಗಿ ಪುಟದು ಬಂದಿದೆ. ಅನೇಕಾನೇಕ ಋಕ್ಕುಗಳಿಗೂ ಈಶಾವಾಸ್ಯ ಉಪನಿಷತ್ತಿಗೂ ಗೀತೆಗೂ ಬರೆದ ಅವರ ಶುದ್ಧ ಸ್ವತಂತ್ರ ಭಾಷ್ಯಗಳು ಅವರ ಅಪಾರ ಪಾಂಡಿತ್ಯಕ್ಕೆ ಸಾಕ್ಷಿಯಾಗಿವೆ; ಅಷ್ಟೇ ಅಲ್ಲ, ಪ್ರಾಚೀನ ವಿಚಾರಲೋಕದ ಮೂಲವನ್ನೆ ಸೇರಿ ಆಲೋಡನ ಮಾಡಬಲ್ಲ ಅವರ ಸಾಮರ್ಥ್ಯಕ್ಕೂ ಹಾಗೂ ಅದರ ಸಾರಸತ್ತ್ವವನೆಲ್ಲ ಹೀರಿ ಸುಸ್ಪಷ್ಟ, ವೇಧಕ ಆಂಗ್ಲಪದಪ್ರಯೋಗಗಳಲ್ಲಿ ಹಿಡಿದಿರಿಸಬಲ್ಲ ಅವರ ಪ್ರತಿಭೆಗೂ ಆ ಭಾಷ್ಯಗಳೆ ಸಾಕ್ಷಿಯಾಗಿವೆ.

ಅವರು ಕಲಿಯಬೇಕಾಗಿ ಬಂದ ಇನ್ನೆರಡು ಭಾರತೀಯ ಭಾಷೆಗಳೆಂದರೆ ಮರಾಠಿ ಮತ್ತು ಗುಜರಾಥಿ. ಇವೆರಡೂ ಬಡೋದೆಯ ಸಂಸ್ಥಾನಭಾಷೆಗಳಾಗಿ ಆ ಸರಕಾರದಿಂದ ಮನ್ನಣೆ ಪಡೆದವುಗಳು. ಈ ಸಂಸ್ಥಾನದ ಸೀಮೆಯೆಲ್ಲ ಗುಜರಾಥಿಯನ್ನಾಡುವವರದೇ ಆಗಿದ್ದರೂ ಆಳುವ ರಾಜಭಾಷೆ ಮರಾಠಿಯಾಗಿತ್ತು. ಆದ್ದರಿಂದ ಸಂಸ್ಥಾನದಲ್ಲಿ ಇವೆರಡೂ ಭಾಷೆಗಳಿಗೆ ಅಷ್ಟೇ ಮಾನ-ಮನ್ನಣೆ ಕೊಡಲಾಗಿತ್ತು. ಶ್ರೀ ಅರವಿಂದರು ಈ ಭಾಷೆಗಳನ್ನು ಅಷ್ಟೊಂದು ಆಳವಾಗಿ ಅಭ್ಯಸಿಸಿದಂತೆ ಕಾಣಲಿಲ್ಲ. ಏಕೆಂದರೆ, ಅವರ ಯಾವ ಬರೆಹಗಳಲ್ಲಿಯೂ ಅಂಥ ಮಾತು ವ್ಯಕ್ತವಾಗಿಲ್ಲ; ಆ ಭಾಷೆಗಳ ಲೇಖಕರ ಬಗ್ಗೆ ಇವರು ಮಾಡುವ ಉಲ್ಲೇಖಗಳು ಕೇವಲ ಪ್ರಾಸಂಗಿಕವಾಗಿವೆ.

ಗ್ರೀಕ್, ಫ್ರೆಂಚ್ ಮೊದಲಾದ ಬೇರೆ ಭಾಷೆಗಳ ಅನರ ಅಭ್ಯಾಸವು ಅಗಲೂ ಕಡಿಮೆಯಾಗಿರಲಿಲ್ಲ. ಅವರ ಗ್ರಂಥಭಾಂಡಾರವು ಆರೇಳು ಐರೋಪ್ಯ ಭಾಷೆಗಳ ಪುಸ್ತಕಗಳಿಂದ ತುಂಬಿತ್ತು. ಭಾರತೀಯ ತತ್ತ್ವಜ್ಞಾನದ ಜೊತೆ ಜೊತೆಗೆ ಗ್ರೀಕ್ ಮತ್ತು ಜರ್ಮನ್ ತತ್ತ್ವಜ್ಞಾನಗಳ ಅಭ್ಯಾಸವೂ ಸಾಗಿತ್ತು. ನಿಜವಾಗಿ ನೋಡಿದರೆ, ಅವರು ಆಸಕ್ತಿ ತೋರದ ಹಾಗೂ ಆಲೋಚಿಸದಿದ್ದ ವಿಷಯಗಳೇ ಇರಲಿಲ್ಲ. ಮುಂಬಯಿಯ ಎರಡು ದೊಡ್ಡ ಪುಸ್ತಕದಂಗಡಿಗಳಿಗೆ, ಹೊಸ ಹೊಸ ಪುಸ್ತಕಗಳು

ಬಂದೊಡನೆಯೆ ತಪ್ಪದೆ ಸದಾ ತಿಳಿಸುತ್ತಿರಬೇಕೆಂದು ನಿರ್ದೇಶಿಸಿಬಿಟ್ಟಿದ್ದರು. ಆಂಗ್ಲ ಮತ್ತು ಸಂಸ್ಕೃತ ಕವಿಗಳನ್ನು ಅಭ್ಯಸಿಸುವಷ್ಟೆ ಆಸ್ಥೆ-ಕುತೂಹಲಗಳಿಂದ ಹೋಮರ, ಡಾಂಟೆ, ಹೊರೇಸ್‌ರ ಕೃತಿಗಳನ್ನೂ ಓದುತಿದ್ದರು. ಇಷ್ಟೆಲ್ಲ ವಿದೇಶೀಯ ಅಭ್ಯಾಸ-ಸಂಸ್ಕಾರಗಳಿಗೆ ಅಳವಟ್ಟು ಹೋಗಿದ್ದರೂ ಮೂಲತತ್ತ್ವಗಳ ವಿಷಯದಲ್ಲಿ ಅವುಗಳ ಪ್ರಭಾವ ಶ್ರೀ ಅರವಿಂದರ ಮೇಲೆ ಎಳ್ಳಷ್ಟೂ ಆಗಿರಲಿಲ್ಲ ವೆಂಬುದು ಸೋಜಿಗವೆ ಸರಿ.

ಈ ಬಗೆಯಾಗಿ ದೊಡ್ಡ ಪ್ರಮಾಣದ ಅಭ್ಯಾಸಕ್ಷೇತ್ರದಲ್ಲಿ ತೊಡಗಿಕೊಂಡಾಗಲೆ ಅವರು ತಮ್ಮ ಸಮಯದ ಕೆಲವೊಂದು ಅಂಶವನ್ನು ಲೇಖನಕಾರ್ಯಕ್ಕಾಗಿಯೂ ಪ್ರಕಟನಾಕಾರ್ಯಕ್ಕಾಗಿಯೂ ಮೀಸಲಿರಿಸಿದ್ದರು. ಅವರು ಇಂಗ್ಲಂಡದಲ್ಲಿದ್ದಾಗ ಬರೆದ ಕೆಲವು ಕವನಗಳನ್ನು ಬಡೋದೆಗೆ ಬಂದ ಮೇಲೆ ಮೊದಲ ಸಲ ಪ್ರಕಟಿಸಲಾಯ್ತು. 'ಮಾರ್ಟೆಲಾ ಗೀತಗಳು (Songs of Myrtella)' ಎಂಬುದೇ ಭಾರತದಲ್ಲಿ ಪ್ರಕಟಗೊಂಡ ಅವರ ಪ್ರಥಮ ಕೃತಿ. ಭಾರತೀಯ ವಿಷಯಗಳನ್ನು ಕುರಿತೂ ಅವರು ಎಷ್ಟೊ ಕವನಗಳನ್ನು ಬರೆದರು. ಅವರ ಸಾಹಿತ್ಯನಿರ್ಮಿತಿಯಲ್ಲಿ ಹಿಂದೊಮ್ಮೆ ಹಾಸುಹೊಕ್ಕಾಗಿ ಹರಿದಾಡಿದ ಅಭಿಜಾತ ಗ್ರೀಕ್-ಲ್ಯಾಟಿನ್ ಸ್ವಾದವು ಬರಬರುತ್ತ ಮಾಯವಾಗಿ ಹೋಯಿತು. ಇನ್ನು ಮುಂದಿನ ಅವರ ಬರೆಹಗಳು ಸ್ಫೂರ್ತಿ ಪಡೆದುದು ಅಭಿಜಾತ ಗೀರ್ವಾಣವಾಣಿಯಿಂದ. ಸಂಸ್ಕೃತ ಮತ್ತು ಇನ್ನಿತರ ಭಾರತೀಯ ಭಾಷೆಗಳಲ್ಲಿ ತುಂಬಿ ತುಳುಕುತ್ತಿರುವ ಭಾರತದ ವೈಭವಸಮೃದ್ಧ ಅಲಂಕಾರಸಾಮಗ್ರಿಯು, ಅವರಿಗೆ ಪ್ರಚುರವಾಗಿ ಕಲ್ಪಕತೆಯನ್ನು ಒದಗಿಸಿತು.

ಅವರ ಬರೆಹಗಳೂ ಪ್ರಕಟನೆಗಳೂ ಕೇವಲ ಸಾಹಿತ್ಯಕ್ಕಷ್ಟೇ ಸೀಮಿತವಾಗಿರಲಿಲ್ಲ. ಪುಣೆಯ 'ಇಂದುಪ್ರಕಾಶ'ಕ್ಕೆ ಅಗಸ್ಟ ೧೮೯೩ ರಿಂದ ಫೆಬ್ರುವರಿ ೧೮೯೪ ರ ವರೆಗೆ ಬರೆದು ಕಳಿಸುತಿದ್ದ "ಹಳೆಯದಕ್ಕೆ ಹೊಸ ಹಣತೆಗಳು (New Lamps for Old)" ಎಂಬ ಅವರ ಲೇಖಮಾಲೆ ಬಹಳ ಮಹತ್ವದ್ದು. ಅದು, ಅಂದಿನ ಅವರ ರಾಜಕೀಯ ಅಭಿಪ್ರಾಯಗಳನ್ನು ಸುಸ್ಪಷ್ಟವಾಗಿ ವ್ಯಕ್ತಗೊಳಿಸುತ್ತಿದೆ. ಸ್ವಾವಲಂಬನ, ಸರಲತೆ, ಅಂತಃಸಾಮರ್ಥ್ಯವರ್ಧನೆ, ಶೀಲಸಂವರ್ಧನೆ ಮೊದಲಾದವುಗಳ ಬಗೆಗೆ ಅವರು ಬಹಳ ಮಹತ್ವ ಕೊಟ್ಟಿದ್ದಾರೆ. ಅಂದಿನ ಮವಾಳರ ಮುಂದಾಳ್ತನವನ್ನು ನಿಷೇಧಿಸುತ್ತ ಅದೆಂದರೆ ಕುರುಡನು ಕುರುಡನಿಗೆ ದಾರಿ ತೋರಿಸಿದಂತೆ ಎಂದು ಉಡುಗೊರೆ ಕೊಟ್ಟಿದ್ದಾರೆ. ಭಾರತದ ದಾಸ್ಯದ ವಿಷಮತೆಯಿಂದಲೂ ಬ್ರಿಟಿಶರ ಅನ್ಯಾಯದ ಆಡಳಿತದಿಂದಲೂ ಉದ್ರೇಕಗೊಂಡು ಗಂಭೀರ ವಿಚಾರ ಮಾಡತೊಡಗಿದ, ಮವಾಳರ ನಿರ್ವೀರ್ಯ ರಾಜಕಾರಣದಿಂದ ಸಿಡಿಮಿಡಿಗೊಂಡು ಬ್ರಿಟಿಶರ ಆಡಳಿತವನ್ನೆ ಅಳಿದುಬಿಡಲು ಪಣತೊಟ್ಟ ತೀವ್ರ ಚಿತ್ತದ

ತರುಣನೊಬ್ಬನು ತೀಕ್ಷ್ಣವಾದ ಕಟುಭಾಷೆಯಲ್ಲಿ ಜ್ವಲಂತ ದೇಶಾಭಿಮಾನವನ್ನು ಪರಿಣಾಮಕಾರಕವಾಗಿ ಉಪದೇಶಿಸಿದ್ದೇನು ಆಶ್ಚರ್ಯ? ಅವರು ರಾಜಸೇವೆಯಲ್ಲಿ ಇದ್ದುದರಿಂದ ಬಹಿರಂಗಕ್ಕೆ ಬರುವದು ಸಾಧ್ಯವಿರಲಿಲ್ಲ. ಅದ್ದರಿಂದ ಅವರು ಗುಪ್ತ ನಾಮದಿಂದಲೆ ಬರೆಯುತ್ತಿದ್ದರು. ಕೇಂಬ್ರಿಜದಲ್ಲಿ ಸಹಪಾಠಿಗಳಾಗಿದ್ದ ಕೇಶವ ರಾವ ದೇಶಪಾಂಡೆಯವರು ತಮ್ಮ ನೇತೃತ್ವದಲ್ಲಿದ್ದ 'ಇಂದುಪ್ರಕಾಶ' ಕ್ಕಾಗಿ ಲೇಖನಗಳನ್ನು ಬೇಡಿದ ಮೇರೆಗೆ ಅವರು ಈ ಲೇಖಮಾಲೆಯನ್ನು ಅರಂಭಿಸಿದರು.

ಉಜ್ವಲ ದೇಶಭಕ್ತನ ಈ ಚೊಚ್ಚಲು ಬರೆಹಗಳು ದೊಡ್ಡ ಕ್ಷೋಭೆಯನ್ನೆ ಉಂಟುಮಾಡಿದವು. ತತ್ಪರಿಣಾಮವಾಗಿ ಮಹಾದೇವ ಗೋವಿಂದ ರಾನಡೆಯವರು 'ಇಂದುಪ್ರಕಾಶ' ದ ಒಡೆಯರಿಗೆ ಬುದ್ಧಿ ಹೇಳಿ, ಈ ಲೇಖಮಾಲೆಯನ್ನು ನಿಲ್ಲಿಸಿ ಬಿಡಬೇಕೆಂದೂ ಇಲ್ಲದಿದ್ದರೆ ಸರಕಾರವು ಈ ಪತ್ರಿಕೆಯ ಮೇಲೆ ಹಾರಿಬಿದ್ದು ಅದರ ಅಸ್ತಿತ್ವವನ್ನೆ ಮುಗಿಸಿಬಿಡಬಹುದೆಂದೂ ಎಚ್ಚರಿಕೆ ಕೊಟ್ಟರು. ಸಂಪಾದ ಕರ ಮುಖಾಂತರ ಬಂದ ಆ ಪತ್ರಿಕೆಯ ಒಡೆಯರ ಇಂಗಿತವನ್ನು ಗ್ರಹಿಸಿ ಶ್ರೀ ಅರವಿಂದರು ಆ ಲೇಖಮಾಲೆಯನ್ನು ನಿಲ್ಲಿಸಿಬಿಡಬೇಕಾಯ್ತು. ಅದೇಗಳಿಗೆ ಯಲ್ಲಿ ಕೆಲಕಾಲ ಕಳೆದ ಮೇಲೆ, ಬಂಕಿಮ-ಟಿಳಕ-ದಯಾನಂದರ ಬಗ್ಗೆ ಬರೆದ ಇವರ ಇನ್ನೊಂದು ಲೇಖಮಾಲೆಯಿಂದ ಈ ಮೂವರು ಮಹಾವ್ಯಕ್ತಿಗಳ ವಿಷಯಕ್ಕೆ ಇದ್ದ ಇವರ ವಿಚಾರಗಳು ವ್ಯಕ್ತವಾದವು. ಈ ಮೂವರೂ ತಮ್ಮ ತಮ್ಮ ರೀತಿಯಲ್ಲಿ ನಿದ್ರಿತ ಭಾರತವನ್ನು ಎಚ್ಚರಿಸಲು ಸಾಕಷ್ಟು ದುಡಿದಿದ್ದಾರೆ. ಬಂಕಿಮರು ಬಂಗಾ-ಲಕ್ಕೆ ಸುಲಲಿತ ಗದ್ಯಶೈಲಿಯನ್ನು ಕಾಣಿಕೆಯಾಗಿ ಕೊಟ್ಟು ಭಾರತವನ್ನು ಮಾತೃ-ಭಾವದಿಂದ ಕಾಣಲು ಜನತೆಗೆ ಕಲಿಸಿದರು. ಅವರ ನಾಮಾಂಕಿತ ಕಾದಂಬರಿ "ಆನಂದಮಠ"ದ ಅಂಗವಾಗಿದ್ದ ಅಮರ ಗೀತೆ "ವಂದೇ ಮಾತರಮ್", ಸ್ವದೇಶಿಯ ದಿನಗಳಲ್ಲಿ ರಾಷ್ಟ್ರೀಯ ಪ್ರತೀಕವಾಯ್ತು. ಅದು ಭಾರತದಾದ್ಯಂತ ಪಸರಿಸಿ ಎಲ್ಲರ ನಾಲಿಗೆಯ ಮೇಲೂ ರಾಷ್ಟ್ರೀಯ ಗೀತವಾಗಿ ನೆಲಿಸಿತು. ಇಂದು ರವೀಂದ್ರನಾಥರ 'ಜನಗಣಮನ'ದೊಂದಿಗೆ ಅದಕ್ಕೆ ಸಹ ರಾಷ್ಟ್ರಗೀತವಾಗಿರುವ ಮಾನವು ದೊರಕಿದೆ.

ಅವರ ಭಾರತೀಯ ಭಾಷೆಗಳ ಅಭ್ಯಾಸವೂ ಸಾಹಿತ್ಯಕ ಕೃತಿಗಳ ಪ್ರಕಟ ನೆಯೂ ಸಾಹಿತ್ಯ ಮತ್ತು ಸಂಸ್ಕೃತಿ ವಿಚಾರದಲ್ಲಿ ಅವರು ಸಾಧಿಸಿದ ಪ್ರಗತಿಯ ಚಿತ್ರವನ್ನು ಕೊಟ್ಟರೆ, 'ಇಂದುಪ್ರಕಾಶ'ಕ್ಕೆ ಬರೆದ ಅವರ ಲೇಖನಗಳಿಂದ ಅವರ ದೇಶಭಕ್ತಿಯ ಮತ್ತು ರಾಜಕೀಯ ವಿಚಾರಗಳ ಪರಿಚಯವು ನಮಗೆ ಚೆನ್ನಾಗಿ ಆಗುತ್ತದೆ. ಅವರು ಅಂದಿನ ದಿನಗಳಲ್ಲಿ ತುಂಬ ವಾಚನಲೋಲರು. ಅವರು ತಮ್ಮ ಹೊಸ ಪುಸ್ತಕಗಳನ್ನು ಎಂದೂ ಅಂಚೆಯಿಂದ ಪಡೆಯುತಿರಲಿಲ್ಲವೆಂದೂ ಅದರೆ ಅವು ಬಹುಶಃ ದೊಡ್ಡ ದೊಡ್ಡ ಕಟ್ಟಿನಲ್ಲಿ ರೇಲ್ವೆ ಪಾರ್ಸಲ್ ಮುಖಾಂತರವೆ

ಬರುತಿದ್ದವೆಂದೂ ಹೇಳಲಾಗುತ್ತಿದೆ. ಅವರು ಸಾಮಾನ್ಯವಾದ ಕಲ್ಲೆಣ್ಣೆಯ ದೀಪದ ಬೆಳಕಿನಲ್ಲಿ ಮಧ್ಯರಾತ್ರಿ ಮೀರುವ ವರೆಗೂ ಓದುತಿದ್ದು ತಡವಾಗಿ ಏಳು-ತಿದ್ದರು. ಮುಂಜಾನೆ ಚಹಾಪಾನದ ನಂತರ ಮತ್ತೆ ಓದುತ್ತ ಬರೆಯುತ್ತ ಕುಳಿತು ಹತ್ತು ಗಂಟೆಗೆ ಸ್ನಾನಕ್ಕೆ ಏಳುತಿದ್ದರು. ಬಹುಶಃ ಊಟಕ್ಕೆ ಕುಳಿತಾಗಲೂ ಅವರು ವೃತ್ತಪತ್ರಿಕೆಗಳನ್ನು ಓದುತ್ತಲೇ ಇರುತಿದ್ದರು; ಆಗ ಸಿಗರೇಟೊಂದು ಸದಾ ಅವರ ಸಂಗಾತಿಯಾಗಿರುತಿತ್ತು.

ಅವರ ದೇಶಾಭಿಮಾನದ ಬಗ್ಗೆ ಮೊದಲು ಹೇಳುವದಾದರೆ, ಅವರು ಇಷ್ಟರಲ್ಲಿ ಭಾರತಪರವೂ ವಿದೇಶವಿಮುಖವೂ ಆದ ತೀಕ್ಷ್ಣ ಮನೋವೃತ್ತಿಯನ್ನು ಬಲಿಸಿ ಕೊಂಡುಬಿಟ್ಟಿದ್ದರು. ಬಡೋದೆಯಲ್ಲಿದ್ದಾಗ ಅವರು ಪ್ರಾಯಶಃ ಭಾರತೀಯ ಸಾದಾ ವೇಷದಲ್ಲಿಯೆ ಕಣ್ಣಿಗೆ ಬೀಳುತಿದ್ದರು. ಭಾರತೀಯ ವಿಷಯಗಳ ಬಗೆ ಗಿದ್ದ ಅವರ ಅನುರಾಗವು ಅತ್ಯಂತ ವಿಶುದ್ಧವಾಗಿತ್ತಲ್ಲದೆ ಅದು ದಿನ ಕಳೆದಂತೆಯೂ ಅವರ ಭಾರತದ ಅಭ್ಯಾಸವು ಹೆಚ್ಚಿದಂತೆಯೂ ಹೆಚ್ಚು ಹೆಚ್ಚು ಆಳವಾಗುತ್ತ ಸಾಗಿತ್ತು. ಆದರೆ ಅವರ ಸ್ವದೇಶಾಭಿಮಾನವು ಕೇವಲ ಆರ್ಥಿಕ ಮತ್ತು ರಾಜ-ಕೀಯ ಉದ್ದೇಶಗಳಿಂದ ಪ್ರಚೋದಿತವಾಗಿರಲಿಲ್ಲ. ಉದಾಹರಣಾರ್ಥ: ಹಿಂದು-ಸ್ಥಾನವು ರಾಜಕೀಯ ದೃಷ್ಟಿಯಿಂದ ಸ್ವತಂತ್ರವಾಗುತ್ತ ಆರ್ಥಿಕ ದೃಷ್ಟಿಯಿಂದ ಸಂಪದ್ಯುಕ್ತವಾದರೆ ಮಾತ್ರ ಅವರಿಗೆ ತೃಪ್ತಿಯಿರಲಿಲ್ಲ. ಸಂಸ್ಕೃತಿಯ ಹೆಸರಿನಲ್ಲಿ ಅನ್ಯರನ್ನು ಗೆಲ್ಲಲು ಹಾತೊರೆಯುವ ಆಕ್ರಮಣಶೀಲ ರಾಷ್ಟ್ರೀಯತೆಯ ಕೀಳ್ಮಟ್ಟಕ್ಕೆ ಅವರ ಸ್ವದೇಶಪ್ರೇಮವು ತಪ್ಪಿ ಸಹ ಇಳಿಯಲಿಲ್ಲ; ಅಥವಾ ಇನ್ನೊಬ್ಬರ ನಾಡು ಗಳನ್ನು "ನಿಲ್ಲಲು ಮಾತ್ರ ನೆಲ (Living space)"ವೆಂಬ ಹೆಸರಿನಲ್ಲಿ ನುಂಗಲೂ ಬಯಸಲಿಲ್ಲ. ಶಾಂತಿ-ಸದ್ಭಾವ-ಸಹಕಾರಗಳ ಮುಖಾಂತರ ಮನುಕುಲದ ಪ್ರಗತಿಗಾಗಿ ಏಕಮೇವ ಜಾಗತಿಕ ಸಂಸ್ಥೆಯ ಸಂಘಟನೆಯಾಗಬೇಕೆಂಬ ಅಂತರ್-ರಾಷ್ಟ್ರೀಯ ದೃಷ್ಟಿಕೋನವನ್ನು ಅವರ ಸ್ವದೇಶಪ್ರೇಮವು ಎಂದೂ ಕಳೆದುಕೊಳ್ಳಲಿಲ್ಲ. ಅವರ ಭಾರತದ ಅನುರಾಗವು, ಅವರನ್ನು ಕೊನೆಗೆ "ಮಾನವ ಐಕ್ಯದ ಆದರ್ಶ" (Ideal of Human Unity)ಕ್ಕೆ ಮುಟ್ಟಿಸಿತು; ತಮ್ಮ ದೇಶದ ಮತ್ತು ಜನಾಂಗದ ವಿಷಯಕ್ಕಿದ್ದ ಅವರ ಪ್ರೇಮಭಾವವು ಎಷ್ಟೊಂದು ಸೂಕ್ಷ್ಮವಾಗಿತ್ತೆಂಬುದು ಸ್ಪಷ್ಟ ವಾಗಿದೆ. ಅವರ ಸ್ವದೇಶಾಭಿಮಾನವೆಂಬುದು ಸ್ವಸಂಸ್ಕೃತಿಯ ಅಭಿಮಾನವೂ ಆಗಿತ್ತು. ಆ ಕಾಲದಲ್ಲಿ ಘಟಿಸತೊಡಗಿದ ಭಾರತದ ಪುನರುಜ್ಜೀವನವು ಭರದಿಂದ ಸಾಗಿದಂತೆ ಭಾರತ ದೇಶವು ತನ್ನ ಸನಾತನ ಆತ್ಮವನ್ನು ಪುನಃ ಆವಿಷ್ಕರಿಸಲು ಹಾಗೂ ಅದನ್ನು ಆಧುನಿಕರಿಗೆ ಬೇಕಾದ ನವೀನ ಮಾತುಗಳಲ್ಲಿ ಪರಿಣಾಮಕಾರಕ ವಾಗಿ ಹೇಳಲು ಹವಣಿಸುತಿದೆಯೆಂದು ಶ್ರೀ ಅರವಿಂದರು ಭಾವಿಸಿದ್ದರು. ಇಂಥ ಇವರ ದೇಶಪ್ರೇಮದ ಇನ್ನೊಂದು ಲಕ್ಷಣವೆಂದರೆ ಅದು ಸ್ವರೂಪತಃ ಧಾರ್ಮಿಕವೂ

ಸತ್ತ್ವತಃ ಆಧ್ಯಾತ್ಮಿಕವೂ ಆಗಿತ್ತು. ಭಾರತವೆಂಬುದು ಅವರಿಗೆ ಕೇವಲ ಭೌಗೋಲಿಕ ಸ್ವರೂಪವಾಗಲಿ ಅಥವಾ ರಾಜಕೀಯ, ಆರ್ಥಿಕ ಅಸ್ತಿತ್ವವಾಗಲಿ ಆಗಿರಲಿಲ್ಲ. ಅದು ಕೇವಲ ಮಹಾನದಿಗಳ ಮತ್ತು ಬಲಿಷ್ಠ ಉತ್ತುಂಗ ಪರ್ವತಗಳ ನಾಡೆಂದಾಗಲಿ ಇಲ್ಲವೆ ಚಿತ್ತಾಕರ್ಷಕ ಸಂಸ್ಕೃತಿಯುಳ್ಳ ಪ್ರಾಚೀನ ಜನಾಂಗದ ಸಮೃದ್ಧ ಸಮುಜ್ವಲ ಭೂಪ್ರದೇಶವೆಂದಾಗಲಿ ಆಗಿರಲಿಲ್ಲ. ಅವರ ದೃಷ್ಟಿಗೆ ಭಾರತವು ವಂದನಾರ್ಹ ಮಾತೆಯಂತೆ, ಪೂಜಾರ್ಹ ದೇವತೆಯಂತೆ ಕಂಡಿತು. ಆತ್ಮತತ್ತ್ವದ ವಿಷಯದಲ್ಲಿ ಧ್ಯಾನಸ್ಥರಾದಾಗ ಉಂಟಾಗುವ ಗಭೀರ ಅನುಭೂತಿ-ಹರ್ಷಗಳೇ ಇವರಿಗೆ ಭಾರತ ಮಾತೆಯ ವಿಷಯಕ್ಕೂ, ಆಕೆಯ ಸೇವೆಯ ವಿಷಯಕ್ಕೂ ಆಲೋಚನಾಮಗ್ನರಾದಾಗ ಉಂಟಾಗುತಿದ್ದವು. ಭಾರತದೇಶವೆಂದರೆ, ಆಧ್ಯಾತ್ಮಿಕ ಮಹಾಸಂದೇಶದ ಪ್ರತ್ಯಕ್ಷ ಪ್ರತೀಕವೆಂದೂ ಅಧ್ಯಾತ್ಮವಿದ್ಯೆಯ ಮೂಲ ಉತ್ಪತ್ತಿಸ್ಥಲವೆಂದೂ ಸಮೃದ್ಧ ಮತ್ತು ಅಮೌಲ್ಯ ಸ್ವಾನುಭವಗಳ ಆಗರವೆಂದೂ ಅವರಿಗೆ ಅನಿಸುತಿತ್ತು.

ಹತ್ತೊಂಬತ್ತನೆಯ ಶತಮಾನದ ಮಧ್ಯದಿಂದಲೆ ದೇಶಭಕ್ತಿಯ ಅನೇಕ ಶಕ್ತಿಗಳು ಬೇರೆ ಬೇರೆ ಬಗೆಯಾಗಿ, ಭಾರತದ ಬಗ್ಗೆ ಪ್ರೇಮಭಾವವನ್ನು ಆಗಲೇ ಪ್ರಕಟಗೊಳಿಸಿದ್ದವು. ಅಂದಿನ ಆ ಶಕ್ತಿಗಳಿಗೆ ಬ್ರಿಟಿಶರೊಡನೆ ಪ್ರತ್ಯಕ್ಷ ಹೋರಾಟ ಹೂಡುವ ಪ್ರಸಂಗ ಬಂದಿರಲಿಲ್ಲವೇನೊ ನಿಜ; ಆದರೆ ಆ ಕಾರಣದಿಂದಾಗಿ ಭಾರತದ ಬಗ್ಗೆಯೂ ಭಾರತೀಯ ಜನಾಂಗದ ಬಗ್ಗೆಯೂ ಇದ್ದ ಅನುರಾಗ ಅಭಿಮಾನಗಳಲ್ಲಿ ನ್ಯೂನತೆಯಿತ್ತೆಂದು ಮಾತ್ರ ಸರ್ವಥಾ ತಿಳಿಯಕೂಡದು. ಸಾಮಾಜಿಕ-ಧಾರ್ಮಿಕ ಸುಧಾರಣೆಯ ಜೊತೆಗೆ ಭಾರತ ದೇಶದ ಸ್ವಾತಂತ್ರ್ಯದ ವಿಷಯದಲ್ಲಿಯೂ ಅಂದಿನ ದೇಶಭಕ್ತರಿಗೆ ತೀವ್ರಾಭಿಲಾಷೆಯಿತ್ತು. ಪ್ರಸಂಗ ಬಂದಾಗೆಲ್ಲ ತಮ್ಮ ಈ ಮನೋಗತವನ್ನು ಅಸಂದಿಗ್ಧವಾಗಿ ವ್ಯಕ್ತಗೊಳಿಸಿದ್ದುಂಟು. ಇಂತಹ ಮಹಾ ವ್ಯಕ್ತಿಗಳಲ್ಲಿ ತೀರ ಮೊದಲಿಗರಾದ ರಾಜಾ ರಾಮಮೋಹನ ರಾಯರ ಬಗ್ಗೆ ಕೂಡ ಹೀಗೆ ಉದ್ಗರಿಸಲಾಗಿದೆ— ‘ಇರುವದಾದರೆ ಸ್ವತಂತ್ರವಾಗಿಯೆ ಇರುವದು, ಇಲ್ಲವಾದರೆ ಅವರಿಗೆ ಇರುವದೇ ಬೇಡ....... ಸ್ವಾತಂತ್ರ್ಯ ಪ್ರೀತಿಯು ಅವರ ಅಂತರಾತ್ಮದ ಅತ್ಯಂತ ಪ್ರಬಲ ಪ್ರವೃತ್ತಿಯಾಗಿತ್ತು.’ (ವಿಲಿಯಮ್ ಆ್ಯಡ್ಯಾಮ್ ಬ್ಯಾಪ್ಟಿಸ್ಟ ಮಿಶನರಿ). ಭಾರತ ದೇಶವನ್ನು, ಭಾರತೀಯ ಜನಾಂಗವನ್ನು, ಭಾರತೀಯ ಜೀವನವಿಧಾನವನ್ನು ಆಸಕ್ತಿಯಿಂದ ಪ್ರೀತಿಸುವದಕ್ಕೆ ಅದರಂತೆ ಭಾರತದ ರಾಜಕೀಯ ಸ್ವಾತಂತ್ರ್ಯದ ವಿಷಯಕ್ಕೆ ತೀಕ್ಷ್ಣ ಆಕಾಂಕ್ಷೆ ವಹಿಸುವದಕ್ಕೆ ದೇಶಭಕ್ತಿಯೆನ್ನುತಿದ್ದರೆ, ರಾಜಾ ರಾಮಮೋಹನ, ವಿವೇಕಾನಂದ, ಸ್ವಾಮಿ ದಯಾನಂದ ಮೊದಲಾದವರು ಖಂಡಿತವಾಗಿಯೂ ದೇಶಭಕ್ತರು; ರಾಜಕೀಯ ರಂಗದಲ್ಲಿ ಹೋರಾಡಿದವರಷ್ಟೆ ಇವರಾದರೂ ಭಾರತೀಯ ಸ್ವಾತಂತ್ರ್ಯಕ್ಕೆ ಮಹತ್ವ ಕೊಟ್ಟಿದ್ದರು. ಪ್ರತ್ಯಕ್ಷ

ರಾಜಕೀಯವಲ್ಲದ ಮತ್ತೆ ಬೇರೆ ರಂಗಗಳಲ್ಲಿ ಅವರ ಮುಖ್ಯ ಜೀವನಕಾರ್ಯ ವಿದ್ದಿತು. ಆ ಸಂಗತಿ ಬೇರೆ. ಅವರೆಲ್ಲರೂ ತಮ್ಮ ತಲೆಮಾರಿನ ತರುಣರ ಹಾಗೂ ವೃದ್ಧರ ಹೃದಯಗಳಲ್ಲಿ ಭಾರತಪ್ರೇಮವನ್ನು ಉದ್ದೀಪನಗೊಳಿಸುವ ಕಾರ್ಯ ದಲ್ಲಿ ಪಾಲುಗಾರರಾಗಿದ್ದಾರೆ. ಭಾರತದ ಬಗ್ಗೆ ಹೀಗೆ ಸ್ವೈಜಪ್ರೇಮವನ್ನು ತೋರಿಸಿದ ಮತ್ತು ಒಂದಿಲ್ಲೊಂದು ಕಾರ್ಯರಂಗದಲ್ಲಿ ನಿಃಸ್ವಾರ್ಥ ಬುದ್ಧಿಯಿಂದ ಸೇವೆ ಸಲ್ಲಿಸಿದ ದೇಶಭಕ್ತರಿಂದ ಶ್ರೀ ಅರವಿಂದರು ತುಂಬ ಆಕರ್ಷಿತರಾಗಿದ್ದರೆ ಅದರಲ್ಲೇನೂ ಆಶ್ಚರ್ಯವಿಲ್ಲ. ಬಂಕಿಮರ ವಿಷಯಕ್ಕಿದ್ದ ಅವರ ಮೆಚ್ಚುಗೆಯು ಅತ್ಯಂತ ಪ್ರಶಂಸಾಪರ ಶಬ್ದಗಳಲ್ಲಿ ವ್ಯಕ್ತವಾಗಿದೆ. ಅವರ ದೃಷ್ಟಿಯಲ್ಲಿ ಬಂಕಿಮರು ಕೇವಲ ಭಾರತೀಯ ಸಾಂಸ್ಕೃತಿಕ ಪುನರುಜ್ಜೀವನದ ಭವಿಷ್ಯವಾದಿಯೆಂದಷ್ಟೆ ಅಲ್ಲ, ಆದರೆ ಅರ್ವಾಚೀನ ಭಾರತವನ್ನು ರೂಪಿಸಿದವರಲ್ಲಿ ಒಬ್ಬರೆಂದೂ ರಾಷ್ಟ್ರನಿರ್ಮಾ-ಪಕರೆಂದೂ ದ್ರಷ್ಟಾರರೆಂದೂ ಅವರ ಗ್ರಹಿಕೆಯಾಗಿತ್ತು.

ಕೇಂಬ್ರಿಜದ ಇಂಡಿಯನ್ ಮಜಲಿಸದಲ್ಲಿ ಶ್ರೀ ಅರವಿಂದರು ವ್ಯಕ್ತ ಪಡಿಸಿದ ಉಗ್ರ ವಿಚಾರಗಳಿಂದಲೂ ಲಂಡನದಲ್ಲಿ ಅವರು 'ಕಮಲ ಮತ್ತು ಕೃಪಾಣ' ಸಂಘದಲ್ಲಿ ಸೇರಿದ ಸಂಗತಿಯಿಂದಲೂ, 'ಇಂದುಪ್ರಕಾಶ' ದಲ್ಲಿ ಬರೆದ ಅವರ ಲೇಖನಗಳಿಂದಲೂ ಅವರ ರಾಜಕೀಯ ವಿಚಾರ-ಧ್ಯೇಯಗಳು ಏನು ಎಂಬದು ಸ್ಪಷ್ಟವಾಗಿ ಗೊತ್ತಾಗುವದು. ಸ್ವದೇಶಪ್ರೇಮವು ಒಂದು ನಿರ್ದಿಷ್ಟ ಸ್ವರೂಪ ವನ್ನು ತಾಳಿದಾಗಲೆ ಅದು ರಾಜಕೀಯದಲ್ಲಿ ಪರಿಣಾಮಕಾರಕವಾಗಬಲ್ಲುದು. ಅವರ ರಾಜಕೀಯ ಧ್ಯೇಯವು ಸ್ವರಾಜ್ಯದತ್ತ ಅಂದರೆ ಸಂಪೂರ್ಣ ಸ್ವಾತಂತ್ರ್ಯ ದತ್ತಲೆ ನಿಶ್ಚಿತವಾಗಿ ಸಾಗಿತ್ತೆಂಬುದು ಸ್ವಯಂ ಸ್ಪಷ್ಟವಿದೆ. ಅವರು ೧೯೦೮ ರ ತಮ್ಮ ಒಂದು ಭಾಷಣದಲ್ಲಿ ಅದನ್ನು ಸ್ಪಷ್ಟಪಡಿಸಿದ್ದಾರೆ. ಅವರೆಂದಿದ್ದಾರೆ:— 'ಸ್ವರಾಜ್ಯದ ನಮ್ಮ ಧ್ಯೇಯವು ಯಾವ ರಾಷ್ಟ್ರವನ್ನಾಗಲಿ ಅಥವಾ ನಮ್ಮ ಈ ದೇಶದಲ್ಲಿ ಶಾಸನಬದ್ಧವಾಗಿ ಪ್ರಸ್ಥಾಪಿತವಾದ ಆಡಳಿತವನ್ನಾಗಲಿ ದ್ವೇಷಿಸುವ ದಿಲ್ಲ. ನಮ್ಮಲ್ಲಿ ಪರಚಕ್ರಾಧಿಪತ್ಯವಿದೆ, ಅದನ್ನು ಪ್ರಜಾಧಿಪತ್ಯವನ್ನಾಗಿ ಮಾಡ ಬಯಸುತ್ತೇವೆ; ನಮ್ಮಲ್ಲಿ ಪರಕೀಯ ಸರಕಾರವಿದೆ, ಅದನ್ನು ದೇಶೀಯವಾಗಿ ಮಾಡಬಯಸುತ್ತೇವೆ; ನಮ್ಮಲ್ಲಿ ವಿದೇಶೀಯ ನಿಯಂತ್ರಣವಿದೆ, ಅದನ್ನು ಭಾರತೀಯರ ಕೈಯಲ್ಲಿ ಇರಿಸಬಯಸುತ್ತೇವೆ. ಈ ನಮ್ಮ ಆಕಾಂಕ್ಷೆಗೆ ದ್ವೇಷವೂ ಹಿಂಸೆಯೂ ಅತ್ಯಗತ್ಯವಾಗಿ ಬೇಕೆಂದು ಹೇಳುವವರು ಅಸತ್ಯವನ್ನು ನುಡಿಯು ತ್ತಾರೆ. ನಮ್ಮ ಸ್ವದೇಶಾಭಿಮಾನದ ಧ್ಯೇಯವು ಪ್ರೇಮದ ಮತ್ತು ಭ್ರಾತೃಭಾವದ ತಳಹದಿಯ ಮೇಲೆ ನಿಂತಿದೆ; ಹಾಗೂ ರಾಷ್ಟ್ರೀಯ ಐಕ್ಯದ ಆಚೆಗೆ ಹೋಗಿ ಮನು ಕುಲದ ತುರೀಯ ಐಕ್ಯವನ್ನು ಪ್ರತಿಪಾದಿಸುತ್ತದೆ. ಆದರೆ ನಾವು ಬೆಂಬತ್ತಿರುವುದು ಬಂಧುಬಂಧುಗಳ ಮತ್ತು ಸ್ವತಂತ್ರ ಜನಗಳ ಐಕ್ಯವನ್ನು ಕುರಿತಲ್ಲದೆ ಸ್ವಾಮಿ-

ದಾಸರ ನಡುವಿನ ಐಕ್ಯವನ್ನಲ್ಲ, ನುಂಗುವವರ ನುಂಗಿಸಿಕೊಳ್ಳುವವರ ಐಕ್ಯವನ್ನಲ್ಲ.' ಅವರ ಕಾರ್ಯಕ್ರಮದ ಮೊಟ್ಟಮೊದಲಿನ ವಿಷಯವಾಗಿತ್ತು : ಸ್ವಾಭಾವಿಕವಾಗಿಯೆ ಸ್ವಾತಂತ್ರ್ಯ, ಮಿಶ್ರಿತವಲ್ಲದ ಶುದ್ಧ ಸ್ವಾತಂತ್ರ್ಯ. ಆದ್ದರಿಂದ ಅವರು ಇದಕ್ಕೂ ಕಡಿಮೆ ತರಗತಿಯ ಮತ್ತು ಕಾಲಹರಣ ಮಾಡುವ ಇನ್ನುಳಿದ ರಾಜಕೀಯ ಧೋರಣೆಗಳ ವಿಷಯಕ್ಕೆ ತುಂಬ ವಿಮುಖರಾಗಿದ್ದರು. ಬಾಳ ಗಂಗಾಧರ ಟಿಳಕರಂತಹರ ಅಸಹಿಷ್ಣುವಾದ ಉಗ್ರ ಒಡನುಡಿ ಮತ್ತು ಬರೆಹಗಳಲ್ಲಿ ಮಾತ್ರ ತೋರಿಬರುತಿದ್ದ ರಾಜಕೀಯ ಉಗ್ರಮತವಾದವು ಆಗಿನ್ನೂ ಮೈದಾಳಿರಲಿಲ್ಲ. ಕಟ್ಟಕಡೆಗೆ ಅದು ೧೯೦೫ ರ ಸ್ವದೇಶಿಯ ಆಂದೋಲನದ ಗರ್ಭದಲ್ಲಿ ಮೂಡಿಬಂದಿತು, ಹಾಗೂ ನೇರವಾಗಿ ಸ್ವರಾಜ್ಯವನ್ನೆ ಹಕ್ಕಿನಿಂದ ಕೇಳತೊಡಗಿತು. ಸ್ವಾತಂತ್ರ್ಯದ ಬಗೆಗೆ ತೀವ್ರ ಅಭಿಲಾಷೆಯೇನೊ ಇತ್ತು; ಆದರೆ ಈ ದೇಶಪ್ರೇಮಿಗಳ ಮನಸ್ಸಿನಲ್ಲಿ ಯಾವದೇ ಸುವ್ಯವಸ್ಥಿತವಾದ ರಾಜಕೀಯ ಧೋರಣವಾಗಲಿ ಕಾರ್ಯಕ್ರಮವಾಗಲಿ ರೂಪಗೊಂಡಿರಲಿಲ್ಲ. ಶಸ್ತ್ರಸಂಗ್ರಹದಲ್ಲಿ ತೊಡಗಿದವರ ವಿಷಯದಲ್ಲಿಯೂ ಅಂತಿಮ ಸಶಸ್ತ್ರ ಕ್ರಾಂತಿಗಾಗಿ ತರುಣರನ್ನು ಸಿದ್ಧಗೊಳಿಸಲು ತೊಡಗಿದವರ ವಿಷಯದಲ್ಲಿಯೂ ಈ ದೇಶಪ್ರೇಮಿಗಳು ತುಂಬ ಸಹಾನುಭೂತಿಯುಳ್ಳವರಾಗಿರುತಿದ್ದರು. ಇದೊಂದು ಪೂರಕವಾದ ಆದರೆ ಮೂವತ್ತು ವರ್ಷಗಳಷ್ಟು ಬಹು ದೀರ್ಘಕಾಲೀನ ಯೋಜನೆಯೆಂದು ಗ್ರಹಿಸಲಾಗಿತ್ತು. ಮೇಲಾಗಿ ಈ ಬಗೆಯ ಪ್ರಯತ್ನಗಳು ಬಹಳ ಸಣ್ಣ ಪ್ರಮಾಣದಲ್ಲಿ ಸಾಗಿದ್ದವು. ಯಾವದೇ ಬಗೆಯ ನಿಶ್ಚಿತ ರಾಜಕೀಯ ಕಾರ್ಯಕ್ರಮಗಳು ಇಲ್ಲದ್ದರಿಂದ ಶ್ರೀ ಅರವಿಂದರಂತಹ ಪ್ರವರ್ತಕ ವೃತ್ತಿಯವರು ತಮ್ಮ ಹೊತ್ತು ಎದುರುನೋಡುತಿದ್ದರು. ಅವರು ತಮ್ಮ ಅಭಿಪ್ರಾಯಗಳನ್ನು ಒಂದು ವೃತ್ತಪತ್ರಿಕೆಯ ಮುಖಾಂತರ ವ್ಯಕ್ತಪಡಿಸಲು ಹವಣಿಸಿದರು; ಆದರೆ ಅದರ ಸಂಪಾದಕರು ಮುಂಬರುವ ಕಷ್ಟನಷ್ಟದ ಹೊಣೆ ಹೊರಲು ಹಿಂದೆಗೆದರು. ಹೀಗಾಗಿ ಅವರು ಮತ್ತೆ ತಮ್ಮಲ್ಲಿ ತಾವು ಹುದುಗಿಕೊಂಡು ಬಿಡಬೇಕಾಯ್ತು. ಅವರು ಟಿಳಕರ ಬಗ್ಗೆ ಬರೆದ ಲೇಖನದಿಂದ, ಅವರ ಮನಸ್ಸು ಎತ್ತ ಧಾವಿಸುತಿತ್ತು ಎಂಬುದನ್ನೂ, ರಾಜದ್ರೋಹದ ಬರೆಹಗಳಿಗಾಗಿ ಹಿಂದುಸ್ಥಾನದಲ್ಲಿ ಮೊಟ್ಟಮೊದಲು ಕಷ್ಟಕ್ಕೆ ಗುರಿಯಾದ ಈ ತರುಣ ಮರಾಠಾ ದೇಶಪ್ರೇಮಿಯ ಬಲಿಷ್ಠ ರಾಷ್ಟ್ರೀಯತೆಯನ್ನು ಅವರು ಎಷ್ಟು ಮೆಚ್ಚಿದ್ದರೆಂಬುದನ್ನೂ ಅರಿಯಬಹುದಾಗಿದೆ.

ಶ್ರೀ ಅರವಿಂದರ ಅಧ್ಯಾತ್ಮಪ್ರಗತಿಯ ಬಗೆಗೆ ಮತ್ತು ಅವರ ಯೋಗಾಭ್ಯಾಸದ ಬಗೆಗೆ ಏನನ್ನಾದರೂ ವಿವರಿಸುವ ಮೊದಲು, ಅವರ ಬಡೋದೆಯಲ್ಲಿಯ ಸಂಬಂಧ ಸಂಪರ್ಕ, ಮೃಣಾಲಿನಿಯರೊಡನೆ ಆದ ಮದುವೆ, ಅವರ ಸಾಮಾಜಿಕ ಜೀವನ ಇವುಗಳನ್ನಷ್ಟು ಅರಿಯುವದು ಒಳ್ಳೆಯದು.

ಅಧಿಕಾರೀ ವರ್ಗದವರ ಜೊತೆಗಂತೂ ಶ್ರೀ ಅರವಿಂದರಿಗೆ ಇರಲೇಬೇಕಾಗು ತಿತ್ತು. ಅವರಲ್ಲದೆ ಇನ್ನು ಕೆಲವು ಜನರೊಡನೆ ಅವರು ಆ ಸಮಯದಲ್ಲಿ ತುಂಬ ನಿಕಟವರ್ತಿಗಳಾಗಿ ಇರುತಿದ್ದರು. ಕೇಂಬ್ರಿಜದಲ್ಲಿ ಇವರ ಸಹಾಧ್ಯಾಯಿಯಾಗಿದ್ದ ಶ್ರೀ ಕೇಶವರಾವ ದೇಶಪಾಂಡೆಯವರು ಆಗ ಪುಣೆಯ 'ಇಂದುಪ್ರಕಾಶ' ದ ಸಂಪಾದಕರಾಗಿದ್ದರು. ಆದರೆ ಅವರ ತೀರ ಸಲಿಗೆಯ ಗೆಳೆಯರೆಂದರೆ ಲೆಫ್ಟಿನಂಟ ಮಾಧವರಾವ ಜಾಧವರು. ರಾಜಕಾರಣಕ್ಕಾಗಿ ಶ್ರೀ ಅರವಿಂದರು ಕಲಕತ್ತೆಗೆ ಹೊರಟುಹೋದಮೇಲೆ ಸಹ ಅವರು ಅವರಿಗೆ ಅನೇಕ ಬಗೆಯಾಗಿ ನೆರವು ನೀಡು ತಿದ್ದರು. ಬಡೋದೆಯಲ್ಲಿದ್ದಾಗಂತೂ ಶ್ರೀ ಅರವಿಂದರು ಅವರ ಮನೆಯಲ್ಲಿಯೆ ಎಷ್ಟೋ ವರ್ಷ ಇರುತಿದ್ದರು. ಹದಿಮೂರು ವರ್ಷಗಳ ಅವರ ಬಡೋದಾ ವಾಸದ ಕಾಲದಲ್ಲಿ ಇನ್ನು ಬೇರೆ ಬೇರೆ ನಾಲ್ಕೈದು ಮನೆಗಳಲ್ಲಿಯೂ ಶ್ರೀ ಅರವಿಂದರು ಇದ್ದುದುಂಟು. ಕೇಶವರಾವ ಜಾಧವ, ಫಡಕೆ, ಮಂಗೇಶ ಕೋಲಸಕರ ಮೊದಲಾ ದವರು ಇನ್ನುಳಿದ ಅವರ ಬೇರೆ ಸಂಗಾತಿಗಳಲ್ಲಿ ಕೆಲವರಾಗಿದ್ದರು. ಯಾವಾಗಲೂ ಅವರ ಜೀವನವು, ಯಾವ ಸುಖಸೌಕರ್ಯವೂ ಇಲ್ಲದಷ್ಟು ಸಾಧು-ಸರಲವಾಗಿತ್ತು. ಅವರು ಒಂದು ಕಬ್ಬಿಣದ ಮಂಚವನ್ನು ಬಳಸುತಿದ್ದರು; ಹಾಗೂ ಚಳಿಗಾಲದಲ್ಲಿ ಸಹ ಹೊದೆಯಲು ಬೆಚ್ಚನ್ನ ಕಂಬಳಿಯಿಲ್ಲದೆ ಕಾಲಕಳೆಯುತಿದ್ದರು. ಅವರು ಸುತ್ತುಮುತ್ತಲಿನ ನೆರೆಹೊರೆಯ ಬಗ್ಗೆಯೂ ತುಸು ಅನಾಸಕ್ತರಾಗಿದ್ದರೆಂದೆ ಹೇಳಬೇಕು. ಈ ಸಂಗತಿಯು, ಅವರು ಆಯ್ದುಕೊಂಡ ಮನೆಗಳು, ಇಟ್ಟುಕೊಂಡ ಸೇವಕರು, ಎಳ್ಳಷ್ಟೂ ಮನಸ್ಸಿಗೆ ಹಚ್ಚಿಕೊಳ್ಳದೆ ಶೀತೋಷ್ಣಗಳೆರಡನ್ನೂ ಸಮಭಾವ ದಿಂದ ನಿರ್ಲಿಪ್ತರಾಗಿ ಸಹಿಸುವ ಅವರ ರೀತಿ ಮುಂತಾದ್ದರಿಂದ ಸ್ಪಷ್ಟವಾಗಿ ವ್ಯಕ್ತ ವಾಗುತ್ತದೆ. ಊಟದ ಕಾಲಕ್ಕೆ ಸಾಮಾನ್ಯವಾಗಿ ರುಚಿಯ ಬಗೆಗೆ ಸಹ ಅವರು ಗಮನಕೊಡುತಿರಲಿಲ್ಲ. ಗುಜರಾಥಿಗಳ ಊಟವು ಅವರಿಗೆ ತೀರ ಕೊಬ್ಬುಳ್ಳದ್ದೂ ಮರಾಠಿಗರ ಊಟವು ತೀರ ಕಾರದ್ದೂ ಎಂದು ಅನಿಸುತಿತ್ತು. ಅವರಿಗೆ ಟಳಕರ ಊಟ ಸೇರುತಿತ್ತು; ಅವರದಕ್ಕೆ 'ಸ್ಪಾರ್ಟನ್ ಮೀಲ್ಸ', ಅಂದರೆ ವೀರರ ಊಟವೆಂದು ನಾಮಕರಣಮಾಡಿದ್ದರು. ಅವರು ದಿನಕ್ಕೆ ಒಂದಾವರ್ತಿ ಮಾತ್ರ ಮಾಂಸವನ್ನೊ ಮೀನವನ್ನೊ ತಿನ್ನುತಿದ್ದರು. ಅವರಿಗೆ ಅನ್ನಕ್ಕಿಂತ ರೊಟ್ಟಿಯು ಹೆಚ್ಚು ಸೇರುತಿತ್ತು.

ಇನ್ನು ಮಹತ್ವದ ಸಾಮಾಜಿಕ ಘಟನೆಯೆಂದರೆ, ಎಪ್ರಿಲ ೧೯೦೧ರಲ್ಲಿ, ತರುಣ ಮತ್ತು ಸುಂದರ ವಧು ಮೃಣಾಲಿನಿದೇವಿಯೊಡನೆ ಬಡೋದೆಯಲ್ಲಿ ಆದ ಅವರ ಮದುವೆ. ಇಂಥ ಪ್ರತಿಭಾಸಂಪನ್ನನನ್ನು ಮದುವೆಯಾಗಿ, ಪಾಪ, ಕಷ್ಟ ಭೋಗಿಸ ಬೇಕೆಂದೆ ಆ ವಧುವಿನ ಹಣೆಯಲ್ಲಿ ಬರೆದಿತ್ತೆಂದು ತೋರುತ್ತದೆ. ಅವರು ರಾಂಚಿ ಯಲ್ಲಿ ನೆಲಸಿದ ಜಮೀನಿನ ಭೂಪಾಲಚಂದ್ರರ ಮಗಳು. ಮೊದಲಿನಿಂದ ಕೊನೆಯ

ವರೆಗೆ ಗಂಡಹೆಂಡಿರಲ್ಲಿ ಹೃತ್ಪೂರ್ವಕವಾದ ಪ್ರೇಮಾದರದ ಸಂಬಂಧವಿದ್ದರೂ ಪತಿಯ ಜೊತೆಗೆ ಬಹಳ ದಿನ ಕೂಡಿ ಇರುವ ಸೌಕರ್ಯವೆ ಅವರಿಗೆ ದೊರೆಯಲಿಲ್ಲ. ಬರಬರುತ್ತ ಜೀವಿತದ ಮಹತ್ತರ ಭವಿತವ್ಯದ ಅರಿವಾಗಿ ಶ್ರೀ ಅರವಿಂದರು ತಮ್ಮ ಸತಿಗೆ ದೀರ್ಘಪತ್ರಗಳನ್ನು ಬರೆಬರೆದು, ಕೇವಲ ಒಬ್ಬ ಸಾಮಾನ್ಯ ಗೃಹಿಣಿ ಯಾಗಿರದೆ ಬೇರೊಂದು ಬಗೆಯ ಮಹಾಜೀವನಕ್ಕೆ ಆ ಸತಿಯ ಮನಸ್ಸನ್ನು ಅಣಿ ಗೊಳಿಸಲು ಹೆಣಗಿದರು. ಅವರೂ ಉನ್ನತ ಆತ್ಮದ, ಧರ್ಮನಿಷ್ಠ, ಅತ್ಯಂತ ಭಕ್ತಿ ಭಾವದ ಮಹಿಳೆ. ಎಲ್ಲ ನುಂಗಿಕೊಂಡು ಗಂಭೀರವಾಗಿ ಕಷ್ಟ ಸಹಿಸಬಲ್ಲವರು ಹಾಗೂ ಈ ಕಷ್ಟೋಪಭೋಗವನ್ನೆ ಉನ್ನತ ಜೀವನಕ್ಕೆ ಸೋಪಾನವಾಗಿ ಹೇಗೆ ಮಾಡಿಕೊಳ್ಳುವದು ಎಂಬುದನ್ನು ಬಲ್ಲವರು. ಆಗಾಗ ಈ ಸತಿಯು ಪತಿಯ ಬಳಿಗೆ ಇರುತಿದ್ದರಾದರೂ ಬಡೋದೆಯನ್ನು ಬಿಟ್ಟ ತರುವಾಯ ಶ್ರೀ ಅರವಿಂದರ ಜೀವಿತವು ಬಗೆಬಗೆಯ ಚಟುವಟಿಕೆಗಳಿಂದ ಮತ್ತು ತಿರುಗಾಟದಿಂದ ತುಂಬಿಹೋಗಿ, ಅವರ ಸತಿಯೂ ಅವರ ತಂಗಿ ಸರೋಜಿನಿಯೂ ಎಷ್ಟೋ ದಿನ ಎಷ್ಟೋ ತಿಂಗಳು ಅದರ ಲ್ಲಿಯೂ ಅವರು ಅಲಿಪುರ ಜೇಲಿನಲ್ಲಿದ್ದ ಅಖಂಡ ಒಂದು ವರ್ಷದ ಕಾಲ, ಬಹುಶಃ ತಮ್ಮಷ್ಟಕ್ಕೆ ತಾವು ಇರಬೇಕಾಗಿ ಬಂದಿತು. ಶ್ರೀ ಅರವಿಂದರು ೧೯೧೦ ರಲ್ಲಿ ಪಾಂಡಿಚೇರಿಗೆ ತೆರಳಿದ ಮೇಲೆಯಂತೂ ಅವರ ಸತಿಯು ಅಲ್ಲಿಗೆ ಹೋಗುವ ಮಾತೇ ಉಳಿಯಲಿಲ್ಲ; ಏಕೆಂದರೆ ಅಲ್ಲಿ ಅವರು ನಿತಾಂತ ಏಕಾಂತದಲ್ಲಿ ಕಠಿಣ ಬ್ರಹ್ಮಚರ್ಯದಿಂದ ಗಭೀರಯೋಗದಲ್ಲಿ ಮಗ್ನರಾಗಿ ಹೋದರು. ಆದರೂ ೧೯೧೮ ರಲ್ಲಿ ಅವರು ತಮ್ಮ ಸತಿಗೆ ಪಾಂಡಿಚೇರಿಗೆ ಬರಲು ಅನುಮತಿ ಕೊಟ್ಟ ಮೇರೆಗೆ ಅವರು ಅಲ್ಲಿಂದ ಹೊರಟರು. ಆದರೆ ದುರ್ದೈವದಿಂದ ನಡುವೆ ಕಲಕತ್ತೆಯಲ್ಲಿ ಇನ್‌ಫ್ಲುಎಂಝಾದಿಂದ ಬಳಲಿ ತೀರಿಕೊಂಡರು. ರಾಂಚಿಯಲ್ಲಿ ಈಗ ವೈದ್ಯಕೀ ವೃತ್ತಿಯಲ್ಲಿರುವ ಅವರ ಬಂಧು, ಡಾ. ಶಿಶಿರಕುಮಾರರು, ತಮ್ಮ ಭಗಿನಿಯ ಬಗ್ಗೆ ಪ್ರಮಾಣಪೂರ್ವಕವಾಗಿ ಹೀಗೆ ಹೇಳಿದ್ದಾರೆ:— "ಅವರು ಪತಿವಿಯೋಗವನ್ನು ಕೊನೆತನಕ ಅತ್ಯಂತ ಸಮಾಧಾನದಿಂದಲೂ ಸಂತೋಷದಿಂದಲೂ ಸಹಿಸುತಿದ್ದರು. ಏಕೆಂದರೆ, ತಮ್ಮ ಪತಿಯ ಹೃದಯದಲ್ಲಿ ತಮಗೆ ಉನ್ನತ ಗೌರವದ ಸ್ಥಾನ ವಿದ್ದರೂ, ಸಾಮಾನ್ಯತಃ ಪತಿಭಕ್ತಿಪರಾಯಣೆಯಾದ ಸತಿಯಂತೆ, ಅವರ ಸಹವಾಸ ವನ್ನು ಕೋರುವದರಿಂದ ಅವರಿಗೆ ಯಾವದೆ ಬಗೆಯ ಸಹಾಯ ತಮ್ಮಿಂದ ದೊರ ಕದು ಎಂದು ಅವರಿಗೆ ತಿಳಿದಿತ್ತು".

ಈ ವಿವಾಹದ ವಿಷಯದಲ್ಲಿ ಒಂದೆರಡು ಸಂಗತಿಗಳು ಗಮನಾರ್ಹವಾಗಿವೆ. ಮೃಣಾಲಿನಿಯವರನ್ನು ಮದುವೆಯಾಗುವ ಮೊದಲು ಅವರು ಅನೇಕ ಹುಡುಗೆಯ ರನ್ನು ನೋಡಿದ್ದರು. ಲಗ್ನಕಾಲಕ್ಕೆ ಪ್ರಾಯಶ್ಚಿತ್ತದ ಪ್ರಶ್ನೆ ಎದ್ದಿತು. ಅವರೂ ತಮ್ಮ ತಂದೆಯಂತೆ ಅದನ್ನು ಅಲ್ಲಗಳೆದರು; ಏಕೆಂದರೆ, ಇಂಗ್ಲಂಡಕ್ಕೆ ಹೋಗಿ

ಅಲ್ಲಿ ವಾಸವಾಗಿದ್ದುದರಲ್ಲಿ ಅವರಿಗೆ ಯಾವ ಪಾಪವೂ ಉಂಟೆಂದು ತೋರಲಿಲ್ಲ. ಕೊನೆಗೆ ಒಬ್ಬ ಚತುರ ಪುರೋಹಿತನು, ತಕ್ಕಷ್ಟು ದಕ್ಷಿಣೆ ಸ್ವೀಕರಿಸಿ ಅವರನ್ನು ವಿಮೋಚನೆಗೊಳಿಸಿದನು! ಆದರೆ ಒಟ್ಟಿನಲ್ಲಿ ಶ್ರೀ ಅರವಿಂದರು, ವಿವಾಹವಿಧಿಯ ಉಳಿದ ಭಾಗದ ಬಗೆಗೆ ಒಳ್ಳೆ ಪೂಜ್ಯಭಾವವನ್ನು ತಳೆದರು. ಅದನ್ನೆಲ್ಲ ಗಂಭೀರವಾಗಿ ಸ್ವೀಕರಿಸಿದರು. ಸರ್ ಮತ್ತು ಲೇಡಿ ಜಗದೀಶ ಬೋಸ ಮತ್ತು ಲಾರ್ಡ ಸಿಂಹರಂತಹ ಪ್ರತಿಷ್ಠಿತ ಸಂದರ್ಶಕರು ಆ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಮದುವೆಯ ತರುವಾಯು, ಅವರು ತಮ್ಮ ಸತಿಯೊಡನೆ ಮತ್ತು ಭಗಿನಿಯೊಡನೆ, ಕೆಲ ದಿನಗಳ ಮಟ್ಟಿಗೆ ನೈನಿತಾಲಕ್ಕೆ ತೆರಳಿದರು (೨೮-೫ ೧೯೦೧).

ಶ್ರೀ ಅರವಿಂದರ ಕೌಟುಂಬಿಕ ಜೀವನವು ೧೯೦೧ ರಲ್ಲಿ ಆದ ಅವರ ಮದುವೆಯಿಂದ ಮೊದಲಾಗಿ, ೧೯೧೦ ರಲ್ಲಿ ಅವರು ಚಂದ್ರನಗರಕ್ಕೆ ತೆರಳುತ್ತಲೆ ಮುಗಿಯಿತು ಎಂಬುದಾಗಿ ಹೇಳಬಹುದು. ಆದರೆ ಆ ಜೀವನದಲ್ಲಿ ಸಾತತ್ಯವಾಗಲಿ ಸ್ಥಿರತೆಯಾಗಲಿ ಇರದೆ ದೀರ್ಘ ವಿರಹಗಳಿಂದ ಅದು ತುಂಬಿಹೋಗಿತ್ತು. ಅವರು ಹಿಂದುಸ್ಥಾನಕ್ಕೆ ಮರುಳುತ್ತಲೆ ಮೊಟ್ಟಮೊದಲು, ೧೮೯೪ ರಲ್ಲಿ, ತಮ್ಮ ತಾಯಿಯನ್ನು ಕಾಣಲು, ದೇವಘರದಿಂದ ನಾಲ್ಕು ಮೈಲು ದೂರದಲ್ಲಿದ್ದ ರೋಹಿಣಿ ಎಂಬ ಹಳ್ಳಿಗೆ ಹೋದರು. ಅವರು ಅಲ್ಲಿ ಬಾರೀಂದ್ರರೊಂದಿಗೆ ಇರುತಿದ್ದರು. ದುರ್ದೈವದಿಂದ ಅವರು ಮಿಥ್ಯೋನ್ಮಾದ ರೋಗಕ್ಕೆ (Hysterics) ತುತ್ತಾಗಿದ್ದರಿಂದ, ಮಗನ ಗುರುತೇ ಅವರಿಗೆ ಹತ್ತಲಿಲ್ಲ. ತಮ್ಮ 'ಅರೋ'ನ ಕೈಮೇಲೆ ಕೊರೆತದ ಕಲೆ ಇತ್ತೆಂದು ಅನ್ನತೊಡಗಿದರು. ಅದನ್ನು ತೋರಿಸಿದಾಗಲೇ ಅವರು ತತ್‌ಕ್ಷಣ ಗುರುತು ಹಿಡಿದ ಲಕ್ಷಣ ತೋರಿಸಿದರು. ಅವರನ್ನು 'ಪಾಗ್ಲೀ ಮಾ' (ಹುಚ್ಚ ತಾಯಿ) ಎಂದು ಕರೆಯುತಿದ್ದರು, ಹಾಗೂ ಅವರ ಬಳಿಗಂತೂ ಯಾರೂ ಸಹಸಾ ಸುಳಿಯುತಿದ್ದಿಲ್ಲ; ಏಕೆಂದರೆ ಅವರು ಕೆಲ ಸಲವಂತೂ ಝಳಪಿಸುವ ಕಠಾರಿಯನ್ನೆ ಎತ್ತಿ ನುಗ್ಗಿಬರುತಿದ್ದರು. ಶ್ರೀ ಅರವಿಂದರು ತಮ್ಮ ತಾಯಿಗೂ ಬಂಕಿ-ಪುರದಲ್ಲಿದ್ದ ತಂಗಿ ಸರೋಜಿಗೆ ಶಿಕ್ಷಣಕ್ಕಾಗಿಯೂ ಹಣ ಕಳಿಸುತಿದ್ದರು. ಅವರ ಹಿರಿಯ ಅಣ್ಣಂದಿರು ಈ ಬಗೆಗೆ ಉದಾಸೀನರಾಗಿದ್ದರೆಂದು ತೋರುತ್ತದೆ. ಬಾರೀಂದ್ರರು ಪಾಟ್ನಾದಲ್ಲಿ, ೯೦೦ ರೂ. ಭಾಂಡವಲ ಹಾಕಿ ಒಂದು ಚಹಾದ ಅಂಗಡಿ ನಡೆಸುವ ಸಾಹಸ ಮಾಡಿ ೧೯೦೧ರಲ್ಲಿ ಒಮ್ಮೆಗೇ ಬಡೋದೆಗೆ ಅಣ್ಣನ ಬಳಿಗೆ ಬಂದು ಬಿಟ್ಟರು. ಅಂದಿನಿಂದ ಅವರು ಈ ಅಣ್ಣನನ್ನು ತುಂಬ ಹಚ್ಚಿಕೊಂಡು, ಎಲ್ಲ ವಿಷಯಗಳಲ್ಲಿಯೂ ಅವರ ಮಾರ್ಗದರ್ಶನದಂತೆಯೆ ನಡೆದುಕೊಳ್ಳತೊಡಗಿದರೆಂದು ತೋರುತ್ತದೆ. ಬಾರೀಂದ್ರರು ಆಗೀಗ ತಮ್ಮ ತಾಯಿಯ ಬಳಿಗೂ ಹೋಗಿ ಇರುತಿದ್ದರು, ಹಾಗೂ ಆ ಸ್ಥಳವು ಅವರಿಗೆ ಒಂದು ಒಳ್ಳೆಯ ಆಶ್ರಯಸ್ಥಾನವಾಗಿ ಪರಿಣಮಿಸಿತು. ಬಾಂಬ ಪ್ರಯೋಗಗಳನ್ನು ಸಾಗಿಸಲು ಮತ್ತು ಶಸ್ತ್ರ ಮೊದಲಾ

ದವ್ರಗಳನ್ನು ತಂದು ತಂದು ತುಂಬಲು ರಾಯಧಿ ಹತ್ತರ ಇನ್ನೊಂದು ಚಿಕ್ಕ ಮನೆ ಮಾಡಿಕೊಂಡಿದ್ದರು. ಆ ಸ್ಥಳ, ಈ. ಆಯ್. ರೇಲ್ವೆಯ ಮುಖ್ಯಮಾರ್ಗದಲ್ಲಿದೆ. ದಿಘರಿಯಾ ಗಿರಿಗಳಲ್ಲಿ ಬಾಂಬುಗಳನ್ನು ಪರೀಕ್ಷಿಸಿ ನೋಡಲಾಗುತಿತ್ತು.

ಬಾರೀಂದ್ರರು ಬಡೋದೆಯಲ್ಲಿದ್ದಾಗ, ೧೯೦೪ ರಲ್ಲಿ, ಕೆಟ್ಟ ಜ್ವರಕ್ಕೆ ತುತ್ತಾದರು. ತರುಣರನ್ನು ಸನ್ನದ್ಧಗೊಳಿಸಲೆಂದು "ಭವಾನೀ ಮಂದಿರ"ವನ್ನು ಸ್ಥಾಪಿಸಲಿಕ್ಕೆ ಒಂದು ತಕ್ಕ ಸ್ಥಳವನ್ನು ಶೋಧಿಸುವದಕ್ಕಾಗಿ ಅವರು ಒಂದು ಅರಣ್ಯವನ್ನು ಸುತ್ತಿದರು. ಅಲ್ಲಿ ಅವರಿಗೆ ಈ ಪ್ರಾಣಾಪಾಯಕರವಾದ ಜ್ವರವು ಅಂಟಿತು. ಈ ವ್ಯಾಧಿ ಸರ್ವಸಾಮಾನ್ಯ ಚಿಕಿತ್ಸೆಗೆ ಬಗ್ಗಲಿಲ್ಲ. ಆಕಸ್ಮಿಕವಾಗಿ ದೈವಯೋಗದಿಂದಲೊ ಎಂಬಂತೆ ಶ್ರೀ ಅರವಿಂದರ ಬಳಿಗೆ ಬಂದ ಓರ್ವ ನಾಗಸನ್ಯಾಸಿಯು, ಒಂದು ಬಟ್ಟಲು ನೀರಲ್ಲಿ ಒಂದು ಮಂತ್ರನಿಕ್ಷಿಪ್ತ ಚೂರಿಯನ್ನು ಸ್ವಸ್ತಿಕಾಕಾರದಲ್ಲಿ ಆಡಿಸಿ ಆ ನೀರು ಕುಡಿಯಲು ಕೊಟ್ಟು ಅವರ ರೋಗವನ್ನು ವಾಸಿ ಮಾಡಿದನು. ಆ ಸನ್ಯಾಸಿಯು ಶ್ರೀ ಅರವಿಂದರಿಗೂ ಒಂದು ಮಂತ್ರೋಪದೇಶ ಮಾಡಿ ಒಂದು ಯಜ್ಞವನ್ನೂ ಮಾಡಿದನು. ಆದರೆ ಇದೆಲ್ಲವೂ ರಾಜಕೀಯ ಶಕ್ತಿಸಂಚಯಕ್ಕೂ ವಿಜಯಕ್ಕೂ ಇತ್ತಲ್ಲದೆ ಯೋಗಕ್ಕಾಗಲಿ ಅಧ್ಯಾತ್ಮಿಕ ಸಾಧನಕ್ಕಾಗಲಿ ಇರಲಿಲ್ಲ.

ಮದುವೆಯಾದ ಮೇಲೆ ಶ್ರೀ ಅರವಿಂದರು ಮನೆಯನ್ನೇನೊ ಮಾಡಿದರು; ಆದರೆ ಅದು ಬಿಟ್ಟು ಬಿಟ್ಟು, ಇಂದಿದೆ ನಾಳೆಯಿಲ್ಲ ಎಂಬ ಹಾಗೆ. ಅವರ ಸತಿಯು ಬಹುತರವಾಗಿ ದೇವಘರದಲ್ಲಿಯೆ ಇರುತಿದ್ದರು. ಎಷ್ಟೋ ಸಲ ಸತಿಯು ಉಪಜೀವನಕ್ಕೆ ಸಾಕಾಗುವಷ್ಟು ಹಣವನ್ನು ಕಳಿಸುವದು ಸಹ ಈ ಪತಿಗೆ ಆಗುತಿರಲಿಲ್ಲ. ಅವರು ತಮ್ಮ ವೆಚ್ಚದ ವಿಷಯದಲ್ಲಿ ಎಂದೂ ಎಚ್ಚರಿಕೆ ವಹಿಸಿದವರಲ್ಲ. ಹೀಗೆಂದಾಕ್ಷಣಕ್ಕೆ ಅವರು ತಮ್ಮ ಧನವನ್ನು ಅಪವ್ಯಯ ಮಾಡುತಿದ್ದರೆಂದು ಸರ್ವಥಾ ಅಲ್ಲ. ೧೮೯೮-೯೯ ರಲ್ಲಿ ಒಂದು ವರ್ಷ ಅವರ ಜೊತೆಗಿದ್ದ ದಿನೇಂದ್ರ ಬಾಬುಗಳು ಅನ್ನುತ್ತಾರೆ: "ಶ್ರೀ ಅರವಿಂದರು ಏಕಾಕಿಯಾಗಿ ಇರುತಿದ್ದು ಅವರಿಗೆ ವಿಲಾಸ ಭೋಗವೆಂಬುದೆ ಗೊತ್ತಿರಲಿಲ್ಲ" ಎಂದು. ಆದರೂ ತಿಂಗಳ ಕೊನೆಗೆ ನೋಡಿದರೆ ಒಂದು ಕಾಸು ಕೂಡ ಉಳಿಯುತಿರಲಿಲ್ಲ. ಅವರು ಲೌಕಿಕ ಮನುಷ್ಯರಲ್ಲವೆ ಅಲ್ಲವೆಂದೂ "ಹಾದಿತಪ್ಪಿ ಬಂದ ದೇವ"ರೆಂದೂ ದಿನೇಂದ್ರರು ಅವರ ವಿಷಯಕ್ಕೆ ಉದ್ಗಾರ ತೆಗೆದಿದ್ದಾರೆ. ಅವರದು ತುಸು ಬೊಕ್ಕೆಯ ಕಳೆಯಿದ್ದ, ಉದ್ದ ಕೂದಲಿನ, ಸ್ವಪ್ನಾವಿಷ್ಟ ಕಣ್ಣುಗಳ ಮುಖವೆಂದು ಬಣ್ಣಿಸಲಾಗಿದೆ. ಯಾವದೇ ಬಗೆಯ ಬೆಡಗಿನ ತೊಡಿಗೆಯನ್ನು ಬಳಸದೆ ಭಾರತದೇಶದ ಗಿರಣಿಯ ಉರುಟು ಬಟ್ಟೆಯ ಸಾಧಾರಣ 'ಮಿರ್ಜಾಯಿ' ಯನ್ನು (ಕುಡತಾ) ಧರಿಸುತಿದ್ದರು. ಅದೇ ದಿನೇಂದ್ರರು ಮತ್ತೆ ಅನ್ನುತ್ತಾರೆ: ಅವರಿಗೆ ಎಳ್ಳಷ್ಟೂ ಇಚ್ಛೆಯೆಂಬುದೆ ಇರಲಿಲ್ಲ, ಬೆಳಕಿಗೆ ಬರಬೇಕೆಂಬ ಹವ್ಯಾಸ ಅವರ ಸಮೀಪಕ್ಕೂ ಸುಳಿಯದು, ಮಾತು ವಿರಲ, ಆತ್ಮ-

ಸಂಯಮ, ಅಭ್ಯಾಸವೆ ಅವರ ಜೀವನದ ಮಹತ್ವದ ಆಕಾಂಕ್ಷೆಯಾಗಿತ್ತು ಇತ್ಯಾದಿ.

ಐತಿಹಾಸಿಕ ದೃಷ್ಟಿಯಿಂದ, ಬಡೋದೆಯ ಅವರ ಜೀವನದಲ್ಲಿ ಅತ್ಯಂತ ಮಹತ್ವದ ಮತ್ತು ಅರ್ಥಗರ್ಭಿತ ಸಂಗತಿಯೆಂದರೆ, ಆಧ್ಯಾತ್ಮಿಕತೆಯು ಅವರಲ್ಲಿ ದೃಢಮೂಲವಾದುದು ಮತ್ತು ಅವರಿಗೆ ಯೋಗದೀಕ್ಷೆಯಾದುದು. ಆಗ ಅವರು ಮಾಡಿದ ಸಾಧನದ ವಿಷಯಕ್ಕೆ ಇಲ್ಲಿ ವಿವರವಾಗಿ ಹೇಳಲು ಹೋಗುವದಿಲ್ಲ; ಅದನ್ನು ಅವರ ಆಧ್ಯಾತ್ಮಿಕ ಜೀವನದ ಬಗೆಗೆ ಪ್ರತ್ಯೇಕವಾಗಿಯೆ ಬರೆಯುವಾಗ ವಿವರಿಸಲಾಗುವದು. ಇಲ್ಲಿ ಆ ವಿಷಯವನ್ನು ಅನುಷಂಗಿಕವಾಗಿ ಎತ್ತಿ, ಬಡೋ-ದೆಯ ಅವರ ಚಟುವಟಿಕೆಗಳ ವೃತ್ತಾಂತಕಥನಕ್ಕೆ ಬೇಕಾಗುವಷ್ಟು ಮಾತ್ರ ಹೇಳಲಾಗುವದು.

ಅವರು ಮೊದಮೊದಲು ಓದಿದ ಸಾಹಿತ್ಯ ಮತ್ತು ಕಾವ್ಯಪುಸ್ತಕಗಳನ್ನು ನೋಡಿದರೆ ಮತ್ತು ಅವರು ಬರೆದ ಪ್ರಾರಂಭಿಕ ಕವಿತೆಗಳನ್ನೂ ಸಾಹಿತ್ಯಕ ಪ್ರಯತ್ನ ಗಳನ್ನೂ ಗಮನಿಸಿದರೆ ಅವರಿಗೆ ಹೆಚ್ಚು ಪ್ರಿಯವಾದುದು ಕಲ್ಪಕತೆಯೆಂದು, ಅವ ರನ್ನು ಹೆಚ್ಚು ಮೋಹಮುಗ್ಧರನ್ನಾಗಿ ಮಾಡಿದುದು ಸೌಂದರ್ಯಬೋಧೆ ಹಾಗು ಸೌಂದರ್ಯದೇವತೆಯೆಂದು ಗೊತ್ತಾಗಿಬಿಡುವದು. ಶ್ರೀ ಅರವಿಂದರನ್ನು ೧೮೯೯ ರಲ್ಲಿ ಕಂಡು ಅವರ ರಾಮಾಯಣ ಮಹಾಭಾರತಗಳ ಭಾಷಾಂತರಗಳನ್ನು ನೋಡಿದ ನಂತರ ರಮೇಶಚಂದ್ರ ದತ್ತರು ಅವರ ಪ್ರತಿಭಾಸಂಪನ್ನ ಪ್ರಯತ್ನವನ್ನು ಮುಕ್ತ ಕಂಠದಿಂದ ಪ್ರಶಂಸಿಸುತ್ತ, ಅವರು ಈ ಕಾರ್ಯ ಕೈಕೊಂಡ ಸಂಗತಿ ತಮಗೆ ಮೊದಲೇ ಗೊತ್ತಾಗಿದ್ದರೆ, ಈ ಭಾಷಾಂತರಗಳ ಗೊಡವೆಗೆ ತಾನು ಸಹಸಾ ಹೋಗು ತಿರಲಿಲ್ಲವೆಂದು ಉದ್ಗಾರತೆಗೆದಿದ್ದಾರೆ. ಪ್ರಾರಂಭದಲ್ಲಿ ಅವರಿಗೆ ತತ್ತ್ವಜ್ಞಾನದ ವಿಷಯಕ್ಕಾಗಲಿ ಆತ್ಮಾನುಸಂಧಾನದ ವಿದ್ಯೆಯ ವಿಷಯಕ್ಕಾಗಲಿ ಒಲವೇ ಇರಲಿಲ್ಲ. ಇವೆರಡೂ ವಿಷಯಗಳು ಅವರಿಗೆ ತೀರ ಶುಷ್ಕವೆಂದೂ ಕೇವಲ ಬೌದ್ಧಿಕವೆಂದೂ ಅನಿಸುತ್ತಿತ್ತು. ಪ್ರಾಣಸ್ಪಂದನವುಳ್ಳ ಮಾಂಸಲ ಮೂರ್ತಿಮಂತ ಸಜೀವ ವಿಚಾರ ಗಳಿಗಾಗಿ ಅವರು ಹಾತೊರೆಯುತ್ತಿದ್ದರಲ್ಲದೆ, ಭಾವೋದ್ದೀಪಕವಲ್ಲದ, ಬರೀ ಎಲುಬಿನ ಹಂದರವನ್ನೊ ಶುಷ್ಕ ಸಿದ್ಧಾಂತವನ್ನೊ ಅವರು ಬಯಸಿದವರಲ್ಲ. ಓರ್ವ ಒಳ್ಳೆಯ ವಿದ್ಯಾವಂತನಿಗೆ ಗೊತ್ತಿರಬೇಕಾದಷ್ಟು ತತ್ತ್ವಜ್ಞಾನವು ಅವರಿಗೆ ಗೊತ್ತಿತ್ತಾದರೂ ಅದನ್ನೇ ಪ್ರತ್ಯೇಕ ವ್ಯಾಸಂಗವಿಷಯವೆಂದು ಅದರ ಬೆನ್ನು-ಹತ್ತಿರಲಿಲ್ಲ. ಆ ಕಾಲದಲ್ಲಿ ಪಾಶ್ಚಾತ್ಯ ಅದರಂತೆ ಪೌರ್ವಾತ್ಯ ತತ್ತ್ವಜ್ಞಾನಿಗಳ ವಿಷಯಕ್ಕೂ, ಆತ್ಮಜ್ಞಾನಿಗಳ ವಿಷಯಕ್ಕೂ ಇದ್ದ ಅವರ ಪರಿಚಯವು ತೀರ ಮೇಗರೆಯದು.

ವಿವೇಕಾನಂದರ ಬರೆಹಗಳು ಅವರ ಮೇಲೆ ಬಹಳ ಪರಿಣಾಮ ಮಾಡಿದ್ದ-

ವಾದರೂ ರಾಮಕೃಷ್ಣ ಪರಮಹಂಸರ ಪ್ರಭಾವವು ಗಾಢವೂ ಚಿರಸ್ಥಾಯಿಯೂ ಆಗಿತ್ತು. ಈ ಎರಡು ಮಹಾ ವಿಭೂತಿಗಳ ಮೂಲಕವೆ ಅವರು ಪ್ರಥಮತಃ, ಆತ್ಮವಿಷಯಕ ಮತ್ತು ಭಾರತದ ಆಧ್ಯಾತ್ಮಿಕ ಸಂದೇಶವಿಷಯಕ ಈಷದ್ದರ್ಶನ ವನ್ನು ಪಡೆದರು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ವಿವೇಕಾನಂದರು, ಚಿಕ್ಯಾಗೊ ದಿಂದ ಸರ್ವಧರ್ಮ ಮಹಾಪರಿಷತ್ತಿನಿಂದ, ಹಿಂದುಸ್ಥಾನಕ್ಕೆ ಮರಳಿಬರುತ್ತಲೆ ಮದ್ರಾಸದ ಒಂದು ಸಭೆಯಲ್ಲಿ 'ಭಾರತದ ಪಾತ್ರ' ಎಂಬ ವಿಷಯಕ್ಕೆ ಭಾಷಣ ಮಾಡಿದರು. ಅವರು ಉದ್ಘೋಷಿಸಿದರು:. "ಅಧ್ಯಾತ್ಮವು ಜಗವನ್ನೆಲ್ಲ ಜಯಿಸ ಲೇಬೇಕು. ಪಾಶ್ಚಾತ್ಯರಿಗೆ, ತಾವು ರಾಷ್ಟ್ರಗಳಾಗಿ ಬಾಳಬೇಕಾದರೆ ಅಧ್ಯಾತ್ಮವೆ ಬೇಕೆಂದು ಈಗೀಗ ತುಸುತುಸು ತಿಳಿಯುತೊಡಗಿದೆ. ಪಾಶ್ಚಾತ್ಯ ಲೋಕವೆಲ್ಲ ಒಂದು ಜ್ವಾಲಾಮುಖಿಯ ಮೇಲೆ ಆಸನ ಪಸರಿಸಿದೆ. ನಾಳೆಯೆ ಅದು ಸ್ಫೋಟವಾಗಿ ವಿದೀರ್ಣವಾಗಿ ಹೋಗಿ ಬಿಡಬಹುದು. ಅವರು ಜಗದ ಮೂಲೆಮೂಲೆಯನ್ನೂ ಹುಡುಕಿ ನೋಡಿದ್ದಾರೆ ಆದರೆ ಅವರಿಗೆ ಶಾಂತಿಯೆಂಬುದೇ ಸಿಕ್ಕಿಲ್ಲ. ಅವರು ಸುಖಭೋಗದ ಬಟ್ಟಲವನ್ನು ಪೂರ್ಣ ಕುಡಿದು ನೋಡಿ ಅದು ವ್ಯಥಾಭಿಮಾನ ವೆಂದು ಕಂಡುಕೊಂಡಿದ್ದಾರೆ. ಇದೀಗ ಕೆಲಸಕ್ಕೆ ಹದದ ಕಾಲ; ಭಾರತದ ಅಧ್ಯಾತ್ಮ ವಿಚಾರಗಳು ಪಾಶ್ಚಾತ್ಯರ ಅಂತರಂಗದಲ್ಲಿ ಆಳವಾಗಿ ಭೇದಿಸುವ ಕಾಲವಿದೇ." ಇದು, ಆಧ್ಯಾತ್ಮಿಕತೆಯಲ್ಲಿರುವ ಆತ್ಮತತ್ತ್ವದ ಸತ್ಯತೆಯಲ್ಲಿರುವ, ಸಚ್ಚಿದಾನಂದ ಸ್ವರೂಪದ, ಸನಾತನವಾದ, ಏಕಮೇವ, ಸರ್ವಾಂತರ್ಗತಸತ್ತ್ವದ ಸತ್ಯತೆಯಲ್ಲಿರುವ ವಿಶ್ವಾಸವನ್ನಷ್ಟೇ ವ್ಯಕ್ತಗೊಳಿಸದೆ, ಆಧ್ಯಾತ್ಮಿಕತೆಯ ಸಂದೇಶವನ್ನು ಪ್ರಸಾರ ಗೊಳಿಸಲು ಭಾರತವೆ ಸಮರ್ಥವಾಗಿದೆಯೆಂಬ ವಿಶ್ವಾಸವನ್ನೂ ಇದು ವ್ಯಕ್ತಗೊಳಿ ಸುತ್ತದೆ. ಭಾರತವು ತನ್ನ ಈ ಪಾತ್ರವನ್ನು ಪರಿತ್ಯಜಿಸುವದೆಂದರೆ ತನ್ನ ಸ್ವಧರ್ಮ ವನ್ನೆ ಅದು ಬಿಸುಟಬಿಟ್ಟಂತೆ. ಬುದ್ಧಿ, ವ್ಯುತ್ಪತ್ತಿ, ಪಾಂಡಿತ್ಯ, ಇವಾವೂ ಶ್ರೀ ಅರವಿಂದರ ಮನಸ್ಸನ್ನೆಂದೂ ಸೆಳೆದಿಲ್ಲ. ಶ್ರೀ ರಾಮಕೃಷ್ಣರ ವ್ಯಕ್ತಿತ್ವದಲ್ಲಿ ಅವರು ಚೊಕ್ಕ ಬಂಗಾರವನ್ನೆ ಕಂಡಿದ್ದಾರೆ, ಎಲ್ಲ ಬಗೆಯ ಬೌದ್ಧಿಕ ಆಡಂಬರ ಅಲಂಕಾರವನ್ನು ಕಳಚಿದ ಕೇವಲ ಆತ್ಮತತ್ತ್ವವನ್ನೆ ಸಂಧಿಸಿದ್ದಾರೆ. ದಕ್ಷಿಣೇಶ್ವರದ ಈ ಋಷೀಶ್ವರನ ಬಗೆಗೆ ಅವರು ತೆಗೆದ ಉದ್ಗಾರ ಹೀಗುಂಟು: "ಅನೇಕರು ಅನ್ನುವಂತೆ ಶ್ರೀ ರಾಮಕೃಷ್ಣರು ಇದ್ದುದು ಒಬ್ಬ ಹುಚ್ಚನ ಹಾಗೆ; ಬೌದ್ಧಿಕ ಶಿಕ್ಷಣವಿಲ್ಲದ, ಸಂಸ್ಕೃತಿ ಅಥವಾ ಸಭ್ಯತೆಯ ಯಾವ ವ್ಯಕ್ತಲಕ್ಷಣವೂ ಇಲ್ಲದ, ಹೆರವರ ದಾನದ ಮೇಲೆಯೆ ಬದುಕಿದ, ಹಿಂದುಸ್ಥಾನದ ಆಂಗ್ಲ ವಿದ್ಯಾವಂತರು ಸಾಮಾನ್ಯವಾಗಿ ಅನ್ನುವಂತೆ ಸಮಾಜವಿಘಾತಕವಲ್ಲದಿದ್ದರೂ ಸಮಾಜಕ್ಕೆ ನಿರುಪ ಯುಕ್ತವಾದ, ಬಾಳು ಅವರದು. ಅಂತಹರೆನ್ನುತ್ತಾರೆ: 'ಈ ಮನುಷ್ಯನು ಅಜ್ಞ ನಿದ್ದಾನೆ. ಇವನಿಗೇನು ಗೊತ್ತಿದೆ! ಪಾಶ್ಚಾತ್ಯದೇಶವು ಕಲಿಸಬಹುದಾದುದನ್ನೆಲ್ಲ

ಕಲಿತ ನಮಗೆ ಇವನೇನು ಕಲಿಸಬಲ್ಲ?' ಆದರೆ ಪರಮಾತ್ಮನಿಗೆ ಗೊತ್ತಿತ್ತು ತಾನೇನು ಮಾಡುತ್ತಿರುವೆನೆಂಬುದು. ಪರಮಾತ್ಮನು ಅವರನ್ನು ಬಂಗಾಲಕ್ಕೆ ಕಳಿಸಿ ಕಲಕತ್ತೆಯಲ್ಲಿ ಆ ದಕ್ಷಿಣೇಶ್ವರದ ಗುಡಿಯಲ್ಲಿ ಅವರನ್ನು ನಿಲ್ಲಿಸಿದನು. ಉತ್ತರದಿಂದ, ದಕ್ಷಿಣದಿಂದ, ಪೂರ್ವದಿಂದ, ಪಶ್ಚಿಮದಿಂದ, ಸುತ್ತೂ ಕಡೆಯಿಂದ ಸುಶಿಕ್ಷಿತ ಜನರು, ವಿಶ್ವವಿದ್ಯಾನಿಲಯಕ್ಕೆ ಅಭಿಮಾನಪ್ರಾಯರಾದವರು, ಯುರೋಪವು ಕಲಿಸಬಲ್ಲುದನ್ನೆಲ್ಲ ಅಭ್ಯಸಿಸಿದವರು, ಈ ತಪಸ್ವಿಯ ಅಡಿಗೆ ಎರಗಬಂದರು. ಬಂಧವಿಮೋಚನದ ಕಾರ್ಯವು, ಭಾರತವನ್ನು ಎತ್ತುವ ಕಾರ್ಯವು ಪ್ರಾರಂಭವಾಯ್ತು.''

ಶ್ರೀ ಅರವಿಂದರು ಉಳಿದಾವುದಕ್ಕಿಂತ ಪಾರಮಾರ್ಥಿಕ ಭಾವದಿಂದ ಬಹಳಷ್ಟು ಆಕರ್ಷಿತರಾಗಿದ್ದರೆಂಬ ಸಂಗತಿಯು ಸುಸ್ಪಷ್ಟವಿದೆ. ಜೊತೆಜೊತೆಗೆ, ಪರಮಾರ್ಥವೆಂಬುದು ಕೇವಲ ಬುದ್ಧಿಗಮ್ಯವಲ್ಲವೆಂಬುದೂ ಅವರಿಗೆ ಗೊತ್ತಿತ್ತು. 'ನ ಮೇಧಯಾ, ನ ಬಹುನಾ ಶ್ರುತೇನ': ಆತ್ಮವಸ್ತುವು ದುರ್ಬಲರಿಗೆ, ಹೇಡಿಗಳಿಗೆ ಲಭಿಸತಕ್ಕುದಲ್ಲವೆಂಬುದೂ ಅವರಿಗೆ ತಿಳಿದಿತ್ತು, 'ನ ಬಲಹೀನೇನ ಲಭ್ಯಃ'. ಆತ್ಮಾನುಸಂಧಾನಕ್ಕೆ ಪ್ರಾಚೀನ ಋಷಿಗಳು ತೋರಿಸಿದ ಮಹಾಪಥವೊಂದುಂಟು. ಅದೆಂದರೆ ಕಠೋಪನಿಷತ್ತಿನಲ್ಲಿ ನಿರ್ದೇಶಿಸಲ್ಪಟ್ಟ ಯೋಗವಿಧಿಯು. ಈ ಪಥವು ಕ್ಷುರಧಾರೆಯಂತೆ ನಿಶಿತವೆಂದೂ ದುರತ್ಯಯ ಎಂದರೆ ಅಡಿಯಿಡುವದು ತುಂಬ ಕಷ್ಟಕರವೆಂದೂ ವರ್ಣಿಸಲ್ಪಟ್ಟಿದೆ. ಆದರೆ ಅವರ ಜನ್ಮಜಾತ ಸ್ವಭಾವವು ಅವರನ್ನು ಅಪರಿಹಾರ್ಯವಾಗಿಯೂ ಅಸಂದಿಗ್ಧವಾಗಿಯೂ ಅವರನ್ನು ಅಧ್ಯಾತ್ಮಪಥದತ್ತ ಕೈಹಿಡಿದು ಕರೆದುಕೊಂಡು ಸಾಗಿತ್ತಷ್ಟೇ ಅಲ್ಲ, ತದನಂತರ ಸ್ವತಃ ಅವರು ಆ ಪಥವನ್ನು ತಮ್ಮದೇ ತಮ್ಮದಾದ, ದುಷ್ಕರವಾದ, ಪ್ರಗಲ್ಭವಾದ ಸಾಧನದ ಉಜ್ವಲ ಜ್ಯೋತಿಯಿಂದ ಪ್ರಕಾಶಮಾನವಾಗಿ ತೊಳಗಿಸಿದರು.

ಬಡೋದೆಯಲ್ಲಿ ನೆಲೆಸುವ ಪೂರ್ವದಲ್ಲಿಯೆ ಅವರಿಗೆ ಕೆಲವೊಂದು ಆಧ್ಯಾತ್ಮಿಕ ಅನುಭವಗಳು ಬಂದಿದ್ದವು. ಆದರೆ ಆಗ ಅವಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟಿರಲಿಲ್ಲ. ಇದೆಲ್ಲ ಅವರು ಯೋಗಾಭ್ಯಾಸವನ್ನು ಪ್ರಾರಂಭಿಸುವ ಮೊದಲಿಗಿನ ಮಾತು. ಕೆ. ಜಿ. ದೇಶಪಾಂಡೆಯವರು ಅವರಿಗೆ ಒಮ್ಮೆ ಯೋಗಾಭ್ಯಾಸವನ್ನು ಕೈಕೊಳ್ಳಲು ವಿಜ್ಞಾಪಿಸಿಕೊಂಡಿದ್ದರೆಂದು ಹೇಳಲಾಗುತ್ತಿದೆ. ಆದರೆ ಆಗಿನ್ನೂ ಆ ಬಗ್ಗೆ ಅವರಿಗೆ ಆಂತರಿಕ ಉತ್ಸಾಹವು ಉಂಟಾಗಿರಲಿಲ್ಲ. ಮುಂದೆ ಬರಬರುತ್ತ ಯೋಗಪಥವನ್ನು ಅನುಸರಿಸುವದು ಅವರಿಗೆ ಅಪರಿಹಾರ್ಯವಾಯಿತು. ಆ ಅಂತಃಪ್ರಚೋದನೆಯು ಎಡೆಬಿಡದ ಅನುಸಂಧಾನವಾಗಿ ಪರಿಣಮಿಸಿತು. ಪ್ರಾಚೀನರು ಅಷ್ಟೊಂದು ಮುಕ್ತಕಂಠದಿಂದ ವರ್ಣಿಸಿದ ಆಧ್ಯಾತ್ಮಿಕ ತುರೀಯ ಅನುಭವವಲ್ಲದೆ ಇನ್ನು ಬೇರೆ ಯಾವುದರಿಂದಲೂ ಅವರಿಗೆ ಸಮಾಧಾನವಾಗದಾಯ್ತು. ಶಿಷ್ಯನಿಗೆ ಈ ಗೂಢ ಪಥದಲ್ಲಿ ಸಂಪೂರ್ಣ ದೀಕ್ಷೆ ಕೊಡಬಲ್ಲ, ಓರ್ವ

ಗುರುವನ್ನು ಹುಡುಕಹವಣಿಸುವದು ಆತ್ಮಪಿಪಾಸುಗಳಿಗೆ ವಾಡಿಕೆಯಾಗಿದೆ. ಗುರುವೆಂದು ಹೇಳಿಸಿಕೊಳ್ಳಬಲ್ಲವರಾರೂ ಶ್ರೀ ಅರವಿಂದರಿಗೆ ದೊರಕಲಿಲ್ಲ. ಆದರೆ, ಸುದೈವದಿಂದ, ದಿಗ್ದರ್ಶನ ಮಾಡಬಲ್ಲ ಕೆಲವು ಜನರ ಸಂಪರ್ಕದಲ್ಲಿ ಅವರು ಬಂದರು. ನರ್ಮದಾತೀರದಲ್ಲಿ ಚಾಂದೋಡದಲ್ಲಿದ್ದ ಗಂಗಾಮಠದ ಶ್ರೀ ಸದ್ಗುರು ಬ್ರಹ್ಮಾನಂದರು ಶ್ರೀ ಅರವಿಂದರಿಗೆ ದರ್ಶನಕೊಟ್ಟು ಅನುಗ್ರಹಿಸಿದ ಮಹಾ ಸಿದ್ಧ ತಪಸ್ವಿಗಳಲ್ಲಿ ಒಬ್ಬರು ಎಂದು ಹೇಳಲಾಗುತ್ತಿದೆ. ಆ ತಪಸ್ವಿಗಳು ತಮ್ಮ ದರ್ಶನಕ್ಕೆಂದು ಹೋದವರ ಕಣ್ಣುಗಳನ್ನೆಂದೂ ಕಣ್ಣಿಟ್ಟು ನೋಡುತಿರಲಿಲ್ಲ. ಆದರೆ ಶ್ರೀ ಅರವಿಂದರ ವಿಷಯದಲ್ಲಿ ಮಾತ್ರ ಅವರು ಕಣ್ಣಲ್ಲಿ ಕಣ್ಣಿಟ್ಟು ನೋಡಿದ ರಷ್ಟೇ ಅಲ್ಲ, ಆದರೆ ಈ ಭಾವೀ ಯೋಗಿಯ ಮೇಲೆ ಅಜಸ್ರ ಶುಭಾಕಾಂಕ್ಷೆಗಳನ್ನೆ ಸುರಿಸಿದರು. ಶ್ರೀ ಅರವಿಂದರೂ ಮುಂದೆ ಅವರ ಕಣ್ಣುಗಳ ಮಾತೆತ್ತಿ ಅವು ಬಹಳ ಸುಂದರವಿದ್ದವೆಂದು ಅಂದಿದ್ದಾರೆ. ಬ್ರಹ್ಮಾನಂದರ ಶಿಷ್ಯರಲ್ಲೊಬ್ಬರು ಶ್ರೀ ಅರವಿಂದರಿಗೆ ಮೊಟ್ಟ ಮೊದಲು ಪ್ರಾಣಾಯಾಮದ ಪಾಠ ಹೇಳಿಕೊಟ್ಟರೆಂದು ವದಂತಿಯಿದೆ. ಚಾಂದೋಡಕ್ಕೆ ಶ್ರೀ ಅರವಿಂದರು ಎರಡು ಮೂರು ಸಲ ಹೋಗಿ ಬಂದರೆಂದೂ ಹೇಳಲಾಗುತ್ತಿದೆ. ಈ ಬಗೆಯ ಸಂಬಂಧ ಸಂಪರ್ಕಗಳು ಅವರು ಅಡಿಯಿಟ್ಟ ದಾರಿಯಲ್ಲಿ ಅವರನ್ನು ಸ್ಥಿರಗೊಳಿಸಲು ಸಹಾಯಕವಾದವೆಂಬುದು ತೀರ ಸ್ಪಷ್ಟವಿದೆ. ಅವರ ಯೌಗಿಕ ಸಾಧನವು ೧೯೦೪ರಲ್ಲಿ ಚಿಂತನ ಪ್ರಾಣಾಯಾಮಗಳಿಂದ ಪ್ರಾರಂಭವಾಯ್ತು ; ಹಾಗೂ ಅವರು ಈ ಬಗೆಯ ಸಾಧನದಲ್ಲಿ ದಿನವೂ ಎಷ್ಟೋ ತಾಸು ಕಳೆಯುತಿದ್ದರು. ಮುಂದೆ ೧೯೦೭ರಲ್ಲಿಯೂ ಆ ತರುವಾಯವೂ ಆಗ ಗ್ವಾಲಿಯೇರದಲ್ಲಿದ್ದ ಶ್ರೀ ಲೇಲೆ ಅವರ ಸಂಪರ್ಕವು ಶ್ರೀ ಅರವಿಂದರಿಗೆ ಒಳ್ಳೆ ಸಹಾಯಕಾರಿಯಾಯ್ತು. ಅವರು ಎರಡು ಸಂದರ್ಭಗಳಲ್ಲಿ ಲೇಲೆಯವರ ಸಹಾಯ ಕೋರಿದರು. ಆ ಎರಡೂ ಸಂದರ್ಭಗಳಲ್ಲಿ ಇವರಿಂದ ದೊರೆತ ನಿರ್ದೇಶಗಳು ಬಹಳ ಸಮಂಜಸವೂ ಅತ್ಯಂತ ಉಪಯುಕ್ತವೂ ಆಗಿದ್ದವು. ಈ ಸಂಗತಿಗಳನ್ನು ಕುರಿತು ಹೆಚ್ಚಾಗಿ ಈಗ ಹೇಳದೆ ಮುಂದೆ ಅವರ ಸಾಧನದ ವಿಷಯವಾಗಿ ಬರೆಯುವಾಗ ಹೇಳಬೇಕೆನ್ನುತ್ತೇನೆ. ಶ್ರೀ ಅರವಿಂದರ ಸಾಧನದ ಬಹ್ವಂಶವು ನಿಃಸಂದೇಹವಾಗಿಯೂ ಸ್ವಯಂ ಚಾಲಿತವಾದುದು. ಬಡೋದೆಯಿಂದ ಕಲಕತ್ತೆಗೆ ಹೋಗುವಷ್ಟರೊಳಗೆ ಆಗಲೆ ಅವರು ಬಹಳಷ್ಟು ಪ್ರಗತಿಯನ್ನು ಸಾಧಿಸಿದ್ದರು. ಯೋಗದೊಳಗಿನ ಅವರ ಪ್ರಗತಿಯು ಅವರಿಗೆ ಇನ್ನೂ ಆಳವಾದ ಅಂತರ್ಜ್ಞಾನವನ್ನು, ಇನ್ನೂ ಹೆಚ್ಚಿನ ಸಾಮರ್ಥ್ಯವನ್ನೂ ನಿಶ್ಚಲ ಶ್ರದ್ಧೆಯನ್ನೂ ಸ್ವಂತದ ವಿಷಯಕ್ಕೆ ಹೆಚ್ಚಿನ ಆತ್ಮವಿಶ್ವಾಸವನ್ನೂ ತಂದುಕೊಟ್ಟಿತು.

ಶ್ರೀ ಅರವಿಂದರು ಕ್ರಾಂತಿಕಾರಕ ತಂಡಗಳನ್ನು ಸಂಘಟಿಸಲು ಮಾಡಿದ ಏರ್ಪಾಡುಗಳ ವಿಷಯವನ್ನು ಎತ್ತಿ ಹೇಳದಿದ್ದರೆ, ಸಿದ್ಧತೆಯ ಬಗೆಗಿದ್ದ ಈ

ಪ್ರಕರಣವು ಅಸಂಪೂರ್ಣವೆನಿಸುತ್ತದೆ. ಏನನ್ನೆ ಮಾಡಲಿ ವಿಶೇಷ ಗದ್ದಲವಿಲ್ಲದೆ, ಅಗೋಚರವಾಗಿ ಅದನ್ನು ಮಾಡುವದು ಅವರ ಸ್ವಭಾವವಾಗಿದ್ದರೂ ಕ್ರಾಂತಿ-ಕಾರಕರ ಸಂಘಟನೆಯಲ್ಲಿ ಅವರು ತಮ್ಮ ಮನಸ್ಸನ್ನು ಹಾಕಿದ್ದರಲ್ಲದೆ ಅದು ಅವರ ರಾಜಕೀಯ ಕರ್ತವ್ಯದ ಒಂದು ಅಂಗವಾಗಿಯೆ ಹೋಗಿತ್ತು. ಒಂದು ಸಂಗತಿಯು ಮಾತ್ರ ಗಮನಾರ್ಹವಾಗಿದೆ. ಅದೆಂದರೆ, ಶ್ರೀ ಅರವಿಂದರು ಶಸ್ತ್ರಶಿಕ್ಷಣದಲ್ಲಿ-ಯಾಗಲಿ, ಬಾಂಬು ನಿರ್ಮಾಣದಲ್ಲಿಯಾಗಲಿ, ಮದ್ದುಗುಂಡು ಸಂಗ್ರಹಿಸುವದರಲ್ಲಿ-ಯಾಗಲಿ ಅಥವಾ ಸಮರವಿದ್ಯಾವಿಷಯದಲ್ಲಿಯಾಗಲಿ ಪ್ರತ್ಯಕ್ಷವಾಗಿ ಭಾಗ ವಹಿಸಿದವರಲ್ಲ. ಈ ಬಗೆಯ ತಂಡಗಳನ್ನು ಸೇರಬಯಸುವವರಿಗೆ ಸ್ಫೂರ್ತಿಕೊಟ್ಟು ಅವರ ನೈತಿಕ ಸತ್ತ್ವವನ್ನು ಬಲಪಡಿಸುವ ಕಾರ್ಯವನ್ನು ಇವರು ನಿರ್ವಹಿಸು-ತಿದ್ದರು. ಅವರ ಚಿಕ್ಕ ತಮ್ಮ ಬಾರೀಂದ್ರಕುಮಾರರು ೧೯೦೧ ರ ನಂತರ ಅವರನ್ನು ಬಡೋದೆಯಲ್ಲಿ ಕೂಡಿಕೊಂಡ ಮೇಲೆ, ಆ ಬಗೆಯ ಚಟುವಟಿಕೆಗಳಲ್ಲಿ ಅವರು ಹೆಚ್ಚು ಉತ್ಸಾಹ ತೋರಿಸತೊಡಗಿದರು. ಆದರೆ ೧೯೦೨ ರ ವರೆಗೆ ಯಾವ ಬಗೆಯ ಮಹತ್ವದ ಕಾರ್ಯವು ಆಗಲಿಲ್ಲವಾದರೂ ಅನಂತರ ಸಂಘಟನೆಯ ಕಾರ್ಯವು ತಕ್ಕಷ್ಟು ಪ್ರಾರಂಭವಾಯಿತು.

ಈ ಎಲ್ಲ ಚಟುವಟಿಕೆಯ ಮೂಲ ಬೀಜವು ಲಂಡನ್ನದ 'ಕಮಲ ಮತ್ತು ಕೃಪಾಣ' ಸಂಘದಲ್ಲಿ ಇತ್ತೆಂಬುದನ್ನು ಅರಿಯಬಹುದು. ಆ ಸಂಘವೇನೊ ಮೃತಜಾತ ಶಿಶುವಿನಂತಾಯ್ತು ನಿಜ; ಆದರೆ ಹಿಂದುಸ್ಥಾನದ ಸ್ವಾತಂತ್ರ್ಯಕ್ಕಾಗಿ ಗುಪ್ತ ಪ್ರತಿಜ್ಞೆಯನ್ನು ಮಾಡಿದ ಕೆಲವರಲ್ಲಿ ಶ್ರೀ ಅರವಿಂದರೂ ಒಬ್ಬರಾಗಿದ್ದರು. ಗುಪ್ತ ಕ್ರಾಂತಿಕಾರಕ ಸಂಘಗಳ ಕಲ್ಪನೆಯು ಯುರೋಪಕ್ಕೆ ಹೊಸದೇನೂ ಇರಲಿಲ್ಲ. ಆಯರ್ಲಂಡದಲ್ಲಿ ಅಂತಹ ಸಂಘಗಳು ವಿಪುಲವಾಗಿದ್ದವು; ಮತ್ತು ಇಟಾಲಿಯ ಕಾರ್ಬೋನರಿ (Carbonari) ಯಂತೂ ತುಂಬ ಪ್ರಖ್ಯಾತವಾಗಿದ್ದಿತು. ಈ ಬಗೆಯ ಕಲ್ಪನೆಗಳು ಭಾರತದ ಯುವಕರಿಗೆ ತುಂಬ ಮೆಚ್ಚಿಗೆಯಾದವು; ಹಾಗೂ ಒಡನೆಯೆ ಇಂತಹ ತಂಡಗಳ ಸಂಘಟನೆಯು ನಡೆದುಹೋಯ್ತು. ಈ ಕಾರ್ಯವು ವ್ಯವಸ್ಥಿತವಾಗಿ ನಡೆದುದು ಇನ್ನುಳಿದ ಪ್ರಾಂತಗಳಿಗಿಂತ ಹೆಚ್ಚಾಗಿ ಬಂಗಾಲ ಮಹಾರಾಷ್ಟ್ರಗಳಲ್ಲಿ. ದೇಶಕ್ಕಾಗಿ ಆತ್ಮತ್ಯಾಗ ಮಾಡಲು ಮತ್ತು ಗೌಪ್ಯವನ್ನು ಪಾಲಿಸಲು ಪಣ ತೊಟ್ಟ ಹುಮ್ಮಸಿನ ತರುಣರ ಸಣ್ಣ ಸಣ್ಣ ತಂಡಗಳನ್ನು ದೇಶದಾದ್ಯಂತ ಸಂಘಟಿಸತಕ್ಕ-ದ್ದೆಂಬುದೆ ಅವರ ಸರ್ವಸಾಮಾನ್ಯ ಯೋಜನೆಯಾಗಿತ್ತು. ಆ ತರುಣರಿಗೆ, ಕಷ್ಟಮಯ ಸಾಹಸದ ಜೀವನ, ಶಸ್ತ್ರವಿದ್ಯೆ, ಸಮರಶಾಸ್ತ್ರದ ರಹಸ್ಯ, ಇವೇ ಮೊದಲಾದವುಗಳ ಬಗ್ಗೆ ಶಿಕ್ಷಣ ಕೊಡಲಾಗುತಿತ್ತು. ದೇಶದಾದ್ಯಂತ ಸಾಕಷ್ಟು ಜನರು ಸಿದ್ಧರಾಗುತ್ತಲೆ, ಒಂದು ನಿರ್ದಿಷ್ಟ ಸಂಕೇತದಂತೆ ಏಕಕಾಲಕ್ಕೆ ಸಶಸ್ತ್ರ ಕ್ರಾಂತಿಯೂ ಜೊತೆಜೊತೆಗೆ ಅಂತಿಮ ಆಘಾತವೂ ಜರಗತಕ್ಕದ್ದೆಂಬು ಗೊತ್ತಾಗಿತ್ತು.

ಇದಕ್ಕೆಲ್ಲ ಮೂವತ್ತು ವರ್ಷಗಳಷ್ಟು ಕಾಲ ಹಿಡಿಯಬಹುದೆಂದು ಲೆಕ್ಕ ಮಾಡ-ಲಾಗಿತ್ತು. ಟಿಳಕ, ಲಜಪತರಾಯ ಹಾಗೂ ಇನ್ನುಳಿದ ಉಗ್ರಮತವಾದಿಗಳಾದ ಮುಂದಾಳುಗಳು ಈ ಗುಂಪುಗಳ ಜೊತೆಗೆ ಸಂಪರ್ಕವಿಟ್ಟುಕೊಂಡಿದ್ದರು; ಮತ್ತು ಅವರು ಆ ಜನಗಳನ್ನೆಂದೂ ನಿರುತ್ಸಾಹಗೊಳಿಸಲಿಲ್ಲ. ಹೀಗಿದ್ದರೂ ಅವರು ಸ್ವತಃ ಸಂಘಟಕರು ಆಗಿರದೆ ಅವರೊಡನೆ ನಿಬಿಡವಾಗಿಯೂ ಇರದೆ ಇದ್ದರು. ಇದು ಒಂದು ಬಗೆಯ ಪೂರಕ ಆಂದೋಲನವೆಂದೂ ಏನೋ ಒಂದು ವಿಧವಾಗಿ ಅಸ್ಪಷ್ಟವಾಗಿ ಒಂದು ದಿನ ಇದು ಉಪಯೋಗಕ್ಕೆ ಬಂದರೂ ಬರಬಹುದೆಂದೂ ಈ ಚಟುವಟಿಕೆಯತ್ತ ನೋಡುತಿದ್ದರು. ಈ ಗುಂಪಿನ ಕೆಲವು ಜನರು ಭಯಕಾರಕರಾಗಿ (terrorist) ಮಾರ್ಪಟ್ಟುದು ದುರ್ದೈವದ ಸಂಗತಿಯಾದರೂ ಮೂಲಭೂತ ಕಲ್ಪನೆ ಮತ್ತು ಪ್ರೇರಣೆ ಶಸ್ತ್ರಸಜ್ಜಿತ ಬಹಿರಂಗ ಕ್ರಾಂತಿಯೆ ಆಗಿತ್ತು; ಹಿಂದುಸ್ಥಾನದ ಸೈನ್ಯದ ಒಂದು ಭಾಗವನ್ನು ತನ್ನತ್ತ ಒಡೆದುಕೊಂಡು, ಆ ಮೂಲಕ ಇದನ್ನು ಸಾಧಿಸಿದರೂ ಅಡ್ಡಿಯಿಲ್ಲವೆಂದು ಹಂಚಿಕೆ ಹೂಡಲಾಗಿತ್ತು.

ಈ ರಂಗದಲ್ಲಿ ಶ್ರೀ ಅರವಿಂದರು ಕೈಕೊಂಡ ಚಟುವಟಿಕೆಗಳ ವಿವರವನ್ನೆಲ್ಲ ಕೊಡುವದು ಸಾಧ್ಯವೂ ಇಲ್ಲ ಅಗತ್ಯವೂ ಇಲ್ಲ. ಏಕೆಂದರೆ, ವಿಶೇಷತಃ ಸ್ವತಃ ಬಾರೀಂದ್ರರೆ ಬಹಿರಂಗವಾಗಿ ರಾಜಕೀಯ ಕ್ಷೇತ್ರದಲ್ಲಿ ಕಾಲಿಟ್ಟು ಕಾರ್ಯೋನ್ಮುಖ-ರಾದುದರಿಂದ ಈ ಗುಪ್ತ ಸಂಘಗಳ ಪ್ರತ್ಯಕ್ಷ ಸಂಬಂಧವ ಶ್ರೀ ಅರವಿಂದರಿಗೆ ತಪ್ಪಿ-ಹೋಯ್ತು. ಕ್ರಾಂತಿಕಾರಕವಾದ ವಿಚಾರವುಳ್ಳ ತರುಣರಿಗೆ ಇವರೊಬ್ಬ ದೂರಿನಿಂದ ಆದರೆ ನಿಜವಾದ ಸ್ಫೂರ್ತಿಕೊಡುವವರಾಗಿಯಷ್ಟೆ ಉಳಿದರು. ಈ ಬಗ್ಗೆ ಅವರು ಯಾವ ವಿಧದ ಕಾರ್ಯ ಮಾಡಿದರು ಹಾಗೂ ಅದನ್ನು ಹೇಗೆ ಮಾಡಿದರು ಎಂಬು ದನ್ನಷ್ಟು ಹೇಳಿದರೆ ಸಾಕು. ಜತೀನ ಬ್ಯಾನರ್ಜಿ ಎಂಬ ಓರ್ವ ತರುಣ ಉತ್ಸಾಹಿ ಬಂಗಾಲಿಯನ್ನು, ಬಡೋದಾ ಸೈನ್ಯದಲ್ಲಿರಿಸಿ ಸೈನ್ಯಶಿಕ್ಷಣ ಕೊಡಿಸಲು ಮಾಡಿದ ಎತ್ತುಗಡೆಯು ಅವರ ಕಾರ್ಯಾರಂಭದ ಒಂದು ಪ್ರತ್ಯಕ್ಷ ಉದಾಹರಣೆಯಾಗಿದೆ. ಈ ಘಟನೆಯು ನಡೆದದ್ದು ಬಡೋದೆಗೆ ಹೋದ ಮೇಲೆ ಬಹು ವರ್ಷಗಳ ನಂತರ. ಆ ಮೇಲೆ ಬಂಗಾಲಕ್ಕೆ ಹೋಗಿ ಈ ಸಂಘದ ಕೇಂದ್ರಗಳನ್ನು ಪ್ರಾರಂಭಿಸಲೆಂದು ತಕ್ಕ ಯುವಕರನ್ನು ಕೂಡಿಸಲಿಕ್ಕೂ ಅಲ್ಲಿ ಯೋಗ್ಯವಾದ ಪ್ರದೇಶಗಳನ್ನು ಪರಿಶೀಲಿಸಿ-ಕೊಂಡು ಬರಲಿಕ್ಕೂ ಬಾರೀಂದ್ರರಿಗೆ ಹೇಳಲಾಯ್ತು. ಸ್ವತಃ ಶ್ರೀ ಅರವಿಂದರೇ ತಮ್ಮ ಬಿಡುವಿನ ಸಮಯದಲ್ಲಿ ಬಂಗಾಲದ ಕೆಲವು ಜಿಲ್ಹೆಗಳನ್ನು ಸಂದರ್ಶಿಸಿ ಬಂದ-ರಲ್ಲದೆ, ಈ ಉದ್ಯಮದಲ್ಲಿ ತೊಡಗಿದ ಹಲವು ಜನರನ್ನೂ ಸಂಧಿಸಿದರು. ೧೯೦೪ ರಲ್ಲಿಯೂ ಮತ್ತು ಆ ಮೇಲೆಯೂ ಅವರು, ಖುಲನಾ, ಮಿದ್ನಾಪೂರ, ಡಾಕಾ, ರಂಗಪೂರ ಹಾಗೂ ಇನ್ನುಳಿದ ಸ್ಥಳಗಳನ್ನು ಸುತ್ತಿ ನೋಡಿದರು. ಪಣ ತೊಡುವ-ದಂತೂ ಈ ಸಂಸ್ಕಾರದ ನಿತ್ಯ ನಿಯಮವಾಗಿಬಿಟ್ಟಿತ್ತಷ್ಟೇ ಅಲ್ಲ ಒಂದು ಕೈಯಲ್ಲಿ

ಗೀತೆಯನ್ನೂ ಇನ್ನೊಂದು ಕೈಯಲ್ಲಿ ಖಡ್ಗವನ್ನೂ ಹಿಡಿದು ಈ ಪ್ರತಿಜ್ಞಾವಿಧಿಯು ಜರಗುತಿತ್ತು.

ಶ್ರೀ ಅರವಿಂದರು ಮಹಾರಾಷ್ಟ್ರದ ಕ್ರಾಂತಿಕಾರಕರ ಸಂಪರ್ಕದಲ್ಲಿಯೂ ಇದ್ದರು; ಮತ್ತು ಅವರಲ್ಲಿ ಕೆಲವರು ಅಂದರೆ, ಹರಿಭಾವು ಮೋಡಕ, ಕಾಕಾ ಪಾಟೀಲ ಹಾಗೂ ಇನ್ನುಳಿದವರು ೧೯೦೪ ಸಪ್ಟೆಂಬರದಲ್ಲಿ ಮುಂಬಯಿಯ ಹತ್ತರ ಠಾಣೆಯ ಬಳಿಗೆ ಅವರನ್ನು ಭೆಟ್ಟಿಯಾದರು. ವಿಚಿತ್ರ ಮಾತೆಂದರೆ ಈ ಬಗೆಯ ಚಟುವಟಿಕೆಯ ಸುಳಿಯಲ್ಲಿ ರಾಜನಾರಾಯಣ ಬೋಸರಂಥ ವ್ಯಕ್ತಿಗಳೂ ಸಿಲುಕಿದ್ದರು; ಮತ್ತು ಯುವಕ ರವೀಂದ್ರನಾಥ ಠಾಕೂರರು ಸಹ ಒಮ್ಮೆ ಪ್ರತಿಜ್ಞೆಯನ್ನು ಮಾಡಿದ್ದರು. ಕೆಲವು ಸಲವಂತೂ ಜೋಗೇನ ಮುಕರ್ಜಿಯವರಂತಹ ಮ್ಯಾಜಿಸ್ಟ್ರೇಟರೂ ಠಾಣೆಯ ಚಾರುಚಂದ್ರ ದತ್ತರಂತಹ ಆಯ್. ಸಿ. ಎಸ್. ಅಧಿಕಾರಿಗಳೂ ಈ ಕ್ಷೇತ್ರದ ಕಾರ್ಯಕರ್ತರಿಗೆ ಸಹಕಾರ ನೀಡಿದ್ದುಂಟು. ೧೯೦೨ ರಲ್ಲಿ ಸಿಸ್ಟರ ನಿವೇದಿತಾ ಅವರು, ಕೇವಲ ಈ ವಿಷಯದ ಬಗ್ಗೆಯೆ ಶ್ರೀ ಅರವಿಂದರನ್ನು ಕಾಣಲು ಮತ್ತು ಮಹಾರಾಜರ ಸಹಾನುಭೂತಿಯನ್ನು ದೊರಕಿಸಲು ಬಡೋದೆಗೆ ಹೋದದ್ದೂ ಉಂಟು; 'ನೀವು ಶಕ್ತಿಯ ಉಪಾಸಕರೆಂದು ಕೇಳಿದ್ದೇನೆ' ಎಂದು ಅನ್ನುತ್ತ ಅವರನ್ನು ಕಂಡರಂತೆ. 'ಕಾಲಿ ಮಾತಾ' ಎಂಬ ಅವರ ಪುಸ್ತಿಕೆಯನ್ನು ಈ ಮೊದಲೆ ಶ್ರೀ ಅರವಿಂದರು ಓದಿದ್ದರು. ಬಡೋದೆಯ ಕೇಶವರಾವ ಜಾಧವ ಅವರ ಅಣ್ಣನ ಮಗನಾದ ಮಾಧವರಾವ ಎಂಬವರನ್ನು, ಸಮರವಿದ್ಯೆ, ಶಸ್ತ್ರವಿದ್ಯೆ ಮತ್ತು ಬಾಂಬ ರಿವ್ಹಾಲ್ವರಗಳನ್ನು ಸಿದ್ಧಗೊಳಿಸುವದು ಮೊದಲಾದ್ದನ್ನೆಲ್ಲ ಕಲಿಯಲು ಇಂಗ್ಲಂಡಕ್ಕೆ ಕಳಿಸಲಾಗಿತ್ತು. ಶ್ರೀ ಅರವಿಂದರು ಮಾಧವರಾಯರಿಗೆ ಈ ಬಗ್ಗೆ ಆರ್ಥಿಕ ಸಹಾಯವನ್ನು ಸಹ ಮಾಡಿದ್ದರು. ಯುವಕರನ್ನು ಅಧ್ಯಾತ್ಮದಲ್ಲಿಯೂ ಕ್ರಾಂತಿಕಾರಕ ಚಟುವಟಿಕೆಯಲ್ಲಿಯೂ ಸಿದ್ಧಗೊಳಿಸಲು ಭವಾನೀ ಮಂದಿರವನ್ನು ಸಂಸ್ಥಾಪಿಸಬೇಕೆಂಬ (ರೌಲೆಟ್ ರಿಪ್ರೋರ್ಟನಲ್ಲಿ ಕಾಣಿಸಿದಂತೆ) ಕಲ್ಪನೆಯೂ ಇತ್ತು. ಈ ಕಲ್ಪನೆಗೆ ಮೂಲ ಉಗಮವೆಂದರೆ 'ಆನಂದಮಠ' ವೆಂದು ಹೇಳಬಹುದಾಗಿದೆ. 'ಭವಾನೀಮಂದಿರ' ಎಂಬ ಪುಸ್ತಕದ ಲೇಖಕರು ಸ್ವತಃ ಶ್ರೀ ಅರವಿಂದರೆ ಆಗಿದ್ದರು; ಅಧ್ಯಾತ್ಮವೂ ಸ್ವದೇಶಪ್ರೇಮವೂ ಸಮ್ಮಿಲಿತವಾಗಿ ಸತ್ತ್ವಯುತವಾಗಿ ಸಾಧಕರ ಮನಸ್ಸಿನಲ್ಲಿ ಮೂಡುವಂತೆ ಮಾಡಲು ಅಗತ್ಯವಾಗಿದ್ದ ಒಂದು ಕೇಂದ್ರ ಸ್ಥಳದ ಮಹತ್ವವನ್ನು ಇಲ್ಲಿ ವಿವರಿಸಿದೆ. ಹೇಮೇಂದ್ರದಾಸ, ಮಾಂಡವಲೆ, ಮಿತ್ರ, ಜತೀನ, ಬಾರೀಂದ್ರ, ಠಾಕೂರ ರಾಮಸಿಂಗ ಮೊದಲಾದವರು ಈ ಚಟುವಟಿಕೆಗೆ ಸಂಬಂಧಿಸಿದ ಮಹತ್ವದ ವ್ಯಕ್ತಿಗಳಾಗಿದ್ದರು; ಮತ್ತು ಶ್ರೀ ಅರವಿಂದರು ಇವರೆಲ್ಲರೊಡನೆಯೂ ಸಂಪರ್ಕವಿಟ್ಟುಕೊಂಡಿದ್ದರು. ಈ ದಿಶೆಯಲ್ಲಿ ಪ್ರತ್ಯಕ್ಷ ಚುರುಕಾದ ಕಾರ್ಯ ಪ್ರಾರಂಭವಾದುದು ೧೯೦೨ ರಲ್ಲಿ ಎಂದು ಹೇಳಬಹುದು. ಆದರೆ ಮೇಲೆ ಹೇಳಿದಂತೆ ಇದು

ಅವರ ಜೀವನದ ಒಂದು ಪ್ರಸಂಗ ಮಾತ್ರವಾಗಿದೆ; ಮುಂದೆ ಇವರು ಇದಕ್ಕೂ ವಿಸ್ತಾರದ ಹಾಗೂ ಪ್ರಕ್ಷುಬ್ಧ ರಾಜಕೀಯ ಜೀವನೋದಧಿಯಲ್ಲಿ ತಮ್ಮ ಹಡಗವನ್ನು ತೇಲಿಬಿಡಲು, ಒಂಬದಿಗೆ ಬಿಟ್ಟುಬಂದ ಜಲರಾಶಿಯಲ್ಲಿ ಎದ್ದ ಬಿದ್ದ ತೆರೆಗಳನ್ನೆಲ್ಲ ಗಮನಿಸುವ ಪೂರ್ಣ ಅವಧಾನ ಅವರಿಗೆ ಉಳಿಯಲಿಲ್ಲ.

ಒಟ್ಟಿನಲ್ಲಿ, ಬಡೋದೆಯಲ್ಲಿ ಈ ಹದಿಮೂರು ವರ್ಷ ಕಾಲ ಸತತವಾಗಿ ಏಕಾಗ್ರಚಿತ್ತದಿಂದ ಸಾಗಿದ ಈ ಅಮೋಘ ಸಿದ್ಧತೆಯು, ಶ್ರೀ ಅರವಿಂದರ ಜೀವನದ ಪ್ರತಿಯೊಂದು ಸಂಗತಿಯ ಅಸ್ತಿವಾರವನ್ನು ಹಾಕಿತು, ಹಾಗೂ ಅದೇ ಮುಂದೆ ಸಮೃದ್ಧವಾಗಿ ಪ್ರಕಟಗೊಂಡು ಜಾಜ್ವಲ್ಯಮಾನವಾಗಿ ತೊಳಗಿತು. ಇಲ್ಲಿಯೆ ಅವರು ಭಾರತೀಯ ಮತ್ತು ಪ್ರಾಚ್ಯ ವೈಭವಯುಕ್ತ ಪರಂಪರೆಯನ್ನು ಸಂಪೂರ್ಣವಾಗಿ ಅರಿತುಕೊಂಡುದು. ಪಾಶ್ಚಾತ್ಯ ವಿಜ್ಞಾನದ ವಿಷಯಕ್ಕೂ ಪಾಶ್ಚಾತ್ಯ ದೇಶಗಳ ವಿಷಯಕ್ಕೂ ಇದ್ದ ಎಲ್ಲ ಅತ್ಯಾಧುನಿಕ ಬರೆಹಗಳ ಸಂಪರ್ಕವಿಟ್ಟುಕೊಂಡು ಆ ಮೂಲಕ ಅವುಗಳ ಬಗ್ಗೆ ಸದಾ ತಮ್ಮ ಜ್ಞಾನವನ್ನು ಹೆಚ್ಚಿಸಿಕೊಳ್ಳುತ್ತಲೆ ಇದ್ದರು. ಅವರ ಸಾಹಿತ್ಯನಿರ್ಮಿತಿಯು ಅವರ ವಿಚಾರಗಳನ್ನು ದೃಢಪಡಿಸಿತು, ಮತ್ತು ಅವರ ಶೈಲಿಯನ್ನು ರೂಪಿಸಿತು. ರಾಜಕೀಯ ಧೋರಣೆಗಳ ವಿಷಯಕ್ಕಿದ್ದ ಅವರ ಮತಗಳು ಇನ್ನಷ್ಟು ದೃಢಮೂಲವಾದವು, ಹಾಗು ಅವುಗಳನ್ನು ಒಳ್ಳೆ ಪ್ರಭಾವ ಶಾಲಿಯಾಗಿಯೂ ಪರಿಣಾಮಕಾರಕವಾಗಿಯೂ ವ್ಯಕ್ತಪಡಿಸಬಲ್ಲ ಆತ್ಮವಿಶ್ವಾಸವು ಅವರಲ್ಲಿ ಮೂಡಿತು. ಅವರ ಸ್ವದೇಶಾಭಿಮಾನವು ಪಾರಮಾರ್ಥಿಕತೆಯಲ್ಲಿ ಬೇರೂರಿತು, ಮತ್ತು ಈ ಪಾರಮಾರ್ಥಿಕತೆಯೆ ಅವರ ಜಾಗ್ರತ ಜೀವನದ ಅಂಗವಾಗಿ ಹೋಗಿ, ಅದೆಂದೂ ಕೇವಲ ಆಕಾಂಕ್ಷೆಯಾಗಿಯಾಗಲಿ ಹುಸಿಬಯಕೆ ಯಾಗಿಯಾಗಲಿ ಉಳಿಯಲಿಲ್ಲ. ಆದರೆ ಪಾರಮಾರ್ಥಿಕತೆ ಎಂಬುದು ಬರೀ ಬುದ್ಧಿಗಮ್ಯ ವಿಷಯವಾಗಿರದೆ ಪ್ರತ್ಯಕ್ಷ ಅನುಭವಗಮ್ಯ ಸಂಗತಿಯಾದುದರಿಂದ ಅದನ್ನು ಸಹ ಸ್ವಾಧೀನಪಡಿಸಿಕೊಳ್ಳಲೆಂದು ತುಂಬ ತುಳಿದಾಡಿದ ದಾರಿಯೆನಿಸಿದ ಯೋಗಪಥದಲ್ಲಿ ಅಡಿಯಿಟ್ಟರು. ಅವರ ಸಾಮಾಜಿಕ ಜೀವನದ ಬಗ್ಗೆ ಹೇಳುವ ದಾದರೆ, ಅವರು ಮದುವೆಯಾಗಿದ್ದರು. ಆದರೂ ಸಾಮಾನ್ಯ ಸತಿಪತಿಯ ಸಂಬಂಧ ವನ್ನು ಮೀರಿ ನಿಂತು ತಮ್ಮ ಜೊತೆಗೆ ತಮ್ಮ ಅರ್ಧಾಂಗಿಯನ್ನು ಉದ್ಧಾರದ ದಾರಿಯಲ್ಲಿ ಕರೆದೊಯ್ಯಬೇಕೆಂದೂ ತಾವಿಬ್ಬರೂ ಪರಮಗತಿಯನ್ನು ಕೋರುವ ಸಖಜೀವರಾಗಿ ಇರಬೇಕೆಂದೂ ಅವರಿಗೆ ಅನ್ನಿಸಹತ್ತಿತು.

ಹೀಗೆ ಮೂವತ್ತನಾಲ್ಕು ವರ್ಷದ ತಾರುಣ್ಯದಲ್ಲಿ ಅವರು, ಅಸಾಧಾರಣ ಸಿದ್ಧತೆಯೊಡನೆ, ರಾಜಕೀಯ ಜೀವನದ ಸುಳಿನೀರಿನಲ್ಲಿ ಕಾಲಿಡಲು ಅಣಿಯಾದರು. ಅವರಿಗೆ ವಾಡಿಕೆಯ ಪದವಿಗಳು, ಯೋಗ್ಯತೆ ಮತ್ತು ಕಾರ್ಯಕ್ಷಮತೆಗಳು ಬೇಕಾದಷ್ಟು ಇದ್ದವೇನೊ ಸರಿ; ಆದರೆ ಅವರು ನಿಜವಾಗಿ ನಂಬಿದ್ದರು

ಪ್ರತಿಯೊಂದರಲ್ಲಿಯೂ ಈಶ್ವರೀ ಸಂಕೇತವೆಂಬುದು ಒಂದು ಉಂಟೆಂದು, ಭಾರತ ದೇಶವೆಂದರೆ ಪ್ರತ್ಯಕ್ಷ ದಿವ್ಯ ಮಾತೆಯೆಂದು. ಭಾರತದ ಅಧ್ಯಾತ್ಮ ಸಂದೇಶದಲ್ಲಿ ಅವರಿಗೆ ಸಂಪೂರ್ಣ ವಿಶ್ವಾಸವಿತ್ತು. ಪೂರ್ವ ಪಶ್ಚಿಮ ದೇಶಗಳೆರಡನ್ನೂ ಆದ್ಯಂತ ವಾಗಿ ಬಲ್ಲವರಾಗಿದ್ದ ಅವರು ಯೋಗಸಾಧನದಲ್ಲಿ ಅಗಲೆ ಪ್ರಗತಿಯನ್ನು ಸಾಧಿಸಿ ಬಹು ಮುಂದೆ ಹೋಗಿದ್ದರು. ಈ ಎಲ್ಲ ಸಂಗತಿಗಳಲ್ಲಿಯೆ ನಿಜವಾದ ಶ್ರೀ ಅರವಿಂದರು ನಮಗೆ ಒಡೆದು ಕಾಣಿಸಿಕೊಳ್ಳುತ್ತಾರೆ. ಸಾಮಾನ್ಯ ದೃಷ್ಟಿಯಿಂದ ನೋಡಿದರೆ, ಇವು ರಾಜಕಾರಣಕ್ಕೆ ತಕ್ಕ ಯೋಗ್ಯತೆಗಳೇನಲ್ಲ. ಕೆಲವರ ದೃಷ್ಟಿ-ಯಲ್ಲಿ ಇವು ಅಯೋಗ್ಯ ಗುಣಗಳೆಂದೆ ಕಂಡುಬರಬಹುದಾಗಿತ್ತು. ಆದರೆ ಅಂದಿನ ಹಿಂದುಸ್ಥಾನದ ರಾಜಕಾರಣವು ಸರ್ವಸಾಮಾನ್ಯವಾಗಿದ್ದ ಅಧಿಕಾರಲೋಲುಪ ರಾಜಕಾರಣವಾಗಿರದೆ ಸ್ವಾತಂತ್ರ್ಯಸಂಗ್ರಾಮದ ರಾಜಕಾರಣವಾಗಿತ್ತು. ಅಂದು ಅಗತ್ಯವಾಗಿ ಬೇಕಾದದ್ದೆಂದರೆ ಘೋರ ಪರಿಸ್ಥಿತಿಗೆ ತಕ್ಕಂತೆ ಜನತೆಯನ್ನು ಜಾಗ್ರತ ಗೊಳಿಸುವ, ಆತ್ಮವಿಶ್ವಾಸದ ಸ್ಫೂರ್ತಿಯನ್ನು ಹುಟ್ಟಿಸುವ, ಜನರಿಗೆ ಒಂದು ನಿರ್ದಿಷ್ಟ, ನಿಃಸ್ವಾರ್ಥ ಸೇವಾಯೋಜನೆಯನ್ನು ಕೊಡುವ, ಮತ್ತು ಕುಂಟುತ್ತ ಹೊಸೆಯುತ್ತ ಸಾಗಿದ ಹೆಳವರಂತಿದ್ದ ಜನರನ್ನು ವೀರರನ್ನಾಗಿ ಮಾಡಬಲ್ಲ ಸಾಮರ್ಥ್ಯ. ಇದಕ್ಕೆ ಶ್ರೀ ಅರವಿಂದರು ಒಳ್ಳೆ ತಕ್ಕವರಾಗಿದ್ದರೆಂಬುದು ಮುಂದೆ ಕಂಡುಬರುವದು. ಹಿಂದುಸ್ಥಾನದ ರಾಜಕೀಯ ರಂಗದಲ್ಲಿ ಅವರು ಕೆಲವೆ ವರ್ಷ ರಭಸದಿಂದ ಸುತ್ತಾಡಿದರೂ ತನ್ನೆದುರಾಗಿ ನಿಂತುದನೆಲ್ಲ ಸವರುತ್ತ, ತೀಕ್ಷ್ಣವಾದ ಪರಿಣಾಮಕಾರಕವಾದ ಕಾರ್ಯಾಚರಣೆಗಾಗಿ ಹಾತೊರೆಯುತಿದ್ದ ತರುಣರ ತಂಡಕ್ಕೆ ಅವರು ಕಣ್ಮಣಿಯಾಗಿಬಿಟ್ಟರು.

## ೫ ಕಾರ್ಯದ ಕರೆ

ಇತ್ತ ಶ್ರೀ ಅರವಿಂದರು ವೀರೋಚಿತ ಕಾರ್ಯಾರಂಭದ ಸಲುವಾಗಿಯೂ ತಮ್ಮ ದೇಶದ ರಾಜಕೀಯ ಶಕ್ತಿಗಳ ರಭಸದ ಮುಂದಾಳ್ತನಕ್ಕಾಗಿಯೂ ಸಿದ್ಧತೆ ನಡಿಸುತಿರಲು, ಅತ್ತ ದೇಶವೂ ಮೂಕ ಮೂಢ ತಂದ್ರಾವಸ್ಥೆಯಿಂದ ಎಚ್ಚತ್ತು ಪ್ರಭಾವಶಾಲಿಯಾದ ಆಂದೋಲನಕ್ಕಾಗಿ ಮುಕ್ತಕಂಠದಿಂದ ಮುಚ್ಚುಮರೆಯಿಲ್ಲದೆ ತನ್ನ ಭಾವನೆಗಳನ್ನು ವ್ಯಕ್ತಗೊಳಿಸತೊಡಗಿತು. ಕಾಂಗ್ರೆಸ್ಸೇನೊ ತನ್ನ ಹಳೆಯ ಹಾದಿಯನ್ನೆ ತುಳಿಯುತಿತ್ತು; ಆದರೆ ಅದರ ಒಳಗೂ ಹೊರಗೂ ಹೊಸ ಸ್ವರ-ಗಳೆದ್ದು ಹಳೆಯ ಕಾಲ ಇನ್ನಿಲ್ಲವೆಂದು ಸ್ಥಿರಕಂಠದಿಂದ ಸಾರಿದವು. ತರುಣರಂತೂ

ಪರಚಕ್ರಾಧಿಪತ್ಯವನ್ನು ಕ್ಷಣಮಾತ್ರವೂ ತಾಳಲಾರದವರಾಗಿದ್ದರು. ಪಂಜಾಬದಲ್ಲಿ ಲಾಲಾ ಲಜಪತರಾಯರು, ಮಹಾರಾಷ್ಟ್ರದಲ್ಲಿ ಲೋಕಮಾನ್ಯ ಟಿಳಕರು, ಬಂಗಾಲ ದಲ್ಲಿ ಬಿಪಿನಚಂದ್ರ ಪಾಲರು ವೀರಕಾರ್ಯಾರಂಭಕ್ಕೆ ಕರೆಕೊಟ್ಟು ಮಾಡುತಿದ್ದ ಉಜ್ವಲ ಭಾಷಣಗಳನ್ನು ಜನತೆಯು ಒಳ್ಳೆ ಉತ್ಕಂಠತೆಯಿಂದ ಕೇಳುತಿತ್ತು. ಶ್ರೀ ಅರವಿಂದರು ಆಗಲೆ ಪಶ್ಚಿಮ ಭಾರತದ ಕ್ರಾಂತಿಕಾರಕರ-ಭಯಕಾರಕರಲ್ಲ-ತಂಡಗಳ ಜೊತೆಗೆ ಸಂಬಂಧವಿಟ್ಟುಕೊಂಡು ಬ್ರಿಟಿಶರ ಆಳಿಕೆಯನ್ನು ಮುಗಿಸಿ ಬಿಡಲು ಮತ್ತೆ ಪಣತೊಟ್ಟಿದ್ದರು; ಅವರ ತಮ್ಮ ಬಾರೀಂದ್ರಕುಮಾರರಂತೂ ಮೊದಲಿನಿಂದಲೂ ಈ ದಿಶೆಯಲ್ಲಿ ಹೆಚ್ಚಾಗಿ ಆಸಕ್ತಿ ವಹಿಸಿ ಕೆಲಸಮಾಡುತಿದ್ದರು. ಶ್ರೀ ಅರವಿಂದರು ತತ್ತ್ವತಃ ಹಿಂಸೆಗೆ ಪ್ರತಿಕೂಲರಾಗಿರಲಿಲ್ಲವೆಂಬುದು ಈಗ ಸರ್ವ-ಶ್ರುತವಿದೆ, ಅರ್ಥಾತ್ ದೇಶದ ದಾಸ್ಯವಿಮೋಚನೆಯಂಥ ಸತ್ಕಾರ್ಯಕ್ಕಾಗಿ ಮಾತ್ರ ಅದು ಉಪಯೋಗಿಸಲ್ಪಡಬೇಕೆಂದು ಅವರ ಅಭಿಪ್ರಾಯವಿತ್ತು. ಆದರೆ ಬಹಿರಂಗ ಆಂದೋಲನ, ಅಸಹಕಾರ, ಶಾಂತಿಮಯ ನಿರೋಧ ಇಲ್ಲವೆ ಸತ್ಯಾಗ್ರಹ ಇವೇ ಹಿಂದುಸ್ಥಾನಕ್ಕೆ ಎಂಥ ಪರಿಸ್ಥಿತಿಯಲ್ಲಿಯೂ ತಕ್ಕ ಮತ್ತು ಪರಿಣಾಮಕಾರಕ ಉಪಾಯಗಳೆಂದು ಸಂಪೂರ್ಣ ಪರಿಶೀಲನಾನಂತರ ಅವರಿಗೆ ಮನವರಿಕೆಯಾಯಿತು.

ವೃತ್ತಪತ್ರಿಕೆ-ಸಭಾರಂಗಗಳ ಮೂಲಕ ನಡೆದ ಆಂದೋಲನದ ಹೊರತು ಮತ್ತೇನೂ ಹೊರಗೆ ಪ್ರತ್ಯಕ್ಷವಾಗಿ ಕಾಣದಿದ್ದರೂ ಸಮಸ್ತ ಭಾರತ ಜನಾಂಗದ ಅಂತರಾತ್ಮವೇ ನಿಃಸಂದೇಹವಾಗಿ ತಳಮಳಗೊಂಡಿತ್ತು. ಕ್ರಾಂತಿಯ ತತ್ತ್ವದ ಬಗೆಗೆ ಹೇಳುವದಾದರೆ, ಸ್ವಾಭಾವಿಕವಾಗಿಯೆ ಅದು ಹೆಚ್ಚಿಗೆ ಪ್ರಗತಿ ಪಡೆಯಲಿಲ್ಲ; ಏಕೆಂದರೆ, ಅಥದಿಂದ ಇತಿಯ ವರೆಗೆ ಪೂರ್ವಸಿದ್ಧತೆಗಾಗಿ ಒಂದಿಲ್ಲೊಂದು ಬಗೆಯ ಮೋಸಗಾರಿಕೆಯನ್ನೆ ಅದು ಕೈಕೊಳ್ಳಬೇಕಾಗುತಿತ್ತು. ಅಲ್ಲಲ್ಲಿ ಕೆಲವು 'ಅನು ಶೀಲನ ಸಮಿತಿ'ಗಳೂ ಇಂತಹ ಇತರ ಬೇರೆ 'ಸಭೆ'ಗಳೂ ಶಾರೀರಿಕ ವ್ಯಾಯಾಮ ಮತ್ತು ಲಾಠಿ-ಕತ್ತಿಗಳನ್ನು ತಿರುಗಿಸುವ ಕಲೆ ಇವುಗಳಲ್ಲಿ ಪ್ರತ್ಯಕ್ಷ ಶಿಕ್ಷಣ ಕೊಡುವ ಕಾರ್ಯದಲ್ಲಿ ತೊಡಗಿದ್ದವು. ಇಂಥ ಚಟುವಟಿಕೆಗಳು ಸಮಸ್ತ ಭಾರತಕ್ಕೂ ಸಾಮಾನ್ಯವಾಗಿದ್ದವು. ತುಲನಾತ್ಮಕ ದೃಷ್ಟಿಯಿಂದ ನೋಡಿದರೆ, ಇನ್ನುಳಿದ ಪ್ರಾಂತಗಳಿಗಿಂತ ಬಂಗಾಲದಲ್ಲಿ ಖಂಡಿತವಾಗಿ ಹೆಚ್ಚು ಜಾಗ್ರತಿಯಾಗಿತ್ತು. ಸಖಾ-ರಾಮ ಗಣೇಶ ದೇವುಸಕರ ಎಂಬ ಓರ್ವ ಮರಾಠಿ ಸದ್‌ಗೃಹಸ್ಥರಿಂದ ಬಂಗಾಲಿಯಲ್ಲಿ ಬರೆಯಲ್ಪಟ್ಟ 'ಶಿವಾಜಿರ್ ಚರಿತ್ರ' ಮತ್ತು 'ದೇಶೇರ ಕಥಾ' ಎಂಬ ಎರಡು ಪುಸ್ತಕ ಗಳು ಬಂಗಾಲಿ ತರುಣರ ಹೃದಯಗಳನ್ನು ತುಂಬ ಅಲುಗಾಡಿಸಿಬಿಟ್ಟವು. ಸಂಪೂರ್ಣ ಸ್ವಾತಂತ್ರ್ಯ ಎಂಬ ಅರ್ಥದಲ್ಲಿ 'ಸ್ವರಾಜ್ಯ' ಎಂಬ ಪದವು ಮೊಟ್ಟಮೊದಲು ನಿಜ ವಾಗಿ ಇವರಿಂದಲೆ ಪ್ರಯೋಗಿಸಲ್ಪಟ್ಟಿತು; ಆ ಮೇಲೆ, ಅದು 'ಸಂಧ್ಯಾ' ಎಂಬ ಬಂಗಾಲಿ ಸಾಪ್ತಾಹಿಕದ ಸಂಪಾದಕರಾದ ಬ್ರಹ್ಮಬಾಂಧವ ಉಪಾಧ್ಯಾಯರೆಂಬವ

ರಿಂದ ಬಳಕೆಯಲ್ಲಿ ತರಲ್ಪಟ್ಟಿತು. ಅನಂತರ, ದಾದಾಭಾಯಿ ನವರೋಜಿಯವರು ೧೯೦೬ ರ ಪ್ರಸಿದ್ಧ ಕಾಂಗ್ರೆಸ್ ಗೊತ್ತುವಳಿಯಲ್ಲಿ ಆ ಪದವನ್ನು ಸ್ವರಾಜ್ಯ (Self Government) ಎಂಬ ಅರ್ಥದಲ್ಲಿ ಪ್ರಯೋಗಿಸಿದರು. 'ಬ್ರಿಟಿಶರ ಸಂಬಂಧವಿಲ್ಲದ ಸಂಪೂರ್ಣ ಸ್ವಾತಂತ್ರ್ಯ' ಎಂಬ ಅರ್ಥದಲ್ಲಿ ೧೯೨೯ ರಲ್ಲಿ ನೆರೆದ ಕಾಂಗ್ರೆಸ್ಸು ತನ್ನ ಗೊತ್ತುವಳಿಯಲ್ಲಿ ಅದನ್ನು ಪ್ರಯೋಗಿಸಬೇಕಾದರೆ ಇಪ್ಪತ್ತುಮೂರು ವರ್ಷಗಳು ಬೇಕಾದವು.

ಮಹಾ ಪುನರುಜ್ಜೀವನದ ಪ್ರಾಣವಾಯುವು ಒಮ್ಮೆ ಭಾರತೀಯರ ಮನವನ್ನು ಜಾಗ್ರತಗೊಳಿಸಿಬಿಟ್ಟದ್ದರಿಂದ, ಸ್ವಾತಂತ್ರ್ಯಪಿಪಾಸೆಯೆಂಬುದು ಒಮ್ಮೆ ತೀಕ್ಷ್ಣವಾಗಿ ಬಿಟ್ಟದ್ದರಿಂದ,— ಭಾರತದ ಸೀಮೆಯ ಹೊರಗೆ ಸಂಭವಿಸಿದ ಘಟನೆಗಳಿಂದಲೂ ಅದು ಸ್ಫೂರ್ತಿ-ಸಾಮರ್ಥ್ಯಗಳನ್ನು ಪಡೆದುಕೊಳ್ಳುವಂತಾಯ್ತು. ಇದಕ್ಕೆ ಒಂದು ಅತ್ಯಂತ ಅರ್ಥಗರ್ಭಿತ ಯುಕ್ತ ಉದಾಹರಣೆಯೆಂದರೆ ೧೯೦೪-೫ರಲ್ಲಿ ರಸಿಯನ್ನರ ವಿರುದ್ಧ ಜಪಾನಿಗಳು ದೊರಕಿಸಿದ ವಿಜಯ. ಪಾಶ್ಚಾತ್ಯರ ವಿಜ್ಞಾನ-ಪದ್ಧತಿಗಳತ್ತ ತೀರ ಇತ್ತೀಚೆಗೆ ಮನಸ್ಸು ಹಾಕಿದ ಒಂದು ಪೌರ್ವಾತ್ಯ ಜನಾಂಗವು, ರಸಿಯಾದಂಥ ವಿಸ್ತಾರದ ಪ್ರಬಲ ರಾಷ್ಟ್ರಕ್ಕೆ ಬಲವಾದ ಪೆಟ್ಟು ಕೊಟ್ಟಿತು. ಈ ಘಟನೆಯು ಭಾರತೀಯರ ಚಿತ್ತದಲ್ಲಿ ಕಂಪನವನ್ನುಂಟುಮಾಡಿ, ಪೌರ್ವಾತ್ಯ ಜನಾಂಗಗಳಲೆಲ್ಲ ಆವರಿಸಿದ್ದ ಅಲ್ಪಭಾವವನ್ನು ಚದುರಿಸಿಬಿಟ್ಟಿತು. ಧಾರ್ಮಿಕ ಉತ್ಸಾಹದಿಂದ ಉಪದಿಷ್ಟನಾದ ಮ್ಯಾಝಿನಿಯ ರಾಷ್ಟ್ರಧರ್ಮಭಾವನೆ, ಗ್ಯಾರಿಬಾಲ್ಡಿಯ ಉಜ್ವಲ ಶೌರ್ಯ, ಕೌಂಟ್ ಕಾಹೂರನ ಕುಶಲ ಮುತ್ಸದ್ದಿತನ, ವ್ಹಿಕ್ಟರ ಇಮ್ಯಾನ್ಯುಯೆಲ್ಲನ ಅನುಕರಣೀಯ ಸ್ವದೇಶಾಭಿಮಾನ ಇವೆಲ್ಲವೂ ಇಟಲಿಯ ಕಥೆಗೆ ಒಂದು ಬಗೆಯ ಮೋಹಕತೆಯನ್ನು ಒದಗಿಸಿದವು. ಇದಲ್ಲದೆ ಆಯರ್ಲಂಡದ ಸ್ವಾತಂತ್ರ್ಯ ಸಂಗ್ರಾಮವು ಆಗಿನ್ನೂ ಸಾಗಿತ್ತು. ಸ್ವಾರ್ಥತ್ಯಾಗಪೂರ್ವಕವಾಗಿ ಅನೇಕ ಕಷ್ಟನಷ್ಟಗಳನ್ನೂ ಅಡ್ಡಿ ಆತಂಕಗಳನ್ನೂ ಎದುರಿಸಿ ಸಾಗಿದ ಆಯರಿಶ್ ಯೋಧರ ಉದಾಹರಣೆಯು, ಇಂಗ್ಲಂಡದ ವಿರುದ್ಧ ಹೂಡಿದ ಅದೇ ಬಗೆಯ ಹೋರಾಟದಲ್ಲಿ, ನಮ್ಮ ದೇಶದ ತರುಣರನ್ನು ಹುರುಪುಗೊಳಿಸಲು ಬಹಳ ಅನುಕೂಲವಾಯಿತು.

ದೇಶದ ಸತ್ತ್ವಶೀಲ ಶಕ್ತಿಗಳೆಲ್ಲ ಅತೃಪ್ತಿಯಿಂದ ಕಾಯ್ದು ಕುದಿಯುತಿದ್ದವು; ಆದರೂ ಈ ಬಗೆಯ ಉದ್ರಿಕ್ತ ಭಾವನೆಗಳನ್ನು ವ್ಯಕ್ತಗೊಳಿಸಲು ಯಾವದೇ ಬಗೆಯ ವ್ಯವಸ್ಥಿತ ಸಾಧನಮಾರ್ಗವು ಏರ್ಪಟ್ಟಿರಲಿಲ್ಲ. ಈ ಕಾರ್ಯಕ್ಕೆ ಕೂಡಲೆ ಉತ್ತೇಜನೆ ಸಿಕ್ಕಿತು. ಅಧಿಕಾರಮದದಿಂದ ಕೊಬ್ಬಿದ ಲಾರ್ಡ ಕರ್ಝನ್ನನಿಂದ ೨೯-೯-೧೯೦೫ರಲ್ಲಾದ ವಂಗಭಂಗದ ನೆವದಿಂದ ಇದು ಒದಗಿ ಬಂದಿತು. ದೇಶದ ಎದುರಿಗೆ ಇದರ ಪ್ರಸ್ತಾವವು ಕೆಲ ದಿನಗಳಿಂದಲೂ ಇದ್ದೇ ಇತ್ತು; ಆದರೆ ಇದಕ್ಕೆ ಕೊನೆಯ ಮುದ್ರೆ ಬಿದ್ದಿತೆಂಬ

ಸಂಗತಿಯು ಗೊತ್ತಾಗುತ್ತಲೆ ದೇಶದಾದ್ಯಂತವೂ ಅವಿಚ್ಛಿನ್ನವಾಗಿ ಕೋಲಾಹಲವೆದ್ದಿತು. ಬಂಗಾಲವೇ ಈ ಆಘಾತಕ್ಕೆ ಪ್ರತ್ಯಕ್ಷವಾಗಿ ತುತ್ತಾಗಿದ್ದರಿಂದ ಅದು ಪ್ರಕ್ಷುಬ್ಧ ಆಂದೋಲನದ ಆಗರವಾಗಿ ಹೋಯಿತು. ಅಕ್ಟೋಬರ ತಿಂಗಳದ ೧೬ನೆಯ ದಿನಾಂಕವು ಬಂಗಾಲದಲ್ಲೆಲ್ಲ ಶೋಕಸೂಚಕ ದಿನವೆಂದು ಆಚರಿಸಲ್ಪಟ್ಟಿತು. ಅನೇಕರು ಉಪವಾಸ ಮಾಡಿದರು. ಲೆಕ್ಕವಿಲ್ಲದಷ್ಟು ಸಭೆಗಳು ಸೇರಿ ನಿಷೇಧಪರ ಗೊತ್ತುವಳಿಗಳನ್ನು ಸ್ವೀಕರಿಸಿದವು. ಅಲ್ಲದೆ ಇದಕ್ಕೂ ಹೆಚ್ಚಿನ ಮೂರ್ತಸ್ವರೂಪದ ಘಟನೆಗಳು ನಡೆದವು. ನಿಷೇಧದ ದ್ಯೋತಕವಾಗಿ ಸಾವಿರಾರು ವಿದ್ಯಾರ್ಥಿಗಳು ಶಾಲೆ-ಕಾಲೇಜುಗಳನ್ನು ಬಿಟ್ಟು ಹೊರಬಂದರು. ಸಭೆಗಳಲ್ಲಿ ಉಚ್ಚಸ್ವರದಲ್ಲಿ 'ಸ್ವದೇಶಿಯನ್ನೇ ಉಪಯೋಗಿಸುವಾ' ಎಂಬ ಪ್ರತಿಜ್ಞೆ ತೆಗೆದುಕೊಳ್ಳಲ್ಪಟ್ಟಿತು. ವಿದೇಶೀಯ ವಸ್ತ್ರಗಳನ್ನು ಪರ್ವತಪ್ರಾಯವಾಗಿ ರಾಶಿ ರಾಶಿಯಾಗಿ ಕೂಡಿಸಿ ಕೊಳ್ಳಿ ಕೊಟ್ಟು ಸುಟ್ಟು ಬೂದಿ ಮಾಡಲಾಯಿತು. ಬಾರಿಸಾಲದಲ್ಲಿ, ಅಶ್ವಿನೀಕುಮಾರ ದತ್ತ ಎಂಬವರ ನೇತೃತ್ವದಲ್ಲಿ ಸಾಗಿದ ನಿಷೇಧಪರ ಮೆರವಣಿಗೆಯನ್ನು ಲಾಠಿಯ ಹೊಡೆತಗಳಿಂದ ಚದುರಿಸಲಾಯಿತು. ಭಾರತದ ಸ್ವಾತಂತ್ರ್ಯಸಂಗ್ರಾಮದ ಇತಿಹಾಸದಲ್ಲಿ, ಸರಕಾರದ ಆಜ್ಞೆಯನ್ನು ತಿರಸ್ಕರಿಸಿ ಹೊರಟ ಹಾಗೂ ಬಲಾತ್ಕಾರದಿಂದ ಚದುರಿಸಲ್ಪಟ್ಟ ಮೊದಲ ಮೆರವಣಿಗೆಯು ಬಹುಶಃ ಇದೇ. ಆದರೆ ಜನತೆಯ ಚೈತನ್ಯವು ಮಾತ್ರ ಉಡುಗದೆ ಹೂಂಕಾರದಲ್ಲಿತ್ತು. ದಾಟಬಾರದ ಗೆರೆಯನ್ನು ದಾಟಿಯೇ ಬಿಟ್ಟಿದ್ದರಿಂದ ಇನ್ನು ಹಿಂದಿರುಗುವ ಯೋಚನೆಯೇ ಇರಲಿಲ್ಲ. ಈ ಮಹಾಪೂರದ ಉಬ್ಬರವೆದ್ದು ಸುತ್ತೂ ಹಬ್ಬಿ ಹಿಂದುಸ್ಥಾನದ ತುಂಬ ವ್ಯಾಪಿಸಿಕೊಂಡಿತು. ಜನತೆಯು ಸರಕಾರದ ಆಹ್ವಾನವನ್ನು ಸ್ವೀಕರಿಸಿತು; ಜನತೆ ತನ್ನನ್ನು ಲೆಕ್ಕಿಸುವದಿಲ್ಲವೆಂಬ ಸಂಗತಿಯು ಸರಕಾರಕ್ಕೂ ತಿಳಿದು ಹೋಯಿತು.

ಅಖಿಲ ಭಾರತೀಯ ದೃಷ್ಟಿಯಿಂದ ಸಂಘಟಿತ ಸಂಸ್ಥೆಯೆಂದರೆ ಆಗ ಕಾಂಗ್ರೆಸ್ಸೊಂದೇ ಸರಿ. ಅದೊಂದೇ ಆಗ ಅಖಂಡ ರಾಷ್ಟ್ರದ ದೃಷ್ಟಿಕೋನದಿಂದ ಮಾತನಾಡಲು ಸಮರ್ಥವಾಗಿತ್ತು. ಆದರೆ ಇನ್ನೂ ಆ ಸಂಸ್ಥೆಯಲ್ಲಿ ಮವಾಳರ ಪ್ರಸ್ಥವೇ ಹೆಚ್ಚಾಗಿತ್ತು. ಜಹಾಲರ ಸಾಮರ್ಥ್ಯವೂ ಹೆಚ್ಚುತ್ತ ಸಾಗಿತ್ತಾದ್ದರಿಂದ ೧೯೦೪ರಲ್ಲಿ ಮುಂಬಯಿಯಲ್ಲಿ ನೆರೆದ ಅಧಿವೇಶನದ ಕಾಲಕ್ಕೆ ಕಾಂಗ್ರೆಸ್ಸು ಇದನ್ನು ಒಪ್ಪಲೇಬೇಕಾಯಿತು. ಶ್ರೀ ಅರವಿಂದರು ಈ ಅಧಿವೇಶನಕ್ಕೆ ಹೋಗಿದ್ದರಾದರೂ ಚಳವಳವನ್ನೆಬ್ಬಿಸುವ ಆಸಕ್ತಿಯಿಂದ ಹೋಗಿರಲಿಲ್ಲ. ಕಾಶಿಯಲ್ಲಿ ೧೯೦೫ರಲ್ಲಿ ನೆರೆದ ಅಧಿವೇಶನದಲ್ಲಿ ಹಿರಿಯ ಮುತ್ಸದ್ದಿಗಳಿಗೆ ಉಗ್ರಮತವಾದಿಗಳಾದ ಆ ಜಹಾಲರ ವರ್ಗವು ಮತ್ತಷ್ಟು ಬಲಿತು ನಿಂತುದು ಕಂಡುಬಂದಿತು. ಹಿಂದುಸ್ಥಾನದ ರಾಜಕಾರಣದಲ್ಲಿ ಸೌಮ್ಯಮತವಾದಕ್ಕೆ ಬೇಗ ಅರದಾಳ ಬೀಳುವದೆಂಬುದೂ ಅವರಿಗೆ

ತಿಳಿದುಹೋಯಿತು. ವಂಗಭಂಗವು ಒಂದು ವಜ್ರಾಘಾತದಂತೆನಿಸಿ ಮವಾಳರ ರಕ್ತವು ಸಹ ಕಾಯ್ದಿತು. ಆದರೂ ಅವರು ತಮ್ಮ ಜೊತೆಗಾರರಾದ ಜಹಾಲರೊಡನೆ ಸಹ-ಕರಿಸಲು ಹಿಂದೆಗೆದರು. ಕಲಕತ್ತೆಯಲ್ಲಿ ೧೯೦೬ರಲ್ಲಿ ಇವೆರಡೂ ಪಕ್ಷಗಳ ನಡುವೆ ಉಂಟಾಗಲಿದ್ದ ಘರ್ಷಣವು ದಾದಾಭಾಯಿಯವರ ಚಾಣಾಕ್ಷತೆಯಿಂದಲೂ ಆದರಣೀಯ ವ್ಯಕ್ತಿತ್ವದಿಂದಲೂ ನಿಂತಿತು. ಅವರೇ ಅಧಿವೇಶನದ ಅಧ್ಯಕ್ಷರಿದ್ದ ಕಾರಣ, ಉಗ್ರವಾದಿಗಳಿಂದ ಮಂಡಿಸಲ್ಪಟ್ಟ ನಾಲ್ಕುಗೆಯ ಕಾರ್ಯಕ್ರಮವನ್ನು ಸ್ವೀಕರಿಸುವಂತೆ ಮವಾಳರ ಮನವನ್ನು ಒಲಿಸಿದರು. ಈ ಉಗ್ರವಾದಿಗಳಲ್ಲಿ ಲೋಕಮಾನ್ಯ ಟಿಳಕರೂ ಶ್ರೀ ಅರವಿಂದರೂ ಪ್ರಮುಖರಾಗಿದ್ದರು. ಈ ಕಾರ್ಯ-ಕ್ರಮವು ಕೂಡಲೆ 'ಚತುಃಸೂತ್ರಿ' ಎಂಬುದಾಗಿ ಖ್ಯಾತಿಪಡೆಯಿತು. ಸ್ವರಾಜ್ಯ, ರಾಷ್ಟ್ರೀಯ ಶಿಕ್ಷಣ ಪ್ರಸಾರ, ಸ್ವದೇಶಿಯ ಪ್ರಚಾರ, ವಿದೇಶೀಯ ವಸ್ತುಗಳ ಬಹಿಷ್ಕಾರ ಇವೇ ಆ ಕಾರ್ಯಕ್ರಮದ ಮುಖ್ಯ ಅಂಶಗಳಾಗಿದ್ದವು.

ಉಗ್ರವಾದಿಗಳ ಪರವಾಗಿ ಆ ಕಾರ್ಯಕ್ರಮವನ್ನು ಮುನ್ನಡೆಸುವ ವಿಷಯದಲ್ಲಿ ಶ್ರೀ ಅರವಿಂದರೇ ಪ್ರಮುಖವಾದ ಆದರೂ ಸದ್ದಿಲ್ಲದ ಪಾತ್ರವನ್ನು ವಹಿಸಿದ್ದರು; ಆದರೆ ಇದನ್ನೆಲ್ಲ ಗುಪ್ತವಾಗಿಯೆ ಸಾಗಿಸಿದ್ದರೆನ್ನಬಹುದು. ಲೋಕಮಾನ್ಯರು ಅವರೊಡನೆ ಸೇರನಾಗಿ ಸಹಕರಿಸುತಿದ್ದರಲ್ಲದೆ ಅವರೇ ಬಂಗಾಲದ ಭಾವೀ ನಾಯಕರೆಂದು ಎಣಿಸಿದ್ದರು. ಇಷ್ಟಾದರೂ ಶ್ರೀ ಅರವಿಂದರು ಕಾಂಗ್ರೆಸ್ಸಿನಲ್ಲಿ ಸಂಪೂರ್ಣವಾಗಿ ಧುಮುಕಿರಲಿಲ್ಲ; ಏಕೆಂದರೆ ಬಡೋದೆಯಲ್ಲಿಯ ಪ್ರಾಧ್ಯಾಪಕ ವೃತ್ತಿಯನ್ನು ಇನ್ನೂ ಅವರು ಸಾಗಿಸಿಕೊಂಡು ನಡೆದಿದ್ದರು. ಪ್ರಸಿದ್ಧಿ ಎನ್ನುತ್ತಲೆ ಹಿಂದೆಗೆವ ಸ್ವಭಾವ ಅವರದು. ಆದರೆ ಪರಿಸ್ಥಿತಿಯು ಅವರನ್ನು ಅಗ್ರಸ್ಥಾನದಲ್ಲಿ ಒಯ್ದು ಕುಳ್ಳಿರಿಸಿತು. ಬಹು ಬೇಗ ಅವರೇ ಎಚ್ಚತ್ತ ಬಂಗಾಲದ ಮತ್ತು ಸಂಗ್ರಾಮೋತ್ಸುಕ ಭಾರತದ ಏಕಮೇವ ನಾಯಕರಾದರು.

ಪ್ರತ್ಯಕ್ಷವಾಗಿ ರಾಜಕಾರಣದ ಕಾರ್ಯಜಾಲದಲ್ಲಿ ಶ್ರೀ ಅರವಿಂದರು ಸಿಕ್ಕಿಕೊಳ್ಳುವ ಈ ಸಂಧಿಕಾಲದಲ್ಲಿ ಅವರ ಮನಸ್ಸಿನ ಅಲೆತ-ಒಲೆತ ಯಾವ ಬಗೆಯಾಗಿತ್ತು ಎಂಬುದನ್ನು ತಿಳಿದುಕೊಳ್ಳುವದು ಉಪಯುಕ್ತವೆನಿಸಬಹುದು. ಅವರ ಮನಸ್ಸಿನಲ್ಲಿ ಪ್ರಬಲವಾದ ಇಬ್ಬಗೆಯ ಸೆಳೆತಗಳು ಇದ್ದವೆಂಬುದು ನಿಚ್ಚಳವಿದೆ; ಒಂದು ಆಧ್ಯಾತ್ಮಿಕ, ಇನ್ನೊಂದು ರಾಜಕೀಯ. ರಾಜಕೀಯ ಸೆಳೆತವು ಆಧ್ಯಾತ್ಮಿಕ ಸೆಳೆತಕ್ಕೆ ಅಧೀನವಾಗುತ್ತ ಅದರ ಮೂಲಾಧಾರದ ಮೇಲೆಯೆ ಅದರಿಂದಲೇ ತನ್ನ ಸ್ಫೂರ್ತಿ ಪಡೆಯುತಲಿತ್ತು. ನಮಗೆ ಗೊತ್ತಿದ್ದಂತೆ, ಮಾತೃ-ಭೂಮಿಯ ಮೇಲಿನ ಅವರ ಪ್ರೇಮವೂ ಅದನ್ನು ದಾಸ್ಯಶೃಂಖಲೆಯಿಂದ ಬಿಡುಗಡೆಗೊಳಿಸಬೇಕೆಂಬ ಅವರ ನಿರ್ಧಾರವೂ ಅವರು ಕಲಿಯಲಿಕ್ಕೆಂದು ಇಂಗ್ಲಂಡದಲ್ಲಿ-ದ್ದಾಗಿನಿಂದಲೆ ಬೆಳೆದುಬಂದವು. ಬಡೋದೆಯಲ್ಲಿದ್ದಾಗ ಅವರ ಈ ಸೆಳೆತವು

ಮತ್ತಷ್ಟು ಪ್ರಬಲವಾಯಿತು. ಅವರು 'ಪುನರಪಿ ರಾಷ್ಟ್ರೀಕರಣ' ಹೊಂದಿ, ಭಾರತೀಯ ಇತಿಹಾಸ-ಸಂಸ್ಕೃತಿಗಳ ವಿಷಯಕ್ಕೆ ಭದ್ರ ತಳಹದಿ ಹಾಕಿಕೊಂಡರು. ಅವರು ಮುಂಬಯಿ ಮತ್ತು ಕಲಕತ್ತಾ ಕಾಂಗ್ರೆಸುಗಳ ಕಾಲಕ್ಕೆ ಉಪಸ್ಥಿತರಿದ್ದುದು ಮತ್ತು ಲೋಕಮಾನ್ಯರ ಜೊತೆಗಿದ್ದ ಅವರ ನಿಕಟ ಸಂಬಂಧ ಇವುಗಳ ಮೇಲಿಂದ ಅವರು ಯಾವ ಬಗೆಯ ರಾಜಕೀಯ ಜೀವನದಲ್ಲಿ ಅಡಿಯಿಡತಕ್ಕವರೆಂಬುದು ವ್ಯಕ್ತವಾಗುವಂತಿತ್ತು. ಕ್ರಾಂತಿಕಾರಕರ ವಿಷಯಕ್ಕೆ ಅವರಿಗೆ ಸಹಾನುಭೂತಿಯಿತ್ತು; ಮತ್ತು ಪರಿಸ್ಥಿತಿಯು ಉತ್ತಮಗೊಂಡರೆ ಸರಿ, ಇಲ್ಲದಿದ್ದರೆ ಉತ್ಕಟ ಚೇತನೆಯುಳ್ಳ ಕೆಲವರು ಅತ್ತ ಹೊರಳುವರೆಂದೂ ಅದು ಯುಕ್ತವೆಂದೂ ಅವರಿಗೆ ಅನಿಸುತಿತ್ತು. ಅವರು ಸ್ವತಃ ಅನುಸರಿಸತಕ್ಕ ಮಾರ್ಗದ ಬಗ್ಗೆಯೆ ಹೇಳುವದಾದರೆ, ಕಲಕತ್ತಾ ಕಾಂಗ್ರೆಸಿನಲ್ಲಿ ಸ್ವೀಕೃತವಾದ 'ಚತುಃಸೂತ್ರಿ' ಕಾರ್ಯಕ್ರಮವನ್ನೆ ಅವರು ಒಡನೆಯೆ ಕೈಕೊಳ್ಳಲಿದ್ದರೆಂಬುದು ಸ್ಪಷ್ಟವಿದೆ.

ಒಟ್ಟಿನಲ್ಲಿ ಶ್ರೀ ಅರವಿಂದರ ದೇಶಭಕ್ತಿಯೂ ರಾಜಕಾರಣವೂ ಆಧ್ಯಾತ್ಮಿಕತೆಯಲ್ಲಿಯೆ ನೆಲೆಯೂರಿ ನಿಂತಿದ್ದವೆಂಬ ಸಂಗತಿಯನ್ನು ಲಕ್ಷ್ಯದಲ್ಲಿಡುವದು ಅವಶ್ಯ. ಆಧ್ಯಾತ್ಮಿಕ ಸಾಧನಕ್ಕೆ ಅವರು 'ತಮ್ಮ ಸ್ವಂತದ ಕಾರ್ಯ'ವೆಂದು ಕರೆಯುತಿದ್ದರು. ಪರಾತ್ಪರ ತತ್ತ್ವದ ಸಾಕ್ಷಾತ್ಕಾರಕ್ಕಾಗಿ ನಡೆದ ಈ ಅವರ ಸಾಧನದ ಅಂಗವಾಗಿಯೂ ಅಂಶವಾಗಿಯೂ ಆ ದೇಶಭಕ್ತಿ-ರಾಜಕಾರಣಗಳು ಇದ್ದಾಗ ಮಾತ್ರ ಅವರ ದೃಷ್ಟಿಯಲ್ಲಿ ಅವಕ್ಕೊಂದು ಬೆಲೆ; ಇಲ್ಲದಿದ್ದರೆ ಅವು ಅವರಿಗೆ ಅರ್ಥಹೀನವಾಗಿ ಗೋಚರಿಸುತಿದ್ದವು. ಆ ದೇಶಭಕ್ತಿಗಾಗಲಿ ರಾಜಕಾರಣಕ್ಕಾಗಲಿ ಸಂಬಂಧಪಟ್ಟ ಅವರ ವಾಕ್ಸರಣಿಯು ಸದಾ ಆಧ್ಯಾತ್ಮಿಕತೆಯಲ್ಲಿ ಅದ್ದಿ ತೆಗೆದಂತಹದು. ಅವರು ನಿಜವಾಗಿಯೂ ಓರ್ವ ಕವಿಯಂತೆ, ಪ್ರವಾದಿಯಂತೆ, ದ್ರಷ್ಟಾರನಂತೆ ಮಾತನಾಡುತಿದ್ದರು ಮತ್ತು ಬರೆಯುತಿದ್ದರು—ಸರ್ವಸಾಮಾನ್ಯ ರಾಜಕಾರಣಿಯಂತಲ್ಲ. ಅವರ ದೃಷ್ಟಿಯಲ್ಲಿ ಭಾರತದೇಶವೆಂದರೆ ದಿವ್ಯಮಾತೆ. ರಾಜಕೀಯ ಸ್ವಾತಂತ್ರ್ಯಕ್ಕಿಂತ ಭಾರತದ ಅಧ್ಯಾತ್ಮಪ್ರಸಾರವೇ ಹೆಚ್ಚಿನದೆಂದೂ ರಾಜಕೀಯ ಸ್ವಾತಂತ್ರ್ಯ ಬಂದೇ ಬರುವದೆಂದೂ ಅವರ ದೃಢವಿಶ್ವಾಸವಾಗಿತ್ತು. ಅವರ ರಾಜಕೀಯ ಜೀವನದುದ್ದಕ್ಕೂ ಅವರ ಆಧ್ಯಾತ್ಮಿಕ ಸಾಧನವು ಅತ್ಯಂತ ಉಗ್ರವಾಗಿಯೆ ಸಾಗಿತ್ತು. ಕಾರಾಗೃಹದಲ್ಲಿಯ ಕಷ್ಟದ ಏಕಾಂತದ ಸಂದರ್ಭಗಳನ್ನೆಲ್ಲ, ಅವರು ನಿಬಿಡವಾದ ಆತ್ಮಮಗ್ನತೆಗೆ ಸುಸಂಧಿಗಳನ್ನಾಗಿ ಮಾರ್ಪಡಿಸಿಕೊಂಡರು. ಅವರು ತಮ್ಮ ಸತಿ ಮೃಣಾಲಿನಿಯವರಿಗೆ ೧೯೦೫ರಲ್ಲಿ ಬರೆದ ಪತ್ರವು, ಈ ಸಮಯದಲ್ಲಿದ್ದ ಅವರ ಆಧ್ಯಾತ್ಮಿಕ ಪ್ರವೃತ್ತಿಗೆ ಸಾಕ್ಷಿಯಾಗಿದೆ. ಇದೇ ರೀತಿ, ಅವರ ಮುಂದಿನ ನಾಲ್ಕು ವರ್ಷ ಸಹ; ರಾಜಕೀಯ ಜೀವನಗಳ ಇತಿಹಾಸದಲ್ಲಿಯೇ ಅತ್ಯಂತ ಸಂಕ್ಷಿಪ್ತವಾದರೂ ಅತ್ಯಂತ ಉಜ್ವಲವೂ ಪರಿಣಾಮಕಾರಕವೂ ಆದ ಜೀವನ ಅವರದು.

ಹೊರಗಿನಿಂದ ನೋಡಿದಾಗಲೂ ಆ ಕಾಲವೆಂದರೆ ಅವರ ಜೀವನದಲ್ಲಿ ಕಾರ್ಯ ಬಾಹುಲ್ಯದ ಕಾಲ. ಅವರ ಜೀವನದ ಬೇರೆ ಕಾಲಾವಧಿಗಳೊಡನೆ ಹೋಲಿಸಿ ನೋಡಲು, ಆ ಕಾಲವು ಮಹತ್ವದ ಘಟನೆಗಳಿಂದಾಗಿ ಚಿರಸ್ಮರಣೀಯವೂ ಅಹುದು, ವರ್ಣರಂಜಿತವೂ ಅಹುದು.

ಪರಿಸ್ಥಿತಿಯು ಕ್ರಮೇಣ ತಾನಾಗಿ ಹೀಗೆ ರೂಪಗೊಳ್ಳುತ್ತಿರಲು ಶ್ರೀ ಅರವಿಂದರು ತಮ್ಮನ್ನು ಆಗ ಮುಸುಕಿದ ತೆಳುವಾದ ಮುಖವಾಡವನ್ನು ಹರಿದೊಗೆಯುತ್ತ ಅಂದಿನ ಪ್ರಕ್ಷುಬ್ಧ ರಾಜಕೀಯ ಜೀವನರಂಗದಲ್ಲಿ ಬಹಿರಂಗವಾಗಿಯೆ ಬಂದು ನಿಲ್ಲಬೇಕಾಯಿತು. ಬಂಗಾಲದ ಕಡೆಗೆ ಇದ್ದ ಅವರ ಆಕರ್ಷಣವು ೧೯೦೬ರ ಪ್ರಾರಂಭದ ಹೊತ್ತಿಗೆ ಮತ್ತಷ್ಟು ಸ್ಥಿರಪಟ್ಟಿತು. ಅವರಿಗಿಂತ ತೀಕ್ಷ್ಣವೃತ್ತಿಯ ಅವರ ತಮ್ಮ ಬಾರೀಂದ್ರರಿಂದ ಪ್ರಾರಂಭಿಸಲ್ಪಟ್ಟ, ಕ್ರಾಂತಿಕಾರಕ ಬಂಗಾಲದ ಮುಖಪತ್ರವಾದ 'ಯುಗಾಂತರ'ದಲ್ಲಿ ಅವರಾಗಲೆ ಲೇಖನಗಳನ್ನು ಬರೆಯತೊಡಗಿದ್ದರು. ಅವರ ಹೆಸರೇನೊ ಎಲ್ಲಿಯೂ ಕಂಡುಬರುತಿರಲಿಲ್ಲ ನಿಜ; ಆದರೆ 'ಯುಗಾಂತರ' ದಲ್ಲಿ ಬರೆಯುವವರು ಇವರೇ ಎಂಬುದು ಎಲ್ಲರಿಗೂ ಗೊತ್ತಾಗಿ ಹೋಗಿತ್ತು. ಆ ಪತ್ರಿಕೆಯು ನಾಲ್ಕೈದು ಜನ ಸಂಪಾದಕರನ್ನು ಸೆರೆಮನೆಗೆ ಕಳಿಸಿತು; ಹಾಗೂ ಅವರೆಲ್ಲರೂ ತಮ್ಮ ಸಂರಕ್ಷಣೆಗಾಗಿ ಪ್ರತಿವಾದ ಹೂಡಲು ನಿರಾಕರಿಸಿದರು. ಏಕೆಂದರೆ ಬ್ರಿಟಿಶ್ ನ್ಯಾಯಾಲಯವನ್ನು ನ್ಯಾಯಾಲಯವೆಂದು ಮನ್ನಿಸಲು ಅವರು ಸಹಸಾ ಸಿದ್ಧರಿರಲಿಲ್ಲ. ಈ ಬಗೆಯ ದಿಟ್ಟತನದ ನಿಲುವೆಯನ್ನು ತೊಟ್ಟು, ತತ್ಪರಿಣಾಮವಾಗಿ ಕಟುಫಲವನ್ನು ಭೋಗಿಸಬೇಕಾಗಿ ಬಂದ ಈ ಪ್ರಸಂಗವು ಹಿಂದುಸ್ಥಾನದಲ್ಲಿಯೆ ಮೊಟ್ಟಮೊದಲಿನದಾಗಿದೆ. ಈ ಕಾಲಕ್ಕೆ ಶ್ರೀ ಅರವಿಂದರು ಬಡೋದಾ ಕಾಲೇಜದಿಂದ ದೀರ್ಘ ವಿರಾಮವನ್ನು ದೊರಕಿಸಿಕೊಂಡು, ತಮ್ಮ ಮುಂದಾಳ್ತನದಲ್ಲಿ ಬಂಗಾಲದ ಉಗ್ರ ರಾಷ್ಟ್ರೀಯವಾದಿಗಳನ್ನೆಲ್ಲ ಒತ್ತಟ್ಟಿಗೆ ಸಂಘಟಿಸಿದರು. ಬಿಪಿನಚಂದ್ರ ಪಾಲರು ತಾವೇ ಪ್ರಾರಂಭಿಸಿದ ಆಂಗ್ಲ ಸಾಪ್ತಾಹಿಕವಾದ 'ಬಂದೇ ಮಾತರಂ' ಪತ್ರಿಕೆಯ ಹೊಣೆಯನ್ನು ಹೊರಲು ಶ್ರೀ ಅರವಿಂದರನ್ನು ಬಿನ್ನವಿಸಿಕೊಂಡರು. ಶ್ರೀ ಅರವಿಂದರು ಆ ಪತ್ರಿಕೆಯಲ್ಲಿ ಬರೆಯತೊಡಗಿದರು, ಆದರೆ ಮತ್ತೆ ತಮ್ಮ ನಾಮ-ಧಾಮ ನಿರ್ದೇಶ ಮಾಡದೆ. ಅದೇ ಕಾಲಕ್ಕೆ ಅವರು ಇನ್ನು ಬಹುಶಃ ಮರಳುವದಿಲ್ಲವೆಂದು ಗೊತ್ತಾಗಿ, ಬಡೋದೆಯ ಮಹಾರಾಜರು ಬಡೋದೆಯನ್ನೂ ಕಾಲೇಜನ್ನೂ ಬಿಡಬಾರದೆಂದು ಅವರಿಗೆ ವಿಜ್ಞಾಪಿಸಿಕೊಂಡರು. ಆದರೆ ಪ್ರಾರಬ್ಧವು ಬೇರೊಂದನ್ನೆ ಬಗೆದಿತ್ತು. ಕಟ್ಟಕಡೆಗೆ ಅವರು ಒಂದು ವರ್ಷದ ರಜೆಯನ್ನು ಪಡೆದುಕೊಂಡು ೧೯೦೬ರಲ್ಲಿ ಬಂಗಾಲದ ರಾಷ್ಟ್ರೀಯ ಮಹಾವಿದ್ಯಾಲಯದಲ್ಲಿ ಕೇವಲ ೧೫೦ ರೂ.ಗಳ ಸಣ್ಣ ಸಂಬಳದ ಮೇಲೆ ಇಂಗ್ಲಿಷ್ ಭಾಷೆಯ ಪ್ರಾಧ್ಯಾಪಕರೆಂದು ಕೆಲಸ ಕೈಕೊಂಡರು; ಅವರ ಈ ವೇತನವು ಬಡೋದೆಯಲ್ಲಿ

ಅವರಿಗೆ ದೊರಕುತಿದ್ದುದರ ಐದರಲ್ಲೊಂದು ಪಾಲು ಮಾತ್ರವಾಗಿತ್ತು! ಹೀಗೆ ಬಡೋದೆಯ ಅವರ ಕೊನೆಯ ಬೆಸುಗೆಯೂ ಕಡಿದುಹೋಗಿ, ಬಂಗಾಲದ ಮತ್ತು ಕಲಕತ್ತೆಯ ಜೊತೆಗೆ ಹೊಸ ಬೆಸುಗೆಯು ಬೆಳೆದು ಬಂದಿತು. ತದನಂತರ ನಾಲ್ಕು ವರ್ಷಗಳ ಕಾಲ, ಅವರ ಕಾರ್ಯಕಲಾಪಗಳು ರಾಜಕೀಯ ರಂಗದಲ್ಲಿಯೂ ಹಿಂದುಸ್ಥಾನವು ಹೂಡಿದ ಸ್ವಾತಂತ್ರ್ಯಸಂಗ್ರಾಮದಲ್ಲಿಯೂ ತೊಡಗಿಕೊಂಡಿದ್ದವು.

ಕಲಕತ್ತೆಯಲ್ಲಿ, ಉಗ್ರಮತವಾದಿಗಳನ್ನು ಒಂದುಗೂಡಿಸಿ ಸಂಘಟಿಸುವ ಮತ್ತು ಸೌಮ್ಯಮತವಾದಿಗಳ ವಿಚಾರಧಾರೆಯನ್ನು ಪ್ರತಿಭಟಿಸುವ ಮುಖ್ಯ ಭಾರವೆಲ್ಲ ಶ್ರೀ ಅರವಿಂದರ ಮೇಲೆಯೆ ಬಿದ್ದಿತು. ಉಗ್ರಮತವಾದಿಗಳ ಪಂಗಡಕ್ಕೆ ಸ್ವದೇಶಿಯ ಆಂದೋಲನವು ತುಂಬ ಉತ್ತೇಜನ ಕೊಟ್ಟಿತಲ್ಲದೆ, ಸರಕಾರದ ದಬ್ಬಾಳಿಕೆಯ ಘೋರಣವು ರಾಷ್ಟ್ರೀಯ ಭಾವನೆಯನ್ನು ಮತ್ತಷ್ಟು ಭದ್ರಪಡಿಸಿತು. ಬಹು ಬೇಗ, 'ಬಂದೇ ಮಾತರಂ' ಪತ್ರಿಕೆಯು ದೈನಿಕವಾಗಿ ಬಹು ಜನಪ್ರಿಯವಾಯ್ತು. ಅಖಿಲ ಭಾರತದಲ್ಲಿಯೆ ಅದಕ್ಕೊಂದು ಶ್ರೇಷ್ಠ ಸ್ಥಾನ ದೊರಕಿ ಅದರ ಸ್ಫೂರ್ತಿಯ ಸಂದೇಶವು ಪ್ರತಿಯೊಬ್ಬ ದೇಶಾಭಿಮಾನಿಯ ಮನೆಮನೆಗೂ ಮುಟ್ಟಿತು. ಆ ಪತ್ರಿಕೆಯ ಆರ್ಥಿಕ ಮತ್ತು ಸಂಪಾದಕೀಯ ಭಾರವೆಲ್ಲ ಬರಬರುತ್ತ ಸಂಪೂರ್ಣವಾಗಿ ಶ್ರೀ ಅರವಿಂದರ ತಲೆಯ ಮೇಲೆಯೆ ಬಂದು ಬಿದ್ದಿತು. ಸರಕಾರವು ಆಗಲೆ ಬೆದರಿತ್ತು; ಮತ್ತು ಕಾರ್ಯರಂಗದಿಂದ ಅವರನ್ನು ಬದಿಗೆ ಸರಿಸುವ ಸಂಧಿಯನ್ನೆ ಅದು ಹುಡುಕಲು ಪ್ರಾರಂಭಿಸಿತು. ರಾಜದ್ರೋಹದ ಆರೋಪಗಳನ್ನು ಸಿದ್ಧಗೊಳಿಸಲಾಯ್ತು; 'ಯುಗಾಂತರ'ದ ಕೆಲವು ಲೇಖನಗಳ ವಿರುದ್ಧ ಒಂದು, 'ಯುಗಾಂತರ'ದಿಂದ 'ಬಂದೇಮಾತರಂ' ಪತ್ರಿಕೆಗೆ ಎತ್ತಿಕೊಂಡ ಕೆಲವೊಂದು ಲೇಖನಗಳ ವಿರುದ್ಧ ಇನ್ನೊಂದು. ಆದರೆ ಇವೆರಡೂ ಪ್ರಯತ್ನಗಳಲ್ಲಿ ಸರಕಾರವು ಸಂಪೂರ್ಣವಾಗಿ ಸೋತಿತು. 'ಯುಗಾಂತರ' ದೊಳಗಿನ ಲೇಖನಗಳನ್ನು ತಾವು ಬರೆದವರೆಂದು ಸ್ವಾಮೀ ವಿವೇಕಾನಂದರ ಬಂಧು ಒಪ್ಪಿದ್ದರಿಂದ ಅವರಿಗೆ ಶಿಕ್ಷೆ ವಿಧಿಸಲಾಯ್ತು. ಇನ್ನು 'ಬಂದೇಮಾತರಂ' ಪತ್ರಿಕೆಯೊಳಗಿನ ಲೇಖನಗಳ ಬಗೆಗೆ ಹೇಳುವದಾದರೆ, ಶ್ರೀ ಅರವಿಂದರೇ ಅವನ್ನು ಬರೆದರೆಂಬುದಕ್ಕೆ ಸಾಕಷ್ಟು ಆಧಾರಗಳು ಸಿಗದೆ ಆ ಆರೋಪವೂ ಸಿದ್ಧವಾಗಲಿಲ್ಲ. ಆದರೂ ತಮ್ಮನ್ನು ಸೆರೆಹಿಡಿಯತಕ್ಕವರೆಂಬ ಸುದ್ದಿಯು ತಿಳಿಯುತ್ತಲೆ ಶ್ರೀ ಅರವಿಂದರು ತಾವೇ ಪೋಲೀಸಠಾಣೆಗೆ ಹೋಗಿ ಹಾಜರಾದರು; ಕೂಡಲೆ ಅವರನ್ನು ಜಾಮೀನಿನ ಮೇಲೆ ಬಿಡಲಾಯ್ತು. ಈ ಪ್ರಕರಣವು ಮುಂದುವರಿಯಿತು. ಚೀಫ್ ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟರಾದ ಮಿ. ಕಿಂಗ್ಸ್‌ಫೋರ್ಡರು ಅವರನ್ನು ನಿರಪರಾಧಿಯೆಂದು ಬಿಟ್ಟುಬಿಟ್ಟರಿಷ್ಟೇ ಅಲ್ಲ, 'ಬಂದೇ ಮಾತರಂ' ಪತ್ರಿಕೆಯ ಸರ್ವಸಾಮಾನ್ಯ ಧ್ವನಿಯು ರಾಜದ್ರೋಹದ್ದಲ್ಲವೆಂಬುದಾಗಿ ಸಾರಿದರು.

'ಬಂದೇ ಮಾತರಂ' ಪ್ರಕರಣದಿಂದ ಒಂದು ವಿಶೇಷ ಪ್ರಯೋಜನವಾಯ್ತು. ಬೆಳಗಾಗುವದರೊಳಗಾಗಿ ಆ ಪತ್ರಿಕೆಯನ್ನಷ್ಟೆ ಅಲ್ಲ ಆದರೆ ಅದರ ಪ್ರಮುಖ ಪ್ರೇರಕರೂ ಲೇಖಕರೂ ಆದ ಶ್ರೀ ಅರವಿಂದರನ್ನು ಒಮ್ಮೆಲೆ ಅತ್ಯಂತ ಸ್ಫುಟವಾಗಿ ಜನತೆಯ ಕಣ್ಣೆದುರು ನಿಲ್ಲಿಸಿತು. ಆ ಪತ್ರಿಕೆಯ ದಿನದಿನದ ವಾಕ್ಪ್ರವಾಹದ ಉಗಮದಲ್ಲಿದ್ದ ಪ್ರತಿಭಾಸಂಪನ್ನ ಲೇಖಕ ಮತ್ತು ಆತ್ಮಾರ್ಪಣ ಮಾಡಿದ ವ್ಯಕ್ತಿ ರಾಷ್ಟ್ರದ ಪುತ್ಥಳಿಯಾಯ್ತು. ಇಷ್ಟು ದಿನ ಮೋಡಗಳ ಮರೆಗೆ ಅಡಗಿದ ಪ್ರಭಾಪುಂಜನಾದ ಸೂರ್ಯನು ತೂರಿಬಂದು ದೃಗ್ಗೋಚರನಾದಂತೆ ಆಯ್ತು. ಆ ಮುಂದೆ ಶ್ರೀ ಅರವಿಂದರಿಗೆ ತೆರೆಯ ಮರೆಗಿದ್ದು ಸೂತ್ರಚಾಲನ ಮಾಡುವದು ಅಶಕ್ಯವಾಯ್ತು; ಸ್ವಭಾವತಃ ಅವರಿಗೆ ಸೇರಿಕೆಯಾಗದಿದ್ದರೂ ಮುಂದಿನ ಮೂರು ವರ್ಷ ಅವರು ತಮ್ಮ ಜೀವನವನ್ನು ಪ್ರಖ್ಯಾತಿಯ ಪ್ರಖರತೆಗೆ ಮೈಯೊಡ್ಡಿಯೆ ಸಾಗಿಸಬೇಕಾಯ್ತು. ಅವರೆ ಒಮ್ಮೆ ವ್ಯಕ್ತಪಡಿಸಿದಂತೆ, ಸತ್ಯದ ನಿಮಿತ್ತವಾಗಿ ಅದು ಅತ್ಯಗತ್ಯವೆನಿಸಲು ಅದನ್ನವರು ಸಮಾಧಾನದಿಂದ ಸಹಿಸಿದರು.

ರಾಜದ್ರೋಹದ ಆರೋಪದ ಮೇಲೆ ಶ್ರೀ ಅರವಿಂದರನ್ನು ಹೇಗಾದರೂ ಸೆರೆಹಿಡಿಯಬೇಕೆಂಬ ಹವಣಿಕೆಯಲ್ಲಿ ಸರಕಾರವು ನಿಃಸಂದೇಹವಾಗಿಯೂ ಪೂರ್ಣ ಪರಾಭವ ಹೊಂದಬೇಕಾಯ್ತು. ನಿಜ ಸಂಗತಿಯೆಂದರೆ, ಸಾಕ್ಷಿ-ಪುರಾವೆ-ಆಧಾರಗಳ ಮಾತಿರಲಿ, ಅವರು ಬರೆದುದೆಲ್ಲ ಅತಿ ಉಚ್ಚಮಟ್ಟದಲ್ಲಿರುತಿತ್ತಲ್ಲದೆ, ಅದರಲ್ಲಿ ದ್ವೇಷದ ಇಲ್ಲವೆ ಹಿಂಸಾಪ್ರಚೋದನೆಯ ಭಾವವು ಲವಲೇಶವೂ ಇರುತಿರಲಿಲ್ಲ. ಭಾರತಮಾತೆಯ ವಿಷಯಕ್ಕೆ ಪ್ರೇಮ ಮತ್ತು ಅವಳಿಗಾಗಿ ಸರ್ವಸ್ವವನ್ನೂ ತ್ಯಾಗ-ಮಾಡುವ ಆವಶ್ಯಕತೆ ಇವುಗಳ ಬಗ್ಗೆಯೆ ಅವರು ಮತ್ತೆ ಮತ್ತೆ ಒತ್ತಿ ಹೇಳುತಿದ್ದರು. ಅವರು ಧಾರ್ಮಿಕ ಮತ್ತು ತತ್ತ್ವೋಪದೇಶಪರ ಸಂಜ್ಞೆಗಳನ್ನೆ ಬಳಸಿ ಮಾತ-ನಾಡುತಿದ್ದರಲ್ಲದೆ, ಸರ್ವಸಾಮಾನ್ಯವಾದ ರಾಜಕೀಯ ಕಥೋಪಕಥನದ ವಾಕ್ಸ-ರಣಿಯು ಅವರದಿರಲಿಲ್ಲ. ಪರಕೀಯ ರಾಜ್ಯಭಾರವು ಎಷ್ಟೇ ಸುರಾಜ್ಯವಾಗಿದ್ದರೂ ಅದಕ್ಕಿಂತ ಸ್ವರಾಜ್ಯವೇ ಲೇಸೆಂದು ಅವರ ವಾದವಿತ್ತು. ಆದ್ದರಿಂದ, ಅವರು ಬರೆದುದನೆಲ್ಲ ಶಾಸನದ ಹಿಡಿತಕ್ಕೆ ಎಟಕಿಸುವದು ತುಂಬ ದುಃಸಾಧ್ಯವಾಗಿತ್ತು. ಒಮ್ಮೆಯಂತೂ 'ಸ್ಟೇಟ್ಸಮನ್' ಪತ್ರಿಕೆಯು ನಿರಾಶೆಗೊಂಡು, 'ಬಂದೇ ಮಾತರಂ' ಪತ್ರಿಕೆಯೊಳಗಿನ ಬರೆಹಗಳು ರಾಜದ್ರೋಹದಿಂದ ತುಂಬಿ ತುಳುಕುತಿ-ದ್ದರೂ ಶಾಸನದ ದವಡೆಗೆ ಸಿಲುಕುವುದಿಲ್ಲವೆಂಬುದಾಗಿ ಗೊಣಗಿಕೊಂಡಿತು. ಅದೇ ಪತ್ರಿಕೆಯು, ಆ ಬರೆಹಗಾರನ ಚಾಣಾಕ್ಷತೆಯನ್ನೂ ಇಂಗ್ಲಿಷ್ ಭಾಷೆಯನ್ನು ಬಳಸುವ ಬಗೆಗಿದ್ದ ಆತನ ಜಾಣ್ಮೆಯನ್ನೂ ಶ್ಲಾಘಿಸಿದ್ದುಂಟು. ತಮ್ಮ ಸಂಗಡಿಗರಿಗೆ ತಮ್ಮ ಅಂತರ್ಗತ ಭಾವಸರ್ವಸ್ವವನ್ನೆಲ್ಲ ಅರುಹುವದು ಶ್ರೀ ಅರವಿಂದರಿಗೆ ಸಾಧ್ಯವಾಗದಿದ್ದರೂ ಶ್ಯಾಮಸುಂದರ ಚಕ್ರವರ್ತಿಯೆಂಬವರು ಅವರ ಬರೆಹದ ಶೈಲಿಯನ್ನು

ಬೆರಳು ಕಚ್ಚುವಷ್ಟು ಚೆನ್ನಾಗಿ ಅಳವಡಿಸಿಕೊಂಡಿದ್ದರು. ಎಷ್ಟೋ ಸಲ, ಬರೆದವರು ಯಾರೆಂಬುದನ್ನು ವಿಂಗಡಿಸುವದೆ ಕಠಿಣವಾಗುತಿತ್ತು. ಅನುಕರಣವು ಅಷ್ಟೊಂದು ಪರಿಪೂರ್ಣವಾಗಿತ್ತು.

'ಬಂದೇ ಮಾತರಂ ಪ್ರಕರಣ'ವು ಶ್ರೀ ಅರವಿಂದರ ಹೊಣೆಗಾರಿಕೆಯನ್ನು ಖಂಡಿತವಾಗಿ ಅನೇಕ ವಿಧದಿಂದ ಹೆಚ್ಚಿಸಿತು. ಸರಕಾರದ ಸಂಶಯದ ಸೋಂಕು ತಾಕದಿರಲೆಂದು, ಅವರು ರಾಷ್ಟ್ರೀಯ ಮಹಾವಿದ್ಯಾಲಯದೊಳಗಿನ ತಮ್ಮ ಸ್ಥಳವನ್ನು ಬಿಡಬೇಕಾಗಿ ಬಂದಿತು. ರಾಷ್ಟ್ರೀಯ ಪಕ್ಷದ ಮುಂದಾಳ್ತನದ ಹೊಣೆಗಾರಿ-ಕೆಯು ಈಗ ಬಹಿರಂಗವಾಗಿಯೆ ಅವರ ಮೇಲೆ ಬಿದ್ದಿತು; ಹಾಗೂ, ಅದನ್ನು ಇನ್ನಷ್ಟು ಚೆನ್ನಾಗಿ ಸಂಘಟಿಸಲು ಅವರು ತಮ್ಮ ಸಮಯವನ್ನು ಮೀಸಲಿಡಬೇಕಾಗಿ ಬಂದಿತು. ಇಷ್ಟೆಲ್ಲ ಮಾಡಿದಾಗ ಮಾತ್ರ ಆ ಪಕ್ಷವು ಸುರತ ಕಾಂಗ್ರೆಸ್ಸಿನ ಕಾಲಕ್ಕೆ ನಿಶ್ಚಿತ ವಿಜಯವನ್ನು ಪಡೆಯಬಹುದಾದ ಸಂದರ್ಭ. ಇಷ್ಟೆಲ್ಲ ಮಾಡುವದೆ ಬಿಡುವದೆ ಎಂದು ಮೀನಮೇಷವೆನ್ನುತ್ತ ಕೂಡಲು ಅವಕಾಶವೆ ಇನ್ನಿರಲಿಲ್ಲ. ಸುಮಾರಾಗಿ ಇದೇ ಕಾಲಾವಧಿಯಲ್ಲಿ ಅಂದರೆ ಅಕ್ಟೋಬರ ೧೯೦೭ರಿಂದ ಡಿಸೆಂಬರ ಮಧ್ಯದ ವರೆಗೆ ಶ್ರೀ ಅರವಿಂದರು ಪ್ರಬಲ ಅನಾರೋಗ್ಯದಿಂದ ಬಹಳ ಬಳಲಿದರು; ಆಗ ಕೆಲ ಕಾಲ ದೇವಘರದಲ್ಲಿಯೂ ಇನ್ನು ಕೆಲ ಕಾಲ ಕಲಕತ್ತೆಯಲ್ಲಿ ಸರ್ಪಂಟಾ-ಯಿನ್ ಲೇನ್ ಎಂಬ ಓಣಿಯಲ್ಲಿದ್ದ ತಮ್ಮ ಮಾವನ ಮನೆಯಲ್ಲಿಯೂ ಇದ್ದರು. ಈ ಅನಾರೋಗ್ಯವು ಗಂಭೀರ ಸ್ವರೂಪದ್ದೆ ಎಂದು ತಿಳಿಯಲ್ಪಟ್ಟಿದೆ. ಆದರೆ ಅವರಿಗೆ ವಿಶ್ರಾಂತಿಯಾಗಲಿ ಅವಕಾಶವಾಗಲಿ ಎಳ್ಳಷ್ಟೂ ದೊರಕುತಿರಲಿಲ್ಲ. 'ಬಂದೇ ಮಾತರಂ' ಪತ್ರಿಕೆಯ ಸಂಪಾದಕತ್ವದ, ಸಂಚಾಲಕತ್ವದ ಭಾರವೂ ಅದಕ್ಕಾಗಿ ಹಣವನ್ನೊದಗಿಸುವ ಹೊಣೆಯೂ ಅವರ ಮೇಲೆಯೆ ಬಿದ್ದವು. ಜೊತೆ ಜೊತೆಗೆ ಸಾರ್ವಜನಿಕ ವ್ಯಾಖ್ಯಾನಗಳು, ಸಾರ್ವಜನಿಕ ಸಭೆಗಳಿಗೆ ಉಪಸ್ಥಿತರಿರುವದು, ರಾಷ್ಟ್ರೀಯ ವೃತ್ತಿಯವರಿಗೆ ಮಾರ್ಗದರ್ಶನ ಮಾಡುವದು ಇವೇ ಮೊದಲಾದವುಗಳ ಹೊಣೆಯೂ ಅವರದಾಗಿತ್ತು. ಇಂಥ ಸಂದರ್ಭದಲ್ಲಿಯೆ ಸತಿ ಮೃಣಾಲಿನಿಯವರಿಗೆ ಅವರು ಬರೆದ ಪತ್ರವು ಅವರ ಅಂತರಂಗದ ಇಂಗಿತವನ್ನು ಪ್ರಕಟಗೊಳಿಸುತಿದೆ. ತಮ್ಮ ಹೆಗಲಮೇಲೆಯೆ ಇಷ್ಟೊಂದು ಹೊರೆ ಹೇರಲು ಅದೇಕೊ ದೇವರಿಗೆ ಸಂಪ್ರೀತಿಯೆನಿಸಿದೆಯೆಂಬುದಾಗಿ ಸಲಿಗೆಯಿಂದ ದೂರಿ, ಇದಕಾಗಿ ಸತಿಯ ಶುಭಾ-ಕಾಂಕ್ಷೆಗಳನ್ನು ಕೋರಿದ್ದಾರೆ; ಆ ಶುಭಾಕಾಂಕ್ಷೆಗಳ ಬಲದಿಂದಲೆ ತಾವು ಬಿರುದು ಬಾವಲಿ ಹೊತ್ತ ವೀರ ಯೋಧನಂತೆ ಹೆಚ್ಚಿನ ಉತ್ಸಾಹದಿಂದಲೂ ಕೆಚ್ಚೆದೆಯ ಆತ್ಮ ವಿಶ್ವಾಸದಿಂದಲೂ ಮುನ್ನುಗ್ಗಬಹುದೆಂದು ಹಾರೈಸಿದ್ದಾರೆ. ತಮ್ಮ ಸಹಧರ್ಮಿಣಿಯಾಗಿಯೂ ತಮ್ಮ ಶಕ್ತಿಸ್ವರೂಪಳಾಗಿಯೂ ವರ್ತಿಸಬೇಕೆಂಬುದಾಗಿ ಸತಿಯನ್ನು ಎಚ್ಚರಿಸಿದ್ದಾರೆ.

೧೯೦೭ ರ ದ್ವಿತೀಯಾರ್ಧದಲ್ಲಿ ತಾತ್ಕಾಲಿಕವಾಗಿ ಅವರ ಮುಂದಿದ್ದ ಕಾರ್ಯವೆಂದರೆ, ಸುರತದಲ್ಲಿ ವಿಜಯ ಸಂಪಾದಿಸಲೋಸುಗ ಬಂಗಾಲದ ರಾಷ್ಟ್ರೀಯ ಪಕ್ಷವನ್ನು ಚೇತರಿಸುವದಾಗಿತ್ತು. ಮಿದ್ನಾಪುರದಲ್ಲಾದ ವಂಗೀಯ ಪ್ರಾಂತಿಕ ಪರಿಷತ್ತಿನಲ್ಲಿ ವಸ್ತುತಃ ಶ್ರೀ ಅರವಿಂದರ ಪಕ್ಷವೆ ತನ್ನ ಎಲ್ಲ ಗೊತ್ತುವಳಿಗಳು ಪ್ರಚಂಡ ಬಹುಮತದಿಂದ ಅಂಗೀಕೃತವಾಗುವಂತೆ ಮಾಡಿ ವಿಜಯ ಸಂಪಾದಿಸಿತು; ಇಷ್ಟರಲ್ಲಿ ಲೋಕಮಾನ್ಯ ಟಿಳಕರು ಅವರಿಗೆ ಪತ್ರ ಬರೆದು ಸುರತಕ್ಕೆ ಬಹು-ಸಂಖ್ಯಾಕ ಸದಸ್ಯರೊಡನೆ ಬರಬೇಕೆಂದು ತಿಳಿಸಿದರು. ಎರಡೂ ರಾಜಕೀಯ ಪಕ್ಷಗಳು, ತಮ್ಮ ತಮ್ಮ ಬಲಾಬಲಗಳನ್ನು ಅಲ್ಲಿ ಒರೆಗೆ ಹಚ್ಚಿ ನೋಡಲು ನಿರ್ಧರಿಸಿಕೊಂಡಂತಿತ್ತು. ಮವಾಳರ ಕಡೆಗೆ ಫಿರೋಜಶಹಾ ಮೇಥಾ, ಗೋಖಲೆ, ರಾಶ-ಬಿಹಾರಿ ಘೋಷ ಇವರೇ ಮೊದಲಾದ ಮಹಾಮಹಾ ಪ್ರಭೃತಿಗಳಿದ್ದರು. ಲೋಕ-ಮಾನ್ಯ ಟಿಳಕರು ಜಹಾಲಪಕ್ಷದ ನಾಯಕರಾಗಿದ್ದರು. ಉಗ್ರ ಆಂದೋಲನವೂ ಪ್ರವೃತ್ತಿಯೂ ಕಾಂಗ್ರೆಸ್ಸಿನ ಸನಿಹಕ್ಕೆ ಸಹ ಸುಳಿಯದಂತೆ ಮಾಡಲು ಮವಾಳರು ತುಂಬ ಪ್ರಯಾಸಪಡುತಿದ್ದರು. ಕಲಕತ್ತೆಯಲ್ಲಿ ಒತ್ತಡಕ್ಕೆ ಒಳಪಟ್ಟು ತೀಕ್ಷ್ಣ ಸ್ವರೂಪದ ಗೊತ್ತುವಳಿಗಳು ಸ್ವೀಕರಿಸಲ್ಪಟ್ಟಿದ್ದರೂ ಅವಾವನ್ನೂ ಕಾರ್ಯಗತ ಮಾಡುವ ವಿಚಾರವೆ ಇರಲಿಲ್ಲ. ಇತ್ತ ಜಹಾಲಪಕ್ಷದವರಿಗೆ, ಕಳೆದ ಇಪ್ಪತ್ತೈದು ವರ್ಷಗಳಿಂದಲೂ ದೇಶದ ಹೆಸರಿನಲ್ಲಿ ಮಾತನಾಡುತ್ತ ಬಂದಿದ್ದ ಏಕಮಾತ್ರ ಅಖಿಲ ರಾಷ್ಟ್ರೀಯ ಸಂಸ್ಥೆಯು ಇಂಥ ವಿಪನ್ನ ಸಂಧಿಕಾಲದಲ್ಲಿ—ಅದೂ ಆಂಗ್ಲ ಸಾಮ್ರಾ-ಜ್ಯದ ಆಡಳತೆಗಾರರು ಆಹ್ವಾನಿಸಿದಾಗ—ಕೈಹೊತ್ತುಕೊಂಡು ಸುಮ್ಮನೆ ಕೂಡುವದೆಂದರೆ ಶುದ್ಧ ಮೂಢತನವೆಂದೂ ನಿರರ್ಥಕವೆಂದೂ ಅನಿಸುತಿತ್ತು.

ಹೀಗೆ ಹೋರಾಟದ ರಂಗಸ್ಥಲವು ಏರ್ಪಟ್ಟಿತು; ಮತ್ತು ವಿರೋಧಿಪಕ್ಷದಲ್ಲಿದ್ದ ರಾಷ್ಟ್ರೀಯ ಮತವಾದಿಗಳು ದ್ವಂದ್ವಯುದ್ಧಕ್ಕೆ ಸಿದ್ಧರಾಗಿರಬೇಕಾಯ್ತು. ಸುರತ ಅಧಿವೇಶನದ ಅಧಿಕೃತ ಸಭೆಗಳು ನೆರೆಯುವ ಪೂರ್ವದಲ್ಲಿ ಈ ವಿರೋಧಿಪಕ್ಷದವರು ಶ್ರೀ ಅರವಿಂದರ ಅಧ್ಯಕ್ಷತೆಯಲ್ಲಿ ಸಭೆಗೂಡಿ ಅಧಿವೇಶನಾಧ್ಯಕ್ಷರ ಆಯ್ಕೆಯನ್ನು ಸಹ ಆಹ್ವಾನಿಸಬೇಕೆಂದೂ ಆ ಸ್ಥಳಕ್ಕೆ ಇನ್ನೊಂದು ಹೆಸರನ್ನು ಸೂಚಿಸುತ್ತ ತಮ್ಮ ಅಭಿಪ್ರಾಯಕ್ಕೇ ಅಂಟಿಕೊಳ್ಳಬೇಕೆಂದೂ ನಿರ್ಧರಿಸಿದರು. ಗಂಡಾಂತರದ ಸಂಧಿಕಾಲ ಬಂದೊದಗಿತು ; ಮವಾಳ ಪಕ್ಷದವರಿಂದ ಆಯ್ಕೆ ಹೊಂದಿದ ಹೆಸರಿನ ವಿರುದ್ಧವಾಗಿ ಲೋಕಮಾನ್ಯ ಟಿಳಕರು ಲಾಲಾ ಲಜಪತರಾಯರ ಹೆಸರನ್ನು ಸೂಚಿಸಿದರು. ಹೀಗೆ ಮತ್ತೊಂದು ಹೆಸರನ್ನು ಸೂಚಿಸಲು ಟಿಳಕರಿಗೆ ಹಕ್ಕಿಲ್ಲವೆಂದು ಸಾರಲಾಯ್ತು. ಟಿಳಕರು ನಿಶ್ಚಲರಾಗಿ ನಿಂತು ಸಭಾರಂಗದಿಂದ ಸರಿಯಲು ಒಪ್ಪದೆ ತಮ್ಮ ನಿಲುವೆಯನ್ನೂ ಹಕ್ಕನ್ನೂ ಸಾಧಿಸತೊಡಗಿದರು. ಮವಾಳರು ಟಿಳಕರನ್ನು ಸಭಾರಂಗದಿಂದ ಸರಿಸಿಬಿಡಬೇಕೆಂದು ಮಾಡಿದ ಒಂದು ಸೌಮ್ಯ ಪ್ರಯತ್ನದ ಫಲವಾಗಿ ಎಲ್ಲ ಕಡೆಗೆ

ಕೂಗಾಟವೆದ್ದಿತು. ಪಾದರಕ್ಷೆಗಳೂ ಖುರ್ಚಿಗಳೂ ತೂರಲ್ಪಟ್ಟು ಎಳೆದಾಟ-ಜಗ್ಗಾಟ ದಲ್ಲಿ ಗೊಂದಲದಲ್ಲಿಯೆ ಸಭೆಯು ಮುರಿದುಹೋಯಿತು. ಆ ಮೇಲೆ ಕೂಡಲೆ ರಾಷ್ಟ್ರೀಯ ಪಕ್ಷದವರು ನಿಷೇಧಪರ ಸಭೆ ಸೇರಿಸಿ ರಾಷ್ಟ್ರಕ್ಕೆ ಹೊಸ ಸಂದೇಶವನ್ನು ಮುಟ್ಟಿಸುವ ಪ್ರತಿಜ್ಞೆ ತೆಗೆದುಕೊಂಡರು. ಈ ಸಭೆಗೂ ಮತ್ತೆ ಶ್ರೀ ಅರವಿಂದರೇ ಅಧ್ಯಕ್ಷರಾಗಿದ್ದರು. ಅಲ್ಲಿ ಒಟ್ಟುಗೂಡಿದ ನವ ತರುಣರಿಗೆ ಅವರು ಕರೆಯಿತ್ತರು: ಮಾತೃಭೂಮಿಗಾಗಿ ತಮ್ಮ ಸರ್ವಸ್ವವನ್ನು ತ್ಯಾಗಮಾಡುವ ಹಾಗೂ ಸ್ವಾತಂತ್ರ್ಯ ಪ್ರಾಪ್ತಿಯಾದ ಹೊರತು ವಿಶ್ರಮಿಸುವದಿಲ್ಲವೆನ್ನುವ ಪ್ರತಿಜ್ಞೆಯನ್ನು ತೆಗೆದುಕೊಳ್ಳ ಬೇಕೆಂದು ಶ್ರೀ ಅರವಿಂದರು ಅವರೆಲ್ಲರನ್ನು ಕೇಳಿಕೊಂಡರು.

ಹೀಗೆ ಸುರತ ಕಾಂಗ್ರೆಸ್ಸು ಅವ್ಯವಸ್ಥೆಯಲ್ಲಿ ಒಡೆದುಹೋಯಿತೇನೊ ನಿಜ; ಆದರೆ ಈ ಘಟನೆಯು ಹೊಸ ಇತಿಹಾಸವನ್ನೇ ಉಂಟುಮಾಡಿತು. ಇದರ ಫಲ ವೇನಾಯಿತೆಂದರೆ, ಕಾಂಗ್ರೆಸ್ ಸಂಸ್ಥೆಯ ದೇಹವು ಮವಾಳರ ಬಳಿಗೆ ಉಳಿಯಿ ತಾದರೂ ಅದರ ಜೀವವು ಜಹಾಲರ ಬೆಂಬತ್ತಿ ಹೋಯ್ತು. ಆ ಮೇಲಿನ ಹತ್ತು ವರ್ಷ ಕಾಲ ಭಾರತೀಯ ರಾಷ್ಟ್ರೀಯತೆಯು ರಾಷ್ಟ್ರೀಯ ಸಭೆಯ ಹೊರಗೇ ಹೆಚ್ಚು ಪ್ರೋಷಣೆ ಹೊಂದಿತು. ೧೯೧೬ ರಲ್ಲಿ ಪುನಃ ಜಹಾಲರಿಗೆ ಕಾಂಗ್ರೆಸ್ಸಿನಲ್ಲಿ ಅನುವು ದೊರೆತಕೂಡಲೆ ಅವರು ಮವಾಳರನ್ನು ಸಂಪೂರ್ಣವಾಗಿ ಮೂಲೆಗೊತ್ತಿಬಿಟ್ಟರು. ಅಂದಿನಿಂದ ಮುಂದೆ ಮವಾಳರು ಕಾಂಗ್ರೆಸ್ಸಿನ ಹೊರಗೆ ಪ್ರಭಾವಹೀನರಾಗಿ ಒಂದು ಸಣ್ಣ ಗುಂಪಾಗಿ ಇರಬೇಕಾಯ್ತು. ರಾಷ್ಟ್ರದ ರಾಜಕಾರಣದಲ್ಲಿ ಅವರ ಪ್ರತಾಪವೆ ಉಡುಗಿಹೋಯ್ತು.

ಸ್ವಸಂತುಷ್ಟರಾಗಿ ಕುಳಿತ ಹಳೆಯ ರಾಜಕಾರಣಿಗಳಿಗೆ ಸುರತದ ಗೊಂದಲದಲ್ಲಿ ಬಲವಾದ ಪೆಟ್ಟುಬಿದ್ದಿತು; ಶ್ರೀ ಅರವಿಂದರಿಗೆ ಸಂಪೂರ್ಣ ಗೆಲವೆ ಸಿಕ್ಕುಹೋಯ್ತು. ಇದರಿಂದ ವೀರೋಚಿತ ಕಾರ್ಯಕ್ರಮಕ್ಕಾಗಿ ಆತುರರಾದ ಹೊಸ ಹುರುಪಿನ ಯುವಕರಿಗೆ ಮುಕ್ತಾವಕಾಶವು ದೊರಕಿತು. ಯಾವ ಭಾವನೆಗಾಗಿ ಶ್ರೀ ಅರವಿಂದ ರಿಗೂ ಅವರ ಮಿತ್ರರಿಗೂ ಕಾಂಗ್ರೆಸ್ ಅಧಿವೇಶನವನ್ನು ಮುರಿದು ಬಿಡುವದು ಸಹ ಅವಶ್ಯವೆಂದು ತೋರಿತ್ತೊ ಅಂಥ ಪ್ರಖರ ರಾಷ್ಟ್ರೀಯ ಭಾವನೆಯನ್ನು ಸರ್ವತ್ರ ಪ್ರಚಾರಗೊಳಿಸುವ ಹೊಸ ಹೊಣೆಯು ಕೂಡ ಅವರ ಮೇಲೆಯೆ ಬಿದ್ದಿತು. ಆದ್ದರಿಂದ ಅವರು ನೇರವಾಗಿ ಕಲಕತ್ತೆಗೆ ಮರಳದೆ, ಅನೇಕ ಪಟ್ಟಣಗಳಿಂದ ಬಂದ ಆಮಂತ್ರಣಗಳಿಗೆ ಒಪ್ಪಿ, ಬಡೋದೆಯಿಂದ ಪ್ರಚಾರಕಾರ್ಯವನ್ನು ಪ್ರಾರಂಭಿಸಿದರು. ಆ ಮೇಲೆ ಅವರು ಮುಂಬೈ, ಪುಣೆ, ನಾಸಿಕ ಮತ್ತು ಅಮರಾವತಿ ಪಟ್ಟಣಗಳಿಗೆ ಭೆಟ್ಟಿಯನ್ನಿತ್ತರು. ಈ ಎಲ್ಲ ಸ್ಥಳಗಳಲ್ಲಿಯೂ ಜನತೆಯು ಅವರನ್ನು ಅತ್ಯಂತ ಆದರದಿಂದ ಬರಮಾಡಿಕೊಂಡಿತು. ಹೋದಲ್ಲೆಲ್ಲ ತುಂಬ ಉದ್ದೀಪಕವಾದ ಸ್ಫೂರ್ತಿದಾಯಕವಾದ ಭಾಷಣಗಳನ್ನು ಮಾಡಿದರು.

ಈ ಬಗೆಯ ತೀಕ್ಷ್ಣ ರಾಜಕೀಯ ಕಾರ್ಯವ್ಯಾಪದ ಜೊತೆಜೊತೆಗೆ, ಗಭೀರ ಗುಪ್ತ ಪ್ರವಾಹದಂತೆ ಅವಿರತವಾಗಿ ಶ್ರೀ ಅರವಿಂದರಿಗೆ ಆಧ್ಯಾತ್ಮಿಕ ಅನುಭವಗಳು ಬರುತ್ತಲೆ ಇದ್ದವು. ಇವುಗಳ ಅರ್ಥವೂ ಸಾಂಕೇತಿಕತೆಯೂ ಬಹಳ ವೈಶಿಷ್ಟ್ಯಪೂರ್ಣವಾಗಿಯೆ ಇದ್ದವು. ಅವರು ಒಂದಾನೊಂದುಕಾಲಕ್ಕೆ ಬಡೋದೆಯಲ್ಲಿ ಪ್ರಾರಂಭಿಸಿದ ಯೋಗಸಾಧನೆಯು ಅಖಂಡವಾಗಿ ಸಾಗಿತ್ತಲ್ಲದೆ, ಬಾಹ್ಯ ಕಾರ್ಯವ್ಯಾಪವು ಎಷ್ಟೇ ಬಹಳವಾಗಿದ್ದರೂ ಪ್ರಗತಿಯು ಸಹ ಬಹು ದ್ರುತಗತಿಯಿಂದ ಸಾಗಿತ್ತು. ಅವರ ಸಾಧನವು ಈ ಮಟ್ಟಕ್ಕೆ ಬಂದಿರಲು, ಯೋಗರಹಸ್ಯವನ್ನು ಬಲ್ಲವರೊಬ್ಬರ ಸಲಹೆ ಅವಶ್ಯವೆಂದು ಅವರಿಗೆ ತೋರಿತು. ಆದ್ದರಿಂದ ಅವರು ಬಡೋದೆಯಲ್ಲಿ ಇದ್ದಾಗ ಶ್ರೀ ಲೇಲೆ ಎಂಬ ಯೋಗಿಗಳಿಗೆ ತೀವ್ರ ಬರಬೇಕೆಂದು ಬಿನ್ನವಿಸಿಕೊಳ್ಳಲಾಯ್ತು. ಬಾರೀಂದ್ರರ ತಂತಿಯ ಕರೆಗೆ ಅವರು ಓಗೊಟ್ಟು ಗ್ವಾಲ್ಹೇರದಿಂದ ಧಾವಿಸಿ ಬಂದರು. ೧೯೦೭ ರ ಡಿಸೆಂಬರ ಕೊನೆಯ ವಾರದಲ್ಲಿ ಶ್ರೀ ಅರವಿಂದರು ಅವರೊಡನೆ ದೀರ್ಘ ಆಪ್ತಾಲೋಚನೆ ನಡಿಸಿದರು. ಈ ಮಹತ್ವದ ಆಪ್ತಾಲೋಚನೆಯ ಕಾಲಕ್ಕೆಯೆ ಶ್ರೀ ಲೇಲೆಯವರಿಗೆ ಶ್ರೀ ಅರವಿಂದರ ಯೋಗಸಾಧನದ ದ್ರುತಪ್ರಗತಿಯ ಅಳತೆಯು ತಿಳಿದುಬಂದಿತು. ಅಂತೆಯೆ ಅವರು ಮನಸ್ಸನ್ನು ಸಂಪೂರ್ಣ ನಿರ್ವಿಷಯವನ್ನಾಗಿ ಮಾಡಲು ಹೆಚ್ಚು ಲಕ್ಷ್ಯಹಾಕಬೇಕೆಂದೂ ಅಂದರೆ ದೈವೀಶಕ್ತಿಯು ಆವಿರ್ಭವಿಸಿ ಅಧಿಷ್ಠಾನಗೊಳ್ಳಬಹುದೆಂದೂ ಶ್ರೀ ಅರವಿಂದರಿಗೆ ಸೂಚನೆ ಕೊಟ್ಟರು. ಈ ವಿಷಯದಲ್ಲಿ ಈ ಸಾಹಸಶೀಲ ಅನ್ವೇಷಕನು ವಿಜಯಿಯಾಗಿ, ಬರಬರುತ್ತ ಅಹಂಭಾವವನ್ನೂ ಅದರ ಬಹುಮುಖ ಬಂಧನಜಾಲಗಳನ್ನೂ ಕಡಿದೊಗೆದು ತನ್ನನ್ನು ಸಂಪೂರ್ಣವಾಗಿ ಆತ್ಮವಸ್ತುವಿನ ಹಸ್ತಗತಮಾಡಬಲ್ಲ ಸ್ಥಿತಿಯೊಂದನ್ನು ಮುಟ್ಟಿದನು. ಅಂದಿನಿಂದ ಅವರಿಗೆ ತಾವು ಈಶ್ವರನ ಕೈಯೊಳಗಿನ ಗೊಂಬೆಯುಷ್ಟೆ ಎಂದೂ ಬಹಳವಾದರೆ ತಾವೊಂದು ನಿಮಿತ್ತಮಾತ್ರವೆಂದೂ ಅನಿಸತೊಡಗಿತು. ಈ ಸಮಯಕ್ಕೆ ಅವರು ತಮ್ಮ ಪತ್ನಿಗೆ ಬರೆದ ಮೂರನೆಯ ಪತ್ರದಲ್ಲಿ ತಮ್ಮಮೇಲಿನ ತಮ್ಮ ಒಡೆತನ ಇನ್ನಿಲ್ಲವೆಂದೂ ಇನ್ನುಮುಂದೆ ಈಶ್ವರಸಂಕೇತದಂತೆ ತಮ್ಮ ಜೀವನವೂ ತಮ್ಮೆಲ್ಲ ಚಟುವಟಿಕೆಗಳೂ ಸಾಗತಕ್ಕವುಗಳೆಂದೂ ನಿರ್ದೇಶಿಸಲಾಗಿತ್ತು.

ಲೇಲೆಯವರು ಶ್ರೀ ಅರವಿಂದರ ಜೊತೆಗೆ ಮುಂಬಯಿಗೂ ಪುಣೆಗೂ ಹೋಗಿ ಮುಂದೆ ತಮ್ಮ ಸ್ಥಳಕ್ಕೆ ಮರಳಿದರು. ಈಗ ಶ್ರೀ ಅರವಿಂದರಲ್ಲಿ ಒಂದು ಬಗೆಯ ಸಮಚಿತ್ತತೆಯುಂಟಾಗಿ ತಮ್ಮಲ್ಲಿ ತಾವು ಶಾಂತವೃತ್ತಿಯನ್ನು ನೆಲೆಗೊಳಿಸಿಕೊಳ್ಳಲು ಅವರು ಸಮರ್ಥರಾದರು. ಆದರೆ ಅವರು ಹೊರಟು ನಿಂತ ಕಾರ್ಯ ಮತ್ತು ಸಂದೇಶದ ಬಿತ್ತರಣೆ ಇವುಗಳ ಗತಿಯೇನು? ಲೇಲೆಯವರು ಈ ಸಂದರ್ಭಕ್ಕೆ ಹೊಂದುಗೂಡುವಂತಹ ಒಂದು ಉಪಾಯ ಸೂಚಿಸಿ ಈ ಸಮಸ್ಯೆಯನ್ನು ಬಗೆಹರಿಸಿದರು. ಸಭಿಕರ ಎದುರಿಗೆ ನಿಲ್ಲುತ್ತಲೆ ಬುದ್ಧಿಪೂರ್ವಕ ವಿಚಾರಗಳನೆಲ್ಲ

ಅಡಗಿಸಿ, ಒಂದು ಕ್ಷಣ ಕಣ್ಣುಮುಚ್ಚಿ ಆ ಮೇಲೆ ಕೈಮುಗಿದು ನಿಂತುಕೊಂಡಿರಬೇಕೆಂದು ಹೇಳಿದರು. ಹೀಗೆ ಮಾಡಿದ್ದಾದರೆ, ಆವಶ್ಯಕ ವಾಕ್‌ಸ್ಫುರಣವು ನಿರಾಯಾಸವಾಗಿ ತಂತಾನೆ ಹೊರಹೊಮ್ಮುವದೆಂದು ಅವರು ಭರವಸೆ ಕೊಟ್ಟರು. ಈ ರೀತಿಯಾಗಿ ಮುಂಬಯಿಯಲ್ಲಿ ಘಟಿಸಿಯೂ ಘಟಿಸಿತು; ಇಲ್ಲಿ ಸಭಿಕರೆಲ್ಲ ಮಂತ್ರಮುಗ್ಧರಾಗಿ ಕುಳಿತುಬಿಟ್ಟಿದ್ದರು. ಇನ್ನುಳಿದ ಚಳವಳಗಾರ ಧುರೀಣರಂತೆ ಶ್ರೀ ಅರವಿಂದರೇನು ಭಾಷಣಪಟುಗಳಲ್ಲ. ಅವರು ಸರಳವಾದ ಇಂಗ್ಲಿಷಿನಲ್ಲಿ ಮೃದು ಸ್ವರದಲ್ಲಿ ಮಾತನಾಡಿದರು. ಶಬ್ದಗಳು ತಲೆಯಿಂದ ಬಾರದೆ ನೇರವಾಗಿ ಹೃದಯದಿಂದ ಬಂದಹಾಗೆ ತೋರುತಿತ್ತು. ಪರಿಣಾಮವಂತೂ ಪ್ರಚಂಡವಾಗಿತ್ತು. ಪ್ರತಿ ಶಬ್ದದಲ್ಲಿಯೂ ನಿಷ್ಠೆಯೆಂಬುದು ತುಂಬಿ ತುಳುಕುತಿತ್ತು; ಮತ್ತು ಎಲ್ಲಕ್ಕಿಂತ ಅವರ ಗಂಭೀರ ಭಾವಾವೇಗವು ಸಭಿಕರನ್ನು ಹೆಚ್ಚಾಗಿ ಮುಗ್ಧಗೊಳಿಸಿತು.

ತಮ್ಮ ಪ್ರವಾಸದುದ್ದಕ್ಕೂ ಅವರು ರಾಷ್ಟ್ರನಿಷ್ಠೆಯನ್ನೆ ಒತ್ತಿ ಒತ್ತಿ ಹೇಳಿದರು; ಅದೇ ಅವರಿಗೆ ಧರ್ಮಪ್ರಾಯವಾಗಿತ್ತು. 'ರಾಷ್ಟ್ರನಿಷ್ಠೆ ಪರಮೇಶ್ವರನಿಂದ ಬಂದ ಧರ್ಮ; ಅದನ್ನು ಹತ್ತಿಕ್ಕುವದು ಅಶಕ್ಯ, ಅದು ಅವಿನಾಶಿಯಾದದ್ದು' ಎಂಬುದೆ ಅವರ ಮಾತಿನ ಸಾರವಾಗಿತ್ತು. ಅವರು ಈಶ್ವರನಿಷ್ಠೆಯನ್ನೂ ಭಾರತದ ಮಹತ್ಕಾರ್ಯದಲ್ಲಿ ಶ್ರದ್ಧೆಯನ್ನೂ ಉಪದೇಶಿಸಿದರು. ಅವರು ಮುಂಬಯಿಯಲ್ಲಿ ಮಾತನಾಡುವಾಗ ರಾಷ್ಟ್ರೀಯತ್ವವೆಂದರೆ ಕೇವಲ ರಾಜಕೀಯ ಕಾರ್ಯಕ್ರಮವಷ್ಟೇ ಅಲ್ಲವೆಂಬುವನ್ನು ತಿಳಿಸಿ ಹೇಳಿದರು. ಮಾತೃಭೂಮಿಯ ಸೇವೆ, ದೇಶಮಾತೆಗಾಗಿ ಸರ್ವಸ್ವತ್ಯಾಗ, ಸ್ವಾವಲಂಬನ ಮತ್ತು ಸ್ವದೇಶಿ–ಇವುಗಳ ಜೊತೆಗೆ ಈಶನಿಷ್ಠ ಜನಗಳ ಹಾಗೂ ವೀರಾಧಿವೀರರ ಸನಾತನ ಸದ್ಗುಣಪರಂಪರೆ ಈ ಬಗೆಯ ವಿಚಾರ-ಪ್ರಣಾಲಿಯೆ ಅವರ ದೇಶಭಕ್ತಿಯ ಸ್ಫೂರ್ತಿಯುಕ್ತ ಗೀತೆಯ ಪಲ್ಲವಿಯಾಗಿತ್ತು. ಶಕ್ತಿಸಂಚಾಲಿತವಾದ ಬಲಭಾಂಡಾರದಿಂದ ಹೊರಹೊಮ್ಮಿ ಬರುವ ವಿದ್ಯುನ್ಮಾಲೆಯಂತೆ ಅವರಿಂದ ಈ ಮಾತುಗಳೆಲ್ಲ ಹೊರಟು ಸಭಿಕರನ್ನು ಪುಲಕಿತಗೊಳಿಸುತಿದ್ದವು. ಆಗಿನ ಅವರ ಆ ವಾಣಿ ನೆರೆದ ಸಭಿಕರನ್ನೆಲ್ಲ ಆತ್ಮಲೋಕದಲ್ಲಿ ತಾತ್ಕಾಲಿಕವಾಗಿಯಾದರೂ ತೇಲಿಸಿಕೊಂಡು ಹೋಗುತಿತ್ತಲ್ಲದೆ ಅವರೆಲ್ಲರ ಅಂತರಂಗದಲ್ಲಿ ಅವಿತಿದ್ದ ಯಾವುದೊ ಒಂದು ಗುಹ್ಯತತ್ತ್ವದ ಬಗೆಗೆ ಅವರನ್ನು ಎಚ್ಚರಿಸುತಿತ್ತು. ಇಂತು ಶ್ರೀ ಅರವಿಂದರು ಏಕಕಾಲಕ್ಕೆ, ಭಾರತದ ದ್ರಷ್ಟಾರರೂ ರಾಷ್ಟ್ರೀಯತ್ವದ ಪ್ರವಾದಿಗಳೂ ಶುದ್ಧ ಸ್ವದೇಶಭಕ್ತಿಯ ಉಪದೇಶಕರೂ ಕವಿಗಳೂ ಆಗಿದ್ದರಲ್ಲದೆ, ಅಶ್ಲೀಲವೂ ಅನಿಷ್ಟಕರವೂ ಆದುದೆಲ್ಲದರ ವಿರುದ್ಧವಾಗಿ ಬಂಡೆದ್ದು ಹೊರಟ ದಂಡ-ಯಾತ್ರೆಯ ದೀವಟಿಗೆಯ ಮುಂದಲದ ನಾಯಕರೂ ಆಗಿದ್ದರು.

ಈ ಬಗೆಯಾಗಿ ಶ್ರೀ ಅರವಿಂದರು ಈ ಮೊದಲೆ ಹೇಳಿದ ಮಹತ್ವದ ಪಟ್ಟಣಗಳಲ್ಲೆಲ್ಲ ಯಶಸ್ವಿಯಾಗಿ ಸುತ್ತಾಡಿ ಕಲಕತ್ತೆಗೆ ಮರಳಿ ಬಂದು ಮತ್ತೆ ಅವಿರತ

ಕಾರ್ಯಕಲಾಪಗಳ ಸುಳಿಯಲ್ಲಿ ಸಿಲುಕಿಕೊಂಡರು. ಈಗಂತೂ ಕೇವಲ ಬಂಗಾಲದ ತರುಣರಷ್ಟೆ ಅಲ್ಲ, ಆದರೆ ಸಮಗ್ರ ಭಾರತದೇಶವೆ ಸ್ಫೂರ್ತಿಗಾಗಿ ಅವರತ್ತ ನೋಡತೊಡಗಿತು. ಆದರ್ಶವಾದದ, ಅಧ್ಯಾತ್ಮವಾದದ ಸಂಪರ್ಕವಿದ್ದ ಪ್ರತಿಯೊಂದು ವ್ಯಕ್ತಿಯೂ ಅವರ ಸಂದೇಶವನ್ನು ಆದರಪೂರ್ವಕವಾಗಿ ಒಡನೆಯೆ ಗ್ರಹಿಸಿಕೊಂಡಿತು. ಹೀಗೆ ಇತ್ತ ಸುರತದ ವಿನಾಶಕಾರಕ ಘಟನೆಯ ನಂತರ ಸಂಗ್ರಾಮೋತ್ಸುಕ ನವ ರಾಷ್ಟ್ರೀಯ ವೃತ್ತಿಯು ಪ್ರಸಾರಗೊಳ್ಳುತಿರಲು, ಅತ್ತ ಸಾಮ್ರಾಜ್ಯ ಸರಕಾರವು ಈ ದೃಶ್ಯವನ್ನು ಬೇರೆ ಬಗೆಯಾಗಿಯೆ ನೋಡತೊಡಗಿತು. ಕಾಂಗ್ರೆಸ್ಸಿನಲ್ಲಿ ಉಂಟಾದ ಈ ಒಡಕು ಒಂದು ಸುಸಂಧಿಯೆಂದೂ ಇದೇ ಸಮಯ ಸಾಧಿಸಿ ಭಾರತದ ರಾಜಕೀಯ ಕ್ಷೇತ್ರದಲ್ಲಿದ್ದ ಆಂದೋಲನಪ್ರಿಯ ಜನಗಳನೆಲ್ಲ ಬಗ್ಗುಬಡೆಯಬೇಕೆಂದೂ ನಿರ್ಧರಿಸಿ ಸರ್ಕಾರವು ಆ ದಿಸೆಯಲ್ಲಿ ಎತ್ತುಗಡೆ ಮಾಡತೊಡಗಿತು.

ರಾಷ್ಟ್ರೀಯತ್ವದ ಈ ಪರಿಪಂಥದ ಪ್ರಸಾರವನ್ನು ಸಾಗಿಸುತ್ತ ಸ್ವಾತಂತ್ರ್ಯ ಸಂಗ್ರಾಮಕ್ಕಾಗಿ ಕೂಲಂಕಷ ಕಾರ್ಯಯೋಜನೆಯೊಂದನ್ನು ಕುರಿತು ಶ್ರೀ ಅರವಿಂದರು ಆಲೋಚಿಸುತಿರುವಾಗ, ಅವರ ಕಲ್ಪನೆಗಳು ಮತ್ತಷ್ಟು ಪುಷ್ಟಿಗೊಂಡವು. ಅಂದಿನ ಶ್ರೀ ಅರವಿಂದರ ವಿಚಾರಪ್ರಣಾಲಿಯನ್ನು ಮುಂದೆ ೧೯೨೦ರಲ್ಲಿ ಮಹಾತ್ಮಾ ಗಾಂಧಿಯವರು ದೇಶದ ಎದುರಿಗೆ ಮಂಡಿಸಿದ ಅಹಿಂಸಾಮಯ ಅಸಹಕಾರದ ವಿವರವಾದ ತಂತ್ರದ ಜೊತೆಗೆ ಹೋಲಿಸಿ ನೋಡಿದಾಗ ಅವರಿಬ್ಬರಲ್ಲಿಯೂ ಎಷ್ಟೊಂದು ವಿಚಾರಸಾಮ್ಯವುಂಟೆಂಬುದು ಕಂಡು ಬಂದು ಬಹಳ ಆಶ್ಚರ್ಯವೆನಿಸುವದು. ಅವರವರ ನಿಲುವು ಮತ್ತು ಕಾರ್ಯಪದ್ಧತಿ ಮಾತ್ರ ತುಸು ಬೇರೆ ಬಗೆಯವು. ಶ್ರೀ ಅರವಿಂದರು ಗಾಂಧೀವಾದದ ಅರ್ಥದಲ್ಲಿ ಶಾಂತತಾಪ್ರಿಯರಲ್ಲವೆಂಬುದನ್ನು ಈ ಮೊದಲೆ ಹೇಳಲಾಗಿದೆ. ಆದರೆ, ಹಿಂದುಸ್ಥಾನದ ಸ್ಥೂಲ ಸ್ಥಿತಿ, ಗತಿಯನ್ನು ಅವಲೋಕಿಸಿ ಜನತೆಯ ಹೃದ್ಗತವನ್ನು ಅವರೂ ಲೋಕಮಾನ್ಯರೂ ತಿಳಿದುಕೊಂಡ ಮೂಲಕ ಅವರಿಬ್ಬರೂ ೧೯೨೦ರಲ್ಲಿ ಗಾಂಧೀಜಿ ಬಂದ ನಿರ್ಧಾರಕ್ಕೆಯೆ ಬಂದಿದ್ದರು. ಕೆಲವು ತಲೆತಿರುಕರು ರಕ್ತಮಯ ಕ್ರಾಂತಿಗಾಗಿ ಎತ್ತುಗಡೆ ಮಾಡುತಿದ್ದರೆಂಬ ಸಂಗತಿಯು ಲೋಕಮಾನ್ಯರಿಗೂ ಶ್ರೀ ಅರವಿಂದರಿಗೂ ಕೂಡಿಯೆ ಗೊತ್ತಿತ್ತು. ಸರಕಾರದ ಕ್ರೂರ ದಬ್ಬಾಳಿಕೆಗೆ ಇದೇ ಕ್ರಮಪ್ರಾಪ್ತ ಪ್ರತಿಕ್ರಿಯೆಯೆಂದು ಇವರಿಬ್ಬರಿಗೂ ಅನಿಸುತಿತ್ತು. ಅದರಂತೆಯೆ, ರಾಷ್ಟ್ರೀಯ ಪುನರ್ನಿರ್ಮಾಣಕ್ಕೆ ಕ್ರಾಂತಿಕಾರಕರ ಈ ದಾರಿ ತಕ್ಕ ದಾರಿಯಲ್ಲವೆಂಬುದೂ ಇವರಿಗೆ ತಿಳಿದಿತ್ತು. ಉದ್ವಿಗ್ನ ಚಟುವಟಿಕೆಗಳಲ್ಲಿ ಮಗ್ನರಾದ ಉತ್ಕಟವೃತ್ತಿಯ ತರುಣರ ಬಗೆಗೆ ಇವರಿಗೆ ಸಹಾನುಭೂತಿ ಇತ್ತೇನೊ ನಿಜ; ಆದರೆ ಅಂಥವರ ಗುಪ್ತ ಕಾರಸ್ಥಾನಗಳಲ್ಲಾಗಲಿ ಅವರ ಚಟುವಟಿಕೆಗಳ ಯೋಜನೆಗಳಲ್ಲಾಗಲಿ ಇವರು ವ್ಯಕ್ತಿಶಃ ಯಾವ ಸಂಬಂಧವನ್ನೂ ಇಟ್ಟುಕೊಂಡಿರಲಿಲ್ಲ. ಈ ಸಂಗತಿಯನ್ನು ಸ್ಪಷ್ಟವಾಗಿ ಉಲ್ಲೇಖಿಸುವದು ಅಗತ್ಯ

ವಿದೆ; ಏಕೆಂದರೆ, ಸರಕಾರವನ್ನು ಉರುಳಿಸಬೇಕೆನ್ನುವ ಭಯಕಾರಕ ಗುಪ್ತ ಕಾರಸ್ಥಾನಿಗಳೆಂಬ ಆರೋಪ ಹೊರಿಸಿ, ಒಂದಿಲ್ಲೊಂದು ಸಮಯ ಸಾಧಿಸಿ ಇವರೆಲ್ಲ ರನ್ನು ಹೇಗಾದರೂ ಹಿಡಿಯಲು ಸರಕಾರವು ಹೊಂಚುಹಾಕಿತ್ತು.

ಸರಕಾರವು ದಬ್ಬಾಳಿಕೆಯ ಧೋರಣವನ್ನೆ ಅನುಸರಿಸಲು ನಿರ್ಧರಿಸಿತ್ತೆಂಬ ಸಂಗತಿಯನ್ನು ಈ ಮೊದಲು ಹೇಳಲಾಗಿದೆ. ಅದು ಎಷ್ಟು ಉಗ್ರವಾಗಿತ್ತೆಂಬುದರ ಕಲ್ಪನೆ ಬರಲು, ಕರ್ಝನ್ನನ ನಂತರ ಬಂದ ಮಿಂಟೋ ಎಂಬವನು ಸಹ ಕ್ರೂರವಾದ ದಬ್ಬಾಳಿಕೆ ಸಾಗಿಸಿದಾಗ ಅಂದಿನ ಸ್ಟೇಟ್ ಸೆಕ್ರೆಟರಿಗಳಾಗಿದ್ದ ಮೋರ್ಲೆ ಎಂಬವರು ಅವನನ್ನು ಕುರಿತು ತೆಗೆದ ಉದ್ಗಾರವನ್ನು ಲಾಲಿಸಬೇಕು. ಅದು ಈ ಬಗೆಯಾಗಿದೆ: 'ರಾಜದ್ರೋಹ ಮೊದಲಾದ್ದಕ್ಕೆ ವಿಧಿಸಲಾಗುತಿದ್ದ ಭಯಾನಕ ಶಿಕ್ಷೆಗಳನ್ನು ನಾನು ಹತಬುದ್ಧನಾಗಿ ಅತ್ಯಂತ ಕಾತರಭಾವದಿಂದ ನಿರೀಕ್ಷಿಸುತಲಿದ್ದೇನೆ. ಇದನ್ನು ನಾನು ನಿಮ್ಮೆದುರು ಒಪ್ಪಲೇಬೇಕು. ನಾವು ವ್ಯವಸ್ಥೆಯನ್ನು ಕಾಯ್ದುಕೊಳ್ಳಲೇಬೇಕು ನಿಜ; ಆದರೆ ಕ್ರೌರ್ಯದ ಅತಿರೇಕವು ವ್ಯವಸ್ಥೆಯ ಉಪಾಯವಲ್ಲ; ತದ್ವಿರುದ್ಧ ವಾಗಿ ಅದು ಬಾಂಬಿಗೆ ದಾರಿಯಾಗಿದೆ.' ಇದೇ ಅಭಿಪ್ರಾಯವನ್ನು ಟಿಳಕರಿಂದ ನಡೆಸಲ್ಪಟ್ಟ 'ಕೇಸರಿ' ಎಂಬ ಮರಾಠಿ ವಾರಪತ್ರಿಕೆಯು 'ಬಾಂಬಚಾ ರಹಸ್ಯ' ಎಂಬ ಲೇಖದಲ್ಲಿ ವ್ಯಕ್ತಪಡಿಸಿತು; ಆಗ ಟಿಳಕರ ಮೇಲೆ ಖಟ್ಲೆ ನಡೆದು ಅವರನ್ನು ಆರು ವರ್ಷ ಸೆರೆಮನೆಗೆ ಅಟ್ಟಲಾಯ್ತು! ಮಿರ್ಝಾಪುರದಲ್ಲಿ ಖುದಿರಾಮನು ಬಾಂಬ ಒಗೆದ ನಂತರ ಈ ಘಟನೆಯು ನಡೆದದ್ದು. ಟಿಳಕರನ್ನು ಕಾರ್ಯರಂಗದಿಂದ ಬದಿಗೆ ಸರಿಸಲು ಸರಕಾರವು ನಿರ್ಧರಿಸಿ ಉಗ್ರ ದಬ್ಬಾಳಿಕೆಯನ್ನು ಕೈಕೊಂಡ ಮೂಲಕ ರಾಜದ್ರೋಹವು ಕೆಲಕಾಲವಾದರೂ ಒಂದಿಷ್ಟು ಕೈಯುಳವಿಗೆ ಬಂತು.

ಇಂಥ ದಬ್ಬಾಳಿಕೆಯ ಧೋರಣವನ್ನೆ ಹಿಂದುಸ್ಥಾನದಲ್ಲೆಲ್ಲ ಸರಕಾರವು ಕೈಕೊಂಡಿತ್ತು. ಈ ಬಿರುಗಾಳಿಗೆ ಬಂಗಾಲವೆ ಹೆಚ್ಚು ಮೈಯೊಡ್ಡಬೇಕಾಯಿತು; ಏಕೆಂದರೆ ಈ ಪ್ರಾಂತದ ವಿಭಜನೆಯೆ ದೇಶವನ್ನೆಲ್ಲ ಉಲ್ಬಣಕ್ಕೆ ಗುರಿ ಮಾಡಿತ್ತು. ಕೇವಲ ಚಳವಳಿಗಾರರಷ್ಟೇ ಅಲ್ಲ;—ಪತ್ರಿಕಾ ಸಂಪಾದಕರು, ಸಾರ್ವಜನಿಕ ಕಾರ್ಯ ಕರ್ತರು, ವಿದ್ಯಾರ್ಥಿಗಳು ಇವರೇ ಮೊದಲಾದವರು ದಬ್ಬಾಳಿಕೆಗೆ ಗುರಿಯಾದರು; ಎಲ್ಲ ಮುಖ್ಯ ಮುಖ್ಯ ಪಟ್ಟಣಗಳಲ್ಲಿಯೂ ಜನತೆಯು ಹೌಹಾರಿ ಹೆದರಿಕೆಯನ್ನು ಹತ್ತಿಟ್ಟುಕೊಳ್ಳತೊಡಗಿತು. ಯಾವಾಗ ಏನೊ ಎಂಬ ಒಂದು ಬಗೆಯ ಅನಿಶ್ಚಿತ ಭೀಕರತೆಯ ವಾತಾವರಣವು ಎಲ್ಲ ಕಡೆಗೂ ಹಬ್ಬಿತ್ತು. ಬಂಗಾಲದ ಪ್ರಖ್ಯಾತ ಪತ್ರಿಕಾವ್ಯವಸಾಯಿಯಾದ ಶ್ರೀ ಬ್ರಹ್ಮಬಾಂಧವ ಉಪಾಧ್ಯಾಯರ ವಿರುದ್ಧ ಕ್ರಮ ಕೈಕೊಳ್ಳಲಾಯಿತು. ವಿಚಾರಣೆ ನಡೆವ ಮೊದಲೆ ಅವರು ಕಲಕತ್ತೆಯ ಒಂದು ಆಸ್ಪತ್ರೆಯಲ್ಲಿ ನಿಧನಹೊಂದಿದರು. 'ವಂದೇಮಾತರಂ' ಎಂದು ಅಂದುದಕ್ಕೊ ಇನ್ನಾವುದೊ ಒಂದು ಕ್ಷುಲ್ಲಕ ತಾಂತ್ರಿಕ ಅಪರಾಧದ ಸಲುವಾಗಿಯೊ ಮುರ್ಝುಘರ

ಪುರದ ಒಬ್ಬ ಚಿಕ್ಕ ಬಾಲಕನಿಗೆ ಕೋರ್ಟಿನ ಸಮ್ಮುಖದಲ್ಲಿಯೆ ಬೆತ್ತದಿಂದ ಬಡಿಯುವ 'ಫಟಕಿ' ಶಿಕ್ಷೆಯನ್ನು ವಿಧಿಸಲಾಯ್ತು. ಈ ಎರಡು ಘಟನೆಗಳಿಂದ ಬಿಸಿ ನೆತ್ತರದ ತರುಣರ ಮನಸ್ಸಿಗೆ ಬರೆ ಕೊಟ್ಟಂತಾಗಿ, ಮುಝಫರಪುರದ ಜಿಲ್ಲಾ ನ್ಯಾಯಾಧೀಶನಾದ ಮಿ. ಕಿಂಗ್ಸ್‌ಫೋರ್ಡ ಎಂಬವನನ್ನು ಮುಗಿಸಿಬಿಡಬೇಕೆಂದು ಕೆಲವರು ನಿರ್ಧರಿಸಿದರು.

ಕೇವಲ ಇಬ್ಬರೇ ಹುಡುಗರು ೧೯೦೮ರ ಎಪ್ರಿಲ ೮ಕ್ಕೆ ಮಿ. ಕಿಂಗ್ಸ್‌ಫೋರ್ಡನ ಬಂಡಿಯೆಂದು ಬಗೆದು ಬಾಂಬು ಎಸೆದರು. ಬಂಗಾಲದ ದಾರಿ ತಪ್ಪಿದ ಇಬ್ಬರು ತರುಣರಿಂದ ತಪ್ಪುತಪ್ಪಾಗಿ ಎಸೆಯಲ್ಪಟ್ಟ ಬಾಂಬು ಅದು. ಆದರೆ ಗುರಿಯಾದ ವರು ಮಾತ್ರ ರಾಜಕಾರಣದ ಯಾವ ಸಂಪರ್ಕವೂ ಇರದ ಸಂಪೂರ್ಣ ನಿರಪರಾಧಿ ಗಳಾದ ಮಿ. ಪ್ರಿಂಗಲ್ ಕೆನ್ನೆಡಿ ಮತ್ತು ಅವರ ಹೆಂಡತಿ. 'ಬಂದೇ ಮಾತರಂ' ಪತ್ರಿಕೆಯಲ್ಲಿ ಶ್ಯಾಮಸುಂದರ ಚಕ್ರವರ್ತಿಯವರು ಒಂದು ಸಂಪಾದಕೀಯವನ್ನು ಬರೆದು ಈ ಕೃತಿಯನ್ನು ನಿಷೇಧಿಸಿದರು; ಈ ಬಗೆಯ ಹೀನ ಕೃತಿಯನ್ನು ಭಾರತದ ಪರಂಪರೆಯಾಗಲಿ ಸಂಸ್ಕೃತಿಯಾಗಲಿ ಸರ್ವಥಾ ಒಪ್ಪದೆಂದೂ ಇದು ಪಾಶ್ಚಾತ್ಯ ಅರಾಜಕತ್ವದ ನಿಕೃಷ್ಟ ಅನುಕರಣವೆಂದೂ ಇದನ್ನು ಸ್ಪಷ್ಟವಾಗಿ ಖಂಡಿಸಿದರು. ಬಂಗಾಲವೂ ಭಾರತವೂ ಎತ್ತಿ ಹಿಡಿದ ನಿಜವಾದ ಉದಾತ್ತ ರಾಷ್ಟ್ರೀಯತ್ವಕ್ಕೆ ಇದು ತೀರ ವಿಸಂಗತವೆಂದೂ ಅವರು ಹೇಳಿದರು. ಆದರೆ ಸರಕಾರವು ವಿಪರೀತವಾಗಿಯೆ ಗ್ರಹಿಸಿತು; ನಿಷ್ಕರುಣ ದಬ್ಬಾಳಿಕೆಗೆ ಮುಕ್ತಾವಕಾಶ ಕೊಡಲು ಇದೊಂದು ಸುಸಂಧಿ ಯೆಂದೆ ತಿಳಿದು, ರಾಜಕೀಯ ರಂಗದಿಂದ ಪ್ರತಿಯೊಬ್ಬ ಗಣ್ಯ ವ್ಯಕ್ತಿಯನ್ನೂ ಸರಿಸಿಬಿಡಲು ಉದ್ಯುಕ್ತವಾಯ್ತು.

ಮುಝಫರಪುರದ ಅತ್ಯಾಚಾರವೆ ಭಾರತದ ಸ್ವಾತಂತ್ರ್ಯಸಂಗ್ರಾಮದ ಇತಿ ಹಾಸದಲ್ಲಿ ಆ ಬಗೆಯ ಘಟನೆಗಳಲ್ಲಿ ಮೊದಲನೆಯದಾಗಿದೆ. ಅದರ ಬೆಂಬಲಕ್ಕಿದ್ದಿರ ಬಹುದಾದ ಒಂದು ಸಣ್ಣ ಗುಂಪನ್ನು ಬಿಟ್ಟರೆ ಹೊರಗಿನವರಾರೂ ಆ ಕೃತಿಯನ್ನು ಮೆಚ್ಚಲಿಲ್ಲ, ಸ್ವಾಗತಿಸಲಿಲ್ಲ. ಸ್ವಾಭಾವಿಕವಾಗಿ ಬೇರೆಬೇರೆ ಕಡೆಗೆ ಬೇರೆಬೇರೆ ಬಗೆಯ ಪ್ರತಿಕ್ರಿಯೆಗಳಾದವು. ಯುರೋಪಿಯನ್ನರ ಗುಂಪೂ ಆಂಗ್ಲೋ ಇಂಡಿಯನ್ ಪತ್ರಿಕೆಗಳೂ ಭಯವಿಹ್ವಲವಾಗಿ ಕಠೋರ ದಬ್ಬಾಳಿಕೆಯನ್ನೆ ಸಮರ್ಥಿಸಿದವು. ಹಿಂದುಸ್ಥಾನದ ಬಿಸಿ ನೆತ್ತರದ ತರುಣ ಪೀಳಿಗೆಯು ಆ ಕೃತಿಯ ಒಳಿತು ಕೇಡುಗ- ಳನ್ನು ಗಣನೆಗೆ ತಾರದೆ ಅದೊಂದು ಧೀರ ಸಾಹಸದ ಕೃತ್ಯವೆಂದು ಬಗೆದು ಅದರಿಂದ ಸ್ಫುರಣಗೊಂಡಿತು. ಮವಾಳವೃತ್ತಿಯವರಂತೂ ಅದನ್ನು ಆಮೂಲಾಗ್ರವಾಗಿ ಅಸಂದಿಗ್ಧ ಶಬ್ದಗಳಲ್ಲಿ ಖಂಡಿಸಿದರು. ರಾಷ್ಟ್ರೀಯ ವೃತ್ತಿಯವರೂ ಬಹಿರಂಗವಾಗಿ ಅದನ್ನು ಅಲ್ಲಗಳೆದರೇನೊ ನಿಜ; ಆದರೆ ಅದರ ಉದ್ದೇಶದ ಬಗೆಗಾಗಲಿ ಅದ- ಕ್ಕಾಗಿ ಮಾಡಬೇಕಾಗಿ ಬಂದ ಸ್ವಾರ್ಥತ್ಯಾಗದ ಬಗೆಗಾಗಲಿ ಅವರಿಗೆ ಎಳ್ಳಷ್ಟೂ

ಸಂಶಯವಿರಲಿಲ್ಲ. ಇದೆಲ್ಲ ದಿನಕ್ಕೊಂದು ರೀತಿ ಬೆಳೆಯುತ್ತ ಸಾಗಿದ ನಾಡಿನ ನಿರಾಶೆಯ ದ್ಯೋತಕವೆಂದೂ ಸರಕಾರವು ಇದರಿಂದಾಗಿ ಮುಂಜಾಗ್ರತೆ ವಹಿಸಬೇಕೆಂದೂ ಇದನ್ನು ಆಹ್ವಾನವೆಂದು ತಿಳಿಯದೆ ಸರಕಾರದ ದಬ್ಬಾಳಿಕೆಯ ಧೋರಣವು ನಾಡನ್ನು ಎತ್ತ ಒಯ್ಯುತಿದೆಯೆಂಬುದರ ಸಂಕೇತವೆಂಬುದಾಗಿ ತಿಳಿಯಬೇಕೆಂದೂ ಅವರು ಎತ್ತಿ ತೋರಿಸಿದರು.

ಪೋಲೀಸರು ಶೋಧನೆಯಲ್ಲಿ ತೊಡಗಿ ಮಾಣಿಕತಲಾ ಎಂಬ ಸ್ಥಳದಲ್ಲಿರುವ ಚಿಕ್ಕದೊಂದು ಬಾಂಬ ಕಾರಖಾನೆಯನ್ನು ಹುಡುಕಿ ತೆಗೆದರು. ಈ ಎಲ್ಲ ಸಂಚಿನ ಹಿಂದಿದ್ದ ಹಂಚಿಕೆಯ ತಲೆಯು ಶ್ರೀ ಅರವಿಂದರ ಚಿಕ್ಕ ತಮ್ಮ ಬಾರೀಂದ್ರಕುಮಾರ-ರದೇ ಎಂದು ಅವರನ್ನೂ ಇನ್ನು ಕೆಲವರನ್ನೂ ಕೂಡಲೆ ಕೈದು ಮಾಡಿದರು. ಶ್ರೀ ಅರವಿಂದರನ್ನು ಸಹ ಸಂಶಯದಿಂದ ಒಡನೆಯೆ ೧೯೦೮ ರ ಮೇ ೫ ನೆಯ ದಿನಾಂಕದಲ್ಲಿ ನಸುಕಿನ ೫ ಗಂಟೆಗೆ ಅವರಿನ್ನೂ ಹಾಸಿಗೆಯಲ್ಲಿದ್ದಾಗಲೆ ಹಿಡಿದು ಹಗ್ಗ ಕಟ್ಟಿ ಅವರನ್ನು ಎಳೆದೊಯ್ದರು! ಶ್ರೀ ಅರವಿಂದರೆ ಸ್ವತಃ ಬಂಗಾಲಿಯಲ್ಲಿ 'ಕಾರಾಕಾಹಿನಿ' ಎಂಬ ಪುಸ್ತಕ ಬರೆದಿದ್ದು, ಅದರಲ್ಲಿ ಪೋಸಗಾರಿಕೆಯಿಂದಲೂ ನಿರ್ದಯತೆಯಿಂದಲೂ ಸರಕಾರದವರು ತಮ್ಮನ್ನು ಹೇಗೆ ಕೈದುಮಾಡಿದರೆಂಬುದನ್ನೂ ದಾರಿಗೆಟ್ಟ ಅಂದಗೇಡಿತನದಿಂದ ಶೋಧನೆಯು ಹೇಗೆ ನಡೆಯಿತೆಂಬುದನ್ನೂ ವರ್ಣಿಸಿದ್ದಾರೆ. ಪೋಲೀಸರಿಗೆ ಆ ಶೋಧನೆಯಲ್ಲಿ ಏನೂ ಸಿಕ್ಕಲಿಲ್ಲ. ಆಗ ಶ್ರೀ ಅರವಿಂದರು ತಮ್ಮ ಹೆಂಡತಿ ಮೃಣಾಲಿನೀದೇವಿ ಮತ್ತು ತಂಗಿ ಸರೋಜಿನಿ ಇವರ ಜೊತೆಗೆ ಇರುತಿದ್ದರು. ಹೀಗೆ ಇಬ್ಬರು ಘೋಷ ಬಂಧುಗಳಲ್ಲದೆ ಮತ್ತೆ ೩೪ ಬೇರೆ ಜನರು ಈ ಪ್ರಕರಣದಲ್ಲಿ ಸಿಕ್ಕಿಕೊಂಡಿದ್ದರು. ಆ ಮೇಲೆ ಮುಂದಿನ ಒಂದು ವರ್ಷದುದ್ದಕ್ಕೂ ದೀರ್ಘ ವಿಚಾರಣೆಯು ನಡೆಯಿತು.

ಶ್ರೀ ಅರವಿಂದರನ್ನು ಕೈದುಮಾಡಿದ ಘಟನೆಯು ಪ್ರತ್ಯಕ್ಷವಾಗಿ ಬಾಂಬು ಒಗೆದವದ್ದರಕಿಂತ ಹೆಚ್ಚು ಕ್ಷೋಭೆಯನ್ನುಂಟುಮಾಡಿತು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಅದರಿಂದ ಸಾರ್ವತ್ರಿಕ ಪ್ರಕೋಪವೆ ಉಂಟಾಯಿತು. ಹಗ್ಗ ಕಟ್ಟಿ ಅವರನ್ನು ಕಾರಾಗೃಹಕ್ಕೆ ಒಯ್ದದ್ದಕ್ಕಾಗಿಯಂತೂ ಎಲ್ಲೆಲ್ಲಿಯೂ ತಿರಸ್ಕಾರಭಾವವು ತಲೆದೋರಿತು. ಮಾಣಿಕತಲಾ ಬಾಂಬ ಪ್ರಕರಣ ಅಥವಾ ಅಲಿಪುರ ಪ್ರಕರಣವೆಂದು ಹೆಸರಾದ ಈ ಪ್ರಕರಣದ ವಿಚಾರಣೆಯನ್ನು ಕಾರಾಗೃಹದ ಆವಾರದಲ್ಲಿಯೆ ನಡೆಸಲಾಯ್ತು. ಹಿಂದುಸ್ಥಾನದ ಚರಿತ್ರಾರ್ಹವಾದ ವಿಚಾರಣೆಗಳಲ್ಲಿ ಇದೊಂದು ಅತ್ಯಂತ ವಿಖ್ಯಾತವಾದ ವಿಚಾರಣೆಯೆಂದು ನಿಃಸಂದೇಹವಾಗಿ ಹೇಳಬಹುದು. ಒಂದು ಸಂಗತಿಯ ಬಗ್ಗೆಯಂತೂ ಅದು ಇನ್ನಷ್ಟು ವೈಶಿಷ್ಟ್ಯಪೂರ್ಣವೆನಿಸಿತು. ಆ ವೈಶಿಷ್ಟ್ಯವೆಂದರೆ ಅದರಲ್ಲಿ ಆಪಾದಿತರಾಗಿ ನಿಂತ ಪ್ರಮುಖ ವ್ಯಕ್ತಿಗಳೆಂದರೆ ಋಷಿಪ್ರಾಯ ದೇಶಭಕ್ತರಾದ ಶ್ರೀ ಅರವಿಂದರು ಆ ವಿಚಾರಣೆಯ

ಉದ್ದಕ್ಕೂ ಅವರು ತೀರ ನಿರ್ಲಿಪ್ತರಾಗಿದ್ದು, ಏನು ನಡೆದಿದೆಯೆಂಬುದನ್ನು ಸಹ ಗಮನಕ್ಕೆ ತೆಗೆದುಕೊಳ್ಳದೆ ಇರುತಿದ್ದರು. ತಮ್ಮ 'ಸ್ವಕಾರ್ಯ'ವೆಂದು ಅನ್ನುತಿದ್ದ ಯೋಗಸಾಧನದಲ್ಲಿಯೆ ಅವರು ಸದಾ ನಿರತರಾಗಿರುತಿದ್ದರು. ಆಗ ಉದಯೋನ್ಮುಖ ತರುಣ ವಕೀಲರಾದ ಮತ್ತು ಮುಂದೆ ಅನೇಕ ವರ್ಷ ವಿಶಿಷ್ಟ ರೀತಿಯಲ್ಲಿ ಬಂಗಾಲದ ಒಳ್ಳೆ ಯಶಸ್ವಿ ನಾಯಕರಾದ ಶ್ರೀ ಚಿತ್ತರಂಜನ ದಾಸರಿಗೆ ಶ್ರೀ ಅರವಿಂದರು ಅಂತರ್ವಾಣಿಯ ಆದೇಶದಂತೆ ತಮ್ಮ ಪ್ರಕರಣವನ್ನು ಸಂಪೂರ್ಣವಾಗಿ ಒಪ್ಪಿಸಿಬಿಟ್ಟರು.

ಆ ಪ್ರಕರಣವು ಒಂದು ವರ್ಷದ ವರೆಗೆ ನಡೆದೇ ನಡೆಯಿತು. ಹೇಗಾದರೂ ಮಾಡಿ ಶ್ರೀ ಅರವಿಂದರನ್ನು ಈ ಜಾಲದಲ್ಲಿ ಹಿಡಿದು ಅವರಿಗೆ ಶಿಕ್ಷೆ ವಿಧಿಸಲೇ ಬೇಕೆಂದು ಫಿರ್ಯಾದಿಗಾರ ಸರಕಾರವು ಬಹಳ ಹವಣಿಸಿತು. ಯಾರ್ಡ್ಲೆ ನಾರ್ಟನ್ ಎಂಬವರಂಥ ಅತಿವಿಖ್ಯಾತ ಕಾಯದೆಪಂಡಿತರನ್ನು ಫಿರ್ಯಾದಿ ಪಕ್ಷದವರು ತಮ್ಮ ವಕೀಲರನ್ನಾಗಿ ಮಾಡಿಕೊಂಡಿದ್ದರು. ಆದರೆ ಅವರ ಪ್ರಯತ್ನವೆಲ್ಲ ವ್ಯರ್ಥವಾಯ್ತು. ಶ್ರೀ ಅರವಿಂದರು, ಕೂದಲು ಸಹ ಕೊಂಕದೆ, ನಿರಪರಾಧಿಗಳಾಗಿ ವಿಜಯಶಾಲಿಗಳಾಗಿ ವಿಮುಕ್ತರಾದರು. ಚಿತ್ತರಂಜನರ ಪ್ರವಾದಿಮುಖದಿಂದ ಬಂದ ಸ್ವಪಕ್ಷದ ಅಂದಿನ ಸಮರ್ಥ ಪ್ರತಿಪಾದನೆಯು ಈ ಪ್ರಕರಣವನ್ನು ಚಿರಸ್ಮರಣೀಯವಾದ ಒಂದು ರಾಷ್ಟ್ರೀಯ ಮಹಾಪ್ರಸಂಗದ ಉಚ್ಚಮಟ್ಟಕ್ಕೆ ಒಯ್ದು ಮುಟ್ಟಿಸಿತು. ಕೋರ್ಟಿಗೆ ಮಾಡಿಕೊಂಡ ಅವರ ಸುಪ್ರಸಿದ್ಧವಾದ ಕೊನೆಯ ನಿವೇದನವು ಇಂದಿಗೂ ಕಿವಿಗಳಲ್ಲಿ ನಿನದಿಸುತಿದೆ. ಏಕೆಂದರೆ ಅದು ಅಕ್ಷರಶಃ ನಿಜವೆಂದು ಸಿದ್ಧವಾಗಿದೆ. ಈ ಪ್ರಕರಣದಲ್ಲಿ ನ್ಯಾಯಾಧೀಶರಾಗಿದ್ದ ಮಿ. ಬೀಚ್‌ಕ್ರಾಫ್ಟರಿಗೆ ಅವರು ಹೀಗೆ ಹೇಳಿದರು: 'ನಿಮ್ಮ ಬಳಿಗೆ ನನ್ನ ನಿವೇದನವು ಈ ಬಗೆಯದಾಗಿದೆ: ಈ ವಿವಾದವು ನಿಃಸ್ತಬ್ಧತೆಯ ಗರ್ಭದಲ್ಲಿ ಅಡಗಿಹೋಗಿ ಬಹುಕಾಲವಾದ ನಂತರ, ಈ ಅಲ್ಲೋಲ ಕಲ್ಲೋಲವೂ ಆಂದೋಲನವೂ ನಿಂತು ಬಹುಕಾಲವಾದ ನಂತರ, ಇಂದಿನ ಈ ಆರೋಪಿಯನ್ನು ದೇಶವತ್ಸಲ ಕವಿಯೆಂದೂ ರಾಷ್ಟ್ರೀಯತ್ವದ ಪ್ರವಾದಿಯೆಂದೂ ಮನುಕುಲಪ್ರೇಮಿಯೆಂದೂ ಜನತೆ ಕೊಂಡಾಡುವದು. ಅವನು ಗತಿಸಿ ಹೋದ ಬಹುಕಾಲದ ನಂತರವೂ ಅವನ ನುಡಿಗಳು ಪುನಃ ಪುನಃ ಪ್ರತಿಧ್ವನಿತವಾಗುವವು; ಕೇವಲ ಭಾರತದಲ್ಲಿಯಷ್ಟೆ ಅಲ್ಲ, ಕಡಲಾಚೆಯ ನಾಡುಗಳಲ್ಲಿ ಸಹ ಈ ಧ್ವನಿಯು ವ್ಯಾಪಿಸುವದು. ಆದುದರಿಂದ, ನಾನು ಹೀಗೆ ಸಾರುತ್ತೇನೆ: ಈ ಆಪಾದಿತನು ಕೇವಲ ಈ ಕೋರ್ಟಿನ ಸಲಾಕೆಗಳ ಎದುರಿಗಿಷ್ಟೆ ಅಲ್ಲ—ಆದರೆ ಇತಿಹಾಸವೆಂಬ ಹಾಯ್‌ಕೋರ್ಟಿನ ಸಲಾಕೆಗಳ ಎದುರಿಗೆ ನಿಂತಿದ್ದಾನೆ.' ಈ ಪ್ರಕರಣದಲ್ಲಿ ನ್ಯಾಯನಿರ್ಣಯದ ಸಲಹೆಗಾರರಾಗಿ ಕುಳಿತ ಅಸೆಸರರು ೧೪ ನೆಯ ಎಪ್ರಿಲ್ ದಿನ ಶ್ರೀ ಅರವಿಂದರು 'ನಿರಪರಾಧಿ'ಯೆಂದು ಸಾರಿದರು. ಮೂರು ವಾರಗಳ

ನಂತರ ನ್ಯಾಯಾಧೀಶರು ಶ್ರೀ ಅರವಿಂದರನ್ನು ನಿರಪರಾಧಿಯೆಂದು ಬಿಟ್ಟುಬಿಟ್ಟರು; ಆದರೆ ಇನ್ನುಳಿದ ಅಪಾದಿತರಿಗೆ ಬೇರೆಬೇರೆ ಕಾಲಾವಧಿಯ ಶಿಕ್ಷೆಗಳನ್ನು ವಿಧಿಸಿದರು.

ಬಾಂಬ ಒಳಸಂಚಿನ ಈ ಪ್ರಕರಣವು ಇದೇ ಮೊದಲನೆಯದಾದ್ದರಿಂದ ನಮ್ಮ ಇತಿಹಾಸದಲ್ಲಿ ಇದಕ್ಕೆ ನಿಃಸಂಶಯವಾಗಿ ಸಾಕಷ್ಟು ಮಹತ್ವದ ಸ್ಥಾನವಿದೆ. ಆದರೆ ಈ ವಿಚಾರಣೆ ಮತ್ತು ಶ್ರೀ ಅರವಿಂದರ ಅದ್ಭುತರಮ್ಯ ಬಿಡುಗಡೆ ಇವುಗಳಿಗಿಂತ, ಅವರು ತಮ್ಮ ಕಾರಾಗೃಹವಾಸದ ಕಾಲಕ್ಕೆ ತಮ್ಮ ಆಧ್ಯಾತ್ಮಿಕ ಸಾಧನದಲ್ಲಿ ಮುಟ್ಟಿದ ತುರೀಯಾವಸ್ಥೆಯು ಹೆಚ್ಚು ಅರ್ಥಪೂರ್ಣವಾದುದಿರುತ್ತದೆ. ಈ ಅವಸ್ಥೆಯೆಂದರೆ ಕಾರಾಗೃಹದ ಕಾಲಾವಧಿಯಲ್ಲಿ ದೊರಕಿದ ಬಹು ಅಮೌಲ್ಯ ಸಿದ್ಧಿಯೆ ಸರಿ. ಎಡೆ ಬಿಡದೆ ಸಾಗಿದ ಅವರ ಸಾರ್ವಜನಿಕ ಜೀವನದ ಕಾರಣದಿಂದಾಗಿ ಅವರಿಗೆ ಎಷ್ಟೋ ದಿನ ವಿಶ್ರಾಂತಿಯಾಗಲಿ ಏಕಾಂತತೆಯಾಗಲಿ ಎಳ್ಳಷ್ಟೂ ಸಿಕ್ಕಿರಲಿಲ್ಲ. ಅದೆಲ್ಲ ಅವರಿಗೆ ಬಹಳ ಅಗತ್ಯವೆಂದು ಅನಿಸುತಿದ್ದರೂ ಅದನ್ನು ದೊರಕಿಸುವ ದಾರಿಯೆ ತೋರಿರಲಿಲ್ಲ. ಸೆರೆಮನೆಯಲ್ಲಿ ಆ ಸುಪ್ರಸಂಗವು ಒದಗಿತೆನ್ನಬೇಕು. ಅವರು ಅದಕ್ಕೆ ತಮ್ಮ 'ಆಶ್ರಮವಾಸ' ವೆಂದು ಕರೆದಿದ್ದಾರೆ. ಅವರ ಕಠಿಣ ಸಾಧನೆಯು ದೇವಸಾಕ್ಷಾ-ತ್ಕಾರದ ತುಟ್ಟ ತುದಿಯವರೆಗೂ ಅವರನ್ನು ಕರೆದೊಯ್ದಿತು. ಅವರಿಗೆ ಎಲ್ಲೆಲ್ಲಿಯೂ ಶ್ರೀಕೃಷ್ಣಸ್ವರೂಪವೆ ಗೋಚರಿಸತೊಡಗಿತಲ್ಲದೆ ಒಂದು ಬಗೆಯ ಅವರ್ಣನೀಯ-ವಾದ ಏಕೋಭಾವದ ಮನೋಹರ ಅನುಭವವು ಉಂಟಾಯಿತು. ಸೆರೆಮನೆಯೂ ಸೆರೆಮನೆಯ ಅಧಿಕಾರಿಯೂ ಪೋಲೀಸರೂ ಕೋರ್ಟೂ ಫಿರ್ಯಾದಿಗಾರರೂ ನ್ಯಾಯಾಧೀಶರೂ— ಸರ್ವಸ್ವವೂ— ಅವರ ದೃಷ್ಟಿಗೆ ವಾಸುದೇವಸ್ವರೂಪವಾಗಿ ಕಂಡಿತು; 'ವಾಸುದೇವಃ ಸರ್ವಂ'. ಒಂದು ವರ್ಷದ ಪೂರ್ವದಲ್ಲಿ ಅವರಿಗೆ ತೋರಿತ್ತು— ತಾವೆಂದರೆ ಈಶ್ವರನ ಕೈಯೊಳಗಿನ ಗೊಂಬೆಯೆಂದು; ಆದರೆ ಇಂದವರಿಗೆ ಸ್ಪಷ್ಟವಾಗಿ ಗೋಚರಿಸತೊಡಗಿತು— ತಮ್ಮ ಸುತ್ತು ಇರುವದು ಈಶ್ವರ ಸ್ವರೂಪವೆ ಎಂದು. ಅವರ ಕಾರಾಗೃಹಜೀವನದುದ್ದಕ್ಕೂ ಭಗವದ್ಗೀತೆಯೂ ಅದರ ಪೂರ್ಣ ಸಂದೇಶವೂ ಅವರ ರೋಮರೋಮಗಳಲ್ಲಿ, ಅವರ ಚೇತನದ ಸ್ತರಸ್ತರಗಳಲ್ಲಿ ವ್ಯಾಪಿಸಿತ್ತು; ಹಾಗೂ ಪರಮಾತ್ಮನನ್ನು ಮುಖಾಮುಖಿಯಾಗಿ ಕಂಡ, ಈಶ್ವರ ಪ್ರೇರಣೆಯನ್ನು ಪಡೆದ ಪರಿಪೂರ್ಣ ದ್ರಷ್ಟಾರರಾಗಿ ಅವರು ಪ್ರತಿ ಅಣು-ರೇಣುವಿನಲ್ಲಿಯೂ ಭಗವಂತನ ಅಗಾಧತೆಯನ್ನೆ ಅನುಭವಿಸಿದರು.

ಈ ಅದ್ಭುತ ಅನುಭವವನ್ನು ಅವರು ಗೌಪ್ಯವಾಗಿ ಇರಿಸಲಿಲ್ಲ. ಅವರು ತಮ್ಮ ಬಿಡುಗಡೆಯ ತರುವಾಯ ೩೦-೫-೧೯೦೯ಕ್ಕೆ ಮಾಡಿದ ಉತ್ತರಪಾರಾ ಭಾಷಣದಲ್ಲಿ ಈ ಅನುಭವವನ್ನು ಉಲ್ಲೇಖಿಸಿದ್ದಾರೆ. ಅವರು ಕಂಡ ದೃಷ್ಟಾಂತ ಮತ್ತು ಅವರಿಗೆ ಆದ ಸಾಕ್ಷಾತ್ಕಾರ ಇವುಗಳ ಉಲ್ಲೇಖದಿಂದ ಆ ಭಾಷಣವು ತುಂಬಿ ತುಳುಕುತಿದೆ. ಅನೇಕ ಪತ್ರಿಕೆಗಳು ಆಗ ಶ್ರೀ ಅರವಿಂದರನ್ನು ಟೀಕಿಸಿದ್ದೂ ಉಂಟು; ಅದರಲ್ಲಿಯೂ

ಕಾಮಾಕ್ಷಿ ನಟರಾಜನ್ ಎಂಬವರಿಂದ ಸಂಪಾದಿತವಾದ 'ಇಂಡಿಯನ್ ಸೋಶಲ್ ರಿಫಾರ್ಮರ' (ಭಾರತೀಯ ಸಮಾಜ ಸುಧಾರಕ) ಮತ್ತು ಸುರೇಂದ್ರನಾಥ ಬ್ಯಾನರ್ಜಿಯವರಿಂದ ಸಂಪಾದಿತವಾದ 'ಬೆಂಗಾಲಿ' ಎಂಬ ಪತ್ರಿಕೆಗಳು ಶ್ರೀ ಅರವಿಂದರಲ್ಲಿ ಉಂಟಾದ ಈ ಧಾರ್ಮಿಕ ಪ್ರವೃತ್ತಿಯನ್ನು ಹೀಯಾಳಿಸಿ ಬರೆದವು. ಆದರೆ ಅದನ್ನೆಲ್ಲ ಲೆಕ್ಕಿಸದೆ ಶ್ರೀ ಅರವಿಂದರು ಮುಂಬರಿದರು. ಅದು ಅವರಿಗೆ ಆಗ ಕೇವಲ ಬೌದ್ಧಿಕ ಮನವರಿಕೆಯು ಮಾತಾಗಲಿ ಒಂದು ಕುರುಡು ನಂಬಿಕೆಯು ಮಾತಾಗಲಿ ಆಗಿರಲಿಲ್ಲ; ಪ್ರತ್ಯಕ್ಷ ಪ್ರಾಣಸ್ಫುರಣದಿಂದ ಕೂಡಿದ, ವಿಶ್ವವ್ಯಾಪಿಯಾದ ಆತ್ಮಸಾಂನಿಧ್ಯದಿಂದ ಕೂಡಿದ ಅನುಭೂತಿಯು ಅದಾಗಿತ್ತು. ಸರ್ವವೂ ಆತನದೆ ಆವಿಷ್ಕಾರವೆಂದು ಅವರಿಗೆ ತೋರುತಿತ್ತು. ಈ ಅನುಭೂತಿಯು ಅವರ ಸಾಧನವನ್ನು ಕೆಲಕಾಲ ತಡೆಹಿಡಿಯಿತು. ಆಗ ಮತ್ತಷ್ಟು ಕಾಲವು ಸಾರ್ವಜನಿಕ ಕಾರ್ಯ-ವ್ಯೂಹದಲ್ಲಿ ಕಳೆದುಹೋಯಿತು. ಆ ಮೇಲೆಯೆ ಅವರು ಕೊನೆಗೊಮ್ಮೆ ತಮ್ಮ ಕೊನೆಯ ಆಶ್ರಮವಾದ ಪಾಂಡಿಚೇರಿಗೆ ತೆರಳಿ, ಮುಂದಿನ ಆಧ್ಯಾತ್ಮಿಕ ಸಿದ್ಧಿಗಾಗಿಯೂ ತಮ್ಮ ಅಸದೃಶ ಸಿದ್ಧಾಂತವನ್ನು ಪ್ರಸಾರಗೊಳಿಸುವದಕ್ಕಾಗಿಯೂ ಅಲ್ಲಿಯೆ ನೆಲೆಯಾಗಿ ನಿಂತರು.

ಶ್ರೀ ಅರವಿಂದರು ಅಲಿಪುರ ಸೆರೆಮನೆಯಿಂದ ಹೊರಬಂದಾಗ ಅವರು ಮೊದಲಿನ ಅರವಿಂದರಾಗಿರಲಿಲ್ಲ; ಅವರಲ್ಲಿ ಪರಿವರ್ತನೆಯಾಗಿತ್ತು. ಅದರಂತೆ ಅವರು ಹೊರಗೆ ಹೆಜ್ಜೆಯಿಟ್ಟಾಗ, ದೇಶದ ಪರಿಸ್ಥಿತಿಯಲ್ಲಿಯೂ ಪರಿವರ್ತನೆಯಾಗಿತ್ತು. ಸೆರೆಮನೆಯ ವಾಸವು ಅವರಿಗೆ ಪರಮಾತ್ಮನ ಸಾಕ್ಷಾತ್ಕಾರವನ್ನು ತಂದಿತಿಷ್ಟೇ ಅಲ್ಲ, ಮೊದಲು ಜ್ವಲಂತ ಚಳವಳಿಗಾರರಾಗಿ ಕಾಣುತಿದ್ದ ಅವರನ್ನು ಓರ್ವ ಪರಿಣತ ಗಂಭೀರ ರಾಜಕೀಯ ತತ್ತ್ವದರ್ಶಿಯನ್ನಾಗಿ ಮಾರ್ಪಡಿಸಿತು. ಉಗ್ರ ದಬ್ಬಾಳಿಕೆಯು ರಾಷ್ಟ್ರೀಯ ಪಕ್ಷದ ಅತಿರಥಿ ಮಹಾರಥಿಗಳನ್ನೆಲ್ಲ ಕಾರಾಗೃಹಕ್ಕೆ ಅಟ್ಟಿತ್ತು, ಅನೇಕ ಜಯಘೋಷಗಳನ್ನು ತಗ್ಗಿಸಿತ್ತು; ಮತ್ತು ಅನೇಕರ ಲೆಕ್ಕಣಿಕೆಯನ್ನು ತಡೆಹಿದಿದಿತ್ತು. ಅವರು ತಮ್ಮ ಉತ್ತರಪಾರಾ ಭಾಷಣದಲ್ಲಿ ಟಿಳಕರ ಬಗ್ಗೆ ಉಲ್ಲೇ-ಖಿಸುತ್ತ ಭಾವನಾಪರವಶವಾಗಿ ಹೀಗೆ ಉದ್ಗಾರ ತೆಗೆದರು: '...... ಎಲ್ಲವೂ ಬದಲಾದುದನ್ನು ನಾನು ಕಾಣುತ್ತೇನೆ. ನನ್ನ ಬದಿಯಲ್ಲಿಯೆ ಸದಾ ಕುಳಿತಿದ್ದು ನನ್ನ ಕಾರ್ಯದಲ್ಲಿ ಸದಾ ಸಹಭಾಗಿಯಾಗಿದ್ದ ಓರ್ವರು ಈಗ ಬ್ರಹ್ಮದೇಶದಲ್ಲಿ ಸೆರೆಯಾಳಾಗಿದ್ದಾರೆ.' ಸಹಸ್ರಾರು ಕಂಠಗಳಿಂದ ನುಗ್ಗಿಬಂದ 'ವಂದೇ ಮಾತರಂ' ಜಯಘೋಷದಲ್ಲಿ ಹೊರಹೊಮ್ಮುತಿದ್ದ ಮೊದಲಿನ ಹುಮ್ಮಸವು ಈಗ ಕಾಣದಾಗಿ ಎಲ್ಲೆಡೆಗೂ ಭಯಸೂಚಕವಾದ ನಿಃಶಬ್ದತೆಯುಂಟಾಗಿ ಉದಾಸೀನತೆಯು ಆವರಿಸಿತ್ತು. ಆದರೂ ಅವರು ಮೊದಲಿನಂತೆಯೆ ಮುಂಬರಿದರು; ಏಕೆಂದರೆ, ಈ ದಬ್ಬಾಳಿಕೆಯಲ್ಲಿಯೂ ಅವರಿಗೆ ಈಶ್ವರೀಹಸ್ತವೆ ಕಂಡಿತು. 'ಕಷ್ಟದ ಅನುಭವ

ವಿಲ್ಲದೆ ಬೆಳವಣಿಗೆ ಅಸಾಧ್ಯ'ವೆಂದು ಅವರು ನುಡಿದರು. ಭವಿಷ್ಯದ ಬಗ್ಗೆ ಅಜಿಂಕ್ಯ ಶ್ರದ್ಧೆಯನ್ನು ತಾಳಿ ಅವರು ಮುನ್ನಡಿಯಿಟ್ಟರು.

ಅವರು ಬಂಧನದಲ್ಲಿದ್ದಾಗ, ದುರ್ದೈವದಿಂದ 'ಬಂದೇಮಾತರಂ' ಪತ್ರಿಕೆಯ ಪ್ರಕಟನೆಯು ನಿಂತುಹೋಗಿತ್ತು. ತಮ್ಮ ನವ ನಿಗೂಢ ಸಂದೇಶವನ್ನು ಸಾರಲು ಹೊಸದೊಂದು ಪ್ರಕಾರದ ಮುಖಪತ್ರವೆ ಬೇಕೆಂದು ಈಗ ಅವರಿಗೆ ತೋರತೊಡಗಿತು. ಅದುದರಿಂದ ಅವರು 'ಕರ್ಮಯೋಗಿನ್' ಎಂಬ ಇಂಗ್ಲಿಷ್ ಸಾಪ್ತಾಹಿಕವನ್ನೂ 'ಧರ್ಮ' ಎಂಬ ಬಂಗಾಲಿ ಸಾಪ್ತಾಹಿಕವನ್ನೂ ಪ್ರಾರಂಭಿಸಿದರು. ಈ ಮುಂಚೆ ಸಹ ಅವರ ರಾಜಕಾರಣವು ಎಂದೂ ಕೇವಲ ರಾಜಕಾರಣವಾಗಿರಲಿಲ್ಲ; ಈಗಂತೂ ಅದಕ್ಕೂ ಮಿಗಿಲಾದ ಮಟ್ಟದಲ್ಲಿ ನಿಂತು ಅವರು ಮಾತನಾಡತೊಡಗಿದರು. ಭಗವದ್ಗೀತೆಯು ನಿಜವಾದ ಇಂಗಿತದಂತೆ ಇದ್ದುದಾದರೆ ಜೀವನವೆಲ್ಲ 'ಕರ್ಮಯೋಗ'ವೆಂದೂ ಸತತ ಸಾಧನದಿಂದ ಭಗವಂತನನ್ನು ಒಲಿಸಿಕೊಳ್ಳಲು ಜೀವನವನ್ನು ಮುಡುಪಿರಿಸಿದ್ದಾದರೆ ಆ ಜೀವನವೆಲ್ಲ 'ಧರ್ಮ'ದ ಪಾಲನೆಯೆಂದೂ ಅವರು ಪ್ರತಿಪಾದಿಸಿದರು. ಆದರೂ ಅವರು ತಮ್ಮ ಹೊಸ ಪತ್ರಿಕೆಗಳಲ್ಲಿ ರಾಜಕಾರಣದ ಹಾಗೂ ರಾಜಕೀಯ ಸಮಸ್ಯೆಗಳ ಬಗ್ಗೆಯಷ್ಟೇ ಅಲ್ಲ, ರಾಜಕೀಯ ವಿವಾದಗಳ ವಿಷಯಕ್ಕೂ ವಿವೇಚನೆಮಾಡಬೇಕಾಗುತ್ತಿತ್ತು. ಇದೆಲ್ಲವೂ ಅನಿವಾರ್ಯವಾಗಿತ್ತು. ಏಕೆಂದರೆ ಪ್ರಾಮುಖ್ಯವಾಗಿ ಅವರೆ ಬಿತ್ತಿ ಬೆಳೆಯಿಸಿ ಪ್ರಚುರಪಡಿಸಿದ ರಾಷ್ಟ್ರೀಯತ್ವದ ಏಕಮೇವ ನೇತಾರರು ಈಗಂತೂ ಅವರೆ ಆಗಿಬಿಟ್ಟಿದ್ದರು. ಆದರೆ ಈಗ ಅವರ ಒಲವು ಎಲ್ಲದರಲ್ಲಿಯೂ ಅಧ್ಯಾತ್ಮಪ್ರಧಾನವಾಗಿತ್ತು. ದಿನದಿನದ ವಾಡಿಕೆಯ ವಿಷಯಗಳನ್ನು ಕುರಿತು ಆಲೋಚಿಸುವಾಗ ಕೂಡ ಅವರ ನಿಲುಮೆಯು ಉದಾತ್ತವಾಗಿದ್ದು ಆಧ್ಯಾತ್ಮಿಕ ದೃಷ್ಟಿಕೋನವನ್ನೆ ಅವಲಂಬಿಸಿರುತ್ತಿತ್ತು.

ಈ ಬಗೆಯ ರಭಸದ ರಾಜಕೀಯ ಕಾರ್‍ಯರಂಗದಲ್ಲಿ ಅವರು ಹೆಚ್ಚೆಂದರೆ ಹತ್ತು ತಿಂಗಳು ಮಾತ್ರ ಇದ್ದರು; ಆ ಬಳಿಕ ಅವರು ಕೊನೆಯದಾಗಿಯೆ ಈ ಬಗೆಯ ಜೀವನಕ್ರಮದಿಂದ ದೂರ ಸರಿದು, ತಮ್ಮ ವಿಶ್ರಾಮದ ಮಹಾಸ್ಥಾನಕ್ಕೆ ಪ್ರಸ್ಥಾನ ಬೆಳೆಸಿ ಅಲ್ಲಿ ಅವರು ಸತತವಾಗಿ ನಾಲ್ವತ್ತು ವರ್ಷಗಳ ಕಾಲ ದೀರ್ಘಸಾಧನವನ್ನು ಸಾಗಿಸಿದರು. ಆದರೆ ಆ ಹತ್ತು ತಿಂಗಳು ಅವರಿಗೆ ಮೈತುಂಬ ಚಟುವಟಿಕೆಗಳು! ರಚನಾತ್ಮಕ ರಾಜಕೀಯ ವಿಚಾರ, ಭಾರತೀಯ ಸಂಸ್ಕೃತಿ, ರಾಷ್ಟ್ರೀಯತಾವಾದ, ಹಾಗೂ ಎಲ್ಲಕ್ಕೂ ಮಿಗಿಲಾಗಿ ಭಾರತೀಯರ ವೈಶಿಷ್ಟ್ಯವಾದ ಅಧ್ಯಾತ್ಮಪರ ಜೀವನ ವಿಧಾನ ಇವೇ ಮೊದಲಾದ ವಿಷಯಗಳ ಬಗ್ಗೆ ಉಜ್ವಲ ಮೀಮಾಂಸೆಯಿಂದೊಡಗೂಡಿದ ಲೇಖನಗಳನ್ನು ಬರೆಯುವ ಕಾರ್ಯವೂ ಈ ಹತ್ತು ತಿಂಗಳಲ್ಲಿಯೆ ನಡೆಯಿತು. ಇನ್ನುಳಿದ ಅವರ ಮಹತ್ಕಾರ್ಯಗಳೂ ಸಾಗಿಯೆ ಇದ್ದವು. ಅವರ ಅಂದಿನ ಉಜ್ವಲ ಲೇಖನಗಳು, ನಿರ್ವೀರ್ಯವಾಗುತ್ತ ಸಾಗಿದ ರಾಜಕೀಯ

ಉತ್ಸಾಹವನ್ನು ಹೊಡೆದೆಬ್ಬಿಸಿ ರಾಷ್ಟ್ರೀಯತಾವಾದವನ್ನು ಎತ್ತಿ ಹಿಡಿದವು. ಇದರಿಂದಾಗಿ ಭಾರತದ ಉಜ್ವಲ ಭವಿತವ್ಯದ ಬಗ್ಗೆ ಜನತೆಯಲ್ಲಿ ಆಶೆ ವಿಶ್ವಾಸಗಳು ಹೆಚ್ಚಿದವು. ಆದರೆ ಮೊದಲಿನ ಹುರುಪು ಹುಮ್ಮಸಗಳು ಬೇಗ ಮರಳಿ ಬಂದಾವೆಂಬ ಬಗೆಗೆ ಅವರಿಗೆ ಅಷ್ಟೊಂದು ಆಶೆ ಕಂಡುಬರಲಿಲ್ಲ. ಅದೇ ಕಾಲಕ್ಕೆ ಮೋರ್ಲೆ-ಮಿಂಟೊ ಸುಧಾರಣೆಗಳನ್ನು ಸೌಮ್ಯ ವಿಚಾರಪರರಾದ ಮವಾಳರು ಸ್ವಾಗತಿಸಿ ಸ್ವೀಕಾರ ಮಾಡಿದ್ದರಿಂದಂತೂ ರಾಜಕೀಯ ವಾತಾವರಣವು ಮತ್ತಷ್ಟು ಹದಗೆಟ್ಟು ಹೋಯಿತು.

ಆಧ್ಯಾತ್ಮಿಕ ಮತ್ತು ಸತ್ತ್ವಯುತ ಸಾಂಸ್ಕೃತಿಕ ವಿಚಾರಗಳಲ್ಲದೆ ಶ್ರೀ ಅರವಿಂದರು ‘ ಕರ್ಮಯೋಗಿನ್ ’ ಪತ್ರಿಕೆಯ ಪುಟಗಳಲ್ಲಿ ಇರಿಸಿದ ಅಮೌಲ್ಯ ಭಾಂಡಾರವೆಂದರೆ : ರಾಜಕೀಯ ಧೋರಣೆಗಳು ಮತ್ತು ಯೋಜನೆಗಳು, ಹಾಗೂ ರಚನಾತ್ಮಕ ರಾಷ್ಟ್ರೀಯತೆಯ ಬಗೆಗಿದ್ದ ಅವರ ಕಲ್ಪನೆಗಳು. ಅವರು ಸೆರೆಮನೆಯಿಂದ ಹೊರಗೆ ಬಂದಾಗ, ಜಹಾಲರ ಪರವಾಗಿ ಅಧಿಕಾರಯುಕ್ತ ವಾಣಿಯಿಂದ ರಾಜಕೀಯ ಕ್ಷೇತ್ರದಲ್ಲಿ ಜ್ವಲಂತ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಈ ವಿಷಯದಲ್ಲಿ ಮಾರ್ಗದರ್ಶನ ಮಾಡಬಲ್ಲವರು ಇವರೊಬ್ಬರೆ ಆಗಿದ್ದರು. ಇವರ ಸರಿಜೋಡಿಗೆ ನಿಲ್ಲಬಲ್ಲವರಲ್ಲಿ ಅನೇಕರು ಆಗ ಸೆರೆಮನೆಗೊ ಗಡಿಪಾರು ಮಾಡಲ್ಪಟ್ಟು ದೇಶಾಂತರಕ್ಕೊ ಹೋಗಿಬಿಟ್ಟದ್ದರು. ಆಂಗ್ಲೊ ಇಂಡಿಯನ್ ಮತ್ತು ಮವಾಳ ಪತ್ರಿಕೆಗಳ ಟೀಕೆಗಳನ್ನು ತಾವೊಬ್ಬರೆ ಎದುರಿಸುತ್ತ, ಸುಸ್ಪಷ್ಟ ಸ್ವರಗಳಲ್ಲಿ ರಾಷ್ಟ್ರೀಯ-ವಾದಿಗಳಿಗೆ ದಾರಿ ಹಾಕಿ ಕೊಡುತಿದ್ದರು. ಆಗಿನ ಕಾಲಕ್ಕೆ ಜನತೆಯಲ್ಲಿ ಸಾಕಷ್ಟು ಕೆಚ್ಚೂ ಕಿಚ್ಚೂ ಉಳಿದಿರಲಿಲ್ಲವಾದ್ದರಿಂದ ಇನ್ನು ಬೇರೆ ಕಾಲದಲ್ಲಿ ಮತ್ತೆ ಬೇರೆ ಮುಂದಾಳುಗಳಿಂದ ಈ ಸ್ವಾತಂತ್ರ್ಯಸಂಗ್ರಾಮವು ಸಾಗಲಿಕ್ಕೆ ಬೇಕು ಎಂದು ಶ್ರೀ ಅರವಿಂದರಿಗೆ ಅನಿಸತೊಡಗಿತು, ಆ ಮಾತು ಬೇರೆ.

ರಾಷ್ಟ್ರೀಯತಾವಾದಿಗಳ ಶಾಂತಿಯುತ ಉದ್ದೇಶಗಳ ಬಗ್ಗೆ ಶ್ರೀ ಗೋ. ಕೃ. ಗೋಖಲೆಯವರು ಸಾಶಂಕರಾಗಿ ತಮ್ಮೊಂದು ಭಾಷಣದಲ್ಲಿ ಆಹ್ವಾನದ ಸ್ವರವೆತ್ತಿದರು ; ಆಗ ಶ್ರೀ ಅರವಿಂದರು ತಮ್ಮ ಅಧಿಕಾರಯುಕ್ತವಾಣಿಯಿಂದ ಹೀಗೆ ಪ್ರತ್ಯುತ್ತರವಿತ್ತರು : ‘ ಸ್ವಾತಂತ್ರ್ಯಪ್ರಾಪ್ತಿಯ ಬಗೆಗಿದ್ದ ನಮ್ಮ ಹಂಬಲವು ಯಾವದೇ ಬಗೆಯಾಗಿ ವ್ಯಕ್ತವಾಗಬಹುದು ; ಆದರೆ ಅದನ್ನು ಹೊಂದುವ ಸಾಧನವು ಶಾಂತತಾಯುಕ್ತವಾಗಿಯೆ ಇರುತ್ತದೆಯೆಂದು ನಾವು ಜನತೆಗೆ ಹೇಳಿದ್ದೇವೆ. ಸ್ವಾವಲಂಬನ-ಶಾಂತಿಯುತ ನಿರೋಧಗಳಿಂದಲೆ ಅದನ್ನು ಸಂಪಾದಿಸಬಹುದೆಂದು ನಾವು ಹೇಳಿದ್ದೇವೆ. .... ಶಾಂತಿಯುತ ನಿರೋಧ ( Passive Resistance ) ದಲ್ಲಿ ಎರಡು ಮಾತುಗಳು ಅಡಕವಾಗಿವೆ. ಮೊದಲನೆಯದಾಗಿ, ನಾವು ಸ್ವಾತಂತ್ರ್ಯಕ್ಕೆ ಬಾಧ್ಯಸ್ಥರು ; ಅದನ್ನು ಕೊಡುವ ವರೆಗೆ, ಈ ದೇಶದಲ್ಲಿದ್ದ

ಸರಕಾರದೊಡನೆ ಕೆಲವೊಂದು ವಿಷಯಗಳಲ್ಲಿ ನಾವು ಸಹಕರಿಸುವದಿಲ್ಲ. ಎರಡನೆಯದಾಗಿ, ನಮ್ಮನ್ನು ಹಿಂಸೆಗೆ ಗುರಿಪಡಿಸಿದರೆ—ದಬ್ಬಾಳಿಕೆಯ ಕಬ್ಬಿಣದ ಕೈಯು ನಮ್ಮ ಮೇಲೆ ಬಿದ್ದಿತಾದರೆ, ನಾವು ಅದನ್ನು ಎದುರಿಸುತ್ತೇವೆ—ಹಿಂಸೆಯಿಂದಲ್ಲ ಆದರೆ ಕಷ್ಟಸಹನೆಯಿಂದ, ಶಾಂತಿಯುತ ನಿರೋಧದಿಂದ, ಶಾಸನಸಮ್ಮತ ಸಾಧನಗಳಿಂದ. ದಬ್ಬಾಳಿಕೆಗೆ ಒಳಗಾದಾಗ ಸೇಡುತೀರಿಸಿಕೊಳ್ಳಿರೆಂದು ನಾವು ನಮ್ಮ ತರುಣರಿಗೆ ಸರ್ವಥಾ ಹೇಳಿಲ್ಲ. 'ಸಹಿಸಿರಿ' ಎಂದೇ ಹೇಳಿದ್ದೇವೆ.... ಶಾಸನವನ್ನು ಭಂಗಿಸದೆ ಹಿಂಸೆಯನ್ನು ಅವಲಂಬಿಸದೆ ಜನ್ಮಸಿದ್ಧ ಇಚ್ಛೆಯನ್ನು ಪೂರೈಸಿಕೊಳ್ಳಲು ಶಾಂತಿಯುತ ನಿರೋಧವೊಂದೇ ಯೋಗ್ಯ ಮಾರ್ಗವೆಂದು ನಾವು ನಮ್ಮ ಜನತೆಗೆ ಹೇಳಿಕೊಡುತಿದ್ದೇವೆ.' ಗಾಂಧೀಜಿಯವರೂ ಈ ಬಗೆಯಾಗಿಯೆ ಹೇಳಬಹುದಾಗಿತ್ತು! ಜುಲೈ ೧೯೦೯ ರಲ್ಲಿ ಶ್ರೀ ಅರವಿಂದರು ತಮ್ಮ ದೇಶಬಾಂಧವರನ್ನು ಉದ್ದೇಶಿಸಿ ಬರೆದ ಬಹಿರಂಗಪತ್ರದಲ್ಲಿ ಆರು ಮಾತುಗಳನ್ನೊಳಗೊಂಡ ಒಂದು ಯೋಜನೆಯನ್ನು ಅವರು ರೇಖಿಸಿದರು. ಅದರಲ್ಲಿ ಸ್ವಾವಲಂಬನ, ಶಾಂತಿಯುತ ನಿರೋಧ, ಅಧಿಕಾರದ ಹಸ್ತಾಂತರವಾಗುವ ವರೆಗೆ ಸರಕಾರದೊಡನೆ ಅಸಹಕಾರ, ಸ್ವದೇಶಿ ಮತ್ತು ಪರಿಣಾಮಕಾರಕ ಬಹಿಷ್ಕಾರ ಇವೇ ಮುಖ್ಯವಾಗಿದ್ದವು.

'ಹಿಂದುಸ್ಥಾನದ ಮೆದುಳು (Brain of India)' ಎಂಬ ಹೆಸರಿನ ಅವರ ಲೇಖನಗಳು ಶಿಕ್ಷಣವಿಷಯಕವಾದ ನಿಬಂಧಗಳಾಗಿದ್ದು ಪ್ರಾಚೀನ ಭಾರತೀಯರ ಶಿಕ್ಷಣತತ್ತ್ವಗಳನ್ನು ಅವು ಅತ್ಯಂತ ಪ್ರಭಾವಶಾಲಿಯಾಗಿ ಸಮರ್ಥಿಸುತ್ತವೆ. 'ಸಹಸಾ ಅನ್ಯದೇಶದ ಸಂಪರ್ಕ ಸಹ ಬಾರದೆ ಭಾರತವು ತನ್ನ ಸಂಸ್ಕೃತಿಯು ಹಾಗೂ ಸಭ್ಯತೆಯ ಉಚ್ಚ ಭವ್ಯ ಶಿಖರವನ್ನೆತ್ತಿ ನಿಲ್ಲಿಸಿದ್ದರ ಗುಟ್ಟಾವುದು' ಎಂದು ಅವರು ಕೇಳುತ್ತಾರೆ. ಕೇವಲ ಧರ್ಮ-ತತ್ತ್ವದರ್ಶನಗಳಲ್ಲಿ ಇಷ್ಟೇ ಅಲ್ಲ, ಕೇವಲ ಕಲ್ಪನಾಲೋಕ-ವಿಚಾರಲೋಕ ಮತ್ತು ತಾರ್ಕಿಕ ಯುಕ್ತಿಪ್ರಪಂಚ ಇವುಗಳಲ್ಲಿಷ್ಟೇ ಅಲ್ಲ, ಆದರೆ ಪ್ರತ್ಯಕ್ಷ ದೈನಂದಿನ ರಾಜನೀತಿ-ರಾಜ್ಯಭಾರಗಳ ರಂಗಗಳಲ್ಲಿಯೂ ವ್ಯಾಪಾರೋದ್ಯೋಗ-ಅರ್ಥಶಾಸ್ತ್ರಗಳಲ್ಲಿಯೂ ವಿವಿಧ ಕಲೆ ಮತ್ತು ಭೌತಶಾಸ್ತ್ರಗಳಲ್ಲಿಯೂ ಸಮಾಜಸಂಘಟನೆ ಹಾಗೂ ಸಂತುಷ್ಟ ಜೀವನಕ್ರಮಗಳಲ್ಲಿಯೂ ಭರತವರ್ಷವು ಅನೇಕ ಶತಕಗಳವರೆಗೆ ಅಪರಿಮಿತವಾಗಿಯೂ ಅವಿಚ್ಛಿನ್ನವಾಗಿಯೂ ಪ್ರಗತಿಯನ್ನು ಸಾಧಿಸುತ್ತ ಬಂದಿದೆ. ಈ ಪ್ರಗತಿಪರ ಸತ್ತ್ವವು ಯಾವುದರ ಮೂಲಕ ಎಂದು ಅವರು ಕೇಳುತ್ತಾರೆ. ಭಾರತೀಯರ ವ್ಯಕ್ತಿಪರ ಮತ್ತು ಸಾಮಾಜಿಕ ಜೀವನಗಳ ವಿಕಾಸಕ್ಕೆ ಆಧಾರವಾಗಿದ್ದ ಈ ಓಜಸ್ವಿಯಾದ ನಾನಾವಿಧ ಆಚಾರಪರಂಪರೆಗಳು ಮೂಡಿ ಬಂದುದು ಎಲ್ಲಿಂದ? ಈ ವಿಷಯವನ್ನೆ ಅವರು ಪೂರ್ಣವಾಗಿಯೂ ಕೂಲಂಕಷವಾಗಿಯೂ 'ಆರ್ಯ' ಪತ್ರಿಕೆಯಲ್ಲಿ ಪ್ರಕಟವಾದ 'ಭಾರತೀಯ ಸಂಸ್ಕೃತಿಯ ಸಮರ್ಥನೆ (Defence of Indian

Culture)' ಎಂಬ ತನ್ನ ಲೇಖನಮಾಲೆಯಲ್ಲಿ ಮುಂದೆ ಕೆಲವು ವರ್ಷಗಳ ನಂತರ ವಿವೇಚಿಸಿದರು. ವಿಲಿಯಂ ಆರ್ಚರ ಎಂಬವರು ಆ ಕಾಲಕ್ಕೆ ಭಾರತೀಯ ಸಾಂಸ್ಕೃತಿಕ ಆದರ್ಶ-ಸಿದ್ಧಿಗಳ ಬಗ್ಗೆ ಅಲ್ಪಜ್ಞರ ರೀತಿಯಲ್ಲಿ ಮಾಡಿದ ಕುತ್ಸಿತ ಟೀಕೆಗೆ ಉತ್ತರವೆಂದು ಆ ಲೇಖನಮಾಲೆ ಬರೆಯಲ್ಪಟ್ಟಿತು. ಇರಲಿ. ಶಿಕ್ಷಣವಿಷಯಕವಾದ ಅವರ ಮೊದಲಿನ ಲೇಖನಮಾಲೆಯಲ್ಲಿ ಅವರ ಪರಿಮಿತ ಉದ್ದೇಶವು, ಈ ಸಮಸ್ತ ಪ್ರತ್ಯುತ್ಪಾದಕ ಜೀವನದ ಮೂಲಭೂತ ರಹಸ್ಯವನ್ನೇ ಶೋಧಿಸುವದಾಗಿತ್ತು. ಬ್ರಹ್ಮಚರ್ಯವೂ ಯೋಗಪಥದಿಂದ ಕೂಡಿದ ಶ್ರೇಷ್ಠ ಆತ್ಮಿಕ ಸಾಧನವೂ ಭಾರತೀಯ ಶೈಕ್ಷಣಿಕ ಪದ್ಧತಿಯ ತಳಹದಿಯಾಗಿದ್ದವೆಂಬ ಮಾತನ್ನು ಅವರು ಎತ್ತಿ ತೋರಿಸಿದರು. ಅವೇ ತತ್ತ್ವಗಳನ್ನು ತಕ್ಕಂತೆ ಮಾರ್ಪಡಿಸಿಕೊಂಡು ಇಂದಿನ ಜೀವನಕ್ಕೂ ಶಿಕ್ಷಣಕ್ರಮಕ್ಕೂ ಅನ್ವಯಿಸಿಕೊಳ್ಳಬೇಕೆಂದು ಅವರು ಪ್ರತಿಪಾದಿಸಿದರು. ಆದರೆ ಇದೊಂದು ಪ್ರಕಾರದ ಯಾಂತ್ರಿಕ ಪುನರುಜ್ಜೀವನವಾಗಬೇಕೆಂದು ಅವರು ಬಯಸಲಿಲ್ಲ. ಪ್ರಾಚೀನ ಸತ್ತ್ವವನ್ನು ನವೀನ ರೀತಿಯಲ್ಲಿ ವಿನಿಯೋಗಿಸಿಕೊಳ್ಳುವಂತೆಯೂ ಹೊಸ ಪರಿಕರಕ್ಕೆ ಬೇಕಾಗುವಂತೆ ಪುನಃ ಆಕಲನ ಮಾಡಿಕೊಳ್ಳಬೇಕೆಂಬುದಾಗಿಯೂ ಅವರ ಅಭಿಪ್ರಾಯವಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಅವರು ಬ್ರಹ್ಮತತ್ತ್ವದಲ್ಲಿ ವಿಶ್ವಾಸವಿಟ್ಟಿದ್ದಾರೆ; ಇದಲ್ಲದೆ ಜಡದಲ್ಲಿಯೂ ಆ ಬ್ರಹ್ಮತತ್ತ್ವವು ಖಂಡಿತ ಪ್ರಕಟಗೊಳ್ಳುವದೆಂದೂ ಅವರು ಕಂಠೋಕ್ತವಾಗಿ ಸಾರಿದ್ದಾರೆ. ಈ ವಿಶ್ವವ್ಯಾಪಾರವೆಲ್ಲವೂ ಈಶ್ವರಪ್ರವೃತ್ತವು; ಈ ಪ್ರತೀತಿಯ ಪ್ರಕಾಶದಲ್ಲಿಯೆ ಅವರು ಅಖಂಡ ಜೀವನವನ್ನೆ ಪುನರ್ನಿರ್ಮಾಣ ಮಾಡಲು ಹಾರೈಸಿದರು. 'ಬ್ರಹ್ಮವಸ್ತುವು ಮಾತ್ರ ತಾರಕವಾಗಿದೆ' ಎಂದು ಅವರು 'ಕರ್ಮಯೋಗಿನ್' ಪತ್ರಿಕೆಯಲ್ಲಿ ಸಾರುತ್ತ, 'ನಾವು ನಮ್ಮ ನಮ್ಮ ಹೃದಯದಲ್ಲಿ ದೊಡ್ಡಸ್ತಿಕೆಯನ್ನೂ ಸ್ವಾತಂತ್ರ್ಯವನ್ನೂ ತಂದುಕೊಂಡಾಗ ಮಾತ್ರ, ನಾವು ಸಾಮಾಜಿಕ ಮತ್ತು ರಾಜಕೀಯ ದೃಷ್ಟಿಯಿಂದ ದೊಡ್ಡವರೂ ಸ್ವತಂತ್ರರೂ ಆಗಬಲ್ಲೆವು' ಎಂದು ಉದ್ಗಾರ ತೆಗೆದಿದ್ದಾರೆ. ಕಳೆದುಕೊಂಡ ಆತ್ಮವನ್ನು ಭಾರತವು ಒಮ್ಮೆ ಪುನಃ ಪಡೆಯುತ್ತಲೆ ಮಾನವಕುಟುಂಬದ ವಿಶಾಲಜೀವನವನ್ನು ರೂಪಿಸಬೇಕೆಂಬುದಾಗಿ ಅವರ ರಾಷ್ಟ್ರೀಯತ್ವದ ಧ್ಯೇಯವಾಗಿತ್ತು. ಕುಟುಂಬದಲ್ಲಿ ವ್ಯಕ್ತಿಗಿದ್ದ ಸ್ಥಾನಮಾನವು ಕಡಿಮೆಯಾಗಲಾರದು, ಅದರಂತೆ ರಾಷ್ಟ್ರದಲ್ಲಿ ಕುಟುಂಬಕ್ಕಿದ್ದ ಸ್ಥಾನಮಾನವೂ ಕಡಿಮೆಯಾಗುವ ಕಾರಣವಿಲ್ಲ. ವ್ಯಕ್ತಿಯೂ ಕುಟುಂಬವೂ ಮತ್ತಷ್ಟು ವಿಸ್ತಾರದ ಜೀವನವಲಯದಲ್ಲಿ ಕಾಲಿಕ್ಕಿ ತನ್ನ ತನ್ನ ರೀತಿಯಲ್ಲಿ ಆತ್ಮಗೌರವದ ಜೀವನವನ್ನು ಬಾಳಿದ್ದಾದರೆ ಅದರದರ ಅಭಿವ್ಯಕ್ತಿಯು ಇನ್ನಷ್ಟು ಉತ್ತಮತರವಾಗುವದು ಸಹಜವಾಗಿದೆ.

ಈ ಬಗೆಯಾಗಿ, ಅವರು ಸನಾತನ ತತ್ತ್ವಗಳ ಬಗೆಗೂ ಅದರಂತೆಯೆ

ಪ್ರಾಸಂಗಿಕ ಮತ್ತು ರಾಜಕೀಯ ವಿಷಯಗಳ ಬಗೆಗೂ ಪುನಃ ಪುನಃ ವಿವೇಚನೆ ಗೈದರು. ಆದರೆ ಅವರು ಯಾವದೆ ವಿಷಯವನ್ನು ಕುರಿತು ಸಮಾಲೋಚಿಸಿದರೂ ಅವರ ಅಲೌಕಿಕ ದರ್ಶನವು, ವಿಷಯಾಂತರಾಳವನ್ನು ಅರಸಿ ನೋಡಬಲ್ಲ ಅವರ ದೃಷ್ಟಿಯು, ಅವರ ವಿಚಾರಗಳ ಸ್ಪಷ್ಟತೆಯು ತುಂಬ ಪಾರದರ್ಶಕವಾಗಿದ್ದವು. ಅದಾವ ವಿಷಯವೆ ಇರಲಿ, ಪ್ರಖರವೂ ಎಷ್ಟೋ ಸಲ ಕಾವ್ಯಮಯವೂ ಆದ ಅವರ ಆಂಗ್ಲಭಾಷಾಪ್ರಭುತ್ವವು ಎಂದೂ ಕುಗ್ಗಲಿಲ್ಲ. ಅವರ ಇನ್ನುಳಿದ ಕಾರ್ಯಕಲಾಪಗಳೂ ಮೊದಲಿನಂತೆ ಸಾಗಿಯೆ ಇದ್ದವು. ೧೯೦೭ರ ಸಪ್ಟೆಂಬರ ತಿಂಗಳಲ್ಲಿ ಹುಗ್ಲಿಯಲ್ಲಿ ನೆರೆದ ರಾಜಕೀಯ ಪರಿಷತ್ತಿನಲ್ಲಿ, ರಾಷ್ಟ್ರೀಯತಾವಾದದ ಗೊತ್ತುವಳಿಗಳ ಸಂದರ್ಭದಲ್ಲಿ ಬಹುಸಂಖ್ಯಾಕ ಸದಸ್ಯರು ಇವರ ಬೆಂಬಲಕ್ಕಿದ್ದರು. ಆದರೆ ಅವರಿಗೆ ಸದಾ ಅಂತರಂಗದಲ್ಲಿ ಏಕಾಂತದ ಕರೆಯೆ ಕೇಳಿಸುತಿತ್ತು; ತಮ್ಮ ಚೈತನ್ಯದ ಉಚ್ಚತರ ಸ್ತರಗಳ ಬಗೆಗಿದ್ದ ಅವರ ಆಕರ್ಷಣೆಯು ತೀರ ದುರ್ದಮವಾಗಿತ್ತು. ಭಾರತದ ರಾಜಕೀಯ ಭವಿತವ್ಯತೆಯ ಬಗೆಗೆ ಅವರಿಗೆ ತುಂಬ ಮನವರಿಕೆಯಾಗಿ ಹೋಗಿತ್ತು. ಆದರೆ ತಾವೇ ಈ ಆಂದೋಲನದ ನಾಯಕರಾಗಿ ಇನ್ನು ಮುಂದೆ ಉಳಿಯುವದಿಲ್ಲವೆಂದೂ ಬೇರೆ ಕಾಲದಲ್ಲಿ ಬೇರೊಬ್ಬ ನಾಯಕರೆ ಅದಕ್ಕೆ ಪರಿಪೂರ್ಣ ಫಲ ತರುವರೆಂದೂ ಅವರಿಗೆ ಅನಿಸತೊಡಗಿತು. ಈ ಅಂತಃಪ್ರೇರಣೆಯೆ ಅವರನ್ನು ರಾಜಕೀಯ ರಂಗದಿಂದ ಹೊರತಂದಿತು; ತುಂಬ ಸೂಕ್ಷ್ಮತರ ಶಕ್ತಿಗಳೊಡನೆ ಹೋರಾಟ ನಡಿಸಬೇಕಾಗಿ ಬರುವ ಸೂಕ್ಷ್ಮ ಲೋಕಗಳಲ್ಲಿ ಅವರನ್ನು ತಂದುಬಿಟ್ಟಿತು. ಈ ಸೂಕ್ಷ್ಮಲೋಕಗಳ ಕ್ಷೇತ್ರದಲ್ಲಿಯೆ ಜೀವಾತ್ಮನು ಬೃಹದ್ವಿಜಯಗಳನ್ನು ಪಡೆಯಬೇಕಾಗುವದು. ಈ ಹೋರಾಟದ ಹಾಗೂ ಈ ವಿಜಯಗಳ ಕಲ್ಪನೆಯಾಗಲಿ ಅನುಭವವಾಗಲಿ ಬರುವುದು ಚೈತನ್ಯದ ನಿಮ್ನ ಸ್ತರಗಳ ಬಂಧನದಿಂದ ನಿರ್ಮುಕ್ತರಾದ ಆತ್ಮಜ್ಞಾನಿಗಳಿಗೆ ಮಾತ್ರ.

ಇದೇ ಸಮಯಕ್ಕೆ ಭಗಿನಿ ನಿವೇದಿತಾ ಇವರ ಮುಖಾಂತರವಾಗಿ, ೧೯೦೮ರ ಜುಲೈ ತಿಂಗಳಲ್ಲಿ ಶ್ರೀ ಅರವಿಂದರನ್ನು ಸರಕಾರವು ಮತ್ತೆ ಬಂಧಿಸುವದೆಂದೂ ಈ ಸಲದ ಅವರ ಸಂಭಾವನೆಯು ಗಡಿಪಾರೇ ಆಗುವದೆಂದೂ ವಿಶ್ವಾಸಾರ್ಹವಾಗಿ ತಿಳಿದುಬಂದಿತು. ಆದರೆ ಈ ಬಗೆಯ ಸುದ್ದಿಗಳಿಂದ ಅವರು ಸಹಸಾ ವಿಚಲಿತರಾಗಲಿಲ್ಲ; ಈ ಮೊದಲು ಅವರ ಮೇಲೆ ಇಡಲಾದ ಆರೋಪಗಳಿಂದ ಅವರಿಗೆ ಒಂದು ಮಾತು ಮನದಟ್ಟಾಗಿ ಹೋಗಿತ್ತು. ಅದೆಂದರೆ—ಇಂತಹ ಸಂದರ್ಭಗಳಲ್ಲಿ ತಾವು ಸೊಗಸಾದ ಜೀವನವನ್ನೆ ಸಾಗಿಸಬಲ್ಲೆವೆಂಬ ಸಂಗತಿ,—ಆಳರಸರ ಜಾಳಿಗೆಯು ತಮ್ಮನ್ನು ಬಂಧಿಸಿ ಇಡಲಾರದೆಂಬ ಸಂಗತಿ. ಒಂದು ವಿಷಯವು ಮಾತ್ರ ಸುಸ್ಪಷ್ಟವಿತ್ತು; ಅದೆಂದರೆ ಹಿಂದುಸ್ಥಾನದಲ್ಲಿದ್ದುದಾದರೆ ರಾಜಕಾರಣದಿಂದ ದೂರ ಇರುವದು ಅವರಿಗೆ ಅಸಾಧ್ಯವೆ ಆಗಿತ್ತೆಂಬ ಮಾತು.

ಈ ಪ್ರಸಂಗದಲ್ಲಿಯೆ ಅವರು ತಮ್ಮ ದೇಶವಾಸಿಗಳನ್ನು ಉದ್ದೇಶಿಸಿ ಒಂದು ಬಹಿರಂಗಪತ್ರವನ್ನು ಪ್ರಕಟಗೊಳಿಸಿದರು; ಅದೇ ತಮ್ಮ ಕಟ್ಟಕಡೆಯ ರಾಜಕೀಯ ಇಚ್ಛಾಪತ್ರವೆಂದು ಅದರಲ್ಲಿ ಅವರು ಉಲ್ಲೇಖಿಸಿದ್ದುಂಟು. ಇದು ಸರಕಾರದ ಉದ್ದೇಶಗಳನ್ನು ಪರಿಣಾಮಕಾರಕವಾಗಿಯೆ ಪಲ್ಲಟಗೊಳಿಸಿತು. ಮುಂದಾಳುಗಳ ಬರುವಿಕೆ-ಹೋಗುವಿಕೆಗಳಿಂದ ಕೈಕಾಲುಗೆಡಬಾರದೆಂದು ರಾಷ್ಟ್ರೀಯತಾವಾದಿಗಳಿಗೆ ಈ ಪತ್ರದಲ್ಲಿ ಎಚ್ಚರಿಕೆ ಹೇಳಿದರು. ಅವರೆಂದರು: 'ಮಹತ್ತರವಾದ ಎಲ್ಲ ಆಂದೋಲನಗಳೂ ಈಶ್ವರಶಕ್ತಿಯ ಅನುಕೂಲಪಾತ್ರನಾದ, ದೇವನಿಯೋಜಿತನಾದ ನೇತಾರನೊಬ್ಬನ ದಾರಿ ಕಾಯ್ದಿರುತ್ತವೆ; ಹಾಗೂ ಅವನು ಬರುತ್ತಲೆ ಅವು ವಿಜಯಶಾಲಿಯಾಗಿ ಮುನ್ನುಗ್ಗುತ್ತ ಸಫಲತೆ ಹೊಂದುತ್ತವೆ. . . . . ಆದುದರಿಂದ ಭವಿಷ್ಯದ ಹೊಣೆಗಾರಿಕೆಯನ್ನು ಹೊತ್ತ ರಾಷ್ಟ್ರೀಯತಾವಾದಿಗಳು ಬರಲಿರುವ ವ್ಯಕ್ತಿಗಾಗಿ ದಾರಿ ಕಾಯುತಲೆ ಬೇಕು . . . .' ಇಷ್ಟಕ್ಕೆ ಮಾತು ಮುಗಿಯಿತೆಂದೇನೊ ತೋರಿತು! ಆದರೆ ಹಾಗೆ ಆಗಲಿಲ್ಲ. ಕೆಲವು ತಿಂಗಳ ತರುವಾಯ ಅಂದರೆ ಫೆಬ್ರುವರಿ ೧೯೧೦ರ ವರೆಗೆ ಅವರು ತಮ್ಮ ಕಾರ್ಯವನ್ನು ಅವ್ಯಾಹತವಾಗಿ ಸಾಗಿಸಿದರು. ಕೊನೆಗೊಮ್ಮೆ ಅವರ ಐತೀರ್ಪು ಬಂದಿತು. ಅಂತಃಪ್ರೇರಣೆಯು ಒತ್ತರಿಸಿ ನುಗ್ಗಿ ಬರಲು ಅವರು ಫ್ರೆಂಚರ ಸೀಮೆಯಾದ ಚಂದ್ರನಗರಕ್ಕೆ ತೆರಳಿದರು. ಅಲ್ಲಿ ಅವರು ೧॥ ತಿಂಗಳು ಏಕಾಂತವಾಸದಲ್ಲಿದ್ದು ಶಾಂತಚಿತ್ತದಿಂದ ಯೋಗಸಾಧನವನ್ನು ಮುಂದುವರಿಸಿದರು. ಅವರಿಗೆ ಆ ಸ್ಥಳವು ಸಾಕಷ್ಟು ಅನುಕೂಲವೆನಿಸದೆ ೪-೪-೧೯೧೦ನೆಯ ದಿನ 'ಡುಪ್ಲೆ' ಎಂಬ ಹಡಗವೇರಿ ಪಾಂಡಿಚೇರಿಗೆ ಹೊರಟರು.

ಬಂಧನವನ್ನು ತಪ್ಪಿಸಿಕೊಳ್ಳಲೆಂದೆ ಶ್ರೀ ಅರವಿಂದರು ಬ್ರಿಟಿಶ್ ಹಿಂದುಸ್ಥಾನದ ಸೀಮೆಯನ್ನು ಬಿಟ್ಟು ಹೊರಟು ಹೋದರೆಂಬುದಾಗಿ ಅತಿ ಹೀನ ಮನೋವೃತ್ತಿಯ ಆರೋಪವನ್ನು ಅಧಿಕಾರಿಗಳು ಅವರ ಮೇಲೆ ಹೊರಿಸಿದರು. ಶ್ರೀ ಅರವಿಂದರು ಆಗ 'ಮದ್ರಾಸ್ ಟಾಯಿಮ್ಸ' ಎಂಬ ಪತ್ರಿಕೆಯಲ್ಲಿ ಒಂದು ಸ್ಪಷ್ಟೀಕರಣವನ್ನು ಪ್ರಕಟಿಸಿದರು. ತಮ್ಮ ಅಂತಃಪ್ರೇರಣೆಯ ಪ್ರಕಾರ ಉಚ್ಚತರ ಯೋಗಸಾಧನೆಗಾಗಿ ತಾವು ಪಾಂಡಿಚೇರಿಗೆ ತೆರಳಿದೆವೆಂದೂ ತಾವು ತಪ್ಪಿಸಿಕೊಳ್ಳಲು ಹವಣಿಸಿದ್ದಾಗಿ ಆರೋಪಿಸಲಾದ ತಮ್ಮ ಬಂಧನದ ಆಜ್ಞೆಯು ವಸ್ತುತಃ ತಾವು ಪಾಂಡಿಚೇರಿಯನ್ನು ಮುಟ್ಟಿದ ಮೇಲೆಯೆ ಹೊರಡಿಸಲ್ಪಟ್ಟಿತೆಂದೂ ಅದರಲ್ಲಿ ನಿರ್ದೇಶಿಸಿದ್ದಾರೆ. ಆ 'ಬಹಿರಂಗ ಪತ್ರ'ಕ್ಕಾಗಿ ಸರಕಾರದವರು ಅದರ ಮುದ್ರಕರನ್ನು ಅಪರಾಧಕ್ಕೆ ಗುರಿಪಡಿಸಿದರು; ಹಾಗೂ ಈ ಪತ್ರದ ಸಲುವಾಗಿಯೆ ಅವರ ಬಂಧನದ ಆಜ್ಞೆ ಹೊರಟಿತ್ತು. ಕೆಳಗಿನ ಕೋರ್ಟಿನಲ್ಲಿ ಮುದ್ರಕರಿಗೆ ಶಿಕ್ಷೆ ವಿಧಿಸಲ್ಪಟ್ಟಿತು; ಆದರೆ ಮೇಲಿನ ಕೋರ್ಟಿನಲ್ಲಿ ನ್ಯಾಯಮೂರ್ತಿಗಳಾದ ವುಡ್‌ರಾಫ್ ಮತ್ತು ಫ್ಲೆಚರ್

ಎಂಬವರು ಮುದ್ರಕರು ತಪ್ಪುಗಾರರಲ್ಲವೆಂದು ಬಿಟ್ಟುಬಿಟ್ಟರು. ಇಷ್ಟೆ ಅಲ್ಲ, 'ಆ ಬಹಿರಂಗಪತ್ರ'ದಲ್ಲಿ ರಾಜದ್ರೋಹವೇನೂ ಇಲ್ಲವೆಂದು ಘೋಷಿಸಿದರು. ಇದು ಶ್ರೀ ಅರವಿಂದ ಘೋಷರ ವಿಜಯವೆ ಸರಿ!

## ೬ ಪಾಂಡಿಚೇರಿಗೆ ಮತ್ತು ಆಮೇಲೆ

ಶ್ರೀ ಅರವಿಂದರು ಪಾಂಡಿಚೇರಿಯಲ್ಲಿ ಇದ್ದಾಗ ಘಟಿಸಿದ ಕೆಲವೊಂದು ಮಹತ್ವದ ಸಂಗತಿಗಳ ಹಾಗು ಪ್ರಸಂಗಗಳ ಉಲ್ಲೇಖವನ್ನು ಮಾತ್ರ ಈ ಪ್ರಕರಣದಲ್ಲಿ ಮಾಡಲಾಗಿದೆ. ಅವರ ಸಾಧನದ ವಿವರಣೆಯನ್ನು ಬೇರೊಂದು ಪ್ರಕರಣಕ್ಕಾಗಿ ಕಾದಿರಿಸಿದೆ.

ಹತ್ತು ತಿಂಗಳುಗಳ ಅವಿಶ್ರಾಂತ ಕಾರ್ಯವ್ಯಾಪದ ತರುವಾಯ ಶ್ರೀ ಅರವಿಂದರು ಪಾಂಡಿಚೇರಿಗೆ, ಅದೇ ಅವರ ಶಾಶ್ವತ ವಿಶ್ರಾಮಧಾಮವೊ ಎನ್ನುವ ಹಾಗೆ, ತೆರಳಿದರು. ಅದು ಅವರ ಪವಿತ್ರ ವಾಸಸ್ಥಾನವಾಯಿತಲ್ಲದೆ ಅವರ ಅಮೋಘ ಸಾಧನದ ಮತ್ತು ಅದ್ವಿತೀಯ ಸಿದ್ಧಿಯ ಆಶ್ರಯಸ್ಥಾನವೂ ಆಗಿ ಪರಿಣಮಿಸಿತು. ಪೂರ್ಣಯೋಗದ ನವಸಂದೇಶವು ಪಸರಿಸಿದ ಕೇಂದ್ರವು ಇದೇ ಆಯಿತಲ್ಲದೆ ನೈಜ-ಜೀವನವನ್ನೂ ಪರಂಜ್ಯೋತಿಯನ್ನೂ ಶೋಧಿಸುವವರ ಆಗರವೂ ಇದಾಯಿತು. ಅವರ ದಿವ್ಯ ಉಪದೇಶಾಮೃತದಿಂದ ಆಕರ್ಷಿತರಾದ ಅಸಂಖ್ಯ ಸ್ತ್ರೀಪುರುಷರ ಯಾತ್ರಾಸ್ಥಾನವಾಗಿ ಇದು ಬೆಳೆಯಿತು. ಕೊನೆಗೆ ಇದು ನೂರಾರು ನಿಃಸೀಮ ಸಾಧಕರ ಯೋಗಭೂಮಿಯಾಗಿಯೂ ಹೊಸ ತಳಹದಿಯಮೇಲೆ ನವೀನ ಮನು ಕುಲವನ್ನು ರಚಿಸುವದಕ್ಕೋಸುಗ ಬೇಕಾದ ಒಂದು ಪ್ರಯೋಗಶಾಲೆಯಾಗಿಯೂ ಮಾರ್ಪಟ್ಟಿತು. ಈಗಂತೂ ಅದು,— ಆ ಮಹಾಗುರುವಿನ ಮಹಾ ಆತ್ಮವು ಅನಂತತೆಯ ಕೇಂದ್ರಸ್ಥ ಬಿಂದುವನ್ನು ಹುಡುಕಿ ತೆಗೆಯಲೆಂದು ಈ ಪಾರ್ಥಿವ ಶರೀರ ವನ್ನು ತೊರೆಯಲು ಬಯಸಿದ ನಂತರ,— ಅವರ ಪರಮ ಪವಿತ್ರ ಅವಶೇಷಗಳಿದ್ದ ಸಮಾಧಿಸ್ಥಲವಾಗಿದೆ.

ನಾಲ್ವತ್ತು ವರ್ಷಗಳ ದೀರ್ಘ ಕಾಲವನ್ನು ಶ್ರೀ ಅರವಿಂದರು ಈ ಸಮುದ್ರ ತೀರದ ಫ್ರೆಂಚಭಾರತದ ಪಟ್ಟಣದಲ್ಲಿ ಕಳೆದರು. ಆದರೆ ಇಷ್ಟು ವರ್ಷಗಳನ್ನು ಅವರು ಆ ಪಟ್ಟಣದಲ್ಲಿಯೆ ಅಥವಾ ಆ ಈ ಮನೆಗಳಲ್ಲಿಯೆ ಕಳೆದರೆಂದು ನಿಜವಾಗಿ ಅನ್ನಬಲ್ಲೆವೆ? ಅವರ ದೇಹ ಮಾತ್ರ ಸದಾ ಅಲ್ಲಿ ಇದ್ದಿತೇನೊ ನಿಜ; ಆದರೆ ಅವರ ಚೇತನವು ಅಬಾಧಿತವಾಗಿ ಆದರೂ ಉದ್ದೇಶಪೂರ್ವಕವಾಗಿ, ಆತ್ಮಲೋಕ

ದಲ್ಲಿ ಹೊಸ ಹೊಸ ಸ್ತರಗಳನ್ನು ಶೋಧಿಸುತ್ತ ಹೊಸ ಹೊಸ ದಾರಿಗಳನ್ನು ಕೊರೆಯುತ್ತ ವಿಹರಿಸುತಿತ್ತು. ನಿಜವೇನೆಂದರೆ, ಅವರು ಅಂತರ್ಲೋಕದಲ್ಲಿಯೆ ಹೆಚ್ಚಾಗಿ ಇದ್ದು, ಅದರ ಅಸಂಖ್ಯ ನಿಗೂಢ ರಹಸ್ಯಗಳನ್ನು ಆಲೋಚಿಸುತ್ತಲೂ ಚೇತನದ ಗಭೀರತೆಯನ್ನು ಅಳೆಯುತ್ತಲೂ ಇರುತಿದ್ದರು. ಆ ಲೋಕದ ಅರಿವೇ ಅವರಿಗೆ ಹೆಚ್ಚಾಗಿ ಇದ್ದು ಆ ಲೋಕದ ಬಗೆಗೇ ಅವರಲ್ಲಿ ಹೆಚ್ಚಿನ ಜಿಜ್ಞಾಸೆಯಿತ್ತು. ಇನ್ನುಳಿದುದೆಲ್ಲವೂ ಅವರಿಗೆ ಬಾಹ್ಯ ಬಂಧನವಾಗಿ, ಕೇವಲ ನಾಮರೂಪವಾಗಿ, ಕೇವಲ ಅಭಿವ್ಯಕ್ತಿಯಾಗಿ ತೋರುತಿತ್ತು. ಎಲ್ಲದರ ಸಾರಸರ್ವಸ್ವವಾಗಿ ಅದರ ತಳಹದಿಯಾದ ಹಾಗೂ 'ತಾನು ಬದಲಾಗದೆ ಶಾಶ್ವತವಾಗಿ ಬದಲಾಗುತ್ತ ಸಾಗಿದ ಈ ಜಗತ್ತಿಗೆ ಕಾರಣವಾದ' ಆ ಬ್ರಹ್ಮವಸ್ತುವೆ ಅವರಿಗೆ ಮುಖ್ಯವಾಗಿತ್ತು. ಇಲ್ಲಿಯು ಅವರ ಜೀವನಕ್ರಮದಲ್ಲಿ ಮೊದಮೊದಲಿಗೆ ಬೇರೆ ವಿಷಯಗಳು ಅವರ ಮನಸ್ಸನ್ನು ಸೆಳೆದಿದ್ದವೇನೊ ನಿಜ. ಆದರೆ, ಅವರಲ್ಲಿ ಸದಾ ನೆಲೆಗೊಂಡು ನಿಂತಿದ್ದ ಅಂತಃಪ್ರೇರಣೆಗಳೂ ಹೃದಯದ ಸುನಿರ್ದಿಷ್ಟ ಪ್ರಚೋದನೆಗಳೂ ಕಟ್ಟಕಡೆಗೆ ಅವರನ್ನು ಅನ್ಯಸಂಪರ್ಕವೆ ಇರದ ಆತ್ಮಾರಾಮನ ರಾಜ್ಯದಲ್ಲಿ ಅಟ್ಟಿ ತಂದುಬಿಟ್ಟವು. ಆದುದರಿಂದಲೆ ಆ ರಾಜ್ಯದ ಸೀಮೆಯು ಅವರ ಮೇಲೆ ತನ್ನ ಚಿರನಿವಾಸಿಯಹಾಗೆ ತನ್ನ ಬಾಧ್ಯತೆಯನ್ನೆ ಪ್ರಸ್ಥಾಪಿಸಿತು; ಅದು ಅವರನ್ನು ಸ್ವಚ್ಛಂದಶೀಲ ಸುತನಂತೆ ಕಂಡು ಬರಮಾಡಿಕೊಂಡಿತು. ತಿರುಗಿ ರಾಜಕೀಯ ರಂಗದಲ್ಲಿ ಬರುವಂತೆ ಅನೇಕರು ಅವರನ್ನು ಪ್ರಲೋಭಿಸಿದ್ದುಂಟು. ಅವರಂತಹ ಓರ್ವ ಧುರೀಣರ ಆವಶ್ಯಕತೆಯೂ ಆಗ ಮೇಲಿಂದಮೇಲೆ ಬಹಳವಾಗಿ ಅನಿಸುತಿತ್ತು. ಲಾಲಾ ಲಜಪತರಾಯರು ಇವರನ್ನು ಆಮಂತ್ರಿಸಿದರು. ಜೋಸೆಫ್ ಬ್ಯಾಪ್ಟಿಸ್ಟಾರವರು ೧೯೨೦ ರಲ್ಲಿ ತಾವು ಮುಂಬಯಿಯಲ್ಲಿ ಹೊಸದಾಗಿ ಹೊರಡಿಸಿದ ಒಂದು ರಾಷ್ಟ್ರೀಯ ಪತ್ರಿಕೆಯ ಸಂಪಾದಕಪೀಠವನ್ನು ಇವರಿಗೆ ಕೊಡಬೇಕೆಂದರು. ದೇಶಬಂಧು ಚಿತ್ತರಂಜನರು ೧೯೨೨ ರಲ್ಲಿ ಸ್ವತಃ ಪ್ರಯತ್ನಿಸಿದರು; ಆದರೆ ಶ್ರೀ ಅರವಿಂದರು ಒಪ್ಪಲಿಲ್ಲ. ತಾವು ಉಚ್ಚತಮ ಸತ್ಯದ ಸಂಧಾನದಲ್ಲಿ ಇರುವುದಾಗಿಯೂ, ಒಂದು ವೇಳೆ ಬರುವುದೆ ಆದರೆ— ಎಲ್ಲದಕ್ಕೂ ಹೊಸ ವ್ಯವಸ್ಥಿತಿಯನ್ನು ಕೊಡಬಲ್ಲ ಆ ಹೊಸ ನಿಲುವೆಯನ್ನು ಹೊಂದಿದ ನಂತರವೆ ತಾವು ತಿರುಗಿ ಬರುವುದಾಗಿಯೂ ಚಿತ್ತರಂಜನರಿಗೆ ತಿಳಿಸಿದರು. ದೇಶಬಂಧು ದಾಸರು ಗತಿಸಿದ ಬಳಿಕ ಉಂಟಾದ ಕೊರತೆಯನ್ನು ತುಂಬಲು ಬಂಗಾಲವು ಸಹ ಅವರನ್ನು ತಿರುಗಿ ಬರಮಾಡಿಕೊಳ್ಳಲು ಪ್ರಯತ್ನಿಸಿತು. ೧೯೦೮ ರಲ್ಲಿ ಅವರನ್ನು ಅಭಿನಂಧಿಸಿ ವಂದಿಸಿದ ರವೀಂದ್ರರು ಸಹ ೧೯೨೮ ರಲ್ಲಿ ಪ್ರತ್ಯಕ್ಷವಾಗಿ ಅವರನ್ನು ಕಂಡು ತಾವೆಲ್ಲರೂ ಅವರ 'ಮಂತ್ರ'ಕ್ಕಾಗಿ ಕಾಯ್ದು ಕುಳಿತಿರುವದಾಗಿ ಹೇಳಿದರು; ಅವರು ಅದನ್ನು ಉಚ್ಚರಿಸುವದೆ ತಡ ತಾವೆಲ್ಲ ಅದನ್ನು ಅನುಸರಿಸುವದಾಗಿ ತಿಳಿಸಿದರು. ಮಹಾತ್ಮಾಜಿಯವರು ಸಹ ತಮ್ಮ ಮಗ

ದೇವದಾಸರನ್ನು ಅವರ ಬಳಿಗೆ ಏಕಾಂತದೂತರನ್ನಾಗಿ ಕಳಿಸಿ ಪ್ರಯತ್ನಿಸಿದರು. ಕಾಂಗ್ರೆಸ್ಸಿನ ಗಾದಿಯು ಅವರಿಗಾಗಿ ಸಿದ್ಧವಾಗಿತ್ತು. ಆದರೆ ಯಾವುದೂ ಅವರನ್ನು ಆಕರ್ಷಿಸಲಿಲ್ಲ. ಅವರು ಮಗ್ನರಾಗಿದ್ದ ಕಾರ್ಯವು ಅವರ ಅಭಿಪ್ರಾಯದ ಮೇರೆಗೆ ಅತ್ಯಂತ ಗಭೀರವೂ ವಿಶ್ವವ್ಯಾಪಕವೂ ಸರ್ವಾಂಗೀಣವೂ ಬಹು ಮಹತ್ವವುಳ್ಳುದೂ ಆಗಿತ್ತು. ಆದುದರಿಂದ ಯಾರ ಒತ್ತಾಯಕ್ಕಾಗಲಿ ಎಂಥ ಮುರವತ್ತಿಗಾಗಲಿ ಲೆಕ್ಕಿಸತಕ್ಕದ್ದಲ್ಲವೆಂದು ನಿರ್ಧರಿಸಿ ಚಲಿಸದೆ ಇದ್ದುಬಿಟ್ಟರು. ಹಾಗೂ ತಾವೊಮ್ಮೆ ಯೋಗ್ಯವೆಂದು ನಿರ್ಧರಿಸಿ ಆಯ್ದುಕೊಂಡ ಮಾರ್ಗವನ್ನೆ ನಿಷ್ಠೆಯಿಂದ ಅನುಸರಿಸಿದರು. ನಾವು ಈಗ ಇದ್ದಲ್ಲಿಂದಲೆ ತೂಗಿ ತೀರ್ಮಾನಿಸುವದಾದರೆ ಅವರು ತಾವು ಕೈಕೊಂಡ ಮಹಾ ಸಾಧನವನ್ನು ಮುಂದುವರಿಸಿದ್ದರ ಫಲವಾಗಿ ಇಂದು ಭಾರತವೂ ಇಡಿ ಜಗತ್ತೂ ಮೊದಲಿಗಿಂತ ಎಷ್ಟೊ ಮಟ್ಟಿಗೆ ಅಧಿಕವಾಗಿ ಐಶ್ವರ್ಯಸಂಪನ್ನವಾಗಿದೆಯೆಂದು ಹೇಳದೆ ಗತ್ಯಂತರವಿಲ್ಲ. ಹೊರಹೊರಗೆ ನಿಷ್ಕ್ರಿಯೆ ಕಂಡುಬಂದರೂ ಒಳಒಳಗೆ ಪ್ರಚಂಡ ಕ್ರಿಯಾಪ್ರವರ್ತನೆಯಲ್ಲಿಯೆ ಅವರ ನಾಲ್ವತ್ತು ವರ್ಷಗಳು ವ್ಯಾಪೃತವಾಗಿದ್ದವು. ಈ ವರ್ಷಗಳ ಸಂಪೂರ್ಣ ಚರಿತ್ರೆ ಇನ್ನೆಂದೂ ಬರೆಯಲ್ಪಡಲಾರದು. ಆದರೆ ಆ ಚರಿತ್ರೆಯೆಂದರೆ, ವಿಶ್ವಜೀವನದ ವಿಕಾಸಕ್ಕೆ ಪ್ರತಿಕೂಲವಾಗಿರುವ ಶಕ್ತಿಗಳ ವಿರುದ್ಧವಾಗಿ ಶ್ರೀ ಅರವಿಂದರು ಕೈಕೊಂಡ ಅವಿರತವೂ ಘೋರವೂ ವೀರೋಚಿತವೂ ಆದ ಒಂದು ಮಹಾಸಂಗ್ರಾಮವೆ ಆಗಿತ್ತು. ಈ ಕಠಿಣ ಸಂಗ್ರಾಮದ ಫಲವಾಗಿಯೆ ಅವರು ದಿವ್ಯಜೀವನದ ದರ್ಶನವನ್ನು ರೂಪಿಸಲು, ಪೂರ್ಣಯೋಗದ ಅದ್ವಿತೀಯ ಪಥವನ್ನು ಶೋಧಿಸಲು ಮಾನವ ಜೀವನವನ್ನು ಉಚ್ಚತಮ ಭೂಮಿಕೆಯ ಮೇಲೆ ಪ್ರತಿಷ್ಠಿಸಲು ಸಮರ್ಥರಾದರು. ಆ ಭೂಮಿಕೆಯಾದರೂ ಸೂಕ್ಷ್ಮತರವೂ ಪವಿತ್ರತರವೂ ಉದಾತ್ತತರವೂ ಆದುದಲ್ಲದೆ ಸತ್ತ್ವತಃ ಸಾಮರಸ್ಯಪೂರ್ಣವೂ ಆಗಿತ್ತು.

ಶ್ರೀ ಅರವಿಂದರು ಬಹು ವಿಲಕ್ಷಣ ಪರಿಸ್ಥಿತಿಯಲ್ಲಿ ಮೊದಲು ಚಂದ್ರನಗರಕ್ಕೂ ಆ ಮೇಲೆ ಪಾಂಡಿಚೇರಿಗೂ ಹೋದರೆಂಬ ಸಂಗತಿಯು ಈಗ ಸರ್ವಶ್ರುತವಿದೆ. ಆಗ ಕಲಕತ್ತೆಯಲ್ಲಿ ಅವರ ಎಲ್ಲ ಚಲನವಲನಗಳ ಮೇಲೆಯೂ ಅವರು ಎಡತಾಕುವ ಎಲ್ಲ ಸ್ಥಳಗಳ ಮೇಲೆಯೂ ಸರ್ಪಗಾವಲಿರುತಿತ್ತು. ಸಾಮಾನ್ಯವಾಗಿ ಅವರು ದಿನಾಲು ಸಂಜೆಗೆ, ಶ್ಯಾಮಪುಕುರ ಓಣಿಯ ೪ ನೆಯ ಮನೆಯಲ್ಲಿದ್ದ 'ಕರ್ಮಯೋಗಿನ್' ಮತ್ತು 'ಧರ್ಮ' ಪತ್ರಿಕೆಗಳ ಕಾರ್ಯಾಲಯದಲ್ಲಿ ಇರುತಿದ್ದರು. ಎಷ್ಟೊ ಸಲ ಅವರು ತಮ್ಮ ಹಲವು ಗೆಳೆಯರೊಂದಿಗೆ ತಮ್ಮ ವಿಶೇಷ ಲಹರಿಯ ವಿಷಯವಾದ ಪ್ಲಾಂಚೆಟ್ಟಿನಲ್ಲಿ ಎಂದರೆ ಯಂತ್ರದ ಲೆಕ್ಕಣಿಕೆ ತಾನಾಗಿ ಸರಿಯುತ್ತಿರಲು ಕರೆದ ಆತ್ಮಗಳು ಬರೆಯುವ ಬರೆಹದಲ್ಲಿ ಕಾಲಕ್ಷೇಪ ಮಾಡುತಿದ್ದರು. ಬರೆಹವು ಏನಿದೆಯೆಂಬುದನ್ನು ತಿಳಿಯುವ ಕುತೂಹಲಕ್ಕಿಂತ ಆ ಬರೆಹವು ಹೇಗೆ

ಜರುಗುತ್ತದೆಯೆಂಬುದರ ರಹಸ್ಯವನ್ನು ಅಭ್ಯಸಿಸುವ ದೃಷ್ಟಿಯಿಂದ ಮಾತ್ರ ಅವರು ಅದರಲ್ಲಿ ತೊಡಗಿರುತಿದ್ದರು. ಅವರ ವಿಪುಲ ಕಾರ್ಯವ್ಯಾಪ್ತಿಯ ಮಧ್ಯದಲ್ಲಿ ಸಹ ಅವರಿಗೆ ಆಗಲೆ ಬಲವತ್ತರವಾದ ಅಂತಃಪ್ರೇರಣೆಗಳು ಆಗುತಲೆ ಇದ್ದವು; ಪತ್ರಿಕಾ ವ್ಯವಸಾಯವನ್ನೂ ಇನ್ನುಳಿದ ಚಟುವಟಿಕೆಗಳನ್ನೂ ನಿಲ್ಲಿಸಿ ಉಚ್ಚತರ ಯೋಗಕ್ಕೆ ಅಣಿಯಾಗಬೇಕೆಂದು ಅವರಿಗೆ ಅಂತಃಸೂಚನೆಗಳು ಬರುತ್ತಲೆ ಇದ್ದವು.

ಒಂದು ದಿನ, ೧೯೧೦ ರ ಫೆಬ್ರುವರಿ ತಿಂಗಳಲ್ಲಿ, ಅವರು ತಮ್ಮ ಕಾರ್ಯಾಲಯ-ದಲ್ಲಿದ್ದರು. ಇಲ್ಲಿಯ ಕೆಲಸಗಾರರಲ್ಲಿ ಒಬ್ಬರಾದ ರಾಮಚಂದ್ರ ಮುಜುಮದಾರ್ ಎಂಬವರು ಪೋಲೀಸರು ಕಾರ್ಯಾಲಯಕ್ಕೆ ಕೂಡಲೆ ದಾಳಿಯಿಟ್ಟು ಶ್ರೀ ಅರವಿಂದರನ್ನು ಸೆರೆಹಿಡಿಯುವರೆಂಬ ಸುದ್ದಿಯನ್ನು ಒಮ್ಮೆಲೆ ತಂದರು. ಈ ಬಗೆಯ ಸುದ್ದಿಗಳು ಹೊಸವೂ ಆಗಿರಲಿಲ್ಲ, ಅಸಾಧಾರಣವಾದವೂ ಆಗಿರಲಿಲ್ಲ. ಶ್ರೀ ಅರವಿಂದರಿಗೆ ತಮ್ಮ ಬಂಧನದ ಆಜ್ಞೆ ಇರಲಿಲ್ಲವೆಂಬುದು ಗೊತ್ತಿತ್ತು ; ಆದರೂ ಅದೇಕೊ ಅಂದು ಅವರಿಗೆ ಒಂದು ತೀವ್ರ 'ಸ್ವರ'ವು ಚಂದ್ರನಗರಕ್ಕೆ ಹೋಗೆಂದು ಒತ್ತಾಯಪಡಿಸಿತು. ಹತ್ತೇ ಹತ್ತು ನಿಮಿಷಗಳಲ್ಲಿ ಅವರೂ ಅವರ ಇನ್ನಿಬ್ಬರು ಸಂಗಡಿಗರೂ ತಕ್ಕ ಹಡಗವನ್ನೇರಿ ಮರುದಿನವೆ ಚಂದ್ರನಗರವನ್ನು ಮುಟ್ಟಿದರು. ಅವರು ಬಿಟ್ಟು ಬಿಡುವ ಮೊದಲು ಮಾಡಿದ ಒಂದೇ ಒಂದು ವ್ಯವಸ್ಥೆಯೆಂದರೆ, ನಿವೇದಿತಾ ಇವರಿಗೆ ಒಂದು ಸಣ್ಣ ಪತ್ರ ಬರೆದು ಕಳಿಸಿ ತಾವಿಲ್ಲದಾಗ 'ಕರ್ಮ-ಯೋಗಿನ್' ಪತ್ರಿಕೆಯ ಸಂಪಾದಕತ್ವದ ಹೊಣೆ ಹೊರಬೇಕೆಂದು ತಿಳಿಸಿದ್ದು. ಹಾಗೆ ಅವರು ಮುಂದೆ ಆ ಕಾರ್ಯ ನಿರ್ವಹಿಸಿದರು. ಶ್ರೀ ಅರವಿಂದರು ಕಲಕತ್ತೆ-ಯನ್ನೊಮ್ಮೆ ಬಿಟ್ಟಮೇಲೆ ಆ ಪತ್ರಿಕೆಗೆ ಒಂದು ಸಾಲು ಸಹ ಬರೆಯದಷ್ಟು ಪೂರ್ಣ ನಿರ್ಲಿಪ್ತರಾಗಿ ಉಳಿದರು.

ಚಂದ್ರನಗರದಲ್ಲಿ ಅವರು ಸುಮಾರು ಒಂದೂವರೆ ತಿಂಗಳು ಇದ್ದರು. ಆ ಕಾಲಕ್ಕೆ ಅವರು ಗುಪ್ತವಾಗಿ ಇರುವಂತೆ ಮತಿಲಾಲ ರಾಯರು ಏರ್ಪಾಟು ಮಾಡಿದ್ದರು. ಅಲ್ಲಿ ಶ್ರೀ ಅರವಿಂದರು ಗಭೀರ ಸಾಧನದಲ್ಲಿ ಮಗ್ನರಾಗಿದ್ದರು.

ಇಲ್ಲಿ ವಿಶೇಷವಾಗಿ ಲಕ್ಷಿಸತಕ್ಕ ಸಂಗತಿಯೆಂದರೆ, ಇಬ್ಬರು ಮೂವರನ್ನು ಮಾತ್ರ ಬಿಟ್ಟು ಉಳಿದವರಾರಿಗೂ,—ಸರಕಾರಕ್ಕೆ ಸಹ,—ಶ್ರೀ ಅರವಿಂದರು ಈ ದಿನಗಳಲ್ಲಿ ಎಲ್ಲಿದ್ದರು ಏನು ಮಾಡುತಿದ್ದರೆಂಬುದರ ಸುಳಿವೆ ಹತ್ತಿರಲಿಲ್ಲ. ಅವರು ಯಾರನ್ನೂ ಭೆಟ್ಟಿಯಾಗುತಿರಲಿಲ್ಲ. ಅವರಿಗೆ ಆಹಾರ ಒಯ್ದು ಕೊಡಲು ಮಾತ್ರ ಒಬ್ಬನೇ ಒಬ್ಬ ಆಳು ಇದ್ದನು. ಅವರು ಇಲ್ಲಿದ್ದಾಗಲೆ 'ಪ್ರವರ್ತಕ ಸಂಘ'ದ ಯೋಜನೆಯು ಸಿದ್ಧವಾಯ್ತು. ಆ ಸಂಘವು ಮುಂದೆ ೧೯೨೦ ರ ವರೆಗೆ ಶ್ರೀ ಅರವಿಂದರ ಸರ್ವಸಾಮಾನ್ಯ ಒಪ್ಪಿಗೆ-ಸಲಹೆಗಳ ಮೇರೆಗೆ ಮತಿಲಾಲರ ಪ್ರತ್ಯಕ್ಷ

ನೇತೃತ್ವದಲ್ಲಿ ನಡೆಯಿತು ; ಆದರೆ ಅದೇ ವರ್ಷ ತಾತ್ತ್ವಿಕ ಮತಭೇದವುಂಟಾಗಿ ಆ ಮುಂದೆ ಅದು ಪೂರ್ಣವಾಗಿ ಮತಿಲಾಲ ರಾಯರ ಧುರೀಣತ್ವದಲ್ಲಿಯೆ ಸಾಗಿತು.

ಮಾರ್ಚ ತಿಂಗಳ ಕೊನೆಗೆ, ಪಾಂಡಿಚೇರಿಗೆ ಹೋಗಬೇಕೆಂದು ಶ್ರೀ ಅರವಿಂದ-ರಿಗೆ ಒಳಗಿನ ಕರೆ ಬಂದಿತು. ಕೂಡಲೆ ಹೊರಡುವ ಎತ್ತುಗಡೆಯಾಯ್ತು. ಕಲಕತ್ತೆಯಿಂದ ಅವರು ಉಗಿಹಡಗ ಹತ್ತಬೇಕಾಗಿದ್ದ ಕಾರಣ, ಜ್ಯೋತೀಂದ್ರನಾಥ ಮಿತ್ರ ಎಂಬ ಹೆಸರಿಟ್ಟುಕೊಂಡು ಹಡಗ ಹತ್ತಿದರು. ದಾರಿಯಲ್ಲಿ ಅನೇಕ ಪ್ರಕಾರದ ತೊಂದರೆಗಳಾದವು. ಒಮ್ಮೆಯಂತೂ ಅವರನ್ನು ನಡುವೇ ತಡೆಹಿಡಿಯುತ್ತಾರೆಂಬ ಹಾಗೆ ತೋರಿತು. ಆದರೆ ಕೊನೆಗೊಮ್ಮೆ ಎಪ್ರಿಲ ತಿಂಗಳ ಪ್ರಾರಂಭಕ್ಕೆ ಪಾಂಡಿಚೇರಿಗೆ ಹೇಗೊ ತಲುಪಿದರು. ಈ ಸಮಯದುದ್ದಕ್ಕೂ ಅವರು ಸಂಪೂರ್ಣ ಉಪೇಕ್ಷಾ-ಭಾವವನ್ನೆ ತಳೆದಿದ್ದರು. ತಮ್ಮ ವಿಷಯಕ್ಕೆ ಯಾವದೆ ಬಗೆಯ ಚಿಂತೆಯಾಗಲಿ ಉದ್ವಿಗ್ನತೆಯಾಗಲಿ ಅವರಲ್ಲಿ ಎಳ್ಳಷ್ಟೂ ತೋರಿಬರಲಿಲ್ಲವೆಂದು ಅವರ ಸಂಗಡಿಗರಿಗೆ ಅನಿಸಿತ್ತು. ಅಂಥವರಲ್ಲೊಬ್ಬರಾದ ನಗೇನ ಗುಹಾರಾಯರೆಂಬವರು ಹೀಗೆ ಬರೆದಿದ್ದಾರೆ: 'ಅವರು ಒಳ್ಳೆ ಸ್ಥೈರ್ಯದಿಂದ ಹೊಯ್ದಾಟವಿಲ್ಲದೆ ಅಚಲರಾಗಿದ್ದರು. ಧ್ಯಾನಲೀನರೊ ಎನ್ನುವಂತೆ ಒಂದು ಶಿಲಾಪ್ರತಿಮೆಯ ಹಾಗೆ ಕುಳಿತಿರುತಿ-ದ್ದರು. ನಾನು ಅವರ ಬಗೆಗೆ ಈ ಮೊದಲು ಕೇಳಿದ್ದೇನೊ ನಿಜ. ಆದರೆ ಇಲ್ಲಿ ಅವರು ಚಿಂತೆಯ ಲವಲೇಶವೂ ಇಲ್ಲದೆ ತೀರ ನಿರುದ್ವಿಗ್ನರಾಗಿ ಇದ್ದುದನ್ನು ಕಂಡೆ. ಅವರು ನಿರ್ಭಯರಾಗಿದ್ದರು, ಸಂಪೂರ್ಣ ನಿರ್ಲಿಪ್ತರಾಗಿದ್ದರು.'

ಪಾಂಡಿಚೇರಿಯಲ್ಲಿ, ಸ್ವಯಂಪ್ರೇರಣೆಯಿಂದ ನಿರ್ವಾಸಿತರಾಗಿ ಬಂದ ಕೆಲವು ದಕ್ಷಿಣದ ಜನರಿದ್ದರು. ಅವರಲ್ಲಿ ಮುಖ್ಯರೆಂದರೆ, ತಮಿಳ ಕವಿ ಸುಬ್ರಹ್ಮಣ್ಯ ಭಾರತಿ, ಶ್ರೀನಿವಾಸಾಚಾರಿ, ಕೃಷ್ಣಮಾಚಾರಿ ಮೊದಲಾದವರು. 'ಇಂಡಿಯಾ' ಎಂಬ ಹೆಸರಿನ ಒಂದು ತಮಿಳ ಪತ್ರಿಕೆಯು ಅಲ್ಲಿಂದ ಪ್ರಕಟವಾಗುತಿತ್ತು. ಮತಿಲಾಲ ರಾಯರ ದೂತರಾಗಿ ಹೋಗಿದ್ದ ಒಬ್ಬರು ಶ್ರೀ ಅರವಿಂದರು ಪಾಂಡಿಚೇರಿಗೆ ಬರತಕ್ಕವರಿದ್ದಾರೆಂದು ಅಲ್ಲಿಯ ಆ ಜನಗಳಿಗೆ ತಿಳಿಸಿದಾಗ ಮೊದಮೊದಲು ಅವರಾರೂ ಈ ವ್ಯಕ್ತಿಯನ್ನು ನಂಬಲಿಲ್ಲ. ಇದು ಪೋಲೀಸರ ಸಂಚು ಇರಬಹುದೆಂದು ತಿಳಿದು ಅದಕ್ಕೆ ಅವರು ಅಷ್ಟು ಮಹತ್ವವನ್ನೆ ಕೊಡಲಿಲ್ಲ. ಕೊನೆಗೆ ಅತ್ಯವಸರದ ಉಪಾಯವೆಂದು, ಕೋಮಟಿ ಬೀದಿಯಲ್ಲಿದ್ದ ಶಂಕರಚೆಟ್ಟಿಯವರ ಮನೆಯನ್ನು ನೂತನ ಅತಿಥಿಗಳ ನಿವಾಸಕ್ಕಾಗಿ ಗೊತ್ತುಪಡಿಸಲಾಯ್ತು. ಭಾರತಿ ಮತ್ತು ಇನ್ನಿತರರು ೪ನೆಯ ಎಪ್ರಿಲ್ ೧೯೧೦ ಕ್ಕೆ ಅವರನ್ನು ಬಂದರದಲ್ಲಿ ಬರಮಾಡಿಕೊಂಡರು. ಶ್ರೀ ಅರವಿಂದರು ಆ ಮನೆಯಲ್ಲಿ ಅಕ್ಟೋಬರ ತಿಂಗಳ ವರೆಗೆ ಇದ್ದರು. ವಿವೇಕಾನಂದರು ಸಹ, ತಮ್ಮ ದಕ್ಷಿಣದ ಯಾತ್ರೆಯ ಕಾಲಕ್ಕೆ ಇದೇ ಮನೆಯಲ್ಲಿ ಇದೇ ಗೃಹಸ್ಥರ ಅತಿಥಿಗಳಾಗಿದ್ದರು.

ಅವರು ಪಾಂಡಿಚೇರಿಗೆ ಬಂದ ಸಂಗತಿಯನ್ನು ಸಹ ಮೊದಲಿನ ಹಾಗೆಯೆ ಒಳ್ಳೆ ಎಚ್ಚರಿಕೆಯಿಂದ ಗುಟ್ಟಾಗಿ ಇಡಲಾಗಿತ್ತು. ಮೊದಮೊದಲಿಗೆ, ಕವಿ ಭಾರತಿಯವರೂ ಇನ್ನುಳಿದವರೂ ತಾವು ಕೈಕೊಂಡ ರಾಜಕೀಯ ಕಾರ್ಯದಲ್ಲಿ ಕಾಲಿಕ್ಕಬೇಕೆಂಬುದಾಗಿ ಶ್ರೀ ಅರವಿಂದರನ್ನು ಬಿನ್ನವಿಸಿಕೊಂಡರು. ಆದರೆ ಅವರು ಆಗ ಸಂಪೂರ್ಣವಾಗಿ ಯೋಗದಲ್ಲಿ ತತ್ಪರರಾಗಿ ಬಿಟ್ಟಿದ್ದರಿಂದ ತಮ್ಮನ್ನು ಕ್ಷಮಿಸಿಬಿಡಬೇಕೆಂದು ಬೇಡಿಕೊಂಡರು. ಯಾವುದೇ ಅತಿ ಮಹತ್ವದ ಕಾರಣಕ್ಕಾಗಿಯಲ್ಲದೆ ಯಾರನ್ನೂ ಅವರು ಕಾಣಲು ಬಯಸುತ್ತಿದ್ದಿಲ್ಲ. ಅವರು ಉಪ್ಪರಿಗೆಯ ಮೊದಲನೆಯ ಅಂತಸ್ತಿನಲ್ಲಿ ಇರುತಿದ್ದು ದಿನಾಲು ಸ್ನಾನಕ್ಕೆ ಮಾತ್ರ ಒಮ್ಮೆ ಕೆಳಗಿಳಿದು ಬರುತಿದ್ದರು. ಅವರ ಬಳಿ ಆಗ ಮೂವರೇ ಜೊತೆಗಾರರು: ಮಣಿ, ಬಿಜಯ, ಸೌರೀಸ. ನಲಿನಿ ಬಾಬುಗಳು ಮರುವರ್ಷ ಅವರನ್ನು ಕೂಡಿಕೊಂಡರು; ಇವರೆಲ್ಲರು ಶ್ರೀ ಅರವಿಂದರಿಗಾಗಿ ಎಲ್ಲ ಕೆಲಸ ಮಾಡುತಿದ್ದರು.

ತುಲನಾತ್ಮಕ ದೃಷ್ಟಿಯಿಂದ ಹೇಳುವದಾದರೆ, ಅವರು ಕಷ್ಟದ ಜೀವನವನ್ನೆ ಸಾಗಿಸಿದ್ದರೆಂದು ಹೇಳಬೇಕು. ಶ್ರೀ ಅರವಿಂದರನ್ನು ಬಿಟ್ಟು ಉಳಿದವರು ನೆಲದ ಮೇಲೆಯೆ ಮಲಗುತಿದ್ದರು. ಅವರ ಸಂಗಡಿಗರಲ್ಲಿ ಒಬ್ಬರು ಅವರಿಗೆ ದಿನಕ್ಕೆರಡು ಸಲ, ಮುಂಜಾನೆ ಒಮ್ಮೆ ಬೈಗಿನಲ್ಲಿ ಒಮ್ಮೆ ಹೀಗೆ ಚಹಾ ಮಾಡಿ ಕೊಡುತಿದ್ದರು. ಅವರ ಯಜಮಾನ ಶಾಕಾಹಾರಿಯಾದುದರಿಂದ ಮಧ್ಯಾಹ್ನದಲ್ಲಿ ಅನ್ನ, ಪಲ್ಲೆ, ರಸಂ, ಸಾಂಬಾರ ಇವುಗಳಿಂದ ಕೂಡಿದ ಸಾದಾ ಊಟವೆ ದೊರೆಯುತಿತ್ತು. ಸಂಜೆಗೆ ಶ್ರೀ ಅರವಿಂದರು ಒಂದು ಬಟ್ಟಲು ಖೀರು ಅಥವಾ ಪಾಯಸ ತೆಗೆದುಕೊಳ್ಳು-ತಿದ್ದರು. ಆ ಮನೆತನದವರ ಧಾರ್ಮಿಕ ಭಾವನೆಗೆ ಭಂಗ ಬಾರದಂತೆ ಶ್ರೀ ಅರವಿಂದರ ಸಂಗಡಿಗರು ಕೆಲವು ಸಲ ಅವರಿಗೆ ತತ್ತಿಯ ಪದಾರ್ಥಗಳನ್ನು ಕೊಟ್ಟು ಹಬ್ಬದೂಟ ಮಾಡಿಸುತಿದ್ದರು.

ಅಕ್ಟೋಬರ ತಿಂಗಳಲ್ಲಿ ಶ್ರೀ ಅರವಿಂದರು ಪಟ್ಟಣದ ದಕ್ಷಿಣಕ್ಕಿರುವ ಶಂಕರ-ಚೆಟ್ಟಿಯವರ ಇನ್ನೊಂದು ಮನೆಗೆ ತಮ್ಮ ವಸತಿಯನ್ನು ಸ್ಥಳಾಂತರಿಸಿದರು. ಅಲ್ಲಿ ಅವರು, ಸುಮಾರು ಎಪ್ರಿಲ್ ೧೯೧೧ ರ ವರೆಗೆ ಬಾಡಿಗೆಯಿಂದ ಇದ್ದರು. ಅಲ್ಲಿ ಕೂಡ, ಅಡಿಗೆ ಮೊದಲಾದ ಕೆಲಸಗಳನ್ನು ಸರತಿಯಂತೆ ಮಾಡಿಕೊಳ್ಳುವ ಸ್ವಾವ-ಲಂಬನದ ಪರಿಪಾಠವನ್ನೆ ಮುಂದುವರಿಸಲಾಯ್ತು. ಈಗ ಅವರು ಅಲ್ಲಿ ಮೀನ ಮಾಂಸಗಳನ್ನು ಆಗಾಗ ಅಡ್ಡಿಯಿಲ್ಲದೆ ತೆಗೆದುಕೊಳ್ಳಬಹುದಾಗಿತ್ತು. ಅವರ ಬಳಿ ಒಂದು ಕ್ಯಾಂಪ್ ಕಾಟ್, ಎರಡು ಖುರ್ಚಿ, ಒಂದು ಮೇಜು ಇಷ್ಟು ಬಿಟ್ಟರೆ ಮನೆಯಲ್ಲಿರಬೇಕಾದ ಉಳಿದ ಉಪಕರಣ ಸೌಕರ್ಯಗಳು ವಿಶೇಷವಾಗಿರಲಿಲ್ಲ. 'ಆರ್ಯ' ಪತ್ರಿಕೆಯನ್ನು ೧೯೧೪ ರಲ್ಲಿ ಪ್ರಾರಂಭಿಸುವ ವರೆಗೆ ಒಬ್ಬ ಆಳನ್ನು ಕೂಡ ಅವರಿಗೆ ಇಟ್ಟುಕೊಳ್ಳಲಿಕ್ಕೆ ಶಕ್ಯವಾಗಿರಲಿಲ್ಲ.

ಆ ವರ್ಷ, ಫ್ರಾನ್ಸ್ ದೇಶದ ಪಾಲ ರಿಚರ್ಡರು ‘ ಚೇಂಬರ ಆಫ್ ಡೆಪ್ಯುಟೀಜ್ ’ ದ ತಮ್ಮ ಆಯ್ಕೆಯ ಸಂದರ್ಭದಲ್ಲಿ ಮೊದಲ ಸಲ ಪಾಂಡಿಚೇರಿಗೆ ಭೆಟ್ಟಿ ಕೊಟ್ಟರು. ಆ ವಿಷಯದಲ್ಲಿ ಅವರಿಗೆ ಯಶ ಸಿಕ್ಕಲಿಲ್ಲ. ಅವರು ಶ್ರೀ ಅರವಿಂದರನ್ನು ಕಾಣಲು ಉತ್ಸುಕರಾಗಿದ್ದರು; ಅವರೊಡನೆ ಎರಡು ದಿವಸ ಹಲವು ತಾಸು ಕಳೆದರು. ಈ ಭೆಟ್ಟಿಯ ಪ್ರಥಮ ಪರಿಣಾಮದ ಬಗೆಗೆ ಅವರನ್ನು ಕೇಳಿದಾಗ, ಶ್ರೀ ಅರವಿಂದರು ತಮ್ಮ ಸ್ವಂತ ಅಣ್ಣನಂತೆ ತಮಗೆ ಅನಿಸಿತೆಂದೂ ಇವರೊಬ್ಬರು ವಿಪುಲ ಬುದ್ಧಿಶಾಲಿ ಗಳೆಂದು ತಮಗೆ ತೋರಿತೆಂದೂ ಉತ್ತರವಿತ್ತರು. ಅವರು ೧೯೧೪ ರಲ್ಲಿ ಬರೆದ ‘ ಏಶಿಯದ ಅರುಣೋದಯ (Dawn of Asia) ’ ವೆಂಬ ಪುಸ್ತಕದಲ್ಲಿ ಶ್ರೀ ಅರವಿಂದರು ಏಶಿಯದ ಭಾವೀ ನೇತಾರರೆಂದು ಹೇಳಿ ಅವರನ್ನು ಗೌರವಯುಕ್ತ ವಾಗಿ ಸ್ವಾಗತಿಸಿದ್ದಾರೆ.

ಆಕರ್ಷಕವಾದ ಇನ್ನೊಂದು ಸಂಗತಿಯೆಂದರೆ, ಚಿಕ್ಕ ವಯಸ್ಸಿನಿಂದಲೆ ಸಾಧಿಕೆಯಾಗಿದ್ದ ಮಿರಾ ರಿಚರ್ಡರು ಯೋಗಕ್ಕೆ ಸಂಬಂಧಿಸಿದ ಕೆಲವು ಪ್ರಶ್ನೆಗಳನ್ನು ಪಾಲರ ಮುಖಾಂತರ ಕೇಳಿದ್ದರು. ಅವುಗಳಲ್ಲಿ ಒಂದು, ದೃಷ್ಟಾಂತರೂಪದಲ್ಲಿ ಕಾಣುವ ಕಮಲದ ಗರ್ಭಿತಾರ್ಥವೇನೆಂಬುದಾಗಿತ್ತು. ಅದು, ಅಂತಸ್ಫೋತನವು ಜಾಗ್ರತವಾದುದರ ಕುರುಹೆಂದೂ ಮನಸ್ಸು ಸೂಕ್ಷ್ಮತರ ಸ್ತರದಲ್ಲಿ ಇದ್ದಾಗಲೆ ಅದು ನಾಡಿಕೆಯಾಗಿ ಕಾಣುವುದುಂಟೆಂದೂ ಶ್ರೀ ಅರವಿಂದರು ಪಾಲರಿಗೆ ತಿಳಿಸಿದರು.

ಮಿರಾ ರಿಚರ್ಡರು ೧೯೧೪ ರ ಮಾರ್ಚ ೨೯ ಕ್ಕೆ ಮೊದಲ ಸಲ ಶ್ರೀ ಅರವಿಂದ ರನ್ನು ಸಂದರ್ಶಿಸಿದರೆಂಬುದನ್ನು ಇಲ್ಲಿ ಉಲ್ಲೇಖಿಸುವದು ಅಗತ್ಯವಿದೆ. ಮರುದಿನದ ತಮ್ಮ ದಿನಚರಿಯಲ್ಲಿ ಅವರು ಹೀಗೆ ಕಾಣಿಸಿದ್ದಾರೆ: ‘ ನಿನ್ನೆ ನಾವು ಯಾರನ್ನು ಕಂಡೆವೊ ಅವರು ಪೃಥ್ವಿಯ ಮೇಲೆ ಜೀವಿಸಿದ್ದಾರೆ; ಅವರ ದರ್ಶನಮಾತ್ರದಿಂದ ಒಂದು ಮಾತು ಅನುಭವಕ್ಕೆ ಬಂತು: ಅದೇನೆಂದರೆ, ಒಂದಾನೊಂದು ದಿನ ಕತ್ತಲೆಯು ಬೆಳಕಾಗಿ ಪರಿವರ್ತಿತವಾಗುವುದೆಂಬುದಕ್ಕೆ ಅವರ ಸಂನಿಧಾನವೆ ಸಾಕಷ್ಟು ಪ್ರಮಾಣವಾಗಿದೆ. ಆ ದಿನ, ಪ್ರಭುವೇ, ನಿನ್ನ ಆಳಿಕೆಯು ಪೃಥ್ವಿಯ ಮೇಲೆ ನಿರಂತರವಾಗಿ ನೆಲೆಗೊಳ್ಳುವದು. ’

ತ್ರಿಚನಾಪಲ್ಲಿಯ ಹತ್ತಿರಿರುವ ಕೊಡಿಯಾರಾಮದ ಜಮೀನುದಾರರಾದ ಕೆ. ವ್ಹಿ. ರಂಗಸ್ವಾಮಿಯವರು ಅದೇ ವರ್ಷ ಸಂದರ್ಶನ ಪಡೆದುಕೊಂಡುದು ಮತ್ತೊಂದು ಮಹತ್ವದ ಘಟನೆಯೆಂದು ಹೇಳಬಹುದು. ಅವರು ಶ್ರೀ ಅರವಿಂದ ರನ್ನು ಹುಡುಕುತ್ತ ಬಂದರು; ಏಕೆಂದರೆ, ಅವರ ಕುಟುಂಬಗುರುವಾದ ಯೋಗಿ ನಾಗಾಯಿ ಜಪತಾ ಎಂಬವರು ಉತ್ತರದ ಮಹಾಯೋಗಿಯೊಬ್ಬರು ಬರುವರೆಂದೂ ಆಧ್ಯಾತ್ಮಿಕ ಸಲಹೆಯನ್ನು ಅವರಿಂದ ಪಡೆಯಬೇಕೆಂದೂ ಉಪದೇಶಪರ ಭವಿಷ್ಯ ಹೇಳಿದ್ದರು. ಆ ಗುರುವಿನ ಮಹಾಸಮಾಧಿಯ ಮುನ್ನ ಅವರ ಬಳಿ ಸಾರಿ



ವಿದ್ಯಾರ್ಥಿ ಅರವಿಂದ



ಕಲಕತ್ತೆಯಲ್ಲಿ ಶ್ರೀ ಅರವಿಂದರು



ಧ್ಯಾನಮಗ್ನರಿದ್ದಾಗ



ಪಕ್ವತೆಯ ಮಧುರತೆ

ಉತ್ತರದ ಆ ಮಹಾಯೋಗಿಗಳನ್ನು ಗುರುತಿಸುವ ಬಗೆ ಹೇಗೆಂದು ಕೇಳಲು, ಆ ಯೋಗಿವರರು ಕೆಲವೊಂದು ತೊಂದರೆಗಳ ಮೂಲಕ ಇಲ್ಲಿಗೆ ಬರುವರೆಂದೂ ಅವರ ವಿಷಯಕ್ಕೆ ಮೂರು ಪ್ರಕಾರದ ವೈಶಿಷ್ಟ್ಯಗಳು ಜನಜನಿತವಾಗಿರುವವೆಂದೂ ಅವರು ಸೂಚಿಸಿದ್ದರು. ಈ ವರ್ಣನೆಯು ಶ್ರೀ ಅರವಿಂದರಿಗೆ ಸರಿಯಾಗಿ ಅನ್ವಯಿಸಿತು. ಅಗಸ್ಟ (೧೯೦೫) ತಿಂಗಳಲ್ಲಿ ಮೃಣಾಲಿನಿಯವರಿಗೆ ಬರೆದ ಪತ್ರದಲ್ಲಿ ಶ್ರೀ ಅರವಿಂದರೆ ತಮ್ಮ ಆ ಮೂರು ವೈಶಿಷ್ಟ್ಯಗಳನ್ನು ಸ್ವತಃ ಉಲ್ಲೇಖಿಸಿದ್ದರು; ಹಾಗೂ ಆ ಪತ್ರವು ಅಷ್ಟರಲ್ಲಿ ಪ್ರಕಟಿತವೂ ಆಗಿತ್ತು. ಆ ಜಮೀನುದಾರರು ಶ್ರೀ ಅರವಿಂದರನ್ನು ಆಗೀಗ ಕಾಣುತಲೆ ಇದ್ದರು. ಅವರು ಶ್ರೀ ಅರವಿಂದರಿಗೆ ಆರ್ಥಿಕ ಸಹಾಯವನ್ನೂ ಒದಗಿಸುತಿದ್ದರೆಂದು ತಿಳಿದಿದೆ. ಪರಸ್ಪರರ ಈ ಸಂಬಂಧದ ಫಲವಾಗಿ, ಸ್ವಯಂಚಾಲಿತ ಯಾವುದೊ ಒಂದು ಶಕ್ತಿಯು ಪ್ಲಾಂಚೆಟ್ಟಿನಲ್ಲಿ ಆವಾಹಿತವಾದಾಗ ಬರೆಯಲಾದ 'ಯೌಗಿಕ ಸಾಧನ' ಎಂಬ ಪುಸ್ತಕವು ರಂಗಸ್ವಾಮಿಯವರ ಸ್ವಂತ ವೆಚ್ಚದಿಂದ ಪ್ರಕಟಿಸಲ್ಪಟ್ಟಿತು. ಅದರಲ್ಲಿದ್ದ ಲೇಖಕರ ಮಾತುಗಳಿಗೆ 'ಉತ್ತರಯೋಗಿ' ಎಂದು ಅಂಕಿತ ಹಾಕಲಾಗಿದೆ. ಆ ಮಾತುಗಳನ್ನು ಶ್ರೀ ಅರವಿಂದರು ಸ್ವತಃ ಕೈಯಿಂದ ಬರೆದಿರುವರಾದರೂ ಆ ಪುಸ್ತಕವನ್ನು ಬರೆದವರು ಅವರೆ ಅಲ್ಲವಾದ್ದರಿಂದ ಅದರ ಪ್ರಕಟಣೆಯು ೧೯೨೭ ರ ನಂತರ ನಿಲ್ಲಿಸಲ್ಪಟ್ಟಿತು.

'ಆರ್ಯ' ಪತ್ರಿಕೆಯು ೧೫-೮-೧೯೧೪ಕ್ಕೆ ಪ್ರಕಟವಾಗುವ ವರೆಗೆ, ಹೇಳಿಕೊಳ್ಳತಕ್ಕ ಅಂತಹದಾವ ಘಟನೆಯೂ ನಡೆಯಲಿಲ್ಲ. ಆದರೆ ಕೆಲವೊಂದು ಸಂಗತಿಗಳು ಗಮನಾರ್ಹವಾಗಿವೆ. ಅವರು ತಮ್ಮ ಸಾಧನವನ್ನು ಮುಂದುವರಿಸಿದರು. ಆ ಕಾಲಕ್ಕೆ ಸಹಸಾ ಮನೆಬಿಟ್ಟು ಹೊರಬೀಳುತಿರಲಿಲ್ಲ. ಶ್ರೀನಿವಾಸಾಚಾರಿಯವರ ಮಗಳ ಮದುವೆಯ ಸಂದರ್ಭದಲ್ಲಿ ಮಾತ್ರ ಅವರ ಮನೆಗೆ ಹೋಗಿದ್ದುದೊಂದು ಮಹತ್ವದ ಘಟನೆಯೆ ಸರಿ.

ಎಂದಿನಂತೆ ಆರ್ಥಿಕ ಅನನುಕೂಲತೆಗಳು ಇದ್ದೇ ಇದ್ದವು. ಅವರು ಮನೆಗಳನ್ನು ಮೇಲಿಂದ ಮೇಲೆ ಬದಲಿಸಬೇಕಾಯಿತು. 'ಆರ್ಯ'ವನ್ನು ಪ್ರಾರಂಭಿಸಿದ ನಂತರವೆ ೧೯೧೪ ರಿಂದ ೧೯೨೨ರ ವರೆಗೆ ಇದ್ದ ಒಂದು ಮನೆಯಲ್ಲಿಯೆ ಅವರು ಇದ್ದುದು. ಪುಸ್ತಕಗಳಿಗಾಗಿ ತಿಂಗಳಿಗೆ ಹತ್ತುರೂಪಾಯಿ ಮಾತ್ರ ಹಾಗೂ ಹೀಗೂ ಅವರು ಉಳಿಸಿಕೊಳ್ಳುತಿದ್ದರು. ಎಷ್ಟೊ ದಿನ ಅವರು ಮೀನ ಅಥವಾ ಮಾಂಸ ಇಲ್ಲದೆ ಇರಬೇಕಾಗುತಿತ್ತು. ಅವರ ಪುಸ್ತಕಗಳ ಪ್ರಕಟನೆಯನ್ನು 'ಪ್ರವರ್ತಕಸಂಘ'ವು ವಹಿಸಿಕೊಂಡಿತ್ತು. ಆದರೆ ಮೊದಮೊದಲಿಗೆ ಮಾರಾಟವು ಅಷ್ಟೊಂದು ಇರಲಿಲ್ಲ.

ಆ ಕಾಲಕ್ಕೆ ಘಟಿಸಿದ ಎರಡು ಘಟನೆಗಳಿಂದ ಒಂದು ಸಂಗತಿಯು ಸ್ಪಷ್ಟವಾಗಿ ತಿಳಿಯುತ್ತದೆ. ಅದೆಂದರೆ, ಬ್ರಿಟಿಶ್ ಸರಕಾರದ ಪೋಲೀಸರಿಗೆ ಇನ್ನೂ ಶ್ರೀ ಅರವಿಂದರ ರಕ್ತಪಿಪಾಸೆ ಇತ್ತೆಂಬುದು. ಆ ಎರಡು ಘಟನೆಗಳಲ್ಲಿ ಒಂದನೆಯದೆಂದರೆ

ಅವರಿದ್ದ ಮನೆಯ ಶೋಧನೆ ನಡೆದುದು. ಕೆಣಕುಗಾರನಾದ ಓರ್ವ ಅಧಿಕ ಪ್ರಸಂಗಿಯು ಸುಳ್ಳುಸುಳ್ಳಾಗಿ ಪೋಲೀಸರಿಗೆ ಬರೆದು, ಶ್ರೀನಿವಾಸಾಚಾರಿ, ವ್ಹಿ. ವ್ಹಿ. ಎಸ್. ಅಯ್ಯರ ಹಾಗೂ ಇನ್ನುಳಿದವರಿಂದ ಕ್ರಾಂತಿಕಾರಕ ವಾಙ್ಮಯವು ಸಿದ್ಧಪಡಿಸಲಾಗುತಿದೆಯೆಂದೂ ಸಂಗ್ರಹಿಸಿ ಇಡಲಾಗುತಿದೆಯೆಂದೂ ತಿಳಿಸಿದ್ದನು. ವಿದೇಶದಲ್ಲಿ ವಾಸವಾಗಿದ್ದ ಶ್ಯಾಮಜಿ ಕೃಷ್ಣ ವರ್ಮ ಮತ್ತು ಮ್ಯಾಡಮ್ ಕಾಮಾ ಈ ಮೊದಲಾದ ಸ್ವದೇಶತ್ಯಾಗಿಗಳ ಹಾಗೂ ಕ್ರಾಂತಿಕಾರಕರ ಕೂಡ ಇಲ್ಲಿಯ ಸಂಪರ್ಕ ವುಂಟೆಂದೂ ಸಂಶಯ ತೆಗೆದುಕೊಳ್ಳಲಾಗಿತ್ತು. ಓರ್ವ ಫ್ರೆಂಚ್ ಪೋಲೀಸ ಅಧಿಕಾರಿಯು ಶ್ರೀ ಅರವಿಂದರಿದ್ದ ಮನೆಯನ್ನು ಶೋಧಿಸಿದನು. ತಪ್ಪು ಹೊರಿಸಬರು-ವಂತಹದಾವುದೂ ಅವನಿಗೆ ಅಲ್ಲಿ ದೊರಕಲಿಲ್ಲ. ಶ್ರೀ ಅರವಿಂದರಿಂದ ಬರೆಯಲ್ಪಟ್ಟ ಗ್ರೀಕ ಲ್ಯಾಟಿನ್ ಭಾಷೆಗಳ ಕೈಬರೆಹದ ಪ್ರತಿಗಳನ್ನು ಕಂಡು ಅವನು ಅಚ್ಚರಿಗೊಂಡನು. ಇದರಿಂದ ಅವನಲ್ಲಿ ಶ್ರೀ ಅರವಿಂದರ ಬಗೆಗೆ ಒಂದು ಬಗೆಯ ಮೆಚ್ಚಿಗೆಯ ಭಾವವು ಮೂಡಿ ಅವನು ಇವರ ಮಿತ್ರನೆ ಆದನು.

ಶ್ರೀ ಅರವಿಂದರ ವಿರುದ್ಧವಾಗಿ ಏನಾದರೂ ಪುರಾವೆ ಹುಡುಕಿ ತೆಗೆಯಲೆಂದು ಮಾಡಲಾದ ಇನ್ನೊಂದು ಪ್ರಯತ್ನವೆಂದರೆ, ಬ್ರಿಟಿಶ್ ಸರಕಾರವು ಬೀರೇಂದ್ರ ರಾಯ ಎಂಬ ಹೆಸರಿನ ತನ್ನೊಬ್ಬ ಗುಪ್ತಚಾರನನ್ನು ಅವರ ಹತ್ತರ ಇಟ್ಟುದು. ಈ ಕಾಲಕ್ಕೆ ಶ್ರೀ ಅರವಿಂದರ ಸಹಾಯವನ್ನು ಬಯಸಿ ಅವರ ಬಳಿಗೆ ಓರ್ವ ಕ್ಷಯರೋಗಿಯು ಬಂದಿದ್ದನು ; ಆತನಿಗೆ ಅವಶ್ಯವಿದ್ದ ಉಪಚಾರದ ಆಳಾಗಿ ತಾನು ದುಡಿಯುವೆನೆಂದು ಹೇಳಿ ಈ ಗುಪ್ತಚಾರನು ಅವರ ಮನೆಯಲ್ಲಿ ಪ್ರವೇಶ ಪಡೆದನು. ಕೆಲವು ತಿಂಗಳು ಇದ್ದಮೇಲೆ, ಅವನು ತಾನಾಗಿ ಶ್ರೀ ಅರವಿಂದರ ಬಳಿಗೆ ಹೃದಯ ಬಿಚ್ಚಿ ಮಾತನಾಡಿ ಇದ್ದ ಸಂಗತಿಯನೆಲ್ಲ ಒಪ್ಪಿಕೊಂಡನು. ಅವರ ವಿರುದ್ಧವೆ ಆಗಲಿ ಅವರ ಗುಂಪಿನ ಇನ್ನಾರ ವಿರುದ್ಧವೆ ಆಗಲಿ ತಾನು ಯಾವ ವರದಿಯನ್ನೂ ಮಾಡಿರುವದಿಲ್ಲವೆಂಬುದಾಗಿ ಅವನು ಆಣೆಯಿಟ್ಟು ಸಾರಿದನು ; ಆ ಬಳಿಕ ಅವನು ಅಲ್ಲಿಂದ ಓಡಿಹೋಗಿಬಿಟ್ಟನು.

ಮಿರಾ ಮತ್ತು ಪಾಲ್ ರಿಚರ್ಡ ಇವರಿಬ್ಬರೂ ೧೯೧೪ರಲ್ಲಿಯೆ ಪಾಂಡಿಚೇರಿಗೆ ಬಂದು ಬಹು ದೀರ್ಘಕಾಲದ ವರೆಗೆ ಅಲ್ಲಿಯೆ ವಾಸವಾಗಿದ್ದ ಕಾರಣ ಆ ವರ್ಷವು ಬಹಳ ಮಹತ್ವದ್ದಾಗಿದೆ. ಆ ಕಾಲಕ್ಕೆ ಶ್ರೀ ಅರವಿಂದರೊಡನೆ ಇವರ ಸ್ನೇಹ-ವಾದರೂ ಗಾಢವಾಗಿ ನಡೆಯಿತು. ಮಿರಾ ಇವರು ಮಾರ್ಚ ೨೯ಕ್ಕೆ ಶ್ರೀ ಅರವಿಂದ-ರೊಡನೆ ದೀರ್ಘ ಮಾತುಕತೆ ನಡೆಸಿದರು. ಪಾಲರು, ವಿಮರ್ಶಾತ್ಮಕವಾದ ಒಂದು ಆಧ್ಯಾತ್ಮಿಕ ಮಾಸಪತ್ರಿಕೆಯನ್ನು ಪ್ರಾರಂಭಿಸಬೇಕೆಂಬ ವಿಚಾರವನ್ನು ಮುಂದಿಟ್ಟರು. ಅದರ ಫಲವಾಗಿ ೧೫-೮-೧೯೧೪ ರಿಂದ 'ಆರ್ಯ' ಪತ್ರಿಕೆ ಪ್ರಾರಂಭವಾಯ್ತು. ಇದರ ವೆಚ್ಚದ ಹೊಣೆಯನ್ನು ಪ್ರಾರಂಭದಲ್ಲಿ ತಾವು ಹೊರುವುದಾಗಿ ರಿಚರ್ಡ

ದಂಪತಿಗಳು ಒಪ್ಪಿಕೊಂಡರು. ಎರಡುನೂರು ಚಂದಾದಾರರಿಂದ ಈ ಪತ್ರಿಕೆಯು ಪ್ರಾರಂಭವಾಗಿ ಬರಬರುತ್ತ ತನ್ನ ಕಾಲಮೇಲೆ ತಾನು ನಿಲ್ಲುವಂತಾಯ್ತು.

ಆ ವರ್ಷ, ಶ್ರೀ ಮಿರಾ-ತಾಯಿಯವರು ಇಳಿಹೊತ್ತಿನ ಚಹಾದ ವೇಳೆಗೆ ಶ್ರೀ ಅರವಿಂದರ ಬಳಿಗೆ ಹೋಗುವ ವಾಡಿಕೆಯಿತ್ತು; ಹೋಗುವಾಗ ಒಮ್ಮೊಮ್ಮೆ ಅವರಿಗಾಗಿ ಕೊಬ್ಬರಿಯ ಮಿಠಾಯಿಯನ್ನು ಒಯ್ಯುತಿದ್ದರು. ತಾಯಿ ಅವರಿಗಾಗಿ ಆಗ ಕೋಕೋ ಸಿದ್ಧಪಡಿಸುತಿದ್ದರು; ಹಾಗೂ ಪಾಲರು ಆ ಕಾಲಕ್ಕೆ ಅಲ್ಲಿದ್ದ ಎಲ್ಲರ ಜೊತೆಗೆ ತಾವೂ ಉಪಹಾರ ಮಾಡುತಿದ್ದರು. ಪ್ರತಿ ರವಿವಾರವೂ ವಾಡಿಕೆ-ಯಾಗಿ ಶ್ರೀ ಅರವಿಂದರೂ ಅವರ ಜೊತೆಗಾರರೂ ರಿಚರ್ಡ ದಂಪತಿಗಳೊಡನೆಯೆ ಊಟ ಮಾಡುತಿದ್ದರು.

ಆ ವರ್ಷವೆ, 'ಸಾಗರ ಸಂಗೀತ' ಎಂಬ ಹೆಸರಿನ ಚಿತ್ತರಂಜನ ದಾಸರ ಬಂಗಾಲಿ ಹಾಡುಗಳನ್ನು ಶ್ರೀ ಅರವಿಂದರು ಇಂಗ್ಲಿಷಿಗೆ ಭಾಷಾಂತರಿಸಿದರು. ಅದಕ್ಕಾಗಿ ಚಿತ್ತರಂಜನರು ಅಯಾಚಿತವಾಗಿಯೆ ಇವರಿಗೆ ಒಂದು ಸಾವಿರ ರೂಪಾಯಿ ಕಳಿಸಿಕೊಟ್ಟರು.

ಶ್ರೀ ಅರವಿಂದರು ಮುಂಜಾನೆ ಸುಮಾರು ೯ ಗಂಟೆಗೆ ವೃತ್ತಪತ್ರಿಕೆಗಳನ್ನು ಓದುತಿದ್ದು ೧೦ ರಿಂದ ೧೧ ರ ವರೆಗೆ ಸಂದರ್ಶಕರನ್ನು ಕಾಣುತಿದ್ದರು. ಮಧ್ಯಾಹ್ನ ೧೨-೧೨॥ ಗಂಟೆಗೆ ಊಟವಾಗುತಿತ್ತು. ಸಾಮಾನ್ಯತಃ ಸಂಜೆಯ ಹೊತ್ತಿಗೆ ಕವಿ ಭಾರತಿ, ಶ್ರೀನಿವಾಸಾಚಾರಿ ಮತ್ತು ಇನ್ನಿತರರು ಶ್ರೀ ಅರವಿಂದರ ಬಳಿಗೆ ಮಾತು-ಕತೆಗೆಂದು ಬರುವ ಪರಿಪಾಠವಿತ್ತು. ಇದೆಲ್ಲದರ ಅರ್ಥವೆಂದರೆ ಶ್ರೀ ಅರವಿಂದರು ಈ ಮೊದಲಿನ ವರ್ಷಗಳಲ್ಲಿ ಕೈಕೊಂಡ ಕಠಿಣ ಏಕಾಂತವಾಸವು ಸಡಿಲಾಗಿತ್ತು. ಕೆಲವೊಂದು ಮಹತ್ವದ ಪ್ರಸಂಗಗಳಲ್ಲಿ ಅವರು ಹೊರಬಿದ್ದು ತಮ್ಮ ಮಿತ್ರರ ಮನೆಗಳಿಗೂ ಪಟ್ಟಣದ ಮೇಯರರೆ ಮೊದಲಾದ ಪ್ರಮುಖ ಫ್ರೆಂಚ ಗೃಹಸ್ಥರ ಮನೆಗಳಿಗೂ ಹೋಗಿಬರುತಿದ್ದರು. 'ಆರ್ಯನ್ ಸ್ಟೋರ್ಸ' ಎಂಬ ಭಾಂಡಾರದ ಪ್ರಾರಂಭೋತ್ಸವವು ಇವರ ಹಸ್ತದಿಂದಲೆ ಜರುಗಿತು; ಈ ಭಾಂಡಾರಕ್ಕಾಗಿ ರಿಚರ್ಡ ದಂಪತಿಗಳೆ ಹಣವನ್ನು ಒದಗಿಸುತಿದ್ದರು.

ಅವರ ಆರ್ಥಿಕ ಪರಿಸ್ಥಿತಿಯು ೧೯೧೪ ರಿಂದ ತುಸು ಸುಧಾರಿಸಿತ್ತಾದರೂ ಹೆಚ್ಚಿನ ಸುಖ ಸೌಕರ್ಯಗಳು ಸಿಕ್ಕಿದ್ದವೆಂದು ಹೇಳಲು ಬರುವಂತಿಲ್ಲ. ಸುಮಾರು ಆರುವರ್ಷ, ಪ್ರತ್ಯೇಕ ಬಚ್ಚಲವೆ ಇಲ್ಲದ ಒಂದು ಮನೆಯಲ್ಲಿ ವಾಸವಾಗಿದ್ದರು; ಅಲ್ಲಿ ಎಲ್ಲರೂ ನಳದ ಬುಡದಲ್ಲಿಯೆ ಕುಳಿತು ಸ್ನಾನಮಾಡುತಿದ್ದರು.

೧೯೨೦ ನೆಯ ವರ್ಷವು ಕೂಡ ಹಲವೊಂದು ಘಟನೆಗಳ ಮೂಲಕ ಬಹಳ ಮಹತ್ವದ್ದಾಗಿದೆ. ಏಕೆಂದರೆ, ಈ ವರ್ಷವೆ ಬಂಧು ಬಾರೀಂದ್ರರ ಬಿಡುಗಡೆಯಾಯ್ತು, ರಿಚರ್ಡ ದಂಪತಿಗಳು ಪಾಂಡಿಚೇರಿಗೆ ಮರಳಿ ಬಂದರು; ಹಾಗೂ

ಜೋಸೆಫ್ ಬ್ಯಾಪ್ಟಿಸ್ಟಾರವರು ಶ್ರೀ ಅರವಿಂದರಿಗೆ ಹೊಸದೊಂದು ರಾಷ್ಟ್ರೀಯ ಪತ್ರಿಕೆಯ ಸಂಪಾದಕತ್ವವನ್ನು ಅರ್ಪಿಸಬಯಸಿದರು. ಬಾರೀಂದ್ರರ ಮತ್ತು ಬ್ಯಾಪ್ಟಿಸ್ಟಾರವರ ಪತ್ರಗಳಿಗೆ ಶ್ರೀ ಅರವಿಂದರು ಕೊಟ್ಟ ಪ್ರಖ್ಯಾತ ಉತ್ತರಗಳು ಅವರ ನೆಲೆ-ನಿಲುವುಗಳನ್ನು ಒಳ್ಳೆ ಸ್ಪಷ್ಟವಾಗಿ ತಿಳಿಪಡಿಸಿದವು. ತಾಯಿಯವರ ಆಗಮನವು, ಮನೆವಾಳ್ತೆಯ ವ್ಯವಸ್ಥೆಯ ವಿಷಯದಲ್ಲಿ ಅದ್ಯಂತ ಮಾರ್ಪಾಟನ್ನು ಉಂಟುಮಾಡಿತು. ಅವರು ೧೯೨೦ರ ಎಪ್ರಿಲ್ ೨೪ಕ್ಕೆ ಮರಳಿ ಬಂದರು; ಹಾಗೂ ಅದೇ ಜೂನ ತಿಂಗಳಿಂದ ಭಾರತೀಯ ಪದ್ಧತಿಯಂತೆ ಸೀರೆಯನ್ನು ಉಡತೊಡಗಿದರು.

ಸರ್ವಸಾಮಾನ್ಯವಾಗಿ ಹೇಳಬಹುದಾದ ಒಂದು ಸಂಗತಿಯೆಂದರೆ, ಪಾಂಡಿ-ಚೇರಿಯಲ್ಲಿಯ ಶ್ರೀ ಅರವಿಂದರ ನಿವಾಸದ ಸ್ಥಿತಿಗತಿಯು ತಾಯಿಯವರ ಆಗಮನದ ತರುವಾಯ ಉಜ್ವಲಗೊಂಡಿತು. ಆಹಾರಯೋಜನೆಯು ಸುಧಾರಿಸಿತು. ಮೇಲಂತಸ್ತಿನಲ್ಲಿಯೆ ಶ್ರೀ ಅರವಿಂದರಿಗಾಗಿ ಬಚ್ಚಲವನ್ನು ಒದಗಿಸಿ ಕೊಡಲಾಯ್ತು. ೧೯೨೬ರ ವರೆಗೆ 'ಆಶ್ರಮ' ಎಂಬುವಂತಹದೇನೂ ಇರಲಿಲ್ಲ ನಿಜ; ಆದರೆ ಪ್ರೇಕ್ಷಕರ ಸಂಖ್ಯೆಯೂ ಇನ್ನಿತರ ಚಟುವಟಿಕೆಗಳೂ ಹೆಚ್ಚುತ್ತ ಸಾಗಿದ್ದವು.

ಬಾರೀಂದ್ರರು ಶ್ರೀ ಅರವಿಂದರನ್ನು ೧೯೨೧ ರಲ್ಲಿ ಕಾಣಬಂದರು. ಆಗ, ಕಲಕತ್ತೆಯ ಭವಾನೀಪುರದಲ್ಲಿ ಒಂದು ಕೇಂದ್ರವನ್ನು ಆರಂಭಿಸಬೇಕೆಂದು ಗೊತ್ತಾಯಿತು; ಆದರೆ ದುರ್ದೈವದಿಂದ ಅದು ಬಹಳ ದಿವಸ ನಡೆಯಲಿಲ್ಲ. ಶಾಂತಿನಿಕೇ-ತನದ ವಿಲಿಯಮ್ ಪಿಯರ್ಸನ್, ಜೇಮ್ಸ ಕಝಿನ್ಸ, ಸರಲಾ ಚೌಧುರಾಣಿ, ಡಾ. ಮುಂಜೆ, 'ಬಂದೇ ಮಾತರಂ' ಕಾಲದ ಅವಿನಾಶ ಭಟ್ಟಾಚಾರ್ಯ, ಬ್ರಿಟಿಶ್ ಪಾರ್ಲಿಮೆಂಟಿನ ಕರ್ನಲ್ ಜೆ. ವೆಜವುಡ್ ಇವರೆ ಮೊದಲಾದ ಅನೇಕ ಪ್ರಮುಖ ವ್ಯಕ್ತಿಗಳು ೧೯೨೦-೨೧ ರಲ್ಲಿ ಶ್ರೀ ಅರವಿಂದರನ್ನು ಕಾಣಲು ಬಂದಿದ್ದರು. ಅವರ ಸಹೋದರಿ ಸರೋಜಿನಿಯವರೂ ೧೯೨೧ ರಲ್ಲಿ ಅವರ ಬಳಿಗೆ ಬಂದರು; ಅವರಿಗೆ ಆರ್ಥಿಕ ಸಹಾಯವೆಂದು 'ಯುದ್ಧವೂ ಸ್ವಯಂನಿರ್ಣಯಾಧಿಕಾರವೂ (War & Self-determination)' ಎಂಬ ತಮ್ಮ ಪುಸ್ತಕದ ಪ್ರಕಟನಾಧಿಕಾರವನ್ನು ಅವರಿಗೆ ಬಿಟ್ಟುಕೊಟ್ಟರು. ಇದೇ ಕಾಲಕ್ಕೆ ಕೆಲವು ಜನ ಸಾಧಕರು ಸಹ ಬರತೊಡಗಿ ಪ್ರತ್ಯೇಕ ಮನೆಗಳಲ್ಲಿ ಇರತೊಡಗಿದರು.

ಆಗಿನ ಕಾಲದಲ್ಲಿ ಶ್ರೀ ಅರವಿಂದರ ನಿತ್ಯಕ್ರಮವು ಈ ಪ್ರಕಾರ ಇತ್ತೆಂದು ಹೇಳಬಹುದು: ಬೆಳಿಗ್ಗೆ ೭ ಗಂಟೆಗೆ ಎರಡು ಕಪ್ಪು ಚಹಾ, ಬೆಣ್ಣೆಯ ಜೊತೆಗೆ ಮೂರು ತುಂಡು ಪಾವ್‌ರೊಟ್ಟಿ; ಸ್ನಾನಾನಂತರ ೧೧॥ ಗಂಟೆಗೆ ಅಲ್ಪ ಭೋಜನ. ಯಾವಾಗಲೂ ಅವರೇ ಕೊನೆಗೆ ಸ್ನಾನಮಾಡುತಿದ್ದರು. ಬೈಗಿನ ಚಹಾ ೪॥ ಗಂಟೆಗೆ; ಭೋಜನ ರಾತ್ರಿ ೯॥ ಗಂಟೆಗೆ.

ಜುಲೈ ೧೯೨೦ ರ ಸುಮಾರಕ್ಕೆ ಶ್ರೀ ಅರವಿಂದರ ಜೊತೆಗೆ ಇದ್ದ ಜನಗಳಾರೆಂದರೆ ಬಾರೀಂದ್ರ, ತಾಯಿಯವರು, ಋಷಿಕೇಶ ಕಂಜೀಲಾಲ, ರಾಮೇಶ್ವರ ಡೇ, ನಟವರ ದಾಸ ಅಮೃತ ಮತ್ತು ಮಿಸ್ ಹಡ್ಸನ್. ನಲಿನಿ, ಇಂದುರೇಖಾ ಮತ್ತು ಮಣಿ ಇವರು ಬಂಗಾಲದಿಂದ ಅಗಸ್ಟ ತಿಂಗಳಲ್ಲಿ ಮರಳಿ ಬಂದರು.

ಸಹನಿವಾಸಿಗಳ ಸಂಖ್ಯೆಯು ಹೆಚ್ಚುತ್ತ ಹೋದಂತೆ ಆಹಾರದ ಮತ್ತು ರುಚಿ ಭೇದದ ವಿಷಯವು ಹೆಚ್ಚು ಹೆಚ್ಚು ಜಟಿಲವಾಯಿತು. ಒಮ್ಮೆ ಓರ್ವ ಸಾಧಕನಿಗೆ ಶ್ರೀ ಅರವಿಂದರು ಹೀಗೆ ಹೇಳಬೇಕಾಯ್ತು: 'ಇದೇ ರುಚಿಯ ಇದೇ ಬಗೆಯ ಆಹಾರವಿರತಕ್ಕದ್ದೆಂದು ಆಗ್ರಹ ಹಿಡಿಯಕೂಡದು. ಈ ಪ್ರಕಾರದ ಆಗ್ರಹದಲ್ಲಿ ಅರ್ಥವಿಲ್ಲ. ಶರೀರವೊಂದು ಇರುವದರಿಂದ ಅದನ್ನು ಒಳ್ಳೆಯ ರೀತಿಯಲ್ಲಿ ಸಂರಕ್ಷಿಸಿ ಕೊಳ್ಳಬೇಕು. ಕೀಳ್ಮಟ್ಟದ ಆಹಾರದಿಂದ ಶರೀರವು ದುರ್ಬಲವಾಗಿ ಪ್ರಕೃತಿಯು ಕೆಡುವದು. ಆದುದರಿಂದ ಹಿತಕರವಾದ ಆಹಾರವನ್ನೆ ಸೇವಿಸಬೇಕು. ಹಿತಕರ ವಾದ ಆಹಾರವೆಂದರೆ ಶರೀರಕ್ಕೆ ಹಿತಕರವಾದುದು; ಅದರರ್ಥ ನಾಲಿಗೆಗೆ ರುಚಿಕರ ವಾದುದು ಎಂದಲ್ಲ.'

ಸಿಗರೇಟುಗಳ ಪ್ರಶ್ನೆ ಬಂದಾಗ ಅವರು ಒಮ್ಮೆ ಹೀಗೆ ಹೇಳಿದರು: 'ಎಣ್ಣೆ, ಸಾಬೂಣ ಹಾಗೂ ಈ ಬಗೆಯ ಇನ್ನು ಬೇರೆ ಕೆಲ ಪದಾರ್ಥಗಳು ಅವಶ್ಯವಾಗಿ ಬೇಕಾಗುತ್ತವೆ, ಆದರೆ ತಂಬಾಕು ಸರ್ವಥಾ ಅಗತ್ಯದ ವಸ್ತುವಲ್ಲ.'

ಕ್ರಾಂತಿಕಾಲದ ಸಂಗಾತಿಯಾದ ಅಮರೇಂದ್ರ ಚಟರ್ಜಿ ಎಂಬವರು ಸಂನ್ಯಾಸ ಸ್ವೀಕರಿಸಿ ಈ ಹೊತ್ತಿಗೆ ಕೇವಲಾನಂದರಾಗಿದ್ದರು; ಇವರು ತಂಜಾವರದ ಸುತ್ತು ಮುತ್ತಲಿನ ಪ್ರದೇಶದಲ್ಲಿದ್ದ ಒಂದು ಗುಂಪಿನ ಜೊತೆಗೂಡಿ ಕೆಲಸ ಮಾಡುತಿದ್ದರು. ಕೆಲವು ಜನರು ಆ ಭಾಗಗಳಲ್ಲಿ ತಮ್ಮ ತತ್ತ್ವವನ್ನುಪದೇಶಿಸುತಿದ್ದಾರೆಂಬ ವರದಿಯು ಇಷ್ಟರಲ್ಲಿ ಶ್ರೀ ಅರವಿಂದರ ಕಿವಿಗೆ ಬಂದು ಮುಟ್ಟಿತ್ತು. ಒಂದು ದಿವಸ ಈ ಸಂನ್ಯಾಸಿ-ಗಳೂ ಅವರ ತಂಡದವರೂ ಒಮ್ಮೆಲೆ ಬಂದುಬಿಟ್ಟರು. ಹಳೆಯ ದಿನಗಳಲ್ಲಿ ಅವರ ಹೆಸರು ಗೆಬ್ರಿಯಲ್ ಎಂದಿತ್ತು; ಶ್ರೀ ಅರವಿಂದರೂ ಕೂಡಲೆ ಅವರನ್ನು ಗುರುತಿಸಿ-ದರು. ಕೇವಲಾನಂದರು ಕೆಲಕಾಲ ಅಲ್ಲಿ ಇದ್ದರು; ಕ್ರಾಂತಿಕಾರಕ ಚಟುವಟಿಕೆ-ಗಳನ್ನು ಇನ್ನು ಮುಂದೆ ಸಾಗಿಸತಕ್ಕದ್ದಲ್ಲವೆಂದು ಅವರಿಗೆ ಸಲಹೆಕೊಡಲಾಯ್ತು.

ಈ ಸಮಯಕ್ಕೆ ಶ್ರೀ ಅರವಿಂದರ ಗ್ರಂಥಗಳನ್ನು ಪ್ರಕಟಿಸುವ ವಿಷಯದಲ್ಲಿ ಚಂದ್ರನಗರದ 'ಪ್ರವರ್ತಕ ಸಂಘ' ಹಾಗೂ ಕಲಕತ್ತೆಯಲ್ಲಿಯ 'ಆರ್ಯ ಪಬ್ಲಿಶಿಂಗ ಹೌಸ್' ಎಂಬೀ ಸಂಸ್ಥೆಗಳ ಜೊತೆಗೆ ಒಂದು ಏರ್ಪಾಟು ಮಾಡಲ್ಪಟ್ಟಿತು.

ಶ್ರೀ ಅರವಿಂದರ ಕೇಂಬ್ರಿಜದ ಮಿತ್ರರಾದ ಕೆ. ಜಿ. ದೇಶಪಾಂಡೆಯವರು ಈ ಕಾಲಕ್ಕೆ, ಅಸಹಕಾರದ ದಿನಗಳಲ್ಲಿ ಪ್ರಾರಂಭಿಸಲ್ಪಟ್ಟ ಅಂಧೇರಿ ಆಶ್ರಮದ ಮುಖ್ಯಸ್ಥರಾಗಿದ್ದರು; ಅವರೂ ಬಂದು ಶ್ರೀ ಅರವಿಂದರನ್ನು ಕಂಡರು.

ಚಿತ್ತರಂಜನ ದಾಸರು ೧೯೨೩ರಲ್ಲಿ 'ಸ್ವರಾಜ್ಯ ಪಕ್ಷ'ವನ್ನು ಪ್ರಾರಂಭಿಸಿದ-ರಷ್ಟೆ? ಆಗ ಅವರು ಶ್ರೀ ಅರವಿಂದರ ಆಶೀರ್ವಾದವನ್ನು ಕೋರಿ ಅದನ್ನು ಪಡೆದರು. ಸಂಪೂರ್ಣವಾಗಿ ತಮ್ಮನ್ನು ಸಾಧನಕ್ಕೆ ಮೀಸಲಿರಿಸಿಕೊಳ್ಳಬೇಕೆಂದು ದಾಸರದೊಂದು ಅಭಿಲಾಷೆಯಿತ್ತು. ಆದರೆ ಈ ಅಭಿಲಾಷೆಯಿಂದ ಅವರನ್ನು ಶ್ರೀ ಅರವಿಂದರು ಪರಾವೃತ್ತಗೊಳಿಸಿದರಲ್ಲದೆ ರಾಜಕೀಯ ರಂಗವನ್ನು ಬಿಟ್ಟುಕೊಡ-ಬಾರದೆಂದು ಅವರಿಗೆ ಸಲಹೆಯಿತ್ತರು.

೧೯೨೭ರಲ್ಲಿ ತಾಯಿಯವರು ಶ್ರೀ ಅರವಿಂದರ ಪರಿವಾರದ ಹೊಣೆಯನ್ನೆಲ್ಲ ತಾವೆ ಹೊತ್ತುಕೊಂಡು ಅವರೆಲ್ಲರ ಯೋಗಕ್ಷೇಮದ ವಿಚಾರವನ್ನು ಅತ್ಯಂತ ಸುವ್ಯವಸ್ಥಿತವಾಗಿ ಸಂಘಟಿಸಿದರು. ಶ್ರೀ ಅರವಿಂದರು ೧೯೨೬ರ ತರುವಾಯ ವ್ಯಾವಹಾರಿಕ ಲೋಕದಿಂದ ಸಂಪೂರ್ಣ ನಿವೃತ್ತಿಯನ್ನೆ ಹೊಂದಲು, ತಾಯಿ ಯವರು ಎಲ್ಲವನ್ನೂ ಒಂದು ಆಶ್ರಮದ ರೂಪದಲ್ಲಿ ವ್ಯವಸ್ಥೆಗೊಳಿಸಿದರು. ಅದೇ ಇಂದಿಗೂ ನಡೆದುಕೊಂಡು ಬಂದಿದೆ.

ಲಾಲಾ ಲಜಪತರಾಯರು ೧೯೨೫ರಲ್ಲಿ ಪಾಂಡಿಚೇರಿಗೆ ಹೋಗಿ ಶ್ರೀ ಅರವಿಂದ-ರೊಡನೆ ಸುದೀರ್ಘ ಮಾತುಕತೆ ನಡೆಸಿದರು; ಆಗ ಪುರುಷೋತ್ತಮದಾಸ ತಂಡನ್ನರೂ ಅವರ ಜೊತೆಗಿದ್ದರು.

೧೯೩೮ರಲ್ಲಿ ಅವರ ಮೊಳಕಾಲು ಒಮ್ಮಿಂದೊಮ್ಮೆ ಒಳೆದುದರಿಂದ ಅವರಿಗೆ ದೀರ್ಘ-ಕಾಲದ ವರೆಗೆ ಅಸ್ವಸ್ಥತೆಯಿತ್ತು; ಈ ಒಂದು ಸಮಾಚಾರವನ್ನು ಬಿಟ್ಟರೆ ೧೯೨೬ರ ತರುವಾಯ ಯಾವ ವಿಶೇಷ ವಿವರಗಳೂ ನಮಗೆ ದೊರಕುವ ಹಾಗಿಲ್ಲ. ಆಗಿನ ದಿನ-ಗಳಲ್ಲಿ ಅವರ ದೈನಂದಿನ ಜೀವನಕ್ರಮವು ಹೇಗೆ ಸಾಗಿತ್ತೆಂಬುದರ ಸ್ಥೂಲ ಕಲ್ಪನೆ ವಾಚಕರಿಗೆ ಬರಲೆಂದು ಮಾತ್ರ ಮೇಲ್ಕಾಣಿಸಿದ ಕೆಲ ವಿವರಗಳನ್ನು ಕೊಡಲಾಗಿದೆ. ಅಲ್ಲಿಯ ಘಟನೆಗಳ ವಿವರವಾದ ದಿನಚರಿಯನ್ನು ಕೊಡುವ ಪ್ರಯತ್ನವೆ ಇಲ್ಲಿಲ್ಲ.

೧೯೨೮ರಲ್ಲಿ ಶ್ರೀ ಅರವಿಂದರ ಬಳಿಗೆ ಬಂದ ಇಬ್ಬರು ಮಹತ್ವದ ವ್ಯಕ್ತಿಗಳೆಂದರೆ ದಿಲೀಪ ಕುಮಾರ ರಾಯ ಮತ್ತು ಕಾಪಾಲಿಶಾಸ್ತ್ರಿಗಳು. ಶ್ರೀ ಅರವಿಂದರ ಸಂಪರ್ಕ ದಲ್ಲಿ ಬಂದ ಬಳಿಕ ಇವರಿಬ್ಬರೂ ಅತ್ಯಂತ ವೈಶಿಷ್ಟ್ಯಪೂರ್ಣ ಪಾತ್ರಗಳನ್ನು ವಹಿಸಿ-ರುತ್ತಾರೆ. ಅಗಾಧ ಸಂಸ್ಕೃತ ಪಂಡಿತರಾದ ಕಾಪಾಲಿ ಶಾಸ್ತ್ರಿಗಳು ಶ್ರೀ ಅರವಿಂದರನ್ನು ನೋಡಿದಾಗ, ಅವರ ದೇಹದ ತ್ವಚದ ಮೇಲೆ ಅತ್ಯಾಕರ್ಷಕವಾದ ಕಾಂತಿಯೊಂದನ್ನು ಕಂಡರು. ಅದು ಯೌಗಿಕ ಸಾಧನದ ಫಲವೆಂದೆ ಅವರು ಹೇಳಿದ್ದಾರೆ.

ಕೊನೆಗೊಮ್ಮೆ ೨೪ನೆಯ ನವ್ಹೆಂಬರ ೧೯೨೬ರಂದು ಸಿದ್ಧಿಯ ದಿನವು ಬಂದೊದ ಗಿತು. ಆಗ ಇಪ್ಪತ್ತುನಾಲ್ಕು ಜನ ಸಾಧಕರು ಉಪಸ್ಥಿತರಿದ್ದರು. ಅವರೆಲ್ಲರ ಹೆಸರು ಗಳನ್ನು ನವ್ಹೆಂಬರ ೧೯೫೧ರ 'ದಕ್ಷಿಣಾ' ಎಂಬ ಪತ್ರಿಕೆಯ ೯೭ ನೆಯ ಪುಟದಲ್ಲಿ ಕೊಡಲಾಗಿದೆ.

ಈ ದಿನದಿಂದ ಮುಂದೆ ಶ್ರೀ ಅರವಿಂದರು ಸಂಪೂರ್ಣವಾದ ಏಕಾಂತವಾಸದಲ್ಲಿ ನಿವೃತ್ತರಾಗಿ, ತಮ್ಮ ಬಾಹ್ಯ ಸಂಪರ್ಕಗಳನ್ನು ವರ್ಷಾನುವರ್ಷ ತಾಯಿಯವರ ಮುಖಾಂತರವೆ ಸಾಗಿಸಿದರು. ಅಂದಿನಿಂದ ತಾಯಿಯವರೆ ಆಶ್ರಮದ ಸಮಗ್ರ ಹೊಣೆಯನ್ನು ಹೊತ್ತುಕೊಂಡು ಇಂದಿನ ವರೆಗೂ ಅದನ್ನು ಅವಿಶ್ರಾಂತವಾಗಿ ಸಾಗಿಸಿಕೊಂಡು ಬಂದಿದ್ದಾರೆ.

ಈ ಸಂದರ್ಭದಲ್ಲಿ ನಾನು 'ಆರ್ಯ' ಪತ್ರಿಕೆಯ ವಿಷಯಕ್ಕಿದ್ದ ಕೆಲವೊಂದು ವಿವರಗಳತ್ತ ಹೊರಳುವದು ಯುಕ್ತವಾಗಿದೆ. ಏಕೆಂದರೆ, ೧೯೧೪--೨೦ರ ಅವಧಿಯಲ್ಲಿ ಅದೇ ಬಹಳ ಮಹತ್ವದ ಕಾರ್ಯವಾಗಿತ್ತು.

'ಆರ್ಯ'ದಲ್ಲಿ ಪಾಲ ಮತ್ತು ಮಿರಾ ರಿಚರ್ಡರ ಹಾಗೂ ಇನ್ನಿತರ ಸ್ವಲ್ಪ ಜನರ ಲೇಖನಗಳು ಬರುತ್ತಿದ್ದವೇನೊ ನಿಜ. ಆದರೆ ಆ ಪತ್ರಿಕೆಯ ಅಂತಃಪ್ರಾಣವೂ ಸಾರಸತ್ತ್ವವೂ ಶ್ರೀ ಅರವಿಂದರ ಸಮರ್ಥ ಲೆಕ್ಕಣಿಕೆಯಿಂದಲೆ ಬಂದ ವಿಚಾರ ಪ್ಲುತ ಲೇಖನಗಳಲ್ಲಿಯೆ ಅಡಕವಾಗಿದ್ದವು. ಅವರು ಧಾರಾವಾಹಿಯಾಗಿ ಕೆಲ ವೊಂದು ಲೇಖಮಾಲೆಗಳನ್ನು ಪ್ರಾರಂಭಿಸಿದರು. ಅವುಗಳೆಂದರೆ, ಗೀತಾಪ್ರಬಂಧ ಗಳು, ದಿವ್ಯಜೀವನ, ಯೋಗಸಮನ್ವಯ, ವೇದರಹಸ್ಯ, ಮಾನವ ಐಕ್ಯದ ಆದರ್ಶ, ಭಾರತೀಯ ಸಂಸ್ಕೃತಿಯ ಸಮರ್ಥನೆ, ಸಮಾಜವಿಕಾಸದ ಮನೋವಿಜ್ಞಾನ ಇತ್ಯಾದಿ. ಹೀಗೆ ಪ್ರತಿ ತಿಂಗಳೂ ಓದುಗರಿಗೆ, ಶ್ರೀ ಅರವಿಂದರ ಅಧಿಕಾರಯುಕ್ತವಾಣಿಯಲ್ಲಿ ಬಂದ ಅವರ ಪರಿಪಕ್ವ ವಿಚಾರಗಳ ಸಂತರ್ಪಣೆಯೆ ಸಿಕ್ಕುಹೋಗುತಿತ್ತು. ಅದರಲ್ಲಿಯ ಲೇಖನಗಳು ದರ್ಶನಶಾಸ್ತ್ರ, ಧರ್ಮಶಾಸ್ತ್ರ, ನೀತಿಶಾಸ್ತ್ರ, ಸಮಾಜ-ಶಾಸ್ತ್ರ, ಕಲೆ, ಸಂಸ್ಕೃತಿ, ಸಾಹಿತ್ಯ ಮೊದಲಾದ ಹಲವಾರು ವಿಷಯಗಳನ್ನು ಕುರಿತು ಸಮಾಲೋಚನೆ ಮಾಡುತಿದ್ದವು. ಈ ಲೇಖನಗಳಲ್ಲಿ ಕೆಲವು ಪುನಃ ಪರಿಶೀಲಿಸಲ್ಪಟ್ಟು ಪುಸ್ತಕರೂಪದಲ್ಲಿ ಪ್ರಕಟವಾಗಿವೆ. ಅವುಗಳಲ್ಲಿ ಹಲವಂತೂ ನಿಃಸಂದೇಹವಾಗಿ ಜಾಗತಿಕ ವಿಚಾರಕ್ಷೇತ್ರಕ್ಕೆ ಚಿರಸ್ಥಾಯಿಯಾದ ಕಾಣಿಕೆಗಳಾಗಿವೆಯಲ್ಲದೆ ಭಾರತೀಯ ವಿಚಾರಪ್ರಣಾಲಿಯನ್ನು ಮಂಡಿಸುವ ವಿಷಯದಲ್ಲಿ ಅವು ತುರೀಯ ವಚನಗಳಾಗಿ ಹೋಗಿವೆ.

'ಯುಗಾಂತರ' ಮತ್ತು 'ಬಂದೇ ಮಾತರಂ' ಪತ್ರಿಕೆಗಳಲ್ಲಿ ಬಂದ ಶ್ರೀ ಅರವಿಂದರ ಲೇಖನಗಳಲ್ಲಿ ಮ್ಯಾಝಿನಿಯಂತಹ ಯೋಗ್ಯತಾಸಂಪನ್ನ ಪ್ರತಿಭಾವಂತ ದೇಶಭಕ್ತನ ರಾಷ್ಟ್ರೀಯತ್ವಕ್ಕೆ ಸರಿದೂಗಬಲ್ಲ ಆದರೆ ಅದಕ್ಕಿಂತ ಹೆಚ್ಚು ಆಧ್ಯಾತ್ಮಿಕ ವಾದ, ಓಜಃಪೂರ್ಣ ಉದಯೋನ್ಮುಖ ರಾಷ್ಟ್ರೀಯತ್ವವು ತುಂಬಿತುಳುಕುತಿತ್ತು. 'ಕರ್ಮಯೋಗಿನ್' ಮತ್ತು 'ಧರ್ಮ' ಪತ್ರಿಕೆಗಳಲ್ಲಿಯ ಅವರ ಲೇಖನಗಳು ನಿಃಸೀಮ ದೇಶವತ್ಸಲ ವೇದಾಂತಿಯೊಬ್ಬನ ಪ್ರವೃತ್ತಿಪ್ರಧಾನ ತತ್ತ್ವದರ್ಶನವನ್ನು ಒಳಗೊಂಡಿದ್ದವು. 'ಆರ್ಯ' ಪತ್ರಿಕೆಯಲ್ಲಿಯ ಅವರ ಲೇಖನಗಳಲ್ಲಂತೂ

ಮನುಕುಲದ ಮತ್ತು ಸರ್ವಸಮನ್ವಯತತ್ತ್ವದ ಪರಿಪಕ್ವ ಸಮಗ್ರ ಚಿತ್ರವನ್ನು ಕಂಡು ಅದರ ಸಾಧನಕ್ರಮವನ್ನು ವಿವರಿಸಿದ ಹಾಗೂ ಸಮುಜ್ವಲವಾದ ಆಧ್ಯಾತ್ಮಿಕ ಉತ್ತುಂಗ ಶಿಖರದ ಮೇಲೆ ನಿಂತು ಆ ಸಾಧನಕ್ರಮವನ್ನೆಲ್ಲ ಉಪದೇಶಿಸಿದ ಓರ್ವ ಮಹಾಯೋಗಿಯ ಅಮೋಘ ವಾಗ್ವೈಖರಿಯನ್ನೆ ಕಾಣುತ್ತೇವೆ. ಈ ಪತ್ರಿಕೆ-ಯಲ್ಲಿಯ ಯಾವ ಲೇಖನಗಳೂ ಪ್ರಯಾಸದಿಂದ ಹೊರಬಂದಿರದೆ ಅಂತಃ-ಪ್ರೇರಣೆಯ ಫಲಗಳಾಗಿ ಪ್ರಕಟವಾದುವೆಂಬುದನ್ನು ನಾವೆಲ್ಲ ಬಲ್ಲೆವು. ಶ್ರೀ ಅರವಿಂದರ ದೃಷ್ಟಿಯಲ್ಲಿ 'ಆರ್ಯ' ಎಂಬ ಮಾತು ಒಂದು ಕುಲವಾಚಕ ಅಥವಾ ವರ್ಣವಾಚಕ ಪದವಲ್ಲ. 'ಆರ್ಯ'ನೆಂದರೆ ನೆಲವನ್ನು ಆಕರ್ಷಿಸುವವನು, ಪ್ರತಾಪಶಾಲಿಯಾದವನು, ಎಂದೂ ದಣಿವನ್ನು ಲೆಕ್ಕಿಸದ ಹಂಬಲ-ಹೆಬ್ಬಯಕೆ-ಯುಳ್ಳವನು ಎಂದು ಅವರ ಗ್ರಹಿಕೆ. ಆರ್ಯನಾದವನು, ಅಂತರ್ಲೋಕ-ಬಹಿ ರ್ಲೋಕಗಳಲ್ಲಿ ಇದ್ದುದೆಲ್ಲವನ್ನೂ ಗೆಲ್ಲಬಲ್ಲನು; ಅದರಂತೆಯೆ ನಾಗಮುರಿಗೆಯ ಹಾಗೆ ಸತತವಾಗಿ ಏರುತ್ತ ಸಾಗಿದ ಲೋಕವಿಕಾಸಕ್ರಮದಲ್ಲಿ ಅಡ್ಡಿಯಾಗಿ ನಿಂತು-ದೆಲ್ಲವನ್ನೂ ಸಪರಿಜಿಡಬಲ್ಲನು. 'ಏಕೆಂದರೆ ಪ್ರತಿಯೊಂದರಲ್ಲಿಯೂ ಅವನು (ಆರ್ಯ) ಸತ್ಯವನ್ನೆ ಶೋಧಿಸುತ್ತಾನೆ, ಪ್ರತಿಯೊಂದರಲ್ಲಿಯೂ ನ್ಯಾಯ್ಯವಾದುದನ್ನೆ ಹುಡುಕುತ್ತಾನೆ, ಪ್ರತಿಯೊಂದರಲ್ಲಿಯೂ ಉನ್ನತವಾದುದನ್ನೂ ಸ್ವತಂತ್ರವಾದು-ದನ್ನೂ ಕಾಣುತ್ತಾನೆ,......' 'ಆರ್ಯ' ಪತ್ರಿಕೆಯು ಕೆಳಗೆ ಕಾಣಿಸಿದ ಇಬ್ಬಗೆಯ ಗುರಿಯಿಟ್ಟುಕೊಂಡು ಪ್ರಾರಂಭಿಸಲ್ಪಟ್ಟಿತು; ಮತ್ತು ಆ ಗುರಿಗಳನ್ನು ಅದು ವಿಪುಲಪ್ರಮಾಣದಲ್ಲಿ ಪೂರೈಸಿತೆಂದು ಹೇಳಲೆಬೇಕು:

(೧) ಅಸ್ತಿತ್ವದ ಮಹೋನ್ನತ ಸಮಸ್ಯೆಗಳ ಪದ್ಧತಿಪೂರ್ವಕವಾದ ಅಭ್ಯಾಸ.

(೨) ಜ್ಞಾನದ ವಿಸ್ತೀರ್ಣವಾದ ಸಮನ್ವಯಸಿದ್ಧಾಂತದ ರಚನೆ ಹಾಗೂ ಮಾನವಕುಲದ ಪೌರ್ವಾತ್ಯ ಮತ್ತು ಪಾಶ್ಚಾತ್ಯ ವಿವಿಧ ಧಾರ್ಮಿಕ ಪರಂಪರೆಗಳಲ್ಲಿ ಸಾಮರಸ್ಯವನ್ನು ಉಂಟುಮಾಡುವಿಕೆ. ಅದರ ಪದ್ಧತಿಯಾದರೊ ವಾಸ್ತವವಾದ ವನ್ನು ಅನುಸರಿಸುವದಲ್ಲದೆ ತರ್ಕಬದ್ಧವೂ ಲೋಕೋತ್ತರವೂ ಆಗುವದು; ಇನ್ನು ಆ ವಾಸ್ತವವಾದವಾದರೊ ಬೌದ್ಧಿಕ ಮತ್ತು ವೈಜ್ಞಾನಿಕ ಪಂಥಗಳನ್ನು ಅಂತರ್‌ಜ್ಞಾನದ ಅನುಭವದೊಡನೆ ಒಡಗೂಡಿಸುವಂತಹದಾಗುವದು.

ಆ ಪತ್ರಿಕೆಯು ತನ್ನ ಆದರ್ಶವನ್ನು ಈ ಕೆಳಗಿನ ಮಾತುಗಳಲ್ಲಿ ವಿವರಿಸಿ ಹೇಳಿತು:

'ಮನುಕುಲದ ಐಕ್ಯಸಾಧನೆ; ಕೇವಲ ಲಾಭದೃಷ್ಟಿಗಾಗಿ ಉಂಟಾದ ಬಾಹ್ಯ ಸಂಪರ್ಕದ ಏಕತ್ವವಷ್ಟೆ ಅಲ್ಲ, ಆದರೆ ಅಂತರಂಗದಿಂದ ಸ್ಫುರಿಸಿದ ಏಕತ್ವದ ಮೂಲಕ ಮನುಕುಲದ ಐಕ್ಯಸಾಧನೆ; ಮಾನವನ ಪುನರುತ್ಥಾನ ಎಂದರೆ ಕೇವಲ ಪಶುಪ್ರಾಯವಾದ ಮತ್ತು ಕೇವಲ ಆರ್ಥಿಕವಾದ ಜೀವನದಿಂದ ಮಾನವನನ್ನು ಎತ್ತಿ ವೈಭವಸಂಪನ್ನವಾದ ಪಾರಮಾರ್ಥಿಕ ಅಸ್ತಿತ್ವದಲ್ಲಿ ಅವನನ್ನು ತಂದು ಬಿಡುವದು;

ಬ್ರಾಹ್ಮಬಲವನ್ನು ಈ ದೇಹವೆಂಬ ಪಾತ್ರದಲ್ಲಿಯೂ ಮನಸ್ಸೆಂಬ ಉಪಕರಣ-ದಲ್ಲಿಯೂ ತುಂಬುವದು ಎಂದರೆ ಈ ಮೂಲಕ ಮಾನವನ ಮಾನವತ್ವವು ನಿಜವಾದ ಅತಿಮಾನವತ್ವದಲ್ಲಿ ಪರಿವರ್ಧನೆ ಹೊಂದುವದು ;— ಈ ಬಗೆಯ ಪರಿಣತಿಯು ಈಗಿನ ನಮ್ಮ ಸ್ಥಿತಿಯನ್ನು ಮೀರಿಸುವಂತಹದಾಗುವದು. ಎಂದರೆ ಇಂದಿನ ವಿಜ್ಞಾನವು ಹೇಳುವಂತೆ ಪ್ರಾಣಿಕೋಟಿಯಿಂದ ಮಾನವನ ಕೋಟಿಯು ಬೆಳೆದು ಬಂದ ಹಾಗೆಯೆ ಮಾನವಕುಲದಿಂದ ಅತಿಮಾನವಕುಲವು ಬೆಳೆದು ಬರುವದು ;— ಈಗ ಪ್ರಾಣಿ ಮತ್ತು ಮಾನವ ಇವರಲ್ಲಿ ಕಾಣುವ ಅಂತರವು ಆಗ ಮಾನವ ಮತ್ತು ಅತಿಮಾನವ ಇವರಲ್ಲಿ ಗೋಚರಿಸತೊಡಗುವದು. ಇವು ಮೂರು ಒಂದೇ ಆಗಿವೆ ; ಏಕೆಂದರೆ ಮಾನವನ ಐಕ್ಯಭಾವವೂ ಮಾನವನ ಆತ್ಮಾತೀತಭಾವವೂ ಅವನು ಪರ-ಬ್ರಹ್ಮನಲ್ಲಿ ಪ್ರತಿಷ್ಠಾನ ಹೊಂದಿದಾಗ ಮಾತ್ರ ಬರಬಲ್ಲವು. '

ಅಂತರ್ಜ್ಞಾನದ ಸಹಜಾನುಭವವೆ (Intuitive Experience) ಅವರ ತತ್ತ್ವದರ್ಶನದ ತಳಹದಿಯಾಗಿತ್ತು. ಅಲ್ಲದೆ, ಆ ಅನುಭವವನ್ನು ಓದುಗನಿಗೆ ತಿಳಿಪಡಿಸಿ ಇಂಥ ಅನುಭವವಾಗಲಿ ಇದೇ ಬಗೆಯ ಬೇರೆ ಅನುಭವಗಳಾಗಲಿ ತೋರುವ ಉನ್ನತ ಸೀಮೆಗಳಲ್ಲಿ ಅವನನ್ನು ಕರೆದೊಯ್ಯುವದೆ ಅವರ ಬರೆಹದ ಉದ್ದೇಶವಾಗಿತ್ತು. ಜೀವನವನ್ನು ಪರಿವರ್ತನಗೊಳಿಸಲಾರದ ಮತ್ತು ಪರಿಣಾಮ ಕಾರಕ ಕೃತಿಯತ್ತ ಕರೆದೊಯ್ಯದ ಕೇವಲ ಬುದ್ಧಿಪ್ರಚುರ ಊಹಾಪೋಹಗಳಲ್ಲಿ ಅವರಿಗೆ ಎಳ್ಳಷ್ಟೂ ಆಸ್ಥೆಯಿರಲಿಲ್ಲ. ಆದ್ದರಿಂದ ಅವರ ಆಶ್ರಮವು ಓರ್ವ ಪತ್ರಿಕಾ ಕರ್ತನ ಕಾರ್ಯಾಲಯ ಮಾತ್ರವಾಗಿಯೂ ಉಳಿಯಲಿಲ್ಲ, ಒಂದು ಗ್ರಂಥಭಾಂಡಾರ ಮಾತ್ರವಾಗಿಯೂ ಬೆಳೆಯಲಿಲ್ಲ. ಕಾಲಾನುಕ್ರಮದಲ್ಲಿ ಅದು ಗುರುವು ತೋರಿದ ರೀತಿಯಲ್ಲಿ ಸತ್ಯಾನ್ವೇಷಣೆಗೆ ಕಟಿಬದ್ಧರಾದ ನಿಷ್ಠಾಪೂರ್ಣ ಸಾಧಕರನ್ನು ಆಕರ್ಷಿಸಿತು. ಹೀಗೆ ಆಶ್ರಮವೆಂಬುದು ತಾನಾಗಿ ಸಹಜವಾಗಿ ಬೆಳೆಯತೊಡಗಲು, ಸಂಘಟ-ನೆಯು ಅತ್ಯಗತ್ಯವೆನಿಸುವ ಸಮಯವು ಬೇಗ ಬಂದೊದಗಿತು. ಆ ಮಹಾ ಗುರುವಿನ ಮಹಾಪ್ರಸ್ಥಾನದ ತರುವಾಯ ಕೂಡ ಆಶ್ರಮದ ವ್ಯವಸ್ಥಿತಿಯಲ್ಲಾಗಲಿ ನಿಯಮ-ಗಳ ಪಾಲನೆಯಲ್ಲಾಗಲಿ ಶೈಥಿಲ್ಯವೆಂಬುದು ಲವಲೇಶವೂ ಉಂಟಾಗಿಲ್ಲವೆಂಬ ಸಂಗತಿಯು ಗಮನಾರ್ಹವಾಗಿದೆ.

ಪ್ರತಿಯೊಂದು ತರುಣ ಮನವೂ ಅದೇಕೆ ಸರ್ವರೂ ಅನಿರ್ಬಂಧವಾಗಿ ಕನಸು ಗಳನ್ನು ಕಟ್ಟಲೂ ಬಹುದು, ಅಶಕ್ಯವಾದುದನ್ನು ಕಲ್ಪಿಸಲೂ ಬಹುದು. ಆದರೆ ಆ ಕನಸುಗಳು ಅಂಶತಃ ಕೂಡ ಆದಾರಿಗೇ ಆಗಲಿ ಸಫಲವಾಗುವದು ತೀರ ವಿರಲ. ಶ್ರೀ ಅರವಿಂದರ ಮಾತು ಹಾಗಲ್ಲ. ಅವರ ಆ ಗಾಢ ದೀರ್ಘ ಜೀವನದಲ್ಲಿ ತಮ್ಮ ಮೆಚ್ಚುಗೆಯ ಕೆಲವು ಕನಸುಗಳು ನನಸಾದುದನ್ನು ಅವರು ಕಂಡರಷ್ಟೇ ಅಲ್ಲ, ಅವು ಗಳ ಸಫಲತೆಗಾಗಿ ಬಹು ಮಹತ್ವದ ಪಾತ್ರವನ್ನೂ ವಹಿಸಿದರು. ಭಾರತದ

ಸ್ವಾತಂತ್ರ್ಯದಿನವಾದ ೧೯೪೭ರ ಅಗಸ್ಟ ೧೫ನೆಯ ದಿನಾಂಕದಲ್ಲಿ ಸ್ವತಃ ಅವರೆ ಕೊಟ್ಟ ಹೇಳಿಕೆಯು ಅವಗಾಹನಯೋಗ್ಯವೂ ಅಭ್ಯಾಸಯೋಗ್ಯವೂ ಆಗಿದೆ.

ಆ ಸ್ವಾತಂತ್ರ್ಯದಿನವು ಅವರ ಎಪ್ಪತ್ತೆೇಳನೆಯ ಜನ್ಮದಿನವೂ ಆಗಿತ್ತು; ಅಂದು ಅವರಿತ್ತ ಸಂದೇಶವನ್ನು ಇಲ್ಲಿ ಕೆಳಗೆ ಕೊಡಲಾಗಿದೆ (ಪುಟ ೭, 'ಮದರ್ ಇಂಡಿಯಾ' ಫೆಬ್ರುವರಿ ೧೯೫೨):

'ಈ ದಿವಸ, ನಾನು ನನ್ನ ಜೀವಮಾನದಲ್ಲಿಯೆ ಸಫಲವಾದುದನ್ನು ಕಾಣ ಬಯಸಿದ್ದ ಬಹುಶಃ ಸಮಸ್ತ ಜಾಗತಿಕ ಚಲನವಲನಗಳನ್ನೂ ಲಕ್ಷ್ಯಪೂರ್ವಕವಾಗಿ ನಿರೀಕ್ಷಿಸಬಲ್ಲೆ; ಒಂದಾನೊಂದು ಕಾಲಕ್ಕೆ ಅವು ಅವ್ಯವಹಾರ್ಯವಾದ ಕನಸುಗಳಾಗಿ ಕಂಡಿದ್ದರೂ ಅನೇ ಈಗ ಸಫಲವಾದುದನ್ನೂ ಇಲ್ಲವೆ ಸಫಲತೆಯ ದಾರಿಯಲ್ಲಿ ಇದ್ದುದನ್ನೂ ನಾನು ಕಾಣುತಲಿದ್ದೇನೆ. . . . .

ಅವುಗಳಲ್ಲಿ ಮೊದಲನೆಯ ಕನಸು, ಸ್ವತಂತ್ರ ಸಂಯುಕ್ತ ಭಾರತವನ್ನು ನಿರ್ಮಾಣಗೊಳಿಸಬಲ್ಲ ಕ್ರಾಂತಿಕಾರಕ ಆಂದೋಲನದ ವಿಷಯಕ್ಕೆ ಇದ್ದಿತು. . . . .

ಇನ್ನೊಂದು ಕನಸು, ಏಶಿಯಾ ಖಂಡದ ಜನಗಳ ಪುನರುತ್ಥಾನ ವಿಮೋಚನೆಗಳ ಬಗೆಗಿತ್ತು; ಆ ಖಂಡವು ಮಾನವಕುಲದ ಸಭ್ಯತೆಯ ಅಭ್ಯುದಯದಲ್ಲಿ ಮತ್ತೆ ತನ್ನ ಪ್ರಮುಖ ಪಾತ್ರವನ್ನು ವಹಿಸಬೇಕೆಂಬುದು ಈ ಕನಸಿನ ಅಂಗವಾಗಿತ್ತು.

ಮೂರನೆಯ ಕನಸಿತ್ತು ಜಾಗತಿಕ ಸಂಯುಕ್ತ ಸಂಘದ ಬಗೆಗೆ ಎಂದರೆ ಅಖಂಡ ಮಾನವಕುಲದ ನ್ಯಾಯ್ಯತರ, ಉಜ್ವಲತರ ಮತ್ತು ಉದಾತ್ತತರ ಜೀವನಕ್ಕೆ ಒಂದು ಬಾಹ್ಯ ಆಧಾರವಾಗಿ ಇರಬಲ್ಲ ಜಾಗತಿಕ ಸ್ವರೂಪದ ಸಂಘದ ಬಗೆಗೆ. ಆ ಮಾನವಕುಲದ ಜಾಗತಿಕ ಏಕೀಕರಣವು ಇದೀಗ ರೂಪಗೊಳ್ಳುತಿದೆ; ಭೀಕರ ವಿಘ್ನಗಳ ವಿರುದ್ಧ ಹೋರಾಡುತ್ತ, ಅಪೂರ್ಣ ಸ್ವರೂಪದ್ದೆ ಆಗಲೊಲ್ಲದೇಕೆ ಒಂದು ಪ್ರಕಾರದ ಸಂಘಟನೆಗೆ ಮೂರ್ತಸ್ವರೂಪ ಕೊಡುವ ಯತ್ನ ನಡೆದಿದೆ. ಬಲವತ್ತರ ಶಕ್ತಿಗೆ ಒಂದು ಗತಿಯು ಉಂಟಾಗಿಬಿಟ್ಟಿದ್ದು ಅದು ಅಪರಿಹಾರ್ಯವಾಗಿ ಹೆಚ್ಚುತ್ತ ಹೋಗಲೇ ಬೇಕು; ಹಾಗೂ ಅದಕ್ಕೆ ವಿಜಯ ಸಿಕ್ಕಲೇ ಬೇಕು. . .

ಗಂಡಾಂತರವೊಂದು ನಡುವೆ ಬಂದು, ಮಾಡಿದ್ದಕ್ಕೆ ಅಡ್ಡಿಯಾಗಿ ನಿಲ್ಲಬಹುದು ಅಥವಾ ಮಾಡಿದ್ದನ್ನು ಕೆಡಿಸಲೂ ಬಹುದು; ಆದರೂ ಅಂತಿಮ ಫಲವು ಕಟ್ಟಿಟ್ಟಿದೆ. ಏಕೀಕರಣವೆಂಬುದು ನಿಸರ್ಗದ ಆವಶ್ಯಕತೆಯೂ ಅನಿವಾರ್ಯವಾದ ಚಲನವೂ ಆಗಿದೆ. ರಾಷ್ಟ್ರಗಳಿಗಾದರೂ ಅದರ ಆವಶ್ಯಕತೆ ಎಷ್ಟೆಂಬುದು ಸ್ಪಷ್ಟವಿದೆ; ಏಕೆಂದರೆ ಅದಿಲ್ಲದೆ ಹೋದರೆ ಸಣ್ಣ ರಾಷ್ಟ್ರಗಳ ಸ್ವಾತಂತ್ರ್ಯವು ಅದಾವ ಕ್ಷಣಕ್ಕಾದರೂ ಗಂಡಾಂತರಕ್ಕೆ ಗುರಿಯಾಗಬಹುದು; ಅದರಂತೆಯೆ ಬಲಶಾಲಿ ಬೃಹದ್ರಾಷ್ಟ್ರಗಳ ಜೀವನವು ಕೂಡ ಸುರಕ್ಷಿತವಾಗಿ ಇರಲಾರದು. ಆದುದರಿಂದ, ಏಕೀಕರಣವು ಸರ್ವರ ಕಲ್ಯಾಣಕ್ಕಾಗಿಯೆ ಉಂಟು. ಕೇವಲ ಮಾನವೀಯ ಬುದ್ಧಿ-

ಶೂನ್ಯತೆಯೂ ಮೂರ್ಖ ಸ್ವಾರ್ಥಪರತೆಯೂ ಅದಕ್ಕೆ ಆತಂಕವಾಗಬಹುದು; ಆದರೆ ಇವು ನಿಸರ್ಗದ ಅಗತ್ಯತೆಯ ವಿರುದ್ಧವೂ ಈಶ್ವರೇಚ್ಛೆಯ ವಿರುದ್ಧವೂ ಕೊನೆತನಕ ನಿಲ್ಲಲಾರವು. ಆದರೆ ಬಾಹ್ಯ ಆಧಾರವೊಂದೆ ಸಾಲದು; ಅಂತಾರಾಷ್ಟ್ರೀಯ ಭಾವನೆಯೂ ದೃಷ್ಟಿಯೂ ಬೆಳೆದು ಬರಲಿಕ್ಕೆ ಬೇಕು, ಅಂತಾರಾಷ್ಟ್ರೀಯ ಆಚಾರಗಳೂ ಸಂಸ್ಥೆಗಳೂ ತಲೆಯೆತ್ತಲಿಕ್ಕೆ ಬೇಕು; ಇಷ್ಟೆ ಅಲ್ಲ, ಪ್ರಸಂಗವಶಾತ್ ದ್ವಿರಾಷ್ಟ್ರೀಯ ಇಲ್ಲವೆ ಬಹುರಾಷ್ಟ್ರೀಯ ನಾಗರಿಕತ್ವದ ಪದ್ಧತಿಗಳೂ ಅದರಂತೆ ಸಂಸ್ಕೃತಿಗಳ ಬುದ್ಧಿಪುರಸ್ಸರವಾದ ವಿನಿಮಯದ ಅಥವಾ ಆಯಾ ಸಂಸ್ಕೃತಿಗಳ ಸ್ವಸಂತೋಷಯುಕ್ತ ಸಮೀಕರಣದ ಪದ್ಧತಿಗಳೂ ಬೆಳೆದು ಬರುವ ಆವಶ್ಯಕತೆ ಸಹ ತೋರಿ ಬರಬಹುದು. ಹೀಗೆ ರಾಷ್ಟ್ರೀಯತ್ವವು ಕೃತಾರ್ಥತೆ ಹೊಂದಿ ತನ್ನ ರಣವೃತ್ತಿಯನ್ನು ಬಿಟ್ಟುಬಿಡುವದು. ಆಗ, ರಾಷ್ಟ್ರವು ತನ್ನನ್ನೂ ಉಳಿಸಿಕೊಳ್ಳ ಬೇಕು ಹಾಗು ವಿಶ್ವದೊಡನೆ ಸಮಗ್ರ ದೃಷ್ಟಿಯನ್ನೂ ಇಡಬೇಕು ಎಂಬೀ ಮಾತುಗಳು ಪರಸ್ಪರ ಹೊಂದಲಾರದವುಗಳಾಗಿ ಎಂದೂ ತೋರಿಬಾರವು. ಒಂದು ಹೊಸ ಬಗೆಯ ಏಕೀಭಾವದಿಂದ ಮನುಕುಲವು ಪರಿಪ್ಲುತವಾಗುವದು.

ಇನ್ನೊಂದು ಕನಸಿತ್ತು ವಿಶ್ವಕ್ಕೆ ಭಾರತವು ನೀಡುವ ಬ್ರಹ್ಮಜ್ಞಾನದಾನದ ಬಗೆಗೆ. ಅದಾಗಲೆ ಪ್ರಾರಂಭವಾಗಿದೆ. ಭಾರತದ ಅಧ್ಯಾತ್ಮವಿದ್ಯೆಯು ಯುರೋಪ ಅಮೇರಿಕೆಗಳಲ್ಲಿ ದಿನದಿನಕ್ಕೂ ಹೆಚ್ಚಿನ ಪ್ರಮಾಣದಲ್ಲಿ ಪ್ರವೇಶಿಸತೊಡಗಿದೆ. ಈ ಪರಿಕ್ರಮವು ಬೆಳೆಯುತ್ತ ಸಾಗುವದು; ಸಂಕಟಗಳಿಂದ ತುಂಬಿಹೋದ ಈ ಕಾಲದಲ್ಲಿ ಭಾರತಮಾತೆಯತ್ತ ಎಷ್ಟೊ ಆಶಾಪೂರ್ಣ ನೇತ್ರಗಳು ಹೆಚ್ಚು ಹೆಚ್ಚಾಗಿ ಹೊರಳ ತೊಡಗಿವೆ. ಆಕೆಯ ಅಧ್ಯಾತ್ಮವಿದ್ಯೆಯ ಉಪದೇಶಾಮೃತವನ್ನು ಹೊಂದುವ ಹಂಬಲವು ತುಂಬ ಬೆಳೆಯುತಿರುವದಲ್ಲದೆ ಯೋಗಸಾಧನದ ಅಭಿಲಾಷೆಯೂ ಜಾಗ್ರತವಾಗುತಿದೆ.

ಕೊನೆಯ ಕನಸಾಗಿತ್ತು ವಿಕಾಸಕ್ರಮದಲ್ಲಿಯ ಮುಂದಿನ ಒಂದು ಹೆಜ್ಜೆ. ಈ ಹೆಜ್ಜೆಯೆಂದರೆ ಮಾನವನನ್ನು ಉಚ್ಚತರ ಮತ್ತು ವಿಶಾಲತರ ಚೇತನಕ್ಕೆ ಎತ್ತುವ ಹಂಬಲ; ಎಂದರೆ ಮಾನವನು ವಿಚಾರಮಾಡತೊಡಗಿದಂದಿನಿಂದಲೂ ತನ್ನ ವೈಯಕ್ತಿಕ ಪರಿಪೂರ್ಣತೆಯ ಮತ್ತು ಕಲಂಕರಹಿತ ಸಮಾಜದ ಸ್ವಪ್ನವನ್ನು ಕಾಣತೊಡಗಿದಂದಿನಿಂದಲೂ ಅವನನ್ನು ವ್ಯಗ್ರಗೊಳಿಸಿ ಪೀಡಿಸುತ್ತ ಬಂದ ಸಮಸ್ಯೆಗಳನ್ನು ಬಿಡಿಸಬೇಕೆಂಬ ಹಂಬಲ. ಈ ಹೆಜ್ಜೆಯಿನ್ನೂ ವೈಯಕ್ತಿಕ ಹಾರೈಕೆಯಾಗಿಯೊ ಕಲ್ಪನೆಯಾಗಿಯೊ ಉಳಿದುಕೊಂಡಿದ್ದರೂ ಈ ಆದರ್ಶವು ಭಾರತದಲ್ಲಿಯೂ ಪಾಶ್ಚಾತ್ಯದೇಶಗಳಲ್ಲಿಯೂ ಮುನ್ನೋಟದ ಮನಗಳಲ್ಲಿ ಬೇರೂರತೊಡಗಿದೆ. ಇನ್ನು ಬೇರೆ ಪ್ರಯತ್ನರಂಗಗಳಿಗಿಂತ ಈ ಪ್ರಯತ್ನರಂಗದ ಮಾರ್ಗದಲ್ಲಿ ಅಡ್ಡಿಆತಂಕಗಳು ಬಹಳ ಹೆಚ್ಚು; ಆದರೆ ಈ ಅಡ್ಡಿಆತಂಕಗಳೆಂಬವು ಅವನ್ನು

ನಾವು ಗೆಲ್ಲಬೇಕೆಂದೆ ಇವೆ. ಪರಮತಮ ಸಂಕಲ್ಪದ ಬಲವೊಂದಿದ್ದರೆ ಅವನ್ನು ನಾವು ಗೆಲ್ಲುವುದೂ ಖಂಡಿತ. ಈ ಸಂದರ್ಭದಲ್ಲಿ ಸಹ ವಿಕಾಸವು ಆಗುವದಾದಲ್ಲಿ, ಆತ್ಮತತ್ತ್ವದ ಹಾಗೂ ಅಂತಶ್ಚೇತನದ ಬೆಳವಣಿಗೆಗಳಿಂದಲೆ ಅದು ನಡೆಯ-ಬಲ್ಲುದಾದ ಕಾರಣ—, ಅದರ ಉಪಕ್ರಮವು ಭಾರತದಿಂದಲೆ ಪ್ರಾರಂಭವಾಗ-ಬಲ್ಲದು. ಈ ವಿಕಾಸದ ವ್ಯಾಪ್ತಿಯು ವಿಶ್ವವ್ಯಾಪಕವಾಗಿದ್ದರೂ ಅದರ ಸಂಚಲನೆಯ ಮೂಲ ಕೇಂದ್ರವು ಮಾತ್ರ ಭಾರತವೆ ಆಗಬಲ್ಲದು.

ಭಾರತದ ವಿಮೋಚನೆಯ ಈ ದಿನಾಂಕದಲ್ಲಿ ಇಷ್ಟೆಲ್ಲ ಅಭಿಪ್ರಾಯವನ್ನು ನಾನು ಹುದುಗಿಗೊಳಿಸಿ ಇರಿಸಿದ್ದೇನೆ. ಈ ಬಗೆಯ ಆಕಾಂಕ್ಷೆಯು ಯುಕ್ತವೊ ಅಲ್ಲವೊ ಎಂಬುದಾಗಲಿ, ಯುಕ್ತವಾಗಿದ್ದರೆ ಅದೆಷ್ಟರಮಟ್ಟಿಗೆ ಎಂಬುದಾಗಲಿ ಸ್ವತಂತ್ರ ನವಭಾರತವನ್ನೆ ಅವಲಂಬಿಸಿದೆ.'

ಹೀಗೆ ಶ್ರೀ ಅರವಿಂದರ ಚಟುವಟಿಕೆಗಳು ಊರ್ಧ್ವತರ ಸೀಮೆಗಳಲ್ಲಿ ಸಾಗಿರುವಾಗ, ದುರ್ದೈವದಿಂದ ಅವರ ಶರೀರವು ಮೂತ್ರಪಿಂಡದ ತೊಂದರೆಗೆ ಈಡಾಯಿತು. ಅವರು ಅದನ್ನು ದಮನಿಸಿ ಬಹುದಿನ ತಡೆಗಟ್ಟಿದ್ದರು ; ಆದರೆ ಆ ಮೇಲೆ ಅವರು ಆ ಪ್ರಯತ್ನವನ್ನು ಬಿಟ್ಟುಕೊಟ್ಟರು. ಅದಾವ ಕಾರಣಕ್ಕಾಗಿ ಹಾಗೆ ಮಾಡಿದರೊ ಅವರೆ ಬಲ್ಲರು. ತತ್ಪರಿಣಾಮವಾಗಿ ೫-೧೨-೫೦ ರಂದು ಅವರ ದಿವ್ಯಾತ್ಮವು ತನ್ನ ಪಾರ್ಥಿವ ಶರೀರವನ್ನು ಬಿಡಲು ನಿಶ್ಚಯಿಸಿ, ಅವೇದ್ಯ ಅಮೇಯ ಲೋಕಗಳಲ್ಲಿ ಪ್ರವೇಶಿಸಿತು.

ಶ್ರೀ ಅರವಿಂದರು ೧೯೧೦ ರಲ್ಲಿ ಕರ್ಮಕ್ಷೇತ್ರದಿಂದ ನಿವೃತ್ತರಾದಾಗ, ಅವರು ತಮ್ಮದೇ ಆದ ಒಂದು ಶುಭ್ರಶಿಲಾರಚಿತ ಸೌಧದಲ್ಲಿ ಅಡಗಿಕೊಂಡರೆಂದೂ ಅಲ್ಲಿ ಅವಾಸ್ತವವಾದ ಕಲ್ಪನಾಲೋಕದಲ್ಲಿ ಸ್ವಪ್ನಾವಿಷ್ಟ ವಿಚಾರತಂತುಗಳನ್ನು ತೆಗೆಯ ತೊಡಗಿದರೆಂದೂ ಅನೇಕರು ಭಾವಿಸುವ ಸಂಭವವಿದೆ. ಆದರೆ ವಸ್ತುಸ್ಥಿತಿಯು ತದ್ವಿರುದ್ಧವಾಗಿತ್ತು. ಎಲ್ಲಿ ಏನು ನಡೆದಿದೆಯೆಂಬ ಬಗೆಗೆ ಅವರು ತುಂಬ ಎಚ್ಚರಿರು ತಿದ್ದರಲ್ಲದೆ ಸಣ್ಣ ಸಂಗತಿಯನ್ನು ಸಹ ಒಳ್ಳೆ ದಕ್ಷತೆಯಿಂದ ನಿರೀಕ್ಷಿಸುತಿದ್ದರು. ಒಂದು ದೃಷ್ಟಿಯಿಂದ ಅವರು ಒಂದು ಬಗೆಯ ಹೆಚ್ಚಿನ ಅನುಕೂಲತೆಯುಳ್ಳ ನಿಲುಮೆಯಲ್ಲಿ ಇದ್ದರೆನಬೇಕು. ಆ ನಿಲುಮೆಯಲ್ಲಿ ಜೀವನದ ತಮ್ಮ ಅನುಭವ-ಅವಲೋಕನಗಳನೆಲ್ಲ ನಿರುದ್ವಿಗ್ನ ನಿರ್ಲಿಪ್ತಭಾವದಿಂದ ಸಮೀಕರಿಸಿ, ಅಂದಿನ ದಿನಮಾನದ ಪ್ರವೃತ್ತಿ-ಪೂರ್ವಗ್ರಹಗಳ ಸೋಂಕಿಲ್ಲದ ಒಂದು ಕರ್ಮಪರ ತತ್ತ್ವ-ಪದ್ಧತಿಯನ್ನು ಸ್ಥಾಪಿಸಲು ಅವರು ಸಮರ್ಥರಾದರು. ಅವರ ಬರೆಹಗಳು—ವಿಶೇಷತಃ ಕಲೆ, ಸಾಹಿತ್ಯ, ಕಾವ್ಯ, ಸಂಸ್ಕೃತಿ ಇವುಗಳ ಬಗ್ಗೆ ಇದ್ದ ಅವರ ಬರೆಹ ಗಳು—, ಅವರು ಸ್ವಾಧೀನಪಡಿಸಿಕೊಂಡ ಜ್ಞಾನಾನುಭವಗಳ ವಿಸ್ತಾರವು ಅದೆಷ್ಟಿ-ತ್ತೆಂಬುದನ್ನು ವ್ಯಕ್ತಪಡಿಸುತ್ತವೆ. ಅವರ ಈ ಪ್ರಭುತ್ವವು ಕೇವಲ ಭಾರತದ ಬಗೆಗೆ

ಇಷ್ಟೆ ಅಲ್ಲ ಅಖಂಡ ವಿಶ್ವದ ಚಲನವಲನಗಳ ಬಗೆಗೇ ಇದ್ದಿತು. ವಿಜ್ಞಾನದ ಬೆಳವಣಿಗೆಯ ಬಗೆಗೆ ಅವರಿಗಿದ್ದ ಜ್ಞಾನವು ಅತ್ಯಾಧುನಿಕವಾಗಿತ್ತು. ಅವರ ದೃಷ್ಟಿಯು ಯಾವಾಗಲೂ ವಿಶ್ವವ್ಯಾಪಕವಾಗಿದ್ದು ಸಮಸ್ತ ಮನುಕುಲವನ್ನೆ ತನ್ನ ತೆಕ್ಕೆಯಲ್ಲಿ ಹಿಡಿದಿತ್ತು. ಅವರು ಶರೀರತಃ ಎಷ್ಟೆಷ್ಟು ದೂರ ಸರಿಸರಿದು ಏಕಾಂತ ವನ್ನು ಅವಲಂಬಿಸಿದರೊ ಅಷ್ಟಷ್ಟು ಅವರು ತಮ್ಮ ಚಿತ್‌ಸ್ವರೂಪದಲ್ಲಿ ಸೂಕ್ಷ್ಮತರ ಅವಸ್ಥೆಯನ್ನು ಹೊಂದುತ್ತ ಶೀಘ್ರತರ ಅನುಭೂತಿಯನ್ನು ಪಡೆಯುತ್ತ ಸಾಗಿದರು. ಹೀಗಾಗಿ, ಜೀವನದ ಯಾವುದೆ ಸಮಸ್ಯೆಯನ್ನು ಅವರು ಸಮಾಲೋಚಿಸುವಾಗ—ಚೇತನ-ಅಚೇತನಗಳೂ ಪೂರ್ವ-ಪಶ್ಚಿಮಗಳೂ ಆದರ್ಶವಾದ-ವಾಸ್ತವವಾದಗಳೂ ಕಲ್ಪನೆ-ಕ್ರಿಯೆಗಳೂ ಅವರಿಗೆ ಏಕಕಾಲಕ್ಕೆ ಸರಿಸಮವಾಗಿ ತೋರಿಸಿಕೊಳ್ಳುತ್ತಿದ್ದುವು. ಈ ಬಗೆಯ ನೆಲೆ-ನಿಲುವೆಗಳ ಮೂಲಕವಾಗಿಯೆ ಅವರಲ್ಲಿ ಸರ್ವತೋಮುಖ ದೃಷ್ಟಿಯು ಕುದುರಿ ಅವರನ್ನು ಸಮನ್ವಯಪೂರ್ಣ ಪರಿಹಾರೋಪಾಯಗಳತ್ತ ತಂದು ನಿಲ್ಲಿಸಿತು. ಸಮಗ್ರ ಮಾನವಕುಲದ ಸಲುವಾಗಿಯೆ ಅವರು ವಿಚಾರಮಾಡಿದುದು, ಇದ್ದುದು, ಬರೆದುದು ಹಾಗೂ ಸಾಧನಗೈದುದು; ಸಮಗ್ರ ಮಾನವಕುಲಕ್ಕೆ ಸಾರಿ ಹೇಳಿದರು—ಪ್ರಕೃತಿಯಲ್ಲಿಯೆ ಅಂತರ್ನಿಹಿತವಾಗಿದ್ದ ವಿಕಾಸದ ಮುಂದಿನ ಹೆಜ್ಜೆ ಯನ್ನು ಸ್ವೀಕರಿಸಲು ಸಿದ್ಧವಾಗಿರಬೇಕೆಂದು. ಮಾನವಕುಲವು ವಾನರಜೀವನ ವನ್ನು ಎಷ್ಟೋ ಪಟ್ಟು ಮಿಕ್ಕಿ ಮೀರಿ ನಿಂತಿರುವಂತೆ, ಅವರು ಕಂಡ ಇನ್ನು ಮುಂದಿನ ಮಾನವನ ಹೆಜ್ಜೆಯು ಇಂದಿನ ಮಾನವಕುಲವನ್ನು ಎಷ್ಟೋ ಪಟ್ಟು ಮಿಕ್ಕಿ ಮೀರಿ ನಿಲ್ಲುವಂತಹದಾಗಿದೆ. ಅವರು ಕೊಟ್ಟ ಕಹಳೆಯ ಕೂಗು, ಕೇವಲ ವ್ಯಕ್ತಿಯು ತನ್ನಷ್ಟಕ್ಕೆ ತಾನು ದಿವ್ಯತ್ವವನ್ನು ತಾಳುವದಕ್ಕೆ ಮಾತ್ರ ಇರದೆ ಮನುಕುಲದಲ್ಲಿಯೆ ಆ ದೈವೀ ಸಂಪತ್ತು ಇಳಿದು ಬರುವಂತೆ ಮಾಡುವದಕ್ಕಾಗಿಯೂ ಇತ್ತು; ತನ್ಮೂಲಕವಾಗಿಯೆ ಸಮಸ್ತ ಮನುಕುಲವು ಊರ್ಧ್ವತರ ಸ್ತರಕ್ಕೇರಿ ಸೂಕ್ಷ್ಮತರ ವಿಶುದ್ಧತರ ಚೇತನವು ಪ್ರತಿಷ್ಠಾನಗೊಂಡೀತೆಂಬುದೆ ಅವರ ಜಯಘೋಷವಾಗಿತ್ತು.

## ೭ ಅವರ ಅಪ್ರತಿಮ ಕಾಣಿಕೆ

ಈ ಮೊದಲಿನ ಆರು ಪ್ರಕರಣಗಳಲ್ಲಿ ಶ್ರೀ ಅರವಿಂದರ ಚರಿತ್ರೆಯ ಸಂಕ್ಷಿಪ್ತ ರೂಪರೇಷೆಯನ್ನು ಚಿತ್ರಿಸಿದ್ದಾಯಿತು. ಇನ್ನು ಮುಂದಿನ ಐದು ಪ್ರಕರಣಗಳಲ್ಲಿ ಅವರ ಆಧ್ಯಾತ್ಮಿಕ ಸಾಧನ-ಸಿದ್ಧಿ-ಉಪದೇಶಗಳನ್ನು ಕುರಿತು ವಿವರವಾಗಿ ಹೇಳಲಿರುವೆ. ಆ ಮೊದಲು, ಇನ್ನುಳಿದ ಕೆಲವು ಕ್ಷೇತ್ರಗಳಲ್ಲಿ ಕಾರ್ಯವನ್ನು ನಿರ್ವಹಿಸಿ

ತನ್ಮೂಲಕ ಜಗತ್ತಿಗೆ ಅವರಿತ್ತ ವಿಶಿಷ್ಟ ಕಾಣಿಕೆಯನ್ನು ಕುರಿತು ಈ ಪ್ರಕರಣದಲ್ಲಿ ವಾಚಕರಿಗೆ ಒಂದಿಷ್ಟು ಪರಿಚಯ ಮಾಡಿಕೊಡಬಯಸುವೆ.

ಅವರ ನಾನಾವಿಧದ ಚಟುವಟಿಕೆಗಳನ್ನು ಅಲ್ಲಲ್ಲಿ ನಾನು ಉಲ್ಲೇಖಿಸಿದ್ದು ಅವೆಲ್ಲವುಗಳಲ್ಲಿ ಪ್ರತಿಯೊಂದರ ವೃತ್ತಾಂತದ ಬಗೆಗೂ ಒಂದೊಂದು ಗ್ರಂಥವನ್ನೆ ಬರೆಯಬಹುದಾಗಿದೆ. ಈ ಗ್ರಂಥದಲ್ಲಿ ನನ್ನ ಆಕಾಂಕ್ಷೆಗೆ ಒಂದು ಮಿತಿಯಿದ್ದುದ-ರಿಂದ ಅವರ ಬಹುಮುಖ ಪ್ರತಿಭೆಯನ್ನು ಕುರಿತು ಸ್ಥೂಲವಾಗಿ ಕೆಲವೆ ಮಾತು-ಗಳನ್ನು ಇಲ್ಲಿ ಹೇಳಬೇಕೆಂದಿರುವೆ. ಭವ್ಯ ಗೊಮ್ಮಟೇಶ್ವರನನ್ನು ನನ್ನ ಈ ಚಿಕ್ಕ ಕೈಗಳಿಂದ ಅಳೆಯಬಲ್ಲೆನೆ? ನನ್ನ ಪುಟ್ಟ ಪೂಮಾಲೆಯೊಂದು ಆತನ ಶ್ರೀಪಾದ-ಗಳನ್ನು ಸೋಂಕಿದರೆ ಸಾಕು, ನಾನು ಧನ್ಯನಾಗುವೆ.

ಶ್ರೀ ಅರವಿಂದರು ಶ್ರೇಷ್ಠ ವಿದ್ವಾಂಸರೆಂದೂ ಸಾಹಿತ್ಯಜ್ಞರೆಂದೂ ಖ್ಯಾತಿ-ಪಡೆದಿದ್ದಾರೆ. ನಾನಾ ವಿಷಯುಗಳನ್ನು ಕುರಿತು ರಾಶಿರಾಶಿಯಾಗಿ ಅವರು ಬರೆದುದು ಪರ್ವತಪ್ರಾಯವಾಗಿ ಒಟ್ಟಿದೆ. ಅವರ ಪ್ರತಿಭೆ ಮೌಲಿಕವಾದುದು, ವಿಷಯ-ಸಂಗ್ರಹಪ್ರಭುತ್ವವು ಅಪಾರವಾದುದು, ಭಾಷೆ ಸ್ಫೂರ್ತಿಶಾಲಿಯಾದುದು, ಇವೆಲ್ಲವುಗಳ ಫಲವಾಗಿ ಅವರ ಲೇಖನಗಳಲ್ಲಿ ಅದೊಂದು ಬಗೆಯ ಅಪ್ರತಿಮವಾದ ಗುರುತ್ವಾಕರ್ಷಣೆಯುಂಟು. ಅವರ ಅಚ್ಚುಮೆಚ್ಚಿನ ವಿಷಯುಗಳೆಂದರೆ ವಾಙ್ಮಯ, ರಾಜ್ಯಶಾಸ್ತ್ರ, ಅಧ್ಯಾತ್ಮವಿದ್ಯೆ, ತತ್ತ್ವಶಾಸ್ತ್ರ, ಸಂಸ್ಕೃತಿ, ಯೋಗ ಮತ್ತು ಸಮಾಜ-ಶಾಸ್ತ್ರ. ಇವುಗಳಲ್ಲಿ ಯಾವೊಂದರ ಬಗ್ಗೆಯೂ ಅವರು ಅಮೋಘವಾಗಿ ಬರೆದಿ-ದ್ದಾರೆ. ಆಯಾ ಶಾಸ್ತ್ರಕ್ಕೆ ಅವರಿತ್ತ ಕಾಣಿಕೆ ಅಪೂರ್ವವಾದುದು. ಪ್ರತಿ ಕ್ಷೇತ್ರದಲ್ಲಿಯೂ ಅವರ ವಿಚಾರಪ್ರಣಾಲಿಯಿಂದ ಅಂದಿನ ಯುಗದ ವಿಚಾರಗಳಲ್ಲಿ ಕ್ರಾಂತಿಯಾಗಿದ್ದು ಈ ಕ್ರಾಂತಿಯು ಪ್ರಗತಿನಿಷ್ಠವಾಗಿದೆ. ಗ್ರೀಕ-ಲ್ಯಾಟಿನ್ ಭಾಷೆಗಳಲ್ಲಿಯು ಅವರ ವಿದ್ವತ್ತೆಯೂ ಆ ಭಾಷೆಗಳಲ್ಲಿಯು ಅವರ ಕವಿತಾ-ಪ್ರೌಢಿಮೆಯೂ ಸುವಿಖ್ಯಾತವೆ .ಆಗಿವೆ. ಇವನ್ನು ಒಂದೊಪ್ಪತ್ತು ಬಿಟ್ಟರೂ ಇಂಗ್ಲಿಷ್ ಭಾಷೆಯಲ್ಲಿಯು ಅವರ ಕಾವ್ಯಗಳಲ್ಲಿಯೂ ಇತರ ಗ್ರಂಥಗಳಲ್ಲಿಯೂ ಭಾವದ ಗಭೀರತೆಯುಂಟು, ವಿಚಾರಗಳ ವಿಶಾಲತೆಯುಂಟು. ವಾಚಕರು ಉಡ್ಡಾಣಕ್ಕೆ ಸಿದ್ಧರಾಗುವದಕ್ಕಿಂತ ಮುಂಚೆಯೆ ಅವರ ಪ್ರತಿಭಾಪಕ್ಷಿ ಅಂತರಿಕ್ಷದಲ್ಲಿ ವಿಹರಿಸುವದುಂಟು. ಸ್ವರ್ಗೀಯ ವಾತಾವರಣವನ್ನೆ ಅವರು ಸದಾ ನಿರ್ಮಿಸುವರು. ಅವರ 'ಸಾವಿತ್ರಿ' ಕಾವ್ಯವು ಸಾಹಿತ್ಯಪ್ರಪಂಚದಲ್ಲಿಯೆ ಒಂದು ಅಪೂರ್ವ ಸಾಹಸವಾಗಿದೆ. ಆ ಕಾವ್ಯದ ಹೆಸರನ್ನೂ ಮೂಲಭೂತ ಕಥೆಯನ್ನೂ ವಿಪುಲ ಅಭಿಜಾತ ಸಾಹಿತ್ಯಕ್ಕಾಗಿ ಹೆಸರಾಂತ ಸಂಸ್ಕೃತ ಭಾಷೆಯೊಳಗಿನ ಒಂದು ಮಹಾ-ಕಾವ್ಯದಿಂದ ಎರವಲಾಗಿ ತೆಗೆದುಕೊಳ್ಳಲಾಗಿದೆ. ತಾವು ಕಂಡ ದೃಷ್ಟಾಂತ (Vision) ಗಳನ್ನೂ ಉಂಡ ಅನುಭವಗಳನ್ನೂ ಹಾಸುಹೊಕ್ಕಾಗಿ ಮಾಡಿ ಇಲ್ಲಿ

ಒಂದು ಸಮಗ್ರ ರೂಪಕಕಥೆಯಲ್ಲಿ ಕೊನೆಯವರೆಗೂ ಅವನ್ನು ನಯವಾಗಿ ಹೆಣೆದಿದ್ದಾರೆ. ಡಾಂಟೆ ಕವಿಯ 'ಡಿವ್ಹೈನಾ ಕಾಮೆಡಿಯಾ' ಮತ್ತು ಮಿಲ್ಟನ್ ಕವಿಯ 'ಪ್ಯಾರಾಡೈಜ್ ಲಾಸ್ಟ' ಎಂಬ ಮಹಾಕಾವ್ಯಗಳು ಈ ಸಂದರ್ಭದಲ್ಲಿ ಒಮ್ಮೆಲೆ ಸ್ಮರಣೆಗೆ ಬರುತ್ತವೆ. ಒಂದು ದೃಷ್ಟಿಯಿಂದ 'ಸಾವಿತ್ರಿ'ಯು ಇದುವರೆಗಿನ ಎಲ್ಲ ಮಹಾಕಾವ್ಯಗಳಿಗಿಂತ ಮಿಗಿಲಾಗಿದೆ. ಮಹಾಕಾವ್ಯವೆಂದ ಮೇಲೆ ಒಂದು ಮಹಾ ಜನಾಂಗ, ಆ ಜನಾಂಗದ ಪರಂಪರಾಗತವಾದ ಒಂದು ಮಹಾ ಕಥೆ, ಉದಾತ್ತ ರೂಪಕದ ಕಥಾಶೈಲಿ ಇವಿಷ್ಟು ಬೇಕೇ ಬೇಕು. ಆದರೆ ಈ 'ಸಾವಿತ್ರಿ' ಕಾವ್ಯದಲ್ಲಿ ಈ ಆವಶ್ಯಕ ಸಂಗತಿಗಳಲ್ಲದೆ ಹೆಚ್ಚಿನದೇನೊ ಒಂದಿದೆ. ಮಾನವಕುಲವು ಜನಿಸಿದಂದಿನಿಂದ ಇಂದಿನವರೆಗೂ ಯಾವ ಆಧ್ಯಾತ್ಮಿಕ ಯಾತ್ರಿಕನೂ ಸಂಶೋಧನೆಗೈಯದಂಥ ಅಥವಾ ಸಂಶೋಧನೆಗೈದಿದ್ದರೂ ವ್ಯಕ್ತಪಡಿಸಲಾರದಂಥ ಚೇತನದ ತುರೀಯ ಉತ್ತುಂಗಾವಸ್ಥೆಗಳನ್ನು ಶ್ರೀ ಅರವಿಂದರು ಮೊದಲುಬಾರಿಗೆ ಹೀಗೆ ಹೀಗೆಯೆ ಎಂದು ಇಲ್ಲಿ ವರ್ಣಿಸಿದ್ದಾರೆ. ಇದರಿಂದಾಗಿ ಈ ಕಾವ್ಯವು ತನ್ನ ವಾಚಕರನ್ನು, ತೇಲುತ್ತಿರುವ ವಿಶ್ವಗಳ ಆಚೆಗೂ ಅವುಗಳ ಹಿಂದೆಯೂ ತೊಳಗುತಿರುವ ಆದಿಪುರುಷನ ಪ್ರಾತಿಭಸಂಕಲ್ಪದ ರಹಸ್ಯಮಯ ಲೋಕಗಳಲ್ಲಿ ಕರೆದೊಯ್ಯುವದು. ಹೀಗಾಗಿ, ಈ ಕಾವ್ಯದ ಅಂತರಿಕ ಸೂಕ್ಷ್ಮ ಗರ್ಭಿತಾರ್ಥವನ್ನು ಅರಿಯಲು ಪ್ರಯತ್ನಿಸಬೇಕೆಂದರೂ ವಾಚಕರು ಹೌಹಾರಿ ಕಣ್ಗೆಡುತ್ತಾರೆ. ಕಾವ್ಯವನ್ನು ಓದುತಿರುವಂತೆ ಅಲ್ಲಲ್ಲಿ ಆಗೀಗ ಸಿಂಹದಂತೆ ಹೊರಳಿ ಹಿಂದೆ ನೋಡಬೇಕಾಗುವದು, ಕೆಲಕಾಲ ವಿಶ್ರಮಿಸಬೇಕಾಗುವದು, ಎತ್ತರವನ್ನು ಮತ್ತೊಮ್ಮೆ ಕ್ರಮಕ್ರಮವಾಗಿ ಅಳೆದು ನೋಡಬೇಕಾಗುವದು. ಏಕೆಂದರೆ ಆಯಾ ಸಂದರ್ಭಗಳಲ್ಲಿ ಪ್ರತಿ ಪದವೂ ಒಂದು ನಿರ್ದಿಷ್ಟ ದೃಷ್ಟಾಂತದ ಪ್ರತೀಕವಾಗಿರುವದು, ಪ್ರತಿ ಚರಣವೂ ಒಂದೊಂದು ಅಪೂರ್ವ ಸತ್ಯಾನುಭವದ ಘನೀಭೂತ ಸ್ವರೂಪವೆ ಆಗಿರುವದು. ಈ ಕಾವ್ಯರಾಜದ ಲಕ್ಷಣಗಳನ್ನು ನಿರೂಪಿಸಬೇಕೆಂದರೂ ಯಾರಿಂದಲೂ ಸಾಧ್ಯವಿಲ್ಲ. ದ್ರಷ್ಟಾರನೊಬ್ಬನ ದರ್ಶನ, ಪ್ರವಾದಿಯೊಬ್ಬನ ಧ್ವನಿ, ಕವಿಯೊಬ್ಬನ ಪ್ರೇರಣೆ, ಕಲಾಶಿಲ್ಪಿಯೊಬ್ಬನ ತಂತ್ರ ಇವೆಲ್ಲವೂ ಒಂದೆಡೆಗೆ ಅಪ್ರತಿಮವಾಗಿ ಮೇಳೈಸಿವೆ. ಆದುದರಿಂದ, ಶಾಶ್ವತ ಸತ್ಯದ ಸಂಶೋಧನಕ್ಕಾಗಿ ಹೊರಟ ಈ ಮಹಾಕಾವ್ಯವು ಪೌರಾಣಿಕಕಥೆಯ ಒಪ್ಪವನ್ನು ಹಾಕಿಕೊಂಡಿದ್ದರೂ ಅತ್ಯಂತ ಮಹೋನ್ನತವಾಗಿದೆ.

ಶ್ರೀ ಅರವಿಂದರ ಆಳವಾದ ವಿದ್ವತ್ತೆಯು ವೇದ-ಉಪನಿಷತ್ತು-ಗೀತೆಗಳಿಗೆ ಅವರು ಬರೆದ ಅಪೂರ್ವ ಭಾಷ್ಯ-ಟೀಕೆಗಳಲ್ಲಿ ಗೋಚರವಾಗುತ್ತದೆ. ಮಂತ್ರಾದಿಗಳಿಗೆ ಅವರು ಹಚ್ಚಿದ ನವೀನ ಅರ್ಥವು ಒಂದು ನೂತನ ಪ್ರಸ್ಥಾನವನ್ನೆ ಸ್ಥಾಪಿಸುತ್ತದೆ. ಈ ದೆಸೆಯಲ್ಲಿ ಅವರು ಕೃಷಿಗೈದ ಕೃತಿಗಳು ಬೌದ್ಧಿಕ ಇಂದ್ರಜಾಲಗಳೇನಲ್ಲ.

ಪ್ರಾಚೀನ ಪದಗಳಲ್ಲಿಯೂ ಮಂತ್ರಗಳಲ್ಲಿಯೂ ಋಷಿಗಳು ಹುದುಗಿಸಿ ಇರಿಸಿದ ಅರ್ಥದ ಒಳ ಹುದುವನ್ನ ಅವರು ಹೇಗೆ ಸವಿದು ನೋಡಬಲ್ಲರೆಂಬುದು ಅವರ ಗ್ರಂಥಗಳಿಂದ ಸ್ಪಷ್ಟವಾಗುತ್ತದೆ. ಋಕ್ಕುಗಳೆಂದರೆ ಅಪ್ರಬುದ್ಧ ಅನಾಗರಿಕ ಜನಾಂಗವೊಂದು ಪ್ರಕೃತಿದೇವತೆಗಳನ್ನು ಉದ್ದೇಶಿಸಿ ಮಾಡಿದ ಅಸಂಬದ್ಧ ಅಪೂರ್ಣಾರ್ಥದ ಅಪಲಾಪಗಳೆಂದು ಅನೇಕ ಪ್ರಾಚ್ಯವಿದ್ಯಾಪ್ರವೀಣರು ಹೇಳಿದ್ದಾರೆ. ಇವರಿಗೆ ಪ್ರಮಾಣಗ್ರಂಥವೆಂದರೆ ಸಾಯಣಭಾಷ್ಯ. ಕರ್ಮಕಾಂಡವನ್ನೆ ಮುಖ್ಯವೆಂದು ಬಗೆದು ಶ್ರೀ ಸಾಯಣರು ತಮ್ಮ ಭಾಷ್ಯವನ್ನು ಯಾಜ್ಞಿಕವಿಧಿಗಳಿಗೆ ಹೊಂದಿಸಿದರು; ಅವರ ದೃಷ್ಟಿಯಲ್ಲಿ ವೇದವೆಂಧರೆ ಯಜ್ಞಯಾಗಾದಿ ಕರ್ಮಾಚರಣೆಯ ಆಧಾರಗ್ರಂಥವೆ ಸರಿ. ಸಾಯಣರ ತರುವಾಯ ಬಂದ ಅನೇಕ ಮಹನೀಯರು ಅವರ ಅರ್ಥವನ್ನೆ ಎತ್ತಿಹಿಡಿದರು. ಇದನ್ನು ಅನುಸರಿಸಿಯೆ ಯುರೋಪಿಯನ್ ಪ್ರಾಚ್ಯವಿದ್ಯಾಪ್ರವೀಣರು ಹೇಳುವದೇನಂದರೆ: ನಿಸರ್ಗದ ಮಹಾಭೂತಗಳೆ ವೇದಗಳಲ್ಲಿ ದೇವತಾಮೂರ್ತಿಗಳಾಗಿವೆ, ದೇವತೆಗಳಿಗೆ ಮನುಷ್ಯರ ರೂಪ-ಆಕಾರಗಳನ್ನು ಆರೋಪಿಸಲಾಗಿದೆ, ಆಕಾಶದೊಳಗಿನ ಅದ್ಭುತಗಳಿಂದ ಭಯಗೊಂಡ ಪಿತೃಪ್ರಧಾನ ಆರ್ಯಕುಟುಂಬಸ್ಥರು ತಮ್ಮ ಕಲ್ಯಾಣಕ್ಕಾಗಿ ಈ ದೇವತಾಮೂರ್ತಿಗಳನ್ನು ಕಂಠೋಕ್ತವಾಗಿ ಪ್ರಾರ್ಥಿಸಿದ್ದಾರೆ ಇತ್ಯಾದಿ ಇತ್ಯಾದಿ. ಆದರೆ ಇಂಥ ಅಲ್ಪಬುದ್ಧಿಯ ಕಾರ್ಯಕಾರಣಮೀಮಾಂಸೆಯನ್ನು ಶ್ರೀ ಅರವಿಂದರು ಅಲ್ಲಗಳೆದಿದ್ದಾರೆ; ಅವರ ಅಭಿಪ್ರಾಯವೆಂದರೆ: ವೇದವನ್ನು ಅರ್ಥಮಾಡಿಕೊಳ್ಳಬೇಕಾದರೆ ಶಬ್ದಬ್ರಹ್ಮಾತೀತವಾದ ಪ್ರತ್ಯಕ್ಷ ಅನುಭವವನ್ನು ಋಷಿಗಳಂತೆ ಪಡೆಯಬೇಕು. ಯಾರಿಗೆ ಈ ಅನುಭವವಿಲ್ಲವೊ ಅವರು ವೇದರಹಸ್ಯವನ್ನು ಅರಿಯಲಾರರು. ಬಹು ಪ್ರಾಚೀನ ಕಾಲದಲ್ಲಿ ಗುಹ್ಯವಿದ್ಯೆಯು ಗುರುಗಳಿಂದ ಮಂತ್ರೋಪದೇಶಪಡೆದ ಕೆಲವೆ ಪರಿಣತರ ಸೊತ್ತಾಗಿದ್ದಿತೆಂಬುದನ್ನು ನಾವು ಲಕ್ಷಿಸಬೇಕು. ಶ್ರೀ ಅರವಿಂದರ ದೃಷ್ಟಿಯಲ್ಲಿ ಋಷಿಗಳಿಗೆ ವೇದ ಮಂತ್ರಗಳ ರಹಸ್ಯಾರ್ಥವು ವಿದಿತವಾಗಿತ್ತು ಇಷ್ಟೇ ಅಲ್ಲ, ಅಪೌರುಷೇಯ ಮಂತ್ರಗಳ ದ್ರಷ್ಟಾರರಾದ ಅವರಿಗೆ ಸತ್ಯದ ರೂಪವೊಂದು ಪ್ರಕಟವಾಯಿತು; ಆ ರೂಪವನ್ನು ವರ್ಣಿಸಲು ನಿಸರ್ಗದ ಭವ್ಯ ರೂಪಕದ ಉಜ್ವಲ ಭಾಷೆಯನ್ನೆ ಅವರು ಬಳಸಿಕೊಂಡರು. ಆದುದರಿಂದಲೆ ಅಂತರ್ನಿಹಿತವಾದ ಆಧ್ಯಾತ್ಮಿಕ ಅರ್ಥವೊಂದು ಎಲ್ಲ ಮಹತ್ವದ ಋಕ್ಕುಗಳಿಗೆ ಉಂಟೆಂದು ಹೇಳಿದರೆ ಉಪಚಾರವಾಗಲಿ ಉಪಪ್ರಪತ್ತಿಯಾಗಲಿ ಆಗಲಾರದು. ಅಂಥ ಅರ್ಥವಿರುವದು ಯುಕ್ತವೆ ಸರಿ; ಏಕೆಂದರೆ ಋಷಿಗಳ ಅಂತರಂಗದಲ್ಲಿ ಅದೇ ಅರ್ಥವಿತ್ತು. ಇಲ್ಲದಿದ್ದರೆ ಅಗ್ನಿಗೆ ಜಾತವೇದ (ಜ್ಞಾತಾ) ನೆಂದು ಆದೇಕೆ ಹೇಳಿಯಾರು? ಕತ್ತಲೆಯ ಆಚೆಯ ದಂಡೆಗೆ ಕರೆದೊಯ್ಯಲು ನೆರವಾಗಬೇಕೆಂದು ನಿತ್ಯನೂತನವಾದ ಪೂರ್ವದಿಕ್ಕಿನ ಉಷೆಗೆ ಕೃತಜ್ಞತಾಪೂರ್ವಕವಾಗಿ ಆದೇಕೆ ಪ್ರಾರ್ಥಿಸಿಯಾರು?

ಶ್ರೀ ಅರವಿಂದರ ಪ್ರತಿಪಾದನೆಯ ಸಾರವು ಇಂತಿದೆ :

'ವೇದಕಾಲದ ಭಾರತದಲ್ಲಿಯೂ ಪ್ರಾಚೀನಕಾಲದ ಇಜಿಪ್ತದಲ್ಲಿಯೂ ಆಧ್ಯಾತ್ಮಸಿದ್ಧಿಯಾಗಲಿ ಗುಹ್ಯವಿದ್ಯೆಯಾಗಲಿ ಕೆಲವರ ಪ್ರಾಪ್ತಿಯೆ ಆಗಿತ್ತು. ಮಾನವಕುಲದ ಪಾಮರಜನಸಮೂಹದಲ್ಲಿ ಅದು ಹಬ್ಬಿದ್ದಿಲ್ಲ. ಈ ಪಾಮರ ಜನತೆಯು ಬಹಳ ಮಂದಗತಿಯಿಂದ ಮುಂದೆ ಸಾಗುವದು. ಈ ಜನವೃಂದದಲ್ಲಿ ಭೌತಿಕ, ಪ್ರಾಣಿಕ ಅಂತಸ್ತುಗಳಿಂದ ಹಿಡಿದು ಮಾನಸಿಕ ಅಂತಸ್ತಿನ ವರೆಗೆ ಎಲ್ಲ ಅಂತಸ್ತುಗಳನ್ನು ಗುರುತಿಸಬಹುದು. ಕೆಲವೆ ಜನರು ಮಾತ್ರ ಜನಸಾಮಾನ್ಯರ ಮಟ್ಟವನ್ನು ಮೀರಿ, ಆಧ್ಯಾತ್ಮಿಕ ಗುಹ್ಯವಿದ್ಯೆಯ ಅನುಭವಗಳನ್ನು ಪಡೆದು ವಿಕಾಸಕ್ಕೆ ಮನೋಲೋಕದಿಂದ ಆತ್ಮಲೋಕಕ್ಕೂ ಅತಿಮಾನಸಲೋಕಕ್ಕೂ ದಾರಿಮಾಡಿಕೊಟ್ಟರು.'

ಮತ್ತೇನೆಂದರೆ :

'ಭಾರತದಲ್ಲಿ ಅಂತಜ್ಞಾನವು ಮೊದಲು ರೂಪಗೊಂಡಿತು. ಆ ಮೇಲೆ ಬೌದ್ಧಿಕ ತಾತ್ತ್ವಿಕ ವಿವೇಚನೆಗಳೂ ನಿರೂಪಣೆಗಳೂ ಬಂದವು. ವೇದಕಾಲವನ್ನು ಹಿಂಬಾಲಿಸಿ ಅಗಾಧವಾದ ಬೌದ್ಧಿಕ ಜಿಜ್ಞಾಸೆಯು ಕಾಣಿಸಿಕೊಂಡಿತು. ಈ ಕಾಲ-ದವರು ವೇದಪ್ರತಿಷ್ಠಿತವಾದ ಆಧ್ಯಾತ್ಮಿಕ ಸತ್ಯವನ್ನೆ ತಮಗೆ ಆಧಾರವಾಗಿಟ್ಟು-ಕೊಂಡರೂ ಅದನ್ನು ಕಂಡುಕೊಳ್ಳುವ ಅವರ ರೀತಿ ನವೀನವಾಯಿತು ; ಆ ಸತ್ಯವನ್ನು ವೇದಕಾಲದ ಋಷಿಗಳಂತೆ ಪ್ರತ್ಯಕ್ಷ ಪ್ರಮಾಣಗಳ ಮೂಲಕ ದಿವ್ಯಸ್ಫೂರ್ತಿಯಿಂದ ಅರಸದೆ ತಾರ್ಕಿಕ-ಬೌದ್ಧಿಕ-ಮಾನಸಿಕ ಸಾಧನಗಳ ಮೂಲಕವೂ ತದನುಸಾರವಾಗಿ ಬೆಳೆದುಬಂದ ಯೋಗಪದ್ಧತಿಗಳ ಮೂಲಕವೂ ತಿಳಿಯಲು ಪ್ರಯತ್ನಪಟ್ಟರು. ಇದರ ಫಲವಾಗಿ, ಆಧ್ಯಾತ್ಮಿಕ ಪ್ರತೀತಿಗಳ ಸಲುವಾಗಿ ಬುದ್ಧಿಪ್ರಧಾನ ಮನವನ್ನು ಪರಿವರ್ತನಗೊಳಿಸಲು ಸಾಧ್ಯವಾಯಿತು. ಜೊತೆಜೊತೆಗೆ ಮನವೆ ಆಧ್ಯಾತ್ಮಿಕ ಪರಿವರ್ತನೆಯನ್ನು ಹೊಂದಿತು. ತದನಂತರ, ಬ್ರಹ್ಮವಿದ್ಯೆ-ಯೋಗಶಾಸ್ತ್ರಗಳಲ್ಲಿ ಬೆಳವಣಿಗೆ ಆದಾದಂತೆ, ಭಾವಭಕ್ತಿಗಳ ಮೂಲಕವೂ ಹೃದಯಸಂಸ್ಕಾರಗಳ ಮೂಲಕವೂ ಕಲಾತ್ಮಕ ರಸಾತ್ಮಕ ರೀತಿಗಳಿಂದ ಅದೇ ಸತ್ಯವನ್ನು ಕಾಣಬಯಸುವ ಕಾಲವೊಂದು ಬೆಂಬತ್ತಿ ಬಂತು.'

ವೇದಭಾಷ್ಯದ ಕ್ಷೇತ್ರದಲ್ಲಿ ವ್ಯಕ್ತವಾದ ಶ್ರೀ ಅರವಿಂದರ ಪ್ರತಿಭೆ-ವಿದ್ವತ್ತೆಗಳು ಉಪನಿಷತ್ತು-ಗೀತೆಗಳ ಬಗ್ಗೆ ಬರೆದ ಗ್ರಂಥಗಳಲ್ಲಿಯೂ ಒಡಮೂಡಿಬಂದಿವೆ. ರಾಮಾಯಣ-ಮಹಾಭಾರತಗಳ ಬಗೆಗೂ ಕಾಲಿದಾಸಾದಿ ಅಭಿಜಾತ ಕವಿಗಳ ಕೃತಿಗಳ ಬಗೆಗೂ ಅವರು ಪಡಿಮೂಡಿಸಿದ ಅಮೋಘ ವಿಚಾರಗಳನ್ನು ಅವಲೋಕಿಸಿ ದರೆ ಇಂಥ ಸಾರ್ವಭೌಮ ಕಾವ್ಯಗಳ ಕೇಂದ್ರಸ್ಥ ಆತ್ಮತತ್ತ್ವವನ್ನೆ ಅತಿ ಶೀಘ್ರವಾಗಿ ಗ್ರಹಿಸಿಕೊಳ್ಳಬಲ್ಲ ಎಂಥದೊಂದು ವಿಶಾಲ ದೃಷ್ಟಿಯು ಅವರಲ್ಲಿ ಇತ್ತೆಂಬುದು

ನಮ್ಮ ನಿದರ್ಶನಕ್ಕೆ ಬರುತ್ತದೆ.

ಅತಿ ದೊಡ್ಡ ವಿಧಾಯಕ ವಿಮರ್ಶಕರೆಂದೂ ಶ್ರೀ ಅರವಿಂದರಿಗೆ ಸ್ಥಾನವುಂಟು. ಅವಶ್ಯವೆನಿಸಿದಾಗ ಲೇಖನಿಯನ್ನು ಮರ್ಮಭೇದಕ ರೀತಿಯಲ್ಲಿ ಹೇಗೆ ಉಪಯೋಗಿಸಬೇಕೆಂಬುದೂ ಅವರಿಗೆ ಚೆನ್ನಾಗಿ ಗೊತ್ತಿತ್ತು. ಕೆಲವು ಸಂದರ್ಭಗಳಲ್ಲಿ ಹಾಗೆ ಅವರು ಮಾಡಿದುದೂ ಉಂಟು. ವಿಲಿಯಂ ಆರ್ಚರ ಎಂಬವರು ಭಾರತೀಯ ಕಲೆಗಳ ಬಗ್ಗೆ ಅನ್ಯಾಯ್ಯವಾಗಿ ಕುತ್ಸಿತ ಟೀಕೆಯನ್ನು ಮಾಡಿದಾಗ ಇವರು ಸಿಡಿಮಿಡಿಗೊಂಡು ಪ್ರತಿಭಟಿಸಿದರು. ಆದರೆ ಹೀಗೆ ನಡೆದುದು ಬಹಳ ಅಪರೂಪ. ಇವರ ನಿಲುವು ಯಾವಾಗಲೂ ವ್ಯಾಪಕವಾದುದು, ಉದಾರವಾದುದು, ಸಮನ್ವಯ-ಪರವಾದುದು. 'ಭವಿಷ್ಯತ್ ಕಾವ್ಯ (Future Poetry)' ವನ್ನು ಕುರಿತು ಬರೆದ ಅವರ ಪ್ರಬಂಧಗಳು ಜಾಗತಿಕ ಸಾಹಿತ್ಯದ ಆಳಗಲಗಳನ್ನು ಎಷ್ಟು ಪ್ರಗಲ್ಭವಾಗಿ ಅವರು ಕಂಡಿದ್ದರೆಂಬುದಕ್ಕೆ ಪ್ರಮಾಣವಾಗಿವೆ. ಅನ್ಯದೇಶಗಳ ಅನ್ಯಭಾಷೆಗಳ ಸಾಹಿತ್ಯದ ತಿರುಳನ್ನು ಎಷ್ಟೊಂದು ಸಹಾನುಭೂತಿಪೂರ್ವಕವಾಗಿ ಗ್ರಹಿಸಬಲ್ಲರೆಂಬುದು ನಮಗೆ ಈ ಗ್ರಂಥದಿಂದ ತಿಳಿದುಬರುತ್ತದೆ.

ಶ್ರೀ ಅರವಿಂದರು ರಾಜಕೀಯ ರಂಗದಲ್ಲಿ ಪ್ರತ್ಯಕ್ಷವಾಗಿ ಧುಮುಕಿದಾಗ ಗೈದ ಸೇವೆಗಾಗಿ ಭಾರತದ ಸ್ವಾತಂತ್ರ್ಯಸಂಗ್ರಾಮದ ಇತಿಹಾಸದಲ್ಲಿ ಒಂದು ವಿಶಿಷ್ಟ ಪ್ರಕರಣವೆ ಮೀಸಲಾಗಿ ಉಳಿಯುವದು. ಅಂದಿನ ರಾಜಕಾರಣವು ದೇಶಭಕ್ತಿ-ಪೂರಿತವಾಗಿತ್ತು; ರಾಷ್ಟ್ರವು ತನ್ನ ಅಸ್ತಿತ್ವಕ್ಕಾಗಿ ಹೂಡಿದ ಹೋರಾಟವೆ ಅಂದು ರಾಜಕಾರಣವೆನಿಸುತಿತ್ತು. ಇಂಥ ಹೋರಾಟದಲ್ಲಿ ಶ್ರೀ ಅರವಿಂದರು ವಹಿಸಿದ ಪಾತ್ರವು ಧೀರೋದಾತ್ತ ನಾಯಕನಿಗೆ ಒಪ್ಪುವಂತಹದಾಗಿದೆ. ಸಾಮಾನ್ಯವಾಗಿ ರಾಜಕಾರಣವು ಚತುರ ಅಧಿಕಾರಪ್ರಮತ್ತರ ಚದುರಂಗದಾಟವಾಗಿದ್ದು ಮತ್ಸರ-ಯುಕ್ತ ಕುತಂತ್ರಗಳಿಂದ ಅದು ಸದಾ ತುಂಬಿರುವದುಂಟು. ಇಂಥ ಕುತಂತ್ರಗಳಿಗೆ ಅಂದಿನ ಕಾಲದ ರಾಜಕಾರಣದಲ್ಲಿ ಆಸ್ಪದವೆ ಇದ್ದಿಲ್ಲ. ಕೊನೆಯೆ ಇಲ್ಲದಂತೆ ಹೆಚ್ಚು ಹೆಚ್ಚು ತ್ಯಾಗಮಾಡಬಲ್ಲ ನಿಃಸ್ವಾರ್ಥ ದೇಶಸೇವಕರೆ ಅಂದಿನ ರಾಜಕೀಯ ಕ್ಷೇತ್ರದಲ್ಲಿ ಪ್ರವೇಶಿಸುತಿದ್ದರು. ಇವರಾದರೊ ತಮ್ಮ ರಾಜಕಾರಣವನ್ನು ಅತಿ ಉಚ್ಚಮಟ್ಟದ್ದನ್ನಾಗಿ ಮಾಡಿದರು. ಕೇವಲ ಆರ್ಥಿಕ ಭದ್ರತೆಯಾಗಲಿ ಸುರಾಜ್ಯವಾಗಲಿ ಅವರ ಪ್ರಮೇಯವಾಗಿರಲಿಲ್ಲ; ಪ್ರತಿ ರಾಷ್ಟ್ರಕ್ಕೂ ಸ್ವರಾಜ್ಯವೆಂಬುದು ಮೂಲಭೂತ ಹಕ್ಕು ಎಂಬುದೆ ಅವರ ಪ್ರತಿಪಾದನೆಯಾಗಿತ್ತು. ರಾಷ್ಟ್ರೀಯತ್ವಕ್ಕೆ ಧರ್ಮದ ಒಂದು ಉಚ್ಚ ಪೀಠವನ್ನು ಒದಗಿಸಿಕೊಟ್ಟರು. ರಾಷ್ಟ್ರದಲ್ಲಿ ಆಧ್ಯಾತ್ಮಿಕ ಪುನರುಜ್ಜೀವನವು ಜರುಗಿ ಬರಬೇಕಾದರೆ ರಾಜಕೀಯ ಸ್ವಾತಂತ್ರ್ಯವೊಂದು ಅದಕ್ಕೆ ಸಾಧನವೆಂದು ಅವರು ಭಾವಿಸಿದ್ದರು. ಭಾರತವು ಅವರಿಗೆ ಮಾತೃಸ್ವರೂಪವಾಗಿ ಕಂಡಿತು, ದೇವತಾಸ್ವರೂಪವಾಗಿ ಕಂಡಿತು. ಆತ್ಯಂತಿಕ ಭಕ್ತಿ-ನಿಷ್ಠೆಗಳಿಂದ ರಾಷ್ಟ್ರ-

ದುರ್ಗೆಯನ್ನು ಅವರು ಪೂಜಿಸಿದರು. ಸ್ವಾರ್ಥ-ಲಾಭಗಳನ್ನು ಕನಸುಮನಸಿನಲ್ಲಿಯೂ ಕಾಣರು. ಪವಿತ್ರತಮ ದೇಶಾಭಿಮಾನದ ಪ್ರತೀಕವೆ ಅವರಾಗಿದ್ದರು. ರಾಷ್ಟ್ರವೆಂಬುದು ಅವರಿಗೆ ಆತ್ಮಸ್ವರೂಪವಾಗಿಯೆ ಕಂಡಿತು; ಆದುದರಿಂದ ಅವರ ದೇಶಪ್ರೇಮಕ್ಕೆ ಆತ್ಮಿಕಪ್ರೇಮವೆಂದೂ ಕರೆಯಬಹುದು. ಬ್ರಿಟಿಶರ ಪಲ್ಲು ಹರಿದುಕೊಳ್ಳುವ ಪೂರ್ಣ ಸ್ವಾತಂತ್ರ್ಯ ಬೇಕೆಂದು ಪ್ರತಿಪಾದಿಸಿದವರಲ್ಲಿ ಅವರೆ ಮೊದಲಿಗರು. 'ಯುಗಾಂತರ' ಪತ್ರಿಕೆಯ ಮೇಲೆ ಬ್ರಿಟಿಶ ಸರಕಾರವು ರಾಜದ್ರೋಹದ ಖಟ್ಲೆ ಹಾಕಿದಾಗ ಬ್ರಿಟಿಶ್ ಕೋರ್ಟನ್ನು ತಾವು ಮನ್ನಿಸುವದಿಲ್ಲವೆಂದು ಡಾಣಾಡಂಗುರವಾಗಿ ಸಾರಿ ಆ ಪತ್ರಿಕೆಯ ಸಂಪಾದಕರು ಒಬ್ಬರ ಹಿಂದೊಬ್ಬರು ಸೆರೆಮನೆ ಕಾಣಬೇಕೆಂಬ ಸುಬದ್ಧ ಯೋಜನೆಯೊಂದು ಶ್ರೀ ಅರವಿಂದರ ಆದೇಶದಂತೆಯೆ ಪೂರ್ವನಿಯೋಜಿತವಾಗಿತ್ತು. ಅಂತೆಯೆ ತಾವು ಮನ್ನಿಸದಂಥ ನ್ಯಾಯಾಲಯಗಳ ಎದುರು ಆತ್ಮರಕ್ಷಣೆ ಮಾಡಿಕೊಳ್ಳಲು ಅವರೆಲ್ಲರೂ ಅಲ್ಲಗಳೆದರು. ರಾಷ್ಟ್ರೀಯ ಸೈನ್ಯವೊಂದು ರಚಿತವಾಗಿ ಅಲ್ಲಲ್ಲಿ ಅಡಗಿಕೊಂಡಿದ್ದು ಹೊತ್ತು ಬಂದಾಗ ಬ್ರಿಟಿಶರ ಮೇಲೆ ಎರಿಹೋಗಬೇಕೆಂಬ 'ಕಳ್ಳಗಾಳಗ (Guerilla Warfare)' ದ ಪದ್ಧತಿಯನ್ನು ಕೂಡ ಈ ಪತ್ರಿಕೆಯು ಸಮರ್ಥಿಸುವ ಸಾಹಸ ಮಾಡಿತು. ಆಗಿನ ಕಾಲದಲ್ಲಿ ಶ್ರೀ ಅರವಿಂದರ ಲೇಖನಗಳೂ ಭಾಷಣಗಳೂ ಅತ್ಯಂತ ಸ್ಫೂರ್ತಿಮಯವಾಗಿದ್ದು ಸಮಸ್ತ ರಾಷ್ಟ್ರೀಯ ಪಕ್ಷದ ನೀತಿಮತ್ತೆಯ ಮಟ್ಟವನ್ನು ಬಹು ಉಚ್ಚಸ್ಥಾನಕ್ಕೆ ಒಯ್ದವು. ಸರಕಾರವನ್ನೂ ಇತರ ಪಕ್ಷಗಳನ್ನೂ ಟೀಕಿಸುವದಕ್ಕಿಂತ ತಮ್ಮ ಸ್ವತ್ವವನ್ನೆ ಬೆಳಿಸಿಕೊಳ್ಳಬೇಕೆಂಬ ಮಾತಿಗೆ ಅವರು ಹೆಚ್ಚಿನ ಮಹತ್ವವನ್ನಿತ್ತರು. ಭಯಕಾರಕರ ಸಂಕೇತಮಾತ್ರದ ಹಿಂಸೆಯಲ್ಲಿ ಅವರಿಗೆ ನಂಬಿಗೆಯಿರಲಿಲ್ಲ; ಆದರೆ ಸ್ವಾತಂತ್ರ್ಯಕ್ಕಾಗಿ ಸಶಸ್ತ್ರ ಕ್ರಾಂತಿಯನ್ನು ಹೂಡುವದು ಪ್ರತಿ ರಾಷ್ಟ್ರದ ನ್ಯಾಯ್ಯವಾದ ಹಕ್ಕು ಎಂಬ ಮಾತಿನಲ್ಲಿ ಅವರಿಗೆ ಪೂರ್ಣ ವಿಶ್ವಾಸವಿತ್ತು. ಬಂಗಾಲದಲ್ಲಿರುವ ವರೆಗೆ ಕೊನೆಯ ಗಳಿಗೆಯ ವರೆಗೂ ಕ್ರಾಂತಿಕಾರಕರ ಗುಂಪುಗಳೊಡನೆ ಅವರ ನಿಕಟ ಸಂಪರ್ಕವಿತ್ತು. ಆದರೂ ವಿಸ್ತೃತ ತಳಹದಿಯ ಮೇಲೆ ಚಳವಳಿಯೊಂದು ಅತ್ಯಗತ್ಯವಾಗಿ ನಡೆಯಬೇಕೆಂಬ ಬಗೆಗೂ ಅವರಿಗೆ ಪೂರ್ಣ ಮನವರಿಕೆಯಾಗಿತ್ತು. ಚಂದ್ರನಗರಕ್ಕೆ ತೆರಳುವ ಕೊನೆಯ ನಿಮಿಷದ ವರೆಗೂ ಈ ದಿಶೆಯಲ್ಲಿ ಅವರು ಅವಿಶ್ರಾಂತವಾಗಿ ದುಡಿದರು. ಇದರ ಫಲವಾಗಿಯೆ ಅವರು ಕೊನೆಯಲ್ಲಿ ಅಹಿಂಸಾತ್ಮಕ ನಿರೋಧದ ಸಿದ್ಧಾಂತದ ರೂಪರೇಷೆಗಳನ್ನು ಸ್ಪಷ್ಟ ಶಬ್ದಗಳಲ್ಲಿ ನಿರೂಪಿಸಿದರು. ಪರಕೀಯ ರಾಜ್ಯದ ಹೊಟ್ಟೆಯಲ್ಲಿಯೆ ಸ್ವಕೀಯರ ಪ್ರತಿ ಸರಕಾರವೊಂದನ್ನು ಸ್ಥಾಪಿಸುವ ಗುರಿಯು ಅವರದಿತ್ತು. ಹೀಗೆ ಮಾಡುವದರಿಂದಲೆ ಇಲ್ಲಿ ಆಳುವದು ವಿದೇಶೀಯರಿಗೆ ಅಸಾಧ್ಯವಾಗಿ ಬಿಡುವದೆಂದು ಅವರ ಎಣಿಕೆಯಿತ್ತು. ನಮ್ಮ ಪ್ರತಿರೋಧವು ಬಲಿಬಲಿದು ಬಲಿಷ್ಠವಾದಂತೆ ಜಾಣರಾದ

ಬ್ರಿಟಿಶರು ಎಲ್ಲವನ್ನೂ ಕಳೆದುಕೊಳ್ಳಲೊಪ್ಪದೆ ಒಪ್ಪಂದಕ್ಕೆ ಬಂದೇ ಬರುವರೆಂದು ಶ್ರೀ ಅರವಿಂದರ ಲೆಕ್ಕವಿತ್ತು. ಅವರ ರಾಜಕೀಯ ಲೇಖನಗಳ ಶೈಲಿಯು ಯಾವಾಗೂ ಸರಳವೂ ಸ್ಪಷ್ಟವೂ ನೇರವೂ ಆಗಿರುತಿತ್ತು. ಅಂದಿನ ದಿನಗಳಲ್ಲಂತೂ ಅವನ್ನೋದಿದಾಗ ಮೈ ನವಿರೇಳುತಿತ್ತು; ಸ್ಫೂರ್ತಿಯುಕ್ಕಿ ಬಂದು ಅನ್ಯಾಯದ ವಿರುದ್ಧವಾಗಿ ಸಾತ್ವಿಕ ಸಂತಾಪವು ಹೆಚ್ಚುತಿತ್ತು. ಇಂದಿಗೂ ಅವು ಬೋಧಪ್ರದ ವಾಗಿವೆ, ವಿಚಾರಪರಿಪ್ಲುತವಾಗಿವೆ; ಅವರ ಉಜ್ವಲಪ್ರತಿಭೆಯೂ ಉಕ್ಕುವ ದೇಶ ಪ್ರೇಮವೂ ಸರಳ ಸುಂದರ ಪದಪ್ರಯೋಗವೂ ಇಂದಿಗೂ ನಮ್ಮನ್ನು ಬೆರಗು-ಗೊಳಿಸುವವು. ಇಂದಿನ ಮಿತಿಗೂ ಅವು ಅಚ್ಚಳಿಯದೆ ನಳನಳಿಸುತಿರುವವು. ಎಷ್ಟು ಸಲ ಓದಿದರೂ ಇನ್ನಿಷ್ಟು ಸಲ ಓದಬೇಕೆನಿಸುವದು.

ಶ್ರೀ ಅರವಿಂದರನ್ನು ಶ್ರೇಷ್ಠ ಪತ್ರಿಕೋದ್ಯಮಿಯೆಂದೂ ಜನರು ಒಮ್ಮೊಮ್ಮೆ ಕರೆವುದುಂಟು. ಆದರೆ ಅವರ ಪ್ರಕಾರವೆ ವಿಶಿಷ್ಟವಾದುದು. ಟಿಳಕರನ್ನೂ ಲಾಲಾಜಿ ಯವರನ್ನೂ ಗಾಂಧಿಯವರನ್ನೂ ಪತ್ರಿಕೋದ್ಯಮಿಗಳೆಂದು ಭಾವಿಸುವದಾದರೆ ಶ್ರೀ ಅರವಿಂದರೂ ಶ್ರೇಷ್ಠ ಶ್ರೇಣಿಯ ಪ್ರಭಾವಶಾಲಿ ಪತ್ರಿಕೋದ್ಯಮಿಗಳೆ ಸರಿ. ಆದರೆ ಈ ಮಹನೀಯರು ಪತ್ರಿಕೆಗಳನ್ನು ನಡಿಸುತಿದ್ದರೆಂದಾಗಲಿ ಅನೇಕ ಪತ್ರಿಕೆ ಗಳಲ್ಲಿ ಬರೆಯುತಿದ್ದರೆಂದಾಗಲಿ ಇಷ್ಟು ಮಾತ್ರಕ್ಕೆಯೆ ಅವರನ್ನು ಪತ್ರಿಕೋದ್ಯಮಿ ಗಳೆಂದು ಕರೆಯುವದು ಅಷ್ಟೊಂದು ಯುಕ್ತವಾಗಲಾರದು. ಪತ್ರಿಕೆಯ ಉದ್ಯಮ ವನ್ನು ಒಂದು ಜೀವನವೃತ್ತಿಯನ್ನಾಗಿ ಮಾಡಿಕೊಳ್ಳುವ ಸಾಮಾನ್ಯ ಪತ್ರಿಕೋದ್ಯಮಿ-ಯೆತ್ತ? ಸ್ವತ ಏವ ರಾಷ್ಟ್ರದ ಕಾರಣಪುರುಷರಾಗಿ ಬಾಳಿ ಮುಂಬರುವ ಸಂತಾನ ಕ್ಕಾಗಿ ಉಚ್ಚ ಆದರ್ಶಗಳನ್ನು ಪ್ರಯೋಗಮಾಡಿ ತೋರಿಸಿದ ಈ ವಿಭೂತಿ ಪುರುಷರೆತ್ತ? ಶ್ರೀ ಅರವಿಂದರಿಗೆ ಜೀವನದಲ್ಲಿ ನಿಶ್ಚಿತ ಧ್ಯೇಯವೊಂದಿತ್ತು; ಅದರ ಅರಿವೂ ಅವರಿಗಿತ್ತು. ಆ ಪರಮ ಧ್ಯೇಯದ ಸಿದ್ಧಿಗಾಗಿ ಪತ್ರಿಕೆಗಳನ್ನೂ ಅವರು ಸಾಧನಗಳನ್ನಾಗಿ ಮಾಡಿಕೊಂಡರು. ಅವರ ಬಾಳಿನ ಹಂಬಲವು ಇಬ್ಬಗೆಯ-ದಾಗಿತ್ತು. ಮೊದಲನೆಯದಾಗಿ, ಆಧ್ಯಾತ್ಮಿಕ ನವಚೈತನ್ಯವೆ ಆಧಾರವಾಗಿರುವ ಭಾರತೀಯ ಸರ್ವಾಂಗೀಣ ಪುನರುಜ್ಜೀವನವು ಒದಗಿಬರಬೇಕೆಂಬ ಹಂಬಲವು ಅವರಿಗಿತ್ತು; ಎರಡನೆಯದಾಗಿ, ಇಂಥ ಆಧ್ಯಾತ್ಮಿಕ ನವಜೀವನದಿಂದ ದೇಹ-ಮನ-ಪ್ರಾಣಗಳು ದಿವ್ಯತೆಯನ್ನು ಪಡೆಯಬೇಕೆಂಬ ಹಿರಿಹಂಬಲವೂ ಅವರಿಗಿತ್ತು. ಈ ಹಂಬಲಗಳು ಅವರಿಗೆ ಅತ್ಯಂತ ಪವಿತ್ರವಾಗಿದ್ದವು. ಇವನ್ನು ಪೂರೈಸಿಕೊಳ್ಳುವ ಮಹತ್ಕಾರ್ಯದಲ್ಲಿ ಪತ್ರಿಕೆಗಳನ್ನು ಅವರು ತಮ್ಮ ಉಪಕರಣಗಳನ್ನಾಗಿ ಮಾಡಿ ಕೊಂಡರು. ಪತ್ರಿಕೆಗಳು, ಚಿಕ್ಕ ಪ್ರಕಟನೆಗಳು, ಸಣ್ಣ ಪುಸ್ತಕಗಳು, ಗ್ರಂಥಗಳು ಪತ್ರಗಳು, ಸಂವಾದಗಳು, ಪ್ರವಚನಗಳು, ಭಾಷಣಗಳು, ಧ್ಯಾನಪ್ರಾರ್ಥನೆಗಳು, ಅನುಷ್ಠಾನ, ಅತಿಮಾನಸದ ಆವಾಹನೆ ಇವೆಲ್ಲವೂ ಅವರ ಬತ್ತಳಿಕೆಯಲ್ಲಿದ್ದ

ವಿವಿಧ ಆಯುಧಗಳು. ಈ ಭಗೀರಥಕಾರ್ಯದಲ್ಲಿ ಪತ್ರಿಕೋದ್ಯಮಿಯೆಂದೂ ಪ್ರಕಾಶಕನೆಂದೂ ಅವರು ಪಾತ್ರವಹಿಸಿದುದು ಅಲ್ಪಕಾಲದ ವರೆಗೆ ಮಾತ್ರ. ಅಷ್ಟೆ ಅವಧಿಯಲ್ಲಿ ಅದನ್ನವರು ಚತುರ ಶಿಲ್ಪಿಯಂತೆ ಚೆನ್ನಾಗಿ ನಿರ್ವಹಿಸಿ ತೋರಿಸಿದರು. ಪತ್ರಿಕೋದ್ಯಮಿಯ ವ್ಯಾಸಪೀಠದಿಂದ ಅವರು ಮಾಡಿದ ಕಾರ್ಯವು ಪತ್ರಿಕೋದ್ಯಮಿಗಳಿಗೆಲ್ಲ ಆದರ್ಶಪ್ರಾಯವಾಗಿದೆ. ಆಧ್ಯಾತ್ಮಿಕ ಹಿನ್ನೆಲೆಯಿರದ ಹೊರತು ಆ ಮಹೋನ್ನತ ಆದರ್ಶವನ್ನು ಅಳವಡಿಸಿಕೊಳ್ಳುವದು ಕಠಿಣವೆ ಸರಿ; ಅಲ್ಲಿಯವರೆಗೆ ಅದು ಕೇವಲ ಆದರ್ಶವಾಗಿಯೆ ಉಳಿಯುವದು.

ಭಾರತ ಸಂಸ್ಕೃತಿಯ ಬಗ್ಗೆ ಅವರು ತಾಳಿದ ಪ್ರೇಮವು ಇನ್ನಾರ ಪ್ರೇಮಕ್ಕಿಂತಲೂ ಕಡಿಮೆಯಿಲ್ಲ. ಅವರ ಆ ಪ್ರೇಮದೃಷ್ಟಿ ಪಕ್ಷಪಾತದ ದೃಷ್ಟಿಯಂತೂ ಆಗಿರಲೇ ಇಲ್ಲ. ಭೌತಿಕ ಸುಖವನ್ನೂ ಬಹಿರಂಗ ಸಿದ್ಧಿಗಳನ್ನೂ ಅಷ್ಟೊಂದು ಮೆಚ್ಚದೆ ಆಧ್ಯಾತ್ಮಿಕ ಸುಖವನ್ನೂ ಅಂತರಂಗವಿಕಾಸವನ್ನೂ ಭಾರತವು ಮೆಚ್ಚಿದುದು ಮನುಕುಲದ ಪ್ರಗತಿಯ ಒಂದು ಕುರುಹೆಂದು ಬಗೆದೇ ಅವರು ಭಾರತದ ಸಂಸ್ಕೃತಿಗೆ ಬೆಲೆಯಿಯುತ್ತಾರೆ. ಪಾಶ್ಚಿಮಾತ್ಯ ಸಂಸ್ಕೃತಿಯ ನಿಜವಾದ ಬೆಲೆಯೆಲ್ಲಿದೆ ಎಂಬುದನ್ನೂ ಅವರು ಸಮತೋಲ ಭಾವದಿಂದ ತೂಗಿ ನೋಡಿದ್ದಾರೆ. ವಿಶಾಲ ತಳಹದಿಯ ಮೇಲೆ ಪೂರ್ವ ಪಶ್ಚಿಮಗಳ ಸಮನ್ವಯವು ಒದಗಿಬರಬೇಕೆಂದು ಅವರು ಪ್ರತಿಪಾದಿಸಿದರು. ಕೇವಲ ವಿಚಾರದಲ್ಲಿಷ್ಟೆ ಅಲ್ಲ ಆಚಾರದಲ್ಲಿ ಕೂಡ ಆ ಸಮನ್ವಯವು ಪ್ರಕಟವಾಗಬೇಕೆಂದು ಅವರು ಪರಮ ಸಾಹಸಪಟ್ಟರೆಂಬುದಕ್ಕೆ ಅವರ ಪ್ರಭಾವಲಯದಲ್ಲಿ ಬೆಳೆದು ಬಂದ ಪೃಥ್ವಿಯ ನಾನಾ ಭಾಗದ ಸಾಧಕರ ಸಮಾಜವೆ ಸಾಕ್ಷಿ. ವಸ್ತುತಃ ಪೂರ್ವ ಪಶ್ಚಿಮಗಳು ಪರಸ್ಪರ ಪೂರಕವೆ ಆಗಿವೆ. ಅಂತೆಯೆ ೧೯೨೪ರಲ್ಲಿ ರೊಮೆ ರೊಲಾ ಎಂಬ ಫ್ರೆಂಚ್ ವಿದ್ವಾಂಸರು ಹೀಗೆ ಉದ್ಗಾರತೆಗೆದಿದ್ದಾರೆ: ‘ ಏಶಿಯವೆ, ನಮಗೆ ನೀನು ನಿನ್ನ ಜೀವನದ ಜ್ಞಾನವನ್ನು ತಿಳುಹಿಸು. ನಮ್ಮ ಪ್ರವೃತ್ತಿಮಾರ್ಗವನ್ನೂ ಈ ಕ್ಷೇತ್ರದಲ್ಲಿ ನಾವು ಪಡೆದ ಸಿದ್ಧಿಗಳನ್ನೂ ನೀನು ನಮ್ಮಿಂದ ಕಲಿ.’

ಪೂರ್ವದ ಇಲ್ಲವೆ ಪಶ್ಚಿಮದ ಸಂಸ್ಕೃತಿಯ ಆಯಾ ಅಭಿಮಾನಿಗಳು ಅಲ್ಲಲ್ಲಿ ಆಗೀಗ ತಮ್ಮದಲ್ಲದ ಸಂಸ್ಕೃತಿಯನ್ನು ತೆಗಳಿ ಮಾತನಾಡುವದುಂಟು. ವಿಲಿಯಂ ಆರ್ಚರರೆಂಬವರು ಕಲಾವಿಮರ್ಶಕರು; ಇಂಥವರು ಒಮ್ಮೆ ಸಂಯಮ ಮೀರಿ ಮಾತನಾಡಿ ಭಾರತದ ಕಲೆಯನ್ನೂ ಸಂಸ್ಕೃತಿಯನ್ನೂ ಹೀಯಾಳಿಸಿದರು. ಭಾರತದ ಸಂಸ್ಕೃತಿಯು ಅನಾಗರಿಕರ, ಕಾಡುಜನರ ಸಂಸ್ಕೃತಿಯೆಂದು ಅಸಭ್ಯ ರೀತಿಯಲ್ಲಿ ನಿಂದಿಸಿದರು. ಆಗ, ಭಾರತದ ತಂತ್ರಮಾರ್ಗದ ತಜ್ಞವಿದ್ವಾಂಸರಾದ ಸರ್ ಜಾನ್ ವುಡ್‌ರಾಫರು ಕೆರಳಿ ‘Is India Civilized ?’ ಎಂಬ ಗ್ರಂಥವನ್ನು ಬರೆದು ವಿಲಿಯಂ ಆರ್ಚರರ ಅಭಿಪ್ರಾಯವನ್ನು ಖಂಡಿಸಿದರು. ಈ ಮೊದಲು ಹೇಳಿದಂತೆ ಇದೇ ಪ್ರಸಂಗದಲ್ಲಿ ಶ್ರೀ ಅರವಿಂದರು ಸಿಡಿಮಿಡಿಗೊಂಡು ತಮ್ಮ ಲೋಕಾಕರ್ಷಕ

ಲೇಖನಿಯಿಂದ 'ಆರ್ಯ' ಪತ್ರಿಕೆಯಲ್ಲಿ 'Defence of Indian Culture' ಎಂಬ ಲೇಖಮಾಲೆಯೊಂದನ್ನು ಆರಂಭಿಸಿ ಭಾರತೀಯ ಸಂಸ್ಕೃತಿಯ ಸಮರ್ಥನೆ-ಯನ್ನು ಕೈಕೊಂಡರು. ಉದ್ದೇಶಪೂರ್ವಕವಾಗಿ ಭಾರತದ ತೇಜೋವಧೆಯನ್ನು ಮಾಡಹೊರಟ ಟೀಕಾಕಾರರ ನಿಂದಾಪೂರಿತ ನಿರ್ಭರ್ತ್ಸನೆಯೆಲ್ಲವೂ ಅವರ ಕಣ್ಮುಂದೆ ಕಟ್ಟಿ ನಿಂತಿತು; ಅಂತೆಯೆ ಅವರು ಅಷ್ಟೊಂದು ಮರ್ಮಭೇದಕ ಶೈಲಿಯಲ್ಲಿ ಉತ್ತರ ಕೊಡಲು ಉದ್ಯುಕ್ತರಾದರು. ದ್ವೈವವಾದ, ಪರಲೋಕಪ್ರೀತಿ, ಅವಾಸ್ತವತೆ, ಕ್ರಿಯಾಹೀನತೆ ಎಂಬೀ ದುರ್ಗುಣಗಳನ್ನು ಆಗದವರು ಭಾರತದ ವಿರುದ್ಧವಾಗಿ ಆಗೀಗ ಪುನಃ ಪುನಃ ಆರೋಪಿಸುವದುಂಟು. ಭಾರತದ ಧರ್ಮ-ವೆಂದರೆ ಮೂಢನಂಬಿಕೆಗಳ ಮೊತ್ತವೆಂದೂ ತತ್ತ್ವಶಾಸ್ತ್ರವೆಂದರೆ ದುರ್ಬಲರ ನಿಷ್ಕ್ರಿಯತೆಯೆಂದೂ ಸಮಾಜವ್ಯವಸ್ಥೆಯೆಂದರೆ ಮದುವೆ-ಊಟ-ಉಪಚಾರಾದಿಗಳ ಬಗ್ಗೆ ವಿಧಿಸಿದ ಅಸಂಖ್ಯ ಗೊಡ್ಡು ನಿಷೇಧಗಳ ಗೊಂಡಾರಣ್ಯವೆಂದೂ ವಿರೋಧಿಗಳು ಪ್ರತಿಪಾದಿಸುವದುಂಟು. ಈ ಎಲ್ಲ ಆಪಾದನೆಗಳ ವಿರುದ್ಧವಾಗಿ ಶ್ರೀ ಅರವಿಂದರ ಸಮಸ್ತ ಆತ್ಮವೂ ನಾಗರಹಾವಿನಂತೆ ಹೊಡಮರಳಿ ಹೆಡೆಯೆತ್ತಿ ನಿಂತಿತು. ಈ ಲೇಖಮಾಲೆ ಮೊನ್ನೆ ಮೊನ್ನೆಯೆ 'Foundations of Indian Culture' ಎಂಬ ಹೆಸರಿನ ಗ್ರಂಥರೂಪದಲ್ಲಿ ಪುನರ್ಮುದ್ರಿತವಾಗಿದೆ. ಈ ಗ್ರಂಥದ ಪೂರ್ವಾರ್ಧದಲ್ಲಿ ವಿರೋಧಿಗಳ ಸಮಸ್ತ ಟೀಕೆಗಳನ್ನು ಒಂದೊಂದಾಗಿ ಪರಾಮರ್ಶಿಸುತ್ತ ಅವೆಲ್ಲವನ್ನೂ ಹೊಡೆದು ಹಾಕಿದ್ದಾರೆ; ಉತ್ತರಾರ್ಧದಲ್ಲಿ ಭಾರತೀಯ ಸಂಸ್ಕೃತಿಯ ಸೌಧರಚನೆಯ ರಹಸ್ಯವನ್ನು ಕುಶಲ ವಾಸ್ತುಶಿಲ್ಪ ವಿಮರ್ಶಕನೊಬ್ಬನು ವಿವರಿಸುವಂತೆ ವಿಸ್ತಾರವಾಗಿ ವಿಶದಪಡಿಸಿದ್ದಾರೆ. ನಮ್ಮ ನಾಡಿನ ಅದೇಕೆ ಸಮಸ್ತ ಜಗತ್ತಿನ ಕಲ್ಯಾಣಕ್ಕಾಗಿ ದೇಹವನ್ನೆ ತೇಯ್ದಂಥ ಅನೇಕ ಚರಿತ್ರಾರ್ಹ ಪುರುಷರ ಮಹತ್ಕೃತಿಗಳ ವ್ಯೂಹವೊಂದನ್ನು ನಮ್ಮ ಕಣ್ಣೆದುರು ರಚಿಸಿ ತೋರಿಸುತ್ತಾರೆ. ಹೀಗೆ ಮಾಡುವಾಗ, ರೋಮಾಂಚಕಾರಕ ಘಟನೆಗಳಿಂದ ತುಂಬಿದ ಭಾರತದ ಸುದೀರ್ಘ ಇತಿಹಾಸವನ್ನು ಸಿಂಹಾವಲೋಕನ ದೃಷ್ಟಿಯಿಂದ ವಿಮರ್ಶಿಸುತ್ತ ಮಾನವೀಯ ಚಟುವಟಿಕೆಗಳ ಪ್ರತಿಯೊಂದು ಕ್ಷೇತ್ರವನ್ನೂ ಅಳೆದು ನೋಡುತ್ತಾರೆ. ಒಟ್ಟಿನಲ್ಲಿ ಮೂರು ಸಾವಿರ ವರುಷಗಳಿಗೆ ಕಡಿಮೆಯಲ್ಲದಷ್ಟು ದೀರ್ಘಕಾಲದ ವರೆಗೆ ಅಖಂಡವಾಗಿ ನಡೆದುಬಂದ ಸತ್ತ್ವಮಯ ಅಸ್ತಿತ್ವದ ಪ್ರಾಣಸ್ಪಂದನೆಯ ಫಲಶ್ರುತಿಯನ್ನು ಅವರು ಪ್ರಭಾವಯುಕ್ತವಾಗಿ ಹೇಳಿದ್ದಾರೆ. ಭಾರತವು ಇಂದಿಗೂ ಈ ಕ್ಷಣಕ್ಕೂ ಪ್ರವೃತ್ತಿನಿಷ್ಠವಾಗಿದ್ದು ಜಗತ್ತಿಗೆ ತನ್ನ ಕಾಣಿಕೆ ಕೊಡುತ್ತಲೆ ಇದೆಯೆಂದು ಅವರು ಒತ್ತಿ ಹೇಳಿದ್ದಾರೆ. ಇಂತು ಶ್ರೀ ಆರ್ಚರರ ಆಪಾದನೆಗಳಿಗೆಲ್ಲ ಶ್ರೀ ಅರವಿಂದರಿತ್ತ ಈ ಉತ್ತರವು ಶ್ರೇಷ್ಠ ಶ್ರೇಣಿಯದಾಗಿ ಚಿರಸ್ಮರಣೀಯವಾಗಿದೆ.

ಹೀಗೆ ಅವರು ಭಾರತ ಸಂಸ್ಕೃತಿಯ ಸಮರ್ಥನೆಯನ್ನು ಉತ್ಸಾಹಭರಿತವಾಗಿ ಅಪ್ರತಿಮ ರೀತಿಯಲ್ಲಿ ಮಾಡಿದ್ದರೂ ಭಾರತದ ಕಡೆಗೆ ನೋಡುವ ಅವರ ದೃಷ್ಟಿ ಸಂಕುಚಿತವಾದುದಲ್ಲ. ಸಮಸ್ತ ಜಗತ್ತು, ಸಮಸ್ತ ಮಾನವಕುಲ, ಅದರ ಸಮಗ್ರ ಪ್ರಗತಿ ಈ ಬಗೆಯ ವ್ಯಾಪಕದೃಷ್ಟಿಯಿಂದಲೆ ಅವರು ಭಾರತದತ್ತ ನೋಡುವರು. ಶಾಂತಿ, ಸಮರಸತೆ, ಆನಂದ ಇವೇ ಎಲ್ಲರೂ ಮೆಚ್ಚುವ ಆದರ್ಶಗಳು. ಈ ಆದರ್ಶಗಳ ಸಿದ್ಧಿಗಾಗಿ ವ್ಯಕ್ತಿ-ಸಮಾಜ-ಸರಕಾರಗಳು ಎಷ್ಟೇ ಪ್ರಭಾವಶಾಲಿಯಾಗಿ ಛಲದಿಂದ ಕಾರ್ಯ ಕೈಕೊಂಡರೂ ಅವು ಸಿದ್ಧಿಸುವದಿಲ್ಲ. ಬಹಳವೆಂದರೆ, ಸುಸಂಘಟಿತ ರಾಜ್ಯವೊಂದರಲ್ಲಿ ನೆಲೆಗೊಳ್ಳುವಂಥ ಶಾಂತಿಯು ಸ್ಥಾಪಿತವಾದೀತು. ಶಾಸನಗಳ ಪ್ರಭಾವದಿಂದ ಅರಾಜಕ ಶಕ್ತಿಗಳನ್ನು ದಮನಿಸುವ ಶಾಂತಿಯು ಚಿರ-ಕಾಲ ಬಾಳೀತೇ? ಮಾನವನ ಸ್ವಭಾವದಲ್ಲಿಯೆ ಮೂಲಭೂತ ಪರಿವರ್ತನೆಯಾಗದ ವಿನಾ ನಿಜವಾದ ಸಹಜ ಶಾಶ್ವತ ಶಾಂತಿಯು ಜಗತ್ತಿನಲ್ಲಿ ಎಂದೂ ಪ್ರಭುತ್ವವನ್ನು ನಡೆಸಲಾರದು. ಆದುದರಿಂದ ಆಗಬೇಕಾದ ಕಾರ್ಯವಾವುದೆಂದರೆ, ಆಧ್ಯಾತ್ಮಿಕ ಉತ್ಕ್ರಾಂತಿ ಇಲ್ಲವೆ ವಿಕಾಸ ಹಾಗು ಮಾನಸಿಕ ಕ್ರಾಂತಿ. ಇವೆರಡರ ಆಧಾರದ ಮೇಲೆಯೆ 'ಪೃಥ್ವೀತಲದಲ್ಲಿ ಶಾಂತಿಯೂ ಮನುಕುಲದಲ್ಲಿ ಪರಸ್ಪರ ವಿಶ್ವಾಸವೂ' ನೆಲೆಯೂರಬಲ್ಲವು. ಈ ಬಗೆಯ ಅಂತರಿಕ ಬದಲಾವಣೆಗಳಾಗದಿದ್ದರೆ, 'ಸ್ವರ್ಗ-ವೇನೊ ಸ್ಥಾಪಿತವಾಗಬಹುದು; ಆದರೆ ಕ್ಷಣಾರ್ಧದಲ್ಲಿ ಅದು ಕುಸಿದುಬೀಳುವದು.' 'Human Cycle (ಮಾನವೀಯ ಚಕ್ರ)' ಹಾಗೂ 'Ideal of Human Unity (ಮಾನವೀಯ ಐಕ್ಯದ ಆದರ್ಶ)' ಎಂಬೀ ಪ್ರಖ್ಯಾತ ಗ್ರಂಥಗಳಲ್ಲಿ ಮಾನವನ ಕುಲಪ್ರಗತಿಯ ಬಗೆಗೂ ಅದರ ಭವಿಷ್ಯತ್ತಿನ ಬಗೆಗೂ ಶ್ರೀ ಅರವಿಂದರು ಅರೈದು ನೋಡಿ ತಮ್ಮ ನಿಶ್ಚಿತ ಅಭಿಪ್ರಾಯಗಳನ್ನು ಪ್ರಭಾವಯುಕ್ತವಾಗಿ ವ್ಯಕ್ತ-ಗೊಳಿಸಿದ್ದಾರೆ. ಅತಿಮಾನಸ ತತ್ತ್ವವನ್ನು ಆಧರಿಸಿ ನಿಂತ ಅತಿಮಾನವನ ಆಗಮನವು ಖಂಡಿತವಾಗಿ ಆಗಲಿದೆಯೆಂದು ಅವರು ಕಾಲಜ್ಞಾನ ನುಡಿದಿದ್ದಾರೆ. ಮಾನವ-ಕುಲದ ವಿಕಾಸಕ್ರಮದಲ್ಲಿ ಇಂಥ ಅತಿಮಾನವನು ಆಗಮಿಸಿದಾಗಲೆ ಸಚ್ಚಿದಾನಂದ-ಪುರುಷನ ಪ್ರಭುತ್ವವು ವಿಶ್ವದಲ್ಲಿ ಪ್ರಸ್ಥಾಪಿತವಾದೀತೆಂದು ಅವರು ಸಾರಿ ಹೇಳಿದ್ದಾರೆ.

ಶ್ರೀ ಅರವಿಂದರು ಮಾನವಕುಲಕ್ಕೆ ಇತ್ತ ಅಪ್ರತಿಮ ಕಾಣಿಕೆಯನ್ನು ಕುರಿತು ಈ ಕೆಲವು ಮಾತುಗಳನ್ನು ಈ ಪ್ರಕರಣದಲ್ಲಿ ಹೇಳಿದ್ದಾಯಿತು. ಇನ್ನು ಮುಂದೆ ಅವರ ಆಧ್ಯಾತ್ಮಿಕ ಸಾಧನದತ್ತ ನಾನು ಹೊರಳುವೆ. ಏಕೆಂದರೆ ಅವರು ಗೈದ ಈ ಯೋಗಸಾಧನವೆ ಅಖಿಲ ಮನುಕುಲಕ್ಕೆ ಅತಿ ಮಹತ್ವದ್ದಾಗಿದೆ.

# ೮ ಆಧ್ಯಾತ್ಮಿಕ ಹಿನ್ನೆಲೆ

ಶ್ರೀ ಅರವಿಂದರು ಬೇರೆ ಬೇರೆ ಕಾರ್ಯರಂಗಗಳಲ್ಲಿ ಪಡೆದ ಸಿದ್ಧಿ ಸಾಫಲ್ಯಗಳು ಒಂದೊಂದೂ ಚಿರಸ್ಮರಣೀಯವಾದ ಕೀರ್ತಿಸ್ತಂಭದಂತೆ ಉಂಟೆಂಬುದನ್ನು ಹಿಂದಿನ ಪ್ರಕರಣದಲ್ಲಿ ನೋಡಿದೆವು. ಇವಕ್ಕೂ ಮಿಗಿಲಾದ, ಇವಕ್ಕಿಂತ ಅರ್ಥ-ಗರ್ಭಿತವಾದ, ಇನ್ನೂ ಹೆಚ್ಚು ಶಾಶ್ವತವಾದ ಅವರ ಕೊಡುಗೆ ಕಾಣಿಕೆಗಳುಂಟು—ಆಧ್ಯಾತ್ಮಿಕ ಸಾಧನೆ, ಸಿದ್ಧಿ ಹಾಗೂ ಅಗಾಧವಾದ ತತ್ತ್ವದರ್ಶನ ಇವುಗಳ ಕ್ಷೇತ್ರದಲ್ಲಿ. ಹೊಸ ಹಾದಿ ಹುಡುಕುವ ಕೆಲಸದಲ್ಲಿ ಮೊದಲಿಗನಾದ ಓರ್ವ ಹೆಗ್ಗಡೆಯ ಹಾಗೆ ಇಲ್ಲಿ, ಅವರು ಧೀರ ವೀರ ಸಾಹಸಿಯ ಹುಮ್ಮಸದಿಂದ ಒಂದು ಹೊಸ ಕ್ಷೇತ್ರವನ್ನೆ ಅಗಿದು ತೆಗೆದಿದ್ದಾರೆ. ಅವರು ಉತ್ತುಂಗ ನಿರೀಕ್ಷೆಗಳನ್ನು ಉಂಟುಮಾಡಿರುವರಲ್ಲದೆ, ಮನುಕುಲಕ್ಕೆ ತನ್ನನ್ನು ತಾನು ಮೀರಿ ಮೇರೆವರಿವ ಹಾಗೂ ತನ್ನ ಭವಿತವ್ಯವನ್ನೆ ಪರಿವರ್ತನಗೊಳಿಸಬಲ್ಲ ದಾರಿಯನ್ನು ತೋರಿದ್ದಾರೆ. ಅವರು ಹೊಚ್ಚಹೊಸ ಪ್ರಯತ್ನಕ್ಕೆ ಭೂಮಿಕೆಯನ್ನು ಸಿದ್ಧಗೊಳಿಸಿ ಒಂದು ನವಶ್ರದ್ಧೆಯನ್ನೆ ಪ್ರೇರಿಸಿದ್ದಾರೆ. ಈ ಮೂಲಕ ಅವರು ಮನುಕುಲವನ್ನೆ ಚಿರಋಣದಲ್ಲಿ ಇರಿಸಿಬಿಟ್ಟಿದ್ದಾರೆ.

ಅಧ್ಯಾತ್ಮವಿದ್ಯೆಯ ಉದ್ಯಮದ ವಿಷಯದಲ್ಲಿ ಭಾರತವು ಅತಿ ಪ್ರಾಚೀನವೂ ತುಂಬ ನುರಿತ ನಾಡೂ ಆಗಿರುತ್ತದೆ. ಭಾರತಮಾತೆಯ ಉತ್ತಮೋತ್ತಮ ಮನೀಷಿಗಳೆಂಬವರು, ಮಾನವ ಚೇತನದ ಆಳ ಅಂತಗಳನ್ನು ಅಗಿದಿದ್ದಾರೆ, ಅಳೆದಿದ್ದಾರೆ; ಹಾಗೂ ಸನಾತನ ಶೋಧನೆಯ ತುಟ್ಟತುದಿಯ ಗುರಿಯನ್ನೆ ತಟ್ಟಿದ್ದಾರೆ, ಮುಟ್ಟಿದ್ದಾರೆ. ಹೀಗಿದ್ದರೂ ಅದರಲ್ಲಿಯೆ ಶ್ರೀ ಅರವಿಂದರು ಹೊಸ ದಿಗಂತವನ್ನು ತೆರೆದು ತೋರಿಸಿದ್ದಾರೆ. ವೈಯಕ್ತಿಕ ಮುಕ್ತಿ, ಅನಂತತೆಯಲ್ಲಿ ವಿಲೀನವಾಗುವಿಕೆ, ನಿರ್ಲಿಪ್ತ ನಿಷ್ಕಾಮಕರ್ಮ ಇವೇ ಮೊದಲಾದ ಅತಿ ಪರಿಚಿತ ಗುರಿಗಳಿಗಿಂತ ತೀರ ಬೇರೆಯೆ ಆಗಿರುವ ಅತಿ ಎತ್ತರದ ಗುರಿಗಳನ್ನು ಅವರು ಗೊತ್ತುಪಡಿಸಿದ್ದಾರೆ. ಆದ್ದರಿಂದ, ಪ್ರತ್ಯಕ್ಷ ವಿಷಯವನ್ನು ವಿವೇಚಿಸುವ ಮೊದಲು ಈ ಅಮೋಘ ಪ್ರಯತ್ನದ ಹಿನ್ನೆಲೆಯನ್ನು ವಿವರಿಸುವದು ಯೋಗ್ಯವಾಗಿದೆ.

ಶ್ರೀ ಅರವಿಂದರ ಸಾಧನ ಮತ್ತು ಸಿದ್ಧಿಯ ಗರ್ಭಿತಾರ್ಥವು ಇಷ್ಟೊಂದು ಉಚ್ಚವಾಗಿದ್ದಾಗ ಅವುಗಳ ಬಗೆಗೆ ಸಂಪೂರ್ಣವಾಗಿ ಯಥೋಚಿತವಾಗಿ ಬರೆಯುವದು ತೀರ ಕಷ್ಟದ ಕೆಲಸ. ಯಾಕೆಂದರೆ ಶ್ರೀ ಅರವಿಂದರೇ ಒಂದೆಡೆಗೆ ಅಂದಿರುವಂತೆ, ಕಣ್ಣಿಗೆ ಕಾಣುವ 'ಬಾಹ್ಯರಂಗದ ಮೇಲೆ' ಅದೆಂದೂ ನಡೆದಿಲ್ಲ.

ಗೊತ್ತಿದ್ದ ಕೆಲ ಸಂಗತಿಗಳನ್ನು ಆಧರಿಸಿ ಒಂದು ಸಂಕ್ಷಿಪ್ತವಾದ ಜೀವನವೃತ್ತವನ್ನು ಬರೆಯುವದು ಅದೆಷ್ಟೋ ಪಾಲು ಹಗುರಾದ ಕೆಲಸ. ಆದರೆ ಶ್ರೀ ಅರವಿಂದರ ಸಾಧನದ ವಿಷಯವನ್ನು ಕುರಿತು ಬರೆಯುವದೆಂದರೆ ಅತ್ಯಂತ ಕಷ್ಟಕರ ಕಾರ್ಯಕ್ಕೆ ಕೈಯಿಕ್ಕಿದಂತೆಯೆ ಸರಿ. ಆದರೂ, ಆಧುನಿಕ ಕಾಲದಲ್ಲಿ ತಲೆದೋರಿದ ಅತ್ಯಂತ ಅದ್ಭುತ ಚಮತ್ಕಾರಿಕ ಮತಿವಂತರಲ್ಲಿ ಶ್ರೇಷ್ಠ ವ್ಯಕ್ತಿಗಳಲ್ಲೊಬ್ಬರಾದ ಇವರ ಆಧ್ಯಾತ್ಮಿಕ ಸಾಧನದ ರಹಸ್ಯವನ್ನು ಅರಿತುಕೊಳ್ಳುವ ಈ ಪ್ರಯತ್ನವು ತುಂಬ ಅಗತ್ಯದ್ದಾಗಿದೆ. ಶ್ರೀ ಅರವಿಂದರ ಸಾಧನವು, ಪರಂಪರಾಗತವಾದ ಹಳೆಯ ಹಾದಿಯನ್ನೆ ಹಿಡಿದು ಸಾಗಿದ್ದಾಗಿದ್ದರೆ, ನಮ್ಮ ಲಕ್ಷ್ಯವನ್ನು ಅಷ್ಟೊಂದು ಸೆಳೆದುಕೊಳ್ಳುತಿರಲಿಲ್ಲ. ಹಾಗಿದ್ದರೆ, ಅದನ್ನು ಪ್ರತ್ಯೇಕವಾಗಿ ಎತ್ತಿ ತೋರಿಸುವ ಅಥವಾ ವಿವರಿಸಿ ಹೇಳುವ ಅವಶ್ಯಕತೆಯೇನಿತ್ತು ? ಆದರೆ ವಸ್ತುಸ್ಥಿತಿಯು ಹಾಗಿಲ್ಲ. ಶ್ರೀ ರಾಮಕೃಷ್ಣರು ಮಾಡಿದ ಸಾಧನದಲ್ಲಿದ್ದಂತೆ ಶ್ರೀ ಅರವಿಂದರು ಮಾಡಿದ ಸಾಧನದಲ್ಲಿ ಸಹ ಕೆಲವೊಂದು ವಿಶಿಷ್ಟ ಅಸಾಮಾನ್ಯ ಲಕ್ಷಣಗಳುಂಟು ; ಎಂದೇ ಅವುಗಳ ಅಭ್ಯಾಸ ಅಗತ್ಯ. ತತ್ಪೂರ್ವದಲ್ಲಿ ಭಾರತೀಯ ಬ್ರಹ್ಮವಿದ್ಯೆ ಎಂದರೇನೆಂಬುದನ್ನೂ ಅಧ್ಯಾತ್ಮಸಾಧನದ ಅರ್ಥವೇನೆಂಬುದನ್ನೂ ತಿಳಿದುಕೊಳ್ಳಲು ಹವಣಿಸುವಾ.

ಭಾರತದೇಶವು ಪರಂಪರಾಗತವಾಗಿಯೆ ಅಧ್ಯಾತ್ಮ ವಿದ್ಯೆಯಲ್ಲಿ ಅತ್ಯಂತ ವೈಭವ ಸಂಪನ್ನವೆಂಬುದು ಸರ್ವಶ್ರುತ ಸಂಗತಿಯಾಗಿದೆ. ಆದ್ದರಿಂದ ಭಾರತಮಾತೆಯ ಧರ್ಮವೂ ಸಂಸ್ಕೃತಿಯೂ ಆ ವಿದ್ಯೆಯಿಂದಲೆ ತಮ್ಮ ಸ್ಫೂರ್ತಿಪಡೆಯುವದು ಸ್ವಾಭಾವಿಕವಾಗಿದೆ ; ಆದರೆ ಮಹತ್ವದ ಮಾತೆಂದರೆ, ರಾಜಕೀಯ ಮತ್ತು ಆರ್ಥಿಕ ವಿಷಯಗಳನ್ನು ಒಳಗೊಂಡು ಆಕೆಯ ಎಲ್ಲ ಕಾರ್ಯಕಲಾಪಗಳೂ ಆತ್ಮನ ಅಂತರ್ಯಾಮಿತ್ವದ ಭಾವನೆಯ ಮೇಲೆಯೆ ನಿಂತಿರುತ್ತವೆ. ಭಾರತದ ತತ್ತ್ವಜ್ಞಾನವು ಅದೆಂದೂ ಬೌದ್ಧಿಕ ಪ್ರಯಾಸವಾಗಿರದೆ ಅದು ಈ ದೇಶದಲ್ಲಿ ಜನಿಸಿದ ಅನೇಕ ಸಂತರ ಆಧ್ಯಾತ್ಮಿಕ ಅಂತರ್ಜ್ಞಾನದ ಅನುಭವವನ್ನು ವಿವೇಕಸಮ್ಮತವಾಗುವ ಹಾಗೆ ಕ್ರಮಗೊಳಿಸಲ್ಪಟ್ಟ ದರ್ಶನವಾಗಿರುತ್ತದೆ. ಈ ಕಾರಣದಿಂದ ಕೆಲವೊಂದು ಸಂದರ್ಭದಲ್ಲಿ ಪಾಶ್ಚಾತ್ಯ ಲೇಖಕರು ತಪ್ಪು ತಿಳುವಳಿಕೆ ಮಾಡಿಕೊಂಡು ಆಧುನಿಕ ಪಾಶ್ಚಾತ್ಯ ದೃಷ್ಟಿಯ ಪ್ರಕಾರ ಭಾರತಕ್ಕೆ ತತ್ತ್ವದರ್ಶನವೆಂಬುದೆ ಇಲ್ಲವೆಂದು ಅಂದದ್ದುಂಟು. ಆದರೆ ಇತ್ತೀಚೆಗೆ ಈ ಬಗೆಯ ತಪ್ಪುತಿಳುವಳಿಕೆಯು ಕಡಿಮೆಯಾಗುತಿರುವದಲ್ಲದೆ ಎಲ್ಲ ದರ್ಶನಶಾಸ್ತ್ರಗಳಲ್ಲಿಯೂ ಅಂತರ್ಜ್ಞಾನಕ್ಕೆ ಒಂದು ಮಹತ್ವದ ಸ್ಥಾನವಿದೆ ಎಂಬ ಸಂಗತಿಯು ಮನದಟ್ಟಾಗತೊಡಗಿದೆ.

ಆಧ್ಯಾತ್ಮಿಕತೆಯೆ ಎಂದೆಂದಿಗೂ ಭಾರತೀಯ ಜೀವನಕ್ಕೆ ಪ್ರಾಣದಾನ ಮಾಡುವ ನಿಜವಾದ ಸತ್ತ್ವವಾಗಿದೆ. ಆದುದರಿಂದ ಹತ್ತೊಂಬತ್ತನೆಯ ಶತಕದ ಉತ್ತರಾರ್ಧದಲ್ಲಿ ಚಿಮ್ಮಿ ಬಂದ ಭಾರತೀಯ ಪುನರುಜ್ಜೀವನದಲ್ಲಿ ಆ ಆಧ್ಯಾತ್ಮಿ-

ಕತೆಯೆ ಹೆಚ್ಚಾಗಿ ಅಧಿಷ್ಠಿತವಾದುದು ಕ್ರಮಪ್ರಾಪ್ತವಲ್ಲದೆ ಮತ್ತೇನು ? ಈ ಪುನರುಜ್ಜೀವನದ ಪುರಸ್ಕರ್ತರಾದ ಮಹೋನ್ನತ ವ್ಯಕ್ತಿಗಳೆಲ್ಲರೂ ಉಚ್ಚ ಧ್ಯೇಯನಿಷ್ಠರಾಗಿದ್ದರು. ಅವರ ಜೀವನದ ನಿಲುವೆಯು ಪ್ರಬಲವಾದ ಶುದ್ಧ ಅಧ್ಯಾತ್ಮಪ್ರವೃತ್ತಿಯಿಂದ ಕೂಡಿದುದಾಗಿತ್ತು. ರಾಜಾ ರಾಮಮೋಹನ ರಾಯರಿಂದ ಮೊದಲು ಮಾಡಿ ಶ್ರೀ ಅರವಿಂದರ ವರೆಗೆ ಪ್ರತಿಯೊಬ್ಬರಿಗೂ ಅಧ್ಯಾತ್ಮಪ್ರಧಾನವಾದ ಭೂಮಿಕೆಯೆ ಇತ್ತು ; ಹಾಗೂ ತಮತಮಗೆ ಸರಿದೋರಿದ ಕ್ಷೇತ್ರದಲ್ಲಿ ಪ್ರತಿಯೊಬ್ಬರೂ ಬೇರೆ ಬೇರೆಯಾಗಿ ಕೆಲಸ ಮಾಡುತ್ತ ಸಾಗಿದ್ದರೂ ಎಲ್ಲರಲ್ಲಿ ಈ ಅಧ್ಯಾತ್ಮಿಕತೆಯೆ ಸ್ಫುಟವಾಗಿ, ತಾನೆತಾನಾಗಿ ತೋರಿಸಿಕೊಳ್ಳುತಿತ್ತು. ಒಂದು ಪ್ರಸಂಗದಲ್ಲಿ ಶ್ರೀ ಅರವಿಂದರು ದೃಢಸ್ವರದಲ್ಲಿ ಹೀಗೆ ನುಡಿದಿದ್ದಾರೆ: ' ನನ್ನ ಸೀಮೆ ಅಧ್ಯಾತ್ಮಿಕ ಸತ್ಯವಾಗಿದೆ. ' ಅಧ್ಯಾತ್ಮಿಕತೆಯ ಎದುರಿಗೆ ಉಳಿದೆಲ್ಲ ವಿಷಯಗಳೂ ಅವರಿಗೆ ಕಃಪದಾರ್ಥಗಳಾಗಿದ್ದವು.

ಈ ಭಾರತೀಯ ಆಧ್ಯಾತ್ಮಿಕತೆ ಎಂಬ ಸರಕು ನಿಜವಾಗಿ ಉಂಟೆಂಬುದು ಕೇವಲ ಭಾರತೀಯರಿಗಷ್ಟೆ ವಿದಿತವಾದ ಸಂಗತಿಯಲ್ಲ. ಚಾಣಾಕ್ಷರೂ ವಿಖ್ಯಾತರೂ ಆದ ಅನೇಕ ವಿದೇಶೀಯ ಲೇಖಕರೂ ನಿರೀಕ್ಷಕರೂ ಪುನಃ ಪುನಃ ಈ ವಿಷಯವನ್ನು ಉಲ್ಲೇಖಿಸಿರುವರಲ್ಲದೆ ಇದು ನಿಜ ಸಂಗತಿಯೆಂಬ ಬಗೆಗೆ ಪುಷ್ಟಿಯನ್ನೂ ಕೊಟ್ಟಿದ್ದಾರೆ. ಅವರಲ್ಲಿ ಕೆಲವರಿಗೆ ಇದರ ಅರ್ಥವು ಸಂಪೂರ್ಣವಾಗಿ ತಿಳಿಯದೆ ಈ ಬಗೆಗೆ ಅವರು ಆಶ್ಚರ್ಯವನ್ನು ವ್ಯಕ್ತಗೊಳಿಸಿರುವರೇನೊ ನಿಜ. ಅದು ಬೇರೆ ವಿಷಯ. ಆದರೆ ಇನ್ನೆಲ್ಲಿಯೂ ಕಾಣಲು ದೊರಕದ ಅದ್ಭುತ ಸರಕೊಂದು ಭಾರತದಲ್ಲಿ ಉಂಟೆಂಬ ಸಂಗತಿಯನ್ನು ಅವರು ಖಂಡಿತ ಗುರುತಿಸಿಕೊಂಡಿದ್ದಾರೆ. ಉದಾಹರಣೆಗಾಗಿ, ಲೂಯಿ ಡಿಕಿನ್‌ಸನ್ ಎಂಬವರು ಈ ಬಗೆಗೆ ಹೀಗೆ ಹೇಳಿದ್ದಾರೆ: ' ಭಾರತದಲ್ಲಿ ಏನೊ ಒಂದು ಅಪರಿಚಿತ ಪದಾರ್ಥವನ್ನು ನಾನು ಕಂಡೆ; ಚೀನ-ಜಪಾನಗಳಲ್ಲಿ ಸಹ ಅಂಥ ವಸ್ತುವು ಕಾಣದೊರಕಲಿಲ್ಲ. '

ಏ. ಈ. ( ಜಾರ್ಜ ರಸೆಲ್ ) ಎಂಬ ಮಹಾಕವಿಯು, ದಿಲೀಪಕುಮಾರ ರಾಯರಿಗೆ ಬರೆಯುತ್ತ (೬-೧-೧೯೩೨) ಸಂಸ್ಕೃತ, ಮತ್ತು ಭಾರತೀಯ ಇನ್ನಿತರ ಭಾಷೆಗಳ ಶಬ್ದಗಳಲ್ಲಿ ಪ್ರಚುರಪ್ರಮಾಣದಲ್ಲಿ ತುಂಬಿರುವ ಆಧ್ಯಾತ್ಮಿಕ ಇಂಗಿತಾರ್ಥದ ವಿಷಯವಾಗಿ ಹೀಗೆ ಹೇಳಿದ್ದಾರೆ : ' ಇಂಗ್ಲೀಷು ಅಮೋಘವಾದ ಭಾಷೆ, ಆದರೆ ಆಧ್ಯಾತ್ಮಿಕ ಭಾವನೆಗಳ ಬಗೆಗೆ ಅದರಲ್ಲಿ ಶಬ್ದಗಳೆ ವಿರಳ . . . ನಾನು ಖಂಡಿತ ಬಲ್ಲೆ, ಇಂದು ಹಿಂದೂ ಜನರು ಆಡುವ ಭಾಷೆಗಳಲ್ಲಿ, ಆಧ್ಯಾತ್ಮಿಕ ಅಭಿವ್ಯಕ್ತಿಗೆ ತಕ್ಕ ಶಬ್ದಸಂಪದವು ಇಂಗ್ಲೀಷಿಗಿಂತ ಸಮೃದ್ಧವಾಗಿರಲಿಕ್ಕೆ ಬೇಕು, ಎಂದು. ಆಧ್ಯಾತ್ಮಿಕ ಭಾವಾವೇಗವನ್ನು ವ್ಯಕ್ತಗೊಳಿಸಬೇಕೆಂದಾಗ ಬಳಸಬಹುದಾದ ತೇಜಸ್ವಿಯಾದ ಶಬ್ದಗಳು ಇಂಗ್ಲೀಷು ಭಾಷೆಯಲ್ಲಿ ಇಲ್ಲವೆನ್ನುವಷ್ಟು ವಿರಲವಾಗಿವೆ ಎಂದು. . . . '

ವಿನ್ಸೆಂಟ ಶೀನ ಎಂಬವರು ಗಾಂಧೀಜಿಯವರ ಬಗೆಗೆ ಬರೆದ 'ಲೀಡ ಕಾಯಿಂಡ್ಲಿ ಲಾಯಿಟ' (ಕರುಣಾಳು ಬಾ ಬೆಳಕೆ) ಎಂಬ ತಮ್ಮ ಸುಪ್ರಸಿದ್ಧವಾದ ಪುಸ್ತಕದಲ್ಲಿ, ಭಾರತ ದೇಶದ ಸಾಮಾನ್ಯ ಜನತೆಯ ಆಧ್ಯಾತ್ಮಿಕ ಜಾಗ್ರತಿಯ ಬಗೆಗೆ ಬರೆಯುತ್ತ ಈ ಕೆಳಗೆ ಕಾಣಿಸಿದ ಉದ್ಗಾರಗಳನ್ನು ತೆಗೆದಿರುತ್ತಾರೆ: 'ಬಹು ವಿಸ್ತಾರವಾದ ಸಾಮಾನ್ಯ ಹಿಂದೂ ಜನಾಂಗದಲ್ಲಿ ಒಡೆದು ಕಾಣುವ ಒಂದು ಸಂಗತಿ-ಯೆಂದರೆ, ಮಾನವಕುಲದ ಉಳಿದ ಬೇರೆ ದೊಡ್ಡ ದೊಡ್ಡ ತಂಡದವರ ಜೊತೆಗೆ ಹೋಲಿಸಿ ನೋಡಿದಾಗ, ಭಾರತೀಯರು, ಇಲ್ಲದ ಪೃಚ್ಛಾಪೃಚ್ಛೆ ಮಾಡದೆ, ಎಷ್ಟೋ ಸಲ ವಿಚಾರ ಸಹ ಮಾಡದೆ, ಪರಾತ್ಪರ ಸತ್ಯವನ್ನು ಒಪ್ಪಿ ಸ್ವೀಕರಿಸಿಬಿಡು-ತ್ತಾರೆ; ಇದು ಅವರ ಸಾಮಾನ್ಯ ಚೇತನದಲ್ಲಿ ಬೇರೂರಿ ಹೋಗಿದೆ. ಹಿಂದು-ವಾದವನು ಬಹುಶಃ ತನ್ನ ಇನ್ನುಳಿದ ಸಮುಸಾಮಯಿಕರ ಹಾಗೆ ಸರ್ವಸಾಧಾರಣ-ವಾದ ಚೇತನೆಯೊಂದಿಗೆ ಹುಟ್ಟುತಿರಬಹುದು. ಎಲ್ಲರಂತಹ ಹುಟ್ಟೆ ಇವನದೆಂದು ಎಷ್ಟೋ ಸಲ ತೋರುತ್ತದೆ. ಆದರೆ ಇದು ಹೀಗಿರಲಿ ಇಲ್ಲವೆ ಇರದಿರಲಿ; ಅವನ ಮೈಮನಗಳ ಬೆಳವಣಿಗೆಯ ಜೊತೆಜೊತೆಗೆ, ಈ ವಿಧದ ಪರಾತ್ಪರ ಸತ್ಯದ ಬಗೆಗಿದ್ದ ಸಾಮಾನ್ಯ ಅರಿವು-ಎಚ್ಚರಗಳನ್ನು ಮಾತ್ರ ಅವನು ಮೈಗೂಡಿಸಿಕೊಂಡು ಬಿಡುತ್ತಾನೆ. ಎಂದೇ, ತನ್ನ ಮನದಲ್ಲಿ ಯಾವುದೆ ಬಗೆಯ ನಂಬಿಕೆಗಳನ್ನೂ ಗ್ರಹಿಕೆಗಳನ್ನೂ ಮೂಡಿಸಿಕೊಳ್ಳಲು ಕಲಿಯುವ ಮೊದಲೆ ಅವು ಆಗಲೆ ಆಳವಾಗಿ ಅವನಲ್ಲಿ ನೆಲೆಯಾಗಿ ಬಿಟ್ಟಿರುತ್ತವೆ; ಆ ಮೇಲೆ ಕಾಲೇಜಗಳಲ್ಲಿ ಕಲಿಸಲಾಗುವ, ವೈಜ್ಞಾನಿಕ ಶಿಕ್ಷಣದಂತಹ ತೀರ ಮೇಗರೆಯ ಸಂಸ್ಕಾರಗಳು ಅವುಗಳನ್ನು ಅಳಿಸಲಾಗದೆ ಹೋಗುವವು. ಆತ್ಮದ ವಿಶ್ವವ್ಯಾಪಕತ್ವ, ಪ್ರತಿಯೊಬ್ಬ ವ್ಯಕ್ತಿಯೂ ಅದರಲ್ಲಿ ಪಾಲುಗಾರನಾಗಿರು-ವದು, ಜೀವಗಳು ಜನ್ಮಾಂತರ ಹೊಂದುವದು, ಅಂತಿಮ ಭಗವತ್ಸಾಕ್ಷಾತ್ಕಾರ, ಹುಟ್ಟಿ ಬಂದ ಪ್ರತಿಯೊಬ್ಬ ಮಾನವನಿಗೂ ಇವೆಲ್ಲ ಸಾಧ್ಯವೆಂಬ ಗ್ರಹಿಕೆ ಇವೇ ಮೊದಲಾದ ಕಲ್ಪನೆಗಳು ಪಾಶ್ಚಾತ್ಯದೃಷ್ಟಿಯಲ್ಲಿ ಕೇವಲ ತತ್ತ್ವಶಾಸ್ತ್ರದ ಅಥವಾ ಧರ್ಮಶಾಸ್ತ್ರದ ವಿಷಯ ಎಂದು ಎಣಿಸಲ್ಪಡುತ್ತವೆ. ಆದರೆ, ಇವೆಲ್ಲ ತೀರ ಸಾಮಾನ್ಯ ಓರ್ವ ಹಿಂದುವಿನ ಮನಸ್ಸಿನ ಅಂಗೋಪಾಂಗವಾಗಿ ಹೋಗಿವೆ. ನಾನು ಒಂದು ಸಂಗತಿಯನ್ನು ಮನಗಂಡಿದ್ದೇನೆ. ಅದೆಂದರೆ, ಹಿಂದೂ ಧರ್ಮದ ಬೆಳವಣಿಗೆಯಲ್ಲಿ ಹೊಸದಾಗಿ ಹೇರಳವಾಗಿ ಬಂದು ಸೇರಿದ ಎಷ್ಟೋ ಸಂಪ್ರದಾಯಗಳನ್ನು ತಿಳಿಸಿ ಕೊಡುತ್ತ ಅವುಗಳ ತಳಹದಿಯಾಗಿದ್ದ ವಿಶಾಲ ತಾತ್ತ್ವಿಕ ವಿಚಾರಗಳನ್ನು ಭಾರತದ ಸಾಮಾನ್ಯ ನಿರಕ್ಷರಿಗಳು ಕೂಡ ಬಲ್ಲರಿಷ್ಟೇ ಅಲ್ಲ, ಅದರಂತೆ ಅವರು ಆಚರಿಸುವದೂ ಉಂಟು. ಉದಾಹರಣೆಗಾಗಿ, ಹನುಮಂತ ಅಥವಾ ಗಣೇಶನ ಪ್ರತಿಮೆಗಳನ್ನು ಮಾಡುವದರಲ್ಲಿ ತೊಡಗಿದ ಓರ್ವ ಹಳ್ಳಿಯ ಶಿಲ್ಪಿಗೆ ಸಹ ಗೊತ್ತು, ಇವರು ಪರಮ ಈಶ್ವರಸ್ವರೂಪರೆ ಅಲ್ಲದಿದ್ದರೂ ದೇವತಾಂಶರೆಂದು.'

ಆಧ್ಯಾತ್ಮಿಕತೆ ಎಂಬುದು, ಸರ್ವವ್ಯಾಪಿಯಾದ ಪರಾತ್ಪರ ತತ್ತ್ವದಲ್ಲಿಟ್ಟ ಅಚಲ ಶ್ರದ್ಧೆ; ಅದು ಸರ್ವತ್ರ ಅಂತರ್ನಿಹಿತವಾದ ವಸ್ತುವಾಗಿರುತ್ತದಲ್ಲದೆ ಅಸ್ತಿತ್ವದ ಸಾರಸರ್ವಸ್ವವೂ ಅದಾಗಿರುತ್ತದೆ; ಅದು ವಿಶ್ವಾತೀತವಾಗಿರುತ್ತದೆ. ಇಂತಹ ಒಂದು ವಸ್ತುವು ಕೇವಲ ಭಾರತದೇಶದಲ್ಲಿಯೆ ವಿಶಿಷ್ಟವಾಗಿ ಉಂಟೆಂದು ಹೇಳಲಾದೀತೇ? ಭರತವರ್ಷದ ವೈಶಿಷ್ಟ್ಯವಿಷ್ಟೆ, ಇಲ್ಲಿ ಈ ಗ್ರಹಿಕೆಯು, ಈ ವಿಶ್ವಾಸವು ಇನ್ನುಳಿದ ದೇಶಗಳಿಗಿಂತ ಹೆಚ್ಚು ದೃಢಮೂಲವಾಗಿದೆ ಹಾಗೂ ಹೆಚ್ಚು ಹೆಚ್ಚು ಸಾರ್ವತ್ರಿಕವೂ ಸಾಮಾನ್ಯವೂ ಆಗಿದೆ. ಪ್ರಪಂಚದೊಳಗಿನ ಎಲ್ಲ ದೇಶಗಳ, ಎಲ್ಲ ಧರ್ಮಗಳ, ತಳಹದಿಯು ಎಲ್ಲ ಕಾಲಗಳಲ್ಲಿಯೂ ಇದೇ ಆಗಿದೆ. ಈ ಬಗೆಯಾಗಿರುವ ಪರಾತ್ಪರ ವಸ್ತುವಿನ ಅಸ್ತಿತ್ವದ ವರ್ಣನೆಯೂ ಅಭಿವ್ಯಕ್ತಿಯೂ ಕೆಲಕೆಲವು ಧರ್ಮಗ್ರಂಥಗಳಲ್ಲಿ ತುಸುತುಸು ಭಿನ್ನಭಿನ್ನವಾಗಿರುವದೇನೊ ನಿಜ. ಆದರೂ ಈ ಬಗೆಯ ವ್ಯತ್ಯಾಸದಿಂದ ಸಹ ಸ್ಪಷ್ಟವಾಗಿ ಕಂಡುಬರುವದೇನೆಂದರೆ, ಉದ್ದಿಷ್ಟವಾದ ಮತ್ತು ಉಲ್ಲಿಖಿತವಾದ ಆ ವಸ್ತುವು ಒಂದೇ ಎಂದು, ಆ ಒಂದು ವಸ್ತುವನ್ನು ಆಧರಿಸಿಯೆ ಎಲ್ಲ ಅನುಭವಗಳ ವರ್ಣನೆಗಳು ಉಂಟು ಎಂದು, ಆ ವಸ್ತುವು ಇನ್ನು ಬೇರೆ ಯಾವದೂ ಆಗಿರದೆ ನಿಃಸಂದೇಹವಾಗಿ ಆ ಪರಾತ್ಪರ ತತ್ತ್ವವೆ ಎಂದು. ಮಾನವ ಮನವು ಅಂತರ್ಮುಖ (Introspective) ವಾದ ಕ್ಷಣದಿಂದಲೆ ಅಥವಾ ಆತ್ಮಕೇಂದ್ರೀಯ (Subjective) ವಾದ ಕ್ಷಣದಿಂದಲೆ ಅದರಂತೆಯೆ ಅದು ಬೌದ್ಧಿಕ ಗವೇಷಣೆ (Speculation) ಯನ್ನು ಪ್ರಾರಂಭಿಸಿದ ಕ್ಷಣದಿಂದಲೆ ಅದಕ್ಕೆ ಇಂದ್ರಿಯ-ಗೋಚರವಾದ ಈ ಜಗತ್ತು ಸ್ವಯಂಸಿದ್ಧವೂ ಸ್ವಯಂಪೂರ್ಣವೂ ಎಂಬ ಬಗೆಗೆ ಎಂದಿಗೂ ತೃಪ್ತಿಯೆಂಬುದೆ ಇಲ್ಲ, ಸಮಾಧಾನವೆಂಬುದೆ ಇಲ್ಲ. ಅದಕ್ಕೆ ಸದಾ ತೋರುತ್ತ ಬಂದಿದೆ,—ಇದಕ್ಕೂ ಸೂಕ್ಷ್ಮತರವಾದ, ಉಚ್ಚತರವಾದ, ಉದಾತ್ತ-ತರವಾದ, ಪವಿತ್ರತರವಾದ, ಪ್ರಬಲತರವಾದ ಯಾವುದೊ ಒಂದು ಶಕ್ತಿ ಸಮಸ್ತ ಅಸ್ತಿತ್ವದ ತಾಯ್ಬೇರಾಗಿ ಉಂಟೆಂದು. ಈ ಬಗೆಯ ಅನಿಸಿಕೆಯು, ವರ್ಡ್ಸ್‌ವರ್ಥ ಕವಿಯು ಒಳ್ಳೆ ಸುಂದರವಾಗಿ ತನ್ನ ಅಮೋಘ ಕವನದಲ್ಲಿ ಸೂಚಿಸುವಂತೆ, 'ಅಮೃತತ್ವದ ಪೂರ್ವಸೂಚನೆ' ಯಾಗಿದೆ. ಈ ಬಗೆಯ ಅನಿಸಿಕೆಯು, ಸಂಪೂರ್ಣ-ವಾಗಿ ವಿವೇಕಸಮ್ಮತವೆಂದು ಹೇಳಲಿಕ್ಕೆ ಬರುವದಿಲ್ಲವಾದರೂ ಇದು ಅವಿವೇಕದ ಪೊಳ್ಳೆಯೆಂದೂ ಹೇಳಿ ಅದನ್ನು ತೊಲಗಿಸಿಬಿಡಲಿಕ್ಕೂ ಬಾರದು. ಈ ಅನಿಸಿಕೆಯು ಎಡೆಬಿಡದೆ ನಡೆದೆ ಇರುವದು, ಈ ಅನುಭವವು ಮತ್ತೆ ಮತ್ತೆ ಬಂದೇ ಬರುತಿರು-ವದು; ಇದನ್ನು ಅಲ್ಲಗಳೆವ ಅಥವಾ ಮೀರಿ ನಿಲ್ಲುವ ಪ್ರಯತ್ನಗಳೆಲ್ಲ ವ್ಯರ್ಥವಾಗಿವೆ ಎಂದೆ ಹೇಳಬಹುದು.

ಈ ಇಂದ್ರಿಯಗೋಚರ ಹಾಗೂ ಧೀಶಕ್ತಿಗಮ್ಯ ಸಾಧನಕ್ಕಿಂತಲೂ ಬೇರೆಯೆ ಒಂದು ಜ್ಞಾನಸಾಧನವಿದ್ದು ಅದು ಇನ್ನುಳಿದ ಉಪಕರಣಗಳಷ್ಟೆ ಬಲವತ್ತರ.

ವಾಗಿರುವದೆಂದು ಈ ಅನುಭವವು ಸ್ಪಷ್ಟವಾಗಿ ತೋರಿಸುತ್ತ ಬಂದಿರುತ್ತದೆ. ಅದಕ್ಕೆ 'ಅಂತರ್ಜ್ಞಾನ'ವೆಂದು ವಾಡಿಕೆಯಾಗಿ ಹೇಳಲಾಗುತ್ತಿದೆ. ಅಂತಃಸ್ಫೂರ್ತಿ-ಮೂಲಕವಾಗಿ ಬಂದ ಈ ಜ್ಞಾನವು ನೇರವಾದುದು, ಸ್ಪಷ್ಟವಾದುದು, ಅತ್ಯಂತ ಬಲವತ್ತರವಾದುದು; ಮತ್ತು ಇನ್ನು ಬೇರೆ ಬಗೆಯ ಜ್ಞಾನಕ್ಕಿಂತ ಇದು ಯಾವಾ-ಗಲೂ ವ್ಯಕ್ತಿಯ ಸತ್ತ್ವ (Being) ವನ್ನೂ ವ್ಯಕ್ತಿಮತ್ತೆ (Personality) ಯನ್ನೂ ಆಮೂಲಾಗ್ರವಾಗಿ ಆವರಿಸಿಕೊಳ್ಳುವದು. ಯಾವುದೆ ಇಂದ್ರಿಯ ಸಂವೇದನವು ಅದನ್ನು ತಿಳಿದುಕೊಳ್ಳಲು ಅಥವಾ ಅಳವಡಿಸಿಕೊಳ್ಳಲು ಸಮರ್ಥ-ವಾಗದು. ವ್ಯಕ್ತಿಯ ಸಮಸ್ತ ಸತ್ತ್ವವು ಪ್ರತ್ಯಕ್ಷವಾಗಿ ಜ್ಞಾನದ ಗುರಿಯೊಡನೆ ಸಮರಸತೆಯನ್ನು ಹೊಂದುವದರಿಂದಲೆ ಈ ಅಂತರ್ಜ್ಞಾನವು ತಾನಾಗಿ ಉಂಟಾಗುವದು.

ಮಾನವ ಚೇತನವು, ತನ್ನ ಸುದೀರ್ಘವಾದ ಸಂಶೋಧನೆಯ ಸಮಯದಲ್ಲಿ, ಈ ಅಂತರ್ಜ್ಞಾನದ ಸಹಾಯದಿಂದಲೆ ಆ ಪರಾತ್ಪರ ಆತ್ಮತತ್ತ್ವದ ಅಸ್ತಿತ್ವವನ್ನೂ ಅದರ ಅಂತರ್ವ್ಯಾಪಕತ್ವವನ್ನೂ ಕಂಡುಕೊಳ್ಳಲು ಸಮರ್ಥವಾಗಿದೆ. ಅದ್ದರಿಂದ, ಮೊಟ್ಟಮೊದಲಿಗೆ, ಪರಾತ್ಪರವಾದ ಆತ್ಮತತ್ತ್ವವೊಂದು ಉಂಟೆಂಬ ಬಗೆಗೆ ದೃಢ ಶ್ರದ್ಧೆ ಬೇಕು; ಈ ಶ್ರದ್ಧೆಯೆ ಆಧ್ಯಾತ್ಮಿಕತೆಯಾಗಿರುತ್ತದೆ. ಆಲ್ಡಸ್ ಹಕ್ಸಲೆ-ಯವರ ಮತದಂತೆ, ಪ್ರಭವಾನಂದ ಮತ್ತು ಈಶರವುಡ್ ಇವರ ಭಗವದ್ಗೀತೆಯ ಉಪೋದ್ಘಾತದಲ್ಲಿ ಅವರು ಹೇಳುವ 'ಅವಿಚ್ಛಿನ್ನ ತತ್ತ್ವದರ್ಶನ (Perennial Philosophy)' ಎಂಬುದರ ಮೂಲಭೂತ ಬೋಧಸೂತ್ರಗಳು ಈ ಪ್ರಕಾರವಾಗಿ ಉಂಟು: 'ಜಡ ಮತ್ತು ವ್ಯಷ್ಟಿಸ್ವರೂಪವನ್ನು ತಾಳಿದ ಚೇತನದಿಂದ ಕೂಡಿದ ಈ ಇಂದ್ರಿಯಗೋಚರವಾದ ಅದ್ಭುತ ಜಗತ್ತು—, ಜಡವಸ್ತುಗಳು, ಜೀವಂತ ಪ್ರಾಣಿ-ಗಳು ಮನುಷ್ಯರು ಇವರಿಂದಲೂ ಮತ್ತು ದೇವತೆಗಳಿಂದಲೂ ಸಹ ಕೂಡಿದ ಈ ಜಗತ್ತು—, ಒಂದಾನೊಂದು 'ದಿವ್ಯವಾದ ಭೂಮಿಕೆ' ಯನ್ನು ಆಧರಿಸಿ ಪ್ರಕಟ-ಗೊಂಡಿದ್ದು ಇದರಲ್ಲಿಯೆ ಸಮಸ್ತ ಅಪೂರ್ಣ ಸತ್ಯಗಳು ತಮ್ಮ ಅಸ್ತಿತ್ವವನ್ನು ಪಡೆದಿರುತ್ತವೆ ಮತ್ತು ಅದಿಲ್ಲದೆ ಅವಕ್ಕೆ ಅಸ್ತಿತ್ವವೆ ಉಂಟಾಗುತಿರಲಿಲ್ಲ.' ಈ ಮಾತಿನಿಂದ ಆಧ್ಯಾತ್ಮಿಕತೆಯ ಅರ್ಥವೂ ರಹಸ್ಯವೂ ಚೆನ್ನಾಗಿ ತಿಳಿಯಲು ಸಹಾಯವಾಗುತ್ತದೆ.

ಭಾರತೀಯರಿಗೆ ಆತ್ಮತತ್ತ್ವದಲ್ಲಿ ಈ ಪರಿ ಗಾಢವಾದ ಶ್ರದ್ಧೆಯಿದ್ದುದರಿಂದಲೆ ಅವರ ಲೌಕಿಕ ಹಾಗೂ ಧಾರ್ಮಿಕ ಚಟುವಟಿಕೆಗಳಲ್ಲೆಲ್ಲ ಅದು ಹಾಸುಹೊಕ್ಕಾಗಿ ಹರಿದಾಡುತಿದೆ ಎಂಬ ಸಂಗತಿಯನ್ನು ಗಮನಿಸುವದು ಅತ್ಯಗತ್ಯವಾಗಿದೆ. ಈ ವಿಷಯದಲ್ಲಿ ಭಾರತೀಯ ಮನೋವೃತ್ತಿಯು ಇನ್ನುಳಿದವರಿಗಿಂತ ತೀರ ಬೇರೆ ಬಗೆಯದಾಗಿದೆ. ಭಾರತೀಯರ ಆತ್ಮಾನ್ವೇಷಣವು ಸುದೀರ್ಘವಾದುದು, ಗಭೀರ

ವಾದುದು, ಅವಿಚ್ಛಿನ್ನವಾದುದು. ಈ ಆತ್ಮಾನ್ವೇಷಣದುದ್ದಕ್ಕೂ ಒಂದು ಸಂಗತಿಯು ಒಳ್ಳೆ ಸ್ಫುಟವಾಗಿ ಒಡೆದು ಕಾಣುತಿದೆ. ಅದೆಂದರೆ, ಭಾರತಮಾತೆಯು, ತನ್ನ ಈ ಅನ್ವೇಷಣದ ಪ್ರಥಮಾವಸ್ಥೆಯ ಮಬ್ಬುಗತ್ತಲಲ್ಲಿ ಇದ್ದಾಗ ಕೂಡ ಆಕೆಗೆ ಅಂತರಿಕ ಆತ್ಮಾನುಭವದ ಬಗೆಗೆ ಬರಿ ಬೌದ್ಧಿಕ ವಿವರಣೆಯಿಂದ ಎಂದಿಗೂ ಸಮಾಧಾನ ವೆನಿಸಿಲ್ಲ. ವಿಚಾರ, ತರ್ಕ, ಪಾಂಡಿತ್ಯ ಅಥವಾ ಬುದ್ಧಿ ಇವುಗಳಲ್ಲಿ ಯಾವುದೂ ಅಧ್ಯಾತ್ಮದ ಹೆಬ್ಬಾಗಿಲು ಸರ್ವಥಾ ಅಲ್ಲವೆಂದೆ ಆಕೆಗೆ ಮನದಟ್ಟಾಗಿ ಹೋಗಿತ್ತು. ಇವೆಲ್ಲ ತಮ್ಮ ತಮ್ಮ ರೀತಿಯಲ್ಲಿ ಸಹಾಯಕವಾಗಿರಬಹುದು. ಆದರೆ, ಅಂತ-ಜ್ಞಾನದ ಅನುಭೂತಿಯೆ ನೇರವಾದ ಸತ್ಯಪ್ರತೀತಿಯೆ ಸಮಸ್ತ ಸಂದೇಹಗಳನ್ನು ಶಮನಗೊಳಿಸಿ, ಹೃದಯಗ್ರಂಥಿಯ ತೊಡಕನ್ನು ಬಿಡಿಸಿ, ಅಂತರಿಕ ಸಮತೆಯನ್ನು ನೆಲೆಗೊಳಿಸಬಲ್ಲುದೆಂದು ಆಕೆ ಎಂದಿಗೂ ನೆರೆನಂಬಿದ್ದಾಳೆ.

ಭರತವರ್ಷದ ಆಧ್ಯಾತ್ಮಿಕತೆಯ ಇನ್ನೊಂದು ವೈಶಿಷ್ಟ್ಯವೆಂದರೆ, ಈಶ್ವರ ಪ್ರೇರಿತವಾದ ದಿವ್ಯ ಜೀವನವನ್ನೆ ಸಾಗಿಸಬೇಕೆಂಬ ಬಗೆಗೂ-ತುರೀಯ ಸತ್ಯದಲ್ಲಿ ತಲ್ಲೀನವಾಗಿ ಅದರ ಅನುಭವದಲ್ಲಿಯೆ ಸದಾ ಇದ್ದುಬಿಡಬೇಕೆಂಬ ಬಗೆಗೂ ಇರುವ ಸಾಂದ್ರವಾದ ಸರ್ವಗ್ರಾಹಿಯಾದ ಆಕೆಯ ಅಂತಃಪ್ರವೃತ್ತಿ. ತತ್ತ್ವಜ್ಞಾನಿಯಾದ ಝಿಮರ ಎಂಬವರ ಮಾತುಗಳಲ್ಲಿ ಹೇಳುವದಾದರೆ ಹೀಗೆ: ‘ ಭಾರತೀಯ ವಿಚಾರ ಧಾರೆಯ ಮುಖ್ಯ ನಿರಿಗುರಿಯು, ಜೀವನದ ವೃತ್ತಿಗಳು ಯಾವ ಶಕ್ತಿಗೆ ತಡೆಯಾಗಿ ನಿಂತಿವೆಯೊ ಅದನ್ನು ಹುಡುಕಿ ತೆಗೆದು ಸ್ವಚೇತನದಲ್ಲಿ ಅದನ್ನು ಅಳವಡಿಸಿ ಕೊಳ್ಳುವದೆ ಆಗಿರುತ್ತದೆ.’ ಇದರರ್ಥ, ಭಾರತೀಯರಿಗೆ, ಆಧ್ಯಾತ್ಮಿಕ ಸತ್ಯವೆಂಬುದು ಕೇವಲ ತಾತ್ಪೂರ್ತಿಕವಾಗಿ ಆಕಲನಮಾಡಿಕೊಂಡು ಅನುಭವಿಸತಕ್ಕ ಅಥವಾ ಆಗೊಮ್ಮೆ ಈಗೊಮ್ಮೆ ಹರ್ಷೋನ್ಮಾದದಲ್ಲಿ ತಲ್ಲೀನವಾಗಿರತಕ್ಕ ವಿಷಯವಾಗಿರದೆ ಅದು ಅವಿಚ್ಛಿನ್ನವಾದ ಪೂರ್ಣಪ್ರಜ್ಞೆಯಲ್ಲಿ ಇದ್ದುಕೊಂಡಿರುವದಾಗಿರುತ್ತದೆ.

ಆಧ್ಯಾತ್ಮಿಕತೆಗೆ ಕೊಡಲಾದ ಈ ಮಹತ್ವದ ಬಗೆಗೆ ತಪ್ಪು ತಿಳಿದುಕೊಂಡು, ತಪ್ಪು ತಪ್ಪಾಗಿ ಅರ್ಥೈಸಿದವರೂ ಕೆಲವರಿದ್ದಾರೆ. ಅದಕ್ಕೆ ಅವರು ನಿರಾಶಾವಾದ ವೆಂದೂ, ಪರಲೋಕಪ್ರೀತಿಯೆಂದೂ, ಅವಾಸ್ತವ ಅಪಲಾಪವೆಂದೂ ಕರೆದು, ದೈನಂದಿ-ನದ ಜೀವನಕ್ಕೆ ಸಂಬಂಧವಿಲ್ಲದ ಅನವಶ್ಯಕವಾಗಿರುವ ವಸ್ತುವೆಂದು ಮುಂತಾಗಿ ಹೇಳುತಿರುವದುಂಟು. ಭಾರತದ ಮೂರುಸಾವಿರ ವರ್ಷಗಳ ಇತಿಹಾಸವೂ ಅದರ ವಿವಿಧ ಸಭ್ಯತೆ ಸಂಸ್ಕೃತಿಗಳೂ ಒಂದು ವೇಳೆ ಏನೂ ಇಲ್ಲದೆ ಹೋಗಿದ್ದರೆ ಈ ಟೀಕಾಕಾರರಿಗೆ ಹೀಗೆ ಹೇಳಲು ಒಂದು ಪ್ರಬಲ ಆಧಾರವು ದೊರಕಬಹುದಾಗಿತ್ತು. ಆದರೆ ವಸ್ತುಸ್ಥಿತಿಯು ಬೇರೆ ಬಗೆಯಾಗಿಯೆ ಉಂಟು. ಮಾನವ ವ್ಯವಹಾರದ ಯಾವ ಅಂಗೋಪಾಂಗದ ವಿಷಯಕ್ಕೂ ಭಾರತಮಾತೆಯು ಔದಾಸೀನ್ಯವನ್ನಾಗಲಿ ಇಹಲೋಕದ ತಿರಸ್ಕಾರವನ್ನಾಗಲಿ ತೋರಿಸಿಲ್ಲ. ಆಕೆಯ ಉದರದಲ್ಲಿ ಬಹುಜನ

ಋಷಿಗಳು, ಬಹುಜನ ಮುನಿಗಳು, ಬಹುಜನ ತತ್ತ್ವಜ್ಞಾನಿಗಳು, ಬಹುಜನ ಧಾರ್ಮಿಕವೃತ್ತಿಯುವರು ಜನಿಸಿಬಂದರೆಂಬ ಮಾತು ನಿಜ. ಆದರೆ ಅದೇನು ಅಪ ಪ್ರತಿಷ್ಠೆಯಾಗಲಾರದು. ಸಾಲದುದಕ್ಕೆ ಆಕೆ, ಚಂದ್ರಗುಪ್ತ, ಅಶೋಕ, ಸತ್ಯಾ-ಶ್ರಯ ಪುಲಿಕೇಶಿ, ವಿಕ್ರಮಾದಿತ್ಯ, ಹರ್ಷವರ್ಧನ, ಹರಿಹರ, ಶಿವಾಜಿ ಇವರೆ ಮೊದಲಾದವರ ಮೂಲಕ ಸಾಮ್ರಾಜ್ಯಗಳನ್ನು ಕಟ್ಟಿದ್ದುಂಟು. ಆಕೆಯ ಉದ್ಯೋಗ ವಾಣಿಜ್ಯಗಳೆಂದರೆ ಒಂದಾನೊಂದು ಕಾಲಕ್ಕೆ ಲೋಕವೆ ಅಸೂಯೆ ಪಡುವಂತಿತ್ತು. ದೂರದ ದೇಶಗಳಿಗೆ ಧರ್ಮೋಪದೇಶಕರನ್ನು ಕಳಿಸಿ, ಯಾವುದೆ ಬಗೆಯ ರಾಜ-ಕೀಯ ಲಾಭಲೋಭವನ್ನಿಟ್ಟುಕೊಳ್ಳದೆ, ಯಾವುದೆ ಬಗೆಯ ರಾಜಕೀಯ ಸಹಾಯವನ್ನೂ ಕೋರದೆ, ಆಕೆ ಶಾಂತಿಸಂಸ್ಕೃತಿಗಳ ಸಂದೇಶವನ್ನು ಬೀರಿದ್ದುಂಟು. ಆಕೆ ಅನೇಕಾನೇಕ ನಾಮಾಂಕಿತ ರಾಜನೀತಿಜ್ಞರನ್ನೂ ಮುತ್ಸದ್ದಿಗಳನ್ನೂ ರಾಜ-ಶಾಸನಪಟುಗಳನ್ನೂ ಹೆತ್ತಿದ್ದಾಳೆ. ಆಕೆ ಭವ್ಯಮನೋಹರ ಗುಡಿಗೋಪುರಗಳನ್ನೂ ಕಟ್ಟಡಗಳನ್ನೂ ರಚಿಸಿ ಇಂದಿನ ಸ್ಥಾಪತ್ಯವಿಶಾರದರ ಮತಿಭ್ರಾಂತಿಯುಂಟಾಗುವಂತೆ ಮಾಡಿದ್ದಾಳೆ. ಅಕೆಯ ವಾಸ್ತುವಿಧಾನ, ಶಿಲ್ಪಶಾಸ್ತ್ರ, ಚಿತ್ರಣ ಹಾಗು ಇನ್ನುಳಿದ ಕಲೆಗಳು, ಆಕೆಯ ಸಂಗೀತ ಹಾಗು ಭರತನಾಟ್ಯಾಭಿನಯ ಇವೆಲ್ಲವುಗಳ ವೈವಿಧ್ಯ ವಿಶಾಲತೆಗಳು ಬೆರಗುಬಡಿಸುವಂತಿದ್ದು ಅವನ್ನೆಲ್ಲ ಅಭ್ಯಸಿಸಿ ಅವಗತ ಮಾಡಿಕೊಳ್ಳಲು ಒಂದೊಂದು ಪಟ್ಟವಾದರೂ ಸಾಲದು. ಆಕೆಯ ಸಾಹಿತ್ಯ ಭಾಂಡಾರವು ಮೊದಮೊದಲು ಸಂಸ್ಕೃತದಲ್ಲಿ, ಆಮೇಲೆ ಆಯಾ ಪ್ರಾದೇಶಿಕ ಭಾಷೆ ಗಳಲ್ಲಿ, ಬಹು ಹುಲುಸಾಗಿ ಬಹುಮುಖವಾಗಿ ಬೆಳೆದಿದ್ದು ಅದು ಅತ್ಯಂತ ವೈಭವ ಸಂಪನ್ನವೆಂಬ ಮಾತು ಅಕ್ಷರಶಃ ನಿಜವಾಗಿದೆ. ಯಾವ ಮಹಾಕಾವ್ಯವೂ ಪ್ರಭಾವ-ಶಾಲಿಯಾದ ಮಹಾಭಾರತಕ್ಕೆ ಸರಿದೊರೆಯಾಗಿ ನಿಲ್ಲಲಾರದು. ಇವುಗಳೆಲ್ಲ ಆಕೆಯ ಪರಲೋಕಪ್ರೀತಿಯ ಪ್ರತಿಫಲಸ್ವರೂಪವಾಗಿ ಬಂದುದಾಗಿದ್ದರೆ ನಾವಿದಕ್ಕಾಗಿ ತಲೆ ತಗ್ಗಿಸಬೇಕಾಗಿಲ್ಲ. ಈ ಜಗತ್ತಿನ ಬಗೆಗಾಗಲಿ, ಜಡವಸ್ತುವಿನ ಬಗೆಗಾಗಲಿ ಭಾರತೀಯರು ತಿರಸ್ಕಾರವನ್ನೂ ವಿಮುಖತೆಯನ್ನೂ ತಳೆದಿಲ್ಲ. ಈ ಜಗತ್ತಿಗಿಂತಲೂ ಈ ಜಡಕ್ಕಿಂತಲೂ ಅತೀತವಾದುದು ಅದಾವುದೊ ಒಂದು ಉಂಟು; ಅದರ ಅರಿವು ಈ ಜಗದ ಈ ಜಡದ ಗುಟ್ಟನ್ನೂ ಒಳಗೊಂಡಿರುತ್ತದೆ ಎಂಬ ಮಾತನ್ನು ಒತ್ತಿ ಹೇಳಲೂ ಎತ್ತಿ ತೋರಿಸಲೂ ಅವರು ಬಯಸಿದ್ದಾರೆ, ಅಷ್ಟೆ. ಇದರರ್ಥ, ಈ ಜಗವೆ ಈ ಜಡವೆ ಸರ್ವಸ್ವವಲ್ಲ, ಇದೇ ಅಂತಿಮ ಧ್ಯೇಯವಲ್ಲ ಎಂದು ಮತ್ತೆ ಮತ್ತೆ ಹೇಳಲಾಗಿದೆ. ಇದು ಸಾಧನಮಾತ್ರ. ಇದಕ್ಕೂ ಸುಂದರವಾಗಿರುವ ಆತ್ಮಸ್ವರೂಪಕ್ಕೆ ಇದು ಒಂದು ಮೋಹಕ ಅವಗುಂಠನಪ್ರಾಯವಾಗಿದೆ. ಉಪನಿಷತ್ತು ಉಸುರುತ್ತದೆ, ಸತ್ಯಸ್ವರೂಪವನ್ನು ಹಿರಣ್ಮಯ ಆವರಣವೊಂದು ಮರೆಮಾಚಿದೆಯೆಂದು. 'ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿ ಹಿತಂ ಮುಖಂ'

ಸತ್ಯದ ಸ್ವರೂಪವನ್ನು ತಿಳಿಸುವದೂ ಸಾಧ್ಯವಿದೆ, ಅದರ ಅಸ್ತಿತ್ವದಲ್ಲಿ ಸಂಜಿಗೆ ಇಡುವದೂ ಸಾಧ್ಯವಿದೆ; ಇದರಂತೆ ಅದ್ವೈತಾನುಭೂತಿಯನ್ನು ಪಡೆಯುವದೂ ಸಾಧ್ಯವಿದೆ. ಆದರೆ ಸಾಧನದ ಪ್ರಗತಿಯೂ ಆಧ್ಯಾತ್ಮಿಕ ಅನುಭೂತಿಯ ಪರಿಪೂರ್ಣತೆಯೂ, ಅವರವರು ಸಾಧನಕ್ಕೆ ಕೊಟ್ಟ ಮಹತ್ವ ಮತ್ತು ಅವರವರಿಗೆ ಅದರಲ್ಲಿ ದೊರಕಿದ ಸಿದ್ಧಿ ಸಾಫಲ್ಯಗಳನ್ನೆ ಯಾನಾಗಲೂ ಅವಲಂಬಿಸಿರುವದುಂಟು. ಮಾನವನಿಗೆ ಉಚ್ಚ ಸಾಧನವು ಇದೇ ಆಗಿರುವದೆಂದು ಎಲ್ಲ ಧರ್ಮಗಳೂ ಎಲ್ಲ ಅನುಭಾವಿಗಳೂ ಒತ್ತಿ ಹೇಳಿದ್ದಾರೆ. ಏಕೆಂದರೆ ಒಂದು ವ್ಯಕ್ತಿಯು ಮುಟ್ಟಬಹುದಾದ ಉಚ್ಚತಮವಾದ ಇರವಿನ ಸ್ಥಿತಿಯೆ— ಅವಸ್ಥೆಯೆ ಇದಾಗಿರುತ್ತದೆ. ಭಾರತ-ದೇಶದಲ್ಲಿಯಂತೂ ಜೀವಾತ್ಮನು ಪರಮಾತ್ಮನಲ್ಲಿ ಐಕ್ಯ ಹೊಂದಿ ಅನುಭವಿಸುವ ಏಕತ್ವದ ಪರಮಾನುಭವವೆ ಎಲ್ಲ ಆಧ್ಯಾತ್ಮಿಕ ಸಾಧನೆಯ ತುರೀಯ ಧ್ಯೇಯ-ವೆಂದು ತಿಳಿಯಲಾಗುತಿದೆ. ನಿಜವಾಗಿಯೂ ಈ ದಿಶೆಯಲ್ಲಿಯೆ ಮಾನವ ಚೇತನದ ವಿಕಾಸವು ಸಾಗಿರುವದೆಂದು ನಂಬಲಾಗಿದೆ. ಮೊದಮೊದಲು ವ್ಯಕ್ತಿಗತ ಆತ್ಮಭಾವದಿಂದ ಪ್ರಾರಂಭವಾದ ಸಾಧನವು ಬರಬರುತ್ತ ಪ್ರಗತಿಯಾದಂತೆಲ್ಲ ವಿಶ್ವಾತ್ಮಭಾವವನ್ನು ತಾಳುತ್ತದೆ. ಈ ಸ್ಥಿತಿಗೆ ಮುಟ್ಟುತಲೆ ಅಲ್ಲಿ ವ್ಯಕ್ತಿಗತ ಭಾವವು ಅಳಿದು ಹೋಗಿ ತನ್ನದೆಂಬ ಅಸ್ತಿತ್ವವೆ ವ್ಯಕ್ತಿಗೆ ಇಲ್ಲದಾಗುತ್ತದೆ. ಸಮಸ್ತ ಬ್ರಹ್ಮಾಂಡವೆ ತಾನೆಂಬ ಭಾವ ಒಡಮೂಡುತ್ತದೆ. ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ ಮಹಾಮಹಿಮರೆನಿಸಿಕೊಂಡ ಪುಣ್ಯಾತ್ಮರು ಪುನಃ ಪುನಃ ಸಿದ್ಧಾಂತಮಾಡಿ ತೋರಿಸಿದ್ದಾರೆ, ಈ ಬಗೆಯ ಚೇತನದ ಸ್ಥಿತಿಯನ್ನು ಹೊಂದುವದು ವ್ಯಕ್ತಿಗತ ಜೀವಾತ್ಮರಿಗೆಲ್ಲ ಸಾಧ್ಯವೆಂದು, ಪರಮಾತ್ಮನಲ್ಲಿ ತಲ್ಲೀನವಾಗಿ ಈ ಅನುಭವದ ಐಶ್ವರ್ಯವೈಪುಲ್ಯದಲ್ಲಿ ಇರಬರುವದೆಂದು. ಇದು ಸಾಧ್ಯವೆಂಬುದನ್ನು ಪ್ರತ್ಯಕ್ಷ ತೋರಿಸಿಕೊಡಲೆಂದೊ ಎಂಬಂತೆ ಭಾರತದೇಶದಲ್ಲಿ ಈ ಬಗೆಯ ಮಹಾತ್ಮರು ಮತ್ತೆ ಮತ್ತೆ ಜನ್ಮತಾಳಿ ಬಂದುದುಂಟು. ಎಲ್ಲೆಲ್ಲಿಯೂ ಹೆಸರುವಾಸಿಯಾಗಿರುವ ರಮಣಮಹರ್ಷಿಗಳು ಈ ಬಗೆಯ ಸ್ಥಿತಿಯನ್ನು ಹೊಂದಿದ್ದರು. ಇಂತಹ ಸ್ತ್ರೀ ಪುರುಷರನ್ನು ಪರಂಪರಾಗತವಾಗಿ ಭಾರತದೇಶವು ಮನ್ನಿಸುತ್ತ ಬಂದಿದೆ, ಪೂಜಿಸುತ್ತ ಬಂದಿದೆ. ಮಹಾ ಮಹಾ ರಾಜರ ಮತ್ತು ಶಾಸನಕರ್ತರ ಬಗೆಗೆ ಭಾರತೀಯರಲ್ಲಿ ಭಯ ವಿಸ್ಮಯ ಭಾವವಿದೆ, ಸಂಶೋಧಕರ ಬಗೆಗೆ ಮೆಚ್ಚುಗೆಯಿದೆ, ಕಲಾವಿದ-ಕವಿಗಳ ಬಗೆಗೆ ಪ್ರೇಮವಿದೆ; ಆದರೆ ಸಾಧುಸಂತರ ಬಗೆಗೆ, ಋಷಿಮುನಿ ದ್ರಷ್ಟಾರರ ಬಗೆಗೆ, ಗಭೀರ ಪೂಜ್ಯಭಾವವುಂಟು. ಮಾನವನ ಅಂತರ್ವಿಕಾಸದ ಕಾರ್ಯದಲ್ಲಿ ತಾವೆ ಮುಂದಲದಲ್ಲಿದ್ದವರೆಂಬ ಸಂಗತಿಯು ಭಾರತೀಯರಿಗೆ ತಿಳಿದಿದೆ. ಇನ್ನುಳಿದವರೂ ಸಹಾಯಕರಾಗುತ್ತಾರೆ ನಿಜ; ಆದರೆ ತಮದಲ್ಲಿ ತುಡುಕುತ್ತ ತಡವರಿಸುತ್ತ ಅಸತ್ಯದಿಂದ ಸತ್ಯದತ್ತ ಸಾಗಿದ ಮಾನವ ಮನಕ್ಕೆ

ದಾರಿದೋರುವ ಗುರುಭಾರವನ್ನು ಭಾರತೀಯರೆ ಹೊತ್ತಿದ್ದಾರೆ. ಅವರೆ ಸದಾ ಜಾಗ್ರತರಾಗಿದ್ದು, ಮನುಕುಲದ ಅಧ್ಯಾತ್ಮಪ್ರಗತಿಯ ಸಂಗ್ರಾಮದ ಸಮಸ್ತ ಹೊಣೆಯನ್ನೂ ವಹಿಸಿದ್ದಾರೆ.

ಅದಾವುದೆ ಪ್ರಮಾಣದಲ್ಲಿಯಾಗಲೊಲ್ಲದೇಕೆ, ಎಲ್ಲೆಲ್ಲಿ ಈ ಆಂತರಿಕ ಅನ್ವೇಷಣವು ನಡೆದಿದೆಯೊ ಅಲ್ಲಲ್ಲಿ, ಆಧ್ಯಾತ್ಮಿಕತೆ ಮತ್ತು ಅದರಿಂದ ವ್ಯಕ್ತವಾಗಬಹುದಾದ ಎಲ್ಲ ಅರ್ಥಭಾವವೇನೆಂಬುದನ್ನು ಸಹಸಾ ಎಲ್ಲರೂ ಬಲ್ಲರು ಎಂಬುದಾಗಿ ಹಿಂದೊಮ್ಮೆ ಹೇಳಲಾಗಿದೆ. ನಮಗೆ ಅತಿ ಪರಿಚಿತವಾಗಿರುವ ಇಂದ್ರಿಯಗೋಚರವಾದ ಈ ಸೃಷ್ಟಿಯ ವಾಡಿಕೆಯ ಸ್ಥೂಲ ಸತ್ಯಕ್ಕಿಂತ ಉಚ್ಚತರವಾದ ಸತ್ಯವದು. ಮಾನವ ಚೇತನದ ವಿಕಾಸಕ್ರಮದಲ್ಲಿ ಬಹುಕಾಲ ಗುಪ್ತವಾಗಿದ್ದ ಸತ್ಯವನ್ನು ಮಾನವನು ಹುಡುಕಿ ತೆಗೆದಿದ್ದಾನೆ. ಒಮ್ಮೆ ಅವನಿಗೆ ಆ ಉಚ್ಚತರ ಸತ್ಯವು ಅವಗತವಾದರೆ ಅದನ್ನು ಅವನು ಆತ್ಮಸಾತ್ ಮಾಡಿಕೊಂಡು ಬಿಡುತ್ತಾನೆ, ಹಾಗು ಆಮೇಲೆ ಅದರ ಬಲದಿಂದ ತನ್ನ ಸುತ್ತಲಿನ ಗೂಢ ರಹಸ್ಯಗಳನ್ನು ಹುಡುಕಿ ತೆಗೆಯಲು ಉದ್ಯುಕ್ತನಾಗುತ್ತಾನೆ. ಈ ವರೆಗೆ ಮಾನವನು ಸಾಮಾನ್ಯತಃ ಇಂದ್ರಿಯ ಗೋಚರ ಜಗದ ವಿಷಯವನ್ನೆ ಕುರಿತು ಈ ಬಾಹ್ಯ ಜಗತ್ತನ್ನೆ ಕುರಿತು ಹೆಚ್ಚಾಗಿ ಪ್ರಸಂಗಿಸುತ್ತ ಬಂದಿದ್ದಾನೆ. ತನ್ನ ಚೇತನಗತವಾದ ಅಂತರ್ಲೋಕದತ್ತ ಹೊರಳಿದುದು ಬಹಳ ಕಡಿಮೆಯೆ ಎಂದು ಹೇಳಿದರೆ ತಪ್ಪಾಗದು. ನಿಜವೇನೆಂದರೆ ಮಾನವ ಮನೋವ್ಯಾಪಾರದ ಬಗೆಗೆ ನಡೆದ ಸಂಶೋಧನೆಯು ತೀರ ಇತ್ತೀಚಿನದಿಷ್ಟೆ ಅಲ್ಲ, ಅದಿನ್ನೂ ಅತ್ಯಂತ ಶೈಶವಾವಸ್ಥೆಯಲ್ಲಿ ಇದ್ದುಬಿಟ್ಟಿದೆ. ಈ ಇಂದ್ರಿಯಗೋಚರವಾದ ಜಗದ ವಿಷಯಕ್ಕೆ ಈವರೆಗೂ ಗೊತ್ತಾಗದಿದ್ದಂತಹ ಅನೇಕ ಗೂಢ ರಹಸ್ಯಗಳು ಸಹ ಈ ಮನೋಮಯ ಲೋಕದಲ್ಲಿಯೆ ಉಂಟೆಂಬ ಸಂಗತಿಯು ಪ್ರಕಟವಾಗುವ ಸಂಭವವೂ ಇದೆ. ಮಾನವನು ಈ ವರೆಗೆ, ಆ ಸೂಕ್ಷ್ಮಾತ್ ಸೂಕ್ಷ್ಮತರವಾದ ಲೋಕದ ಹೊಸತಿಲಲ್ಲಿ ಮಾತ್ರ ನಿಂತಿದ್ದಾನೆ ಅಷ್ಟೆ; ಆ ಲೋಕವಾದರೊ ಅವನ ಜೊತೆಜೊತೆಗೆ ಇದೆ; ಆದರೂ ಅದರಿಂದ ಅವನು ದೂರನಾಗಿ ಅಪರಿಚಿತನಾಗಿಯೆ ಉಳಿದುಬಿಟ್ಟಿದ್ದಾನೆ.

ಆಧ್ಯಾತ್ಮಿಕತೆಯು ಅಥವಾ ಆಧ್ಯಾತ್ಮಿಕ ಲೋಕವು ಹೊರಗಿರುವ ಯಾವುದೊ ಒಂದು ವಸ್ತುವಲ್ಲ; ಅದು ನಮ್ಮ ನಮ್ಮ ಚೇತನದಲ್ಲಿಯೆ ಅಂತರ್ನಿಹಿತವಾದುದು; ವಿಸ್ತೀರ್ಣವಾದ ಅಸೀಮವಾದ ವ್ಯೋಮವ್ಯೂಹದಲ್ಲಿಯ ಕಣಗಳಂತೆ ನಾವೆಲ್ಲ ಅದರಲ್ಲಿಯೆ ಇದ್ದುಬಿಟ್ಟಿದ್ದೇವೆ. ಆದರೂ ನಾವದನ್ನು ನಮ್ಮ ಚೇತನದಲ್ಲಿಯೆ ಅದರ ದಿವ್ಯದ್ಯುತಿಸಹಿತವಾಗಿ ಕಂಡುಕೊಳ್ಳಬೇಕಾಗಿದೆ. ಆಧುನಿಕ ಮನೋವಿಜ್ಞಾನವು ಇತ್ತೀಚೆ, ಚೇತನದ ರಹಸ್ಯಗಳನ್ನು ಹುಡುಕಿ ತೆಗೆಯಲು ಹವಣಿಸುತಿದೆ. ಅರ್ಧ ಜಾಗ್ರತ ಚೇತನವೂ ಅಚೇತನವೂ ಆಕ್ರಮಿಸಿದ ವಿಸ್ತೀರ್ಣವಾದ ಮತ್ತು ಅನನು-

ಮೇಯವಾದ ಸೀಮೆಗಳ ಜೊತೆಗೆ ಹೋಲಿಸಿ ನೋಡಿದಾಗ ಜಾಗ್ರತವಾದ ಸಚೇತನ ಪುರುಷನ ಕರ್ಮಭೂಮಿಯು ತೀರ ಸಣ್ಣದೆಂದೂ ಸೀಮಿತವೆಂದೂ ತಿಳಿದುಬಂದಿದೆ. ಯಾವಾಗಲೂ ಭಾರತದ ಅಧ್ಯಾತ್ಮಸಾಧಕನ ಧ್ಯೇಯವು, ಸಚೇತನ ಪುರುಷನ ಸೀಮೆಯನ್ನು ದಾಟುವದೂ, ಅವಚೇತನಾಮಯ ಅವಸ್ಥೆಯನ್ನು ಅಂದರೆ ಅರ್ಧಜಾಗ್ರತ ಚೇತನವನ್ನು ನಿಗ್ರಹಿಸುವದೂ ಹಾಗೂ ವಿಸ್ತೀರ್ಣವಾದ ಅಚೇತನದೊಡನೆ ತಾದಾತ್ಮ್ಯವನ್ನು ಹೊಂದುವದೂ ಆಗಿರುತ್ತದೆ. ಈ ಅಚೇತನವು ಸಹ ಆತ್ಮಸ್ವರೂಪವೆ. ಸಾಧಕನು ಈ ಗುರಿಯನ್ನು ಮುಟ್ಟಲೆಳಸುತ್ತಾನೆ, ಆತ್ಮಸಂಯಮನದಿಂದ, ಆತ್ಮಶುದ್ಧಿಯಿಂದ, ಏಕಾಗ್ರತೆಯಿಂದ, ಆತ್ಮೋನ್ನತ್ಯದ ಬಲದಿಂದ, ಚಿಂತನದಿಂದ, ಹಾಗೂ ಕೊನೆಯದಾಗಿ ಆತ್ಮಸಮರ್ಪಣದಿಂದ ಮತ್ತು ಸಂಪೂರ್ಣ ತನ್ಮಯತೆಯಿಂದ. ಇವೆಲ್ಲವುಗಳನ್ನು ಒಳಗೊಂಡಾಗ ಅದು ಅಧ್ಯಾತ್ಮಸಾಧನವೆನಿಸಿಕೊಳ್ಳುತ್ತದೆ. ಸಾಧನದ ಸಫಲತೆಯು ಸಿದ್ಧಿಯಲ್ಲಿ. ಸಿದ್ಧನಾದವನು ವೈಯಕ್ತಿಕ ರಾಗ-ದ್ವೇಷಗಳ ಬಂಧನಗಳಿಂದ ವಿಮುಕ್ತನಾಗಿರುತ್ತಾನೆ. ಅವಚೇತನಮಯ ಮನೋಲೋಕದಲ್ಲಿಂದ ಎದ್ದು ಬಂದು, ತನ್ನ ಚೇತನವನ್ನು ಮುತ್ತಿ ಮುಸುಕಿ ಮುತ್ತಿಗೆ ಹಾಕುವ ಬಿರುಗಾಳಿಗಳನ್ನು ಸಿದ್ಧನು ದಮನಿಸಬಲ್ಲವನಾಗಿರುತ್ತಾನೆ; ಅಲ್ಲದೆ ಅಚೇತನದಲ್ಲಿ ನೆಲೆಯೂರಿ ನಿಂತ ಕಾರಣದಿಂದಾಗಿ ತನ್ನ ಅಂತರಂಗದಲ್ಲಿ, ಆತ್ಮನ ವೈಶಿಷ್ಟ್ಯವಾದ ಅನಂತ ಶಾಂತಿಯನ್ನೂ ಅವರ್ಣನೀಯ ಆನಂದವನ್ನೂ ಅನುಭವಿಸಲು ಸಮರ್ಥನಾಗುತ್ತಾನೆ.

ಮಾನವನು, ತನ್ನ ದೀರ್ಘವಾದ ಇತಿಹಾಸದುದ್ದಕ್ಕೂ, ತನ್ನ ಹೊರಗಿದ್ದ ಪ್ರಕೃತಿಯ ಶಕ್ತಿಗಳ ಮೇಲೆಯೂ, ಅದರಂತೆ ತನ್ನ ಒಳಗಿದ್ದ ಚೇತನದ ಶಕ್ತಿಗಳ ಮೇಲೆಯೂ ತನ್ನ ಪ್ರಭುತ್ವವನ್ನು ಪ್ರಸ್ಥಾಪಿಸಿ ಅವನ್ನು ನಿಗ್ರಹಿಸಲು ಹವಣಿಸುತ್ತ ಬಂದಿದ್ದಾನೆ. ಈ ಬಗೆಯಾದ ಶಕ್ತಿಗಳ ವಿಂಗಡನೆಯು ಯುಕ್ತವಾಗಲಾರದು; ಏಕೆಂದರೆ, ಇವೆರಡೂ ಬಗೆಯ ಶಕ್ತಿಗಳ ಕ್ರಿಯೆ-ಪ್ರತಿಕ್ರಿಯೆಗಳು ಒಂದೊಂದರೊಳಗೂ ಬೆರಗುಬಡಿಸುವಷ್ಟು ಅನ್ಯೋನ್ಯವಾಗಿ ತಲೆದೋರುವದುಂಟು. ಆದ್ದರಿಂದ ಇವೆರಡೂ ಬೇರೆ ಬೇರೆ ಬಗೆಯ ಶಕ್ತಿಗಳೆಂದು ಹೇಳುವದು ಕೂಡ ತರ್ಕಬದ್ಧವಲ್ಲ, ಶಾಸ್ತ್ರಶುದ್ಧವಲ್ಲ. ಆದರೂ ವ್ಯವಹಾರದ ಸೌಕರ್ಯಕ್ಕಾಗಿ ಈ ಬಗೆಯ ಭೇದವನ್ನು ಕಲ್ಪಿಸುವದು ಅನುಕೂಲವಾಗುವದಲ್ಲದೆ ಅವುಗಳ ವಿಷಯಕ್ಕೆ ವಿವೇಚನೆ ಮಾಡುವದು ಸುಲಭವಾಗುವದು. ಭಾರತೀಯ ಮನೀಷಿಗಳು ನಮ್ಮ ಒಳದಲ್ಲಿ ಮೊದಲು ಸ್ವರಾಜ್ಯವನ್ನು ಪ್ರಸ್ಥಾಪಿಸುವ ಕಾರ್ಯಕ್ಕೆ ಪ್ರಥಮ ಪ್ರಾಶಸ್ತ್ಯಕೊಟ್ಟಿದ್ದಾರೆ, ಆದರೆ ಹೀಗೆಂದಾಕ್ಷಣಕ್ಕೆ ಮತ್ತೊಂದು ರಂಗವನ್ನು ಅಂದರೆ ಬಹಿಃಪ್ರಪಂಚವನ್ನು ಕಡೆಗಣಿಸಿದ್ದಾರೆ ಎಂದೇನೂ ಅಲ್ಲ. ಈ ಬಾಹ್ಯಪ್ರಪಂಚವನ್ನು ಗೆಲ್ಲುವ ಪ್ರಯತ್ನಕ್ಕೆ ಅಧಿಭೌತಿಕಸಾಧನವೆಂದೂ ಅದರಂತೆ ಅಂತರ್ಲೋಕವನ್ನು ಗೆಲ್ಲುವದಕ್ಕೆ ಆಧ್ಯಾತ್ಮಿಕ-

ಸಾಧನವೆಂದೂ ಹೇಳುವದುಂಟು. ಇವೆರಡನ್ನೂ ಪ್ರತ್ಯೇಕಿಸಿ ಎರಡನೆಯದಕ್ಕೇ ಹೆಚ್ಚಿನ ಪ್ರಾಶಸ್ತ್ಯ ಕೊಡುವ ಹಾಗೂ ಅದರಲ್ಲಿಯೆ ಸಂತೋಷಹೊಂದುವ ಮನಃಪ್ರವೃತ್ತಿಯು ಭಾರತೀಯರದಲ್ಲವೆಂಬುದನ್ನು ಲಕ್ಷಿಸತಕ್ಕದ್ದಾಗಿದೆ. ಅವರು ಅವೆರಡನ್ನೂ ಬಹುಮಟ್ಟಿಗೆ ಯಶಸ್ವಿಯಾಗಿಯೆ ಸಮನ್ವಯಿಸಿದ್ದಾರೆ—ಪರಸ್ಪರ ಪೂರಕವಾಗುವ ಹಾಗೆ ಪ್ರಯತ್ನಿಸಿದ್ದಾರೆ. ಈ ಸಮನ್ವಯದಲ್ಲಿ ಒಂದೊಂದಕ್ಕೂ ಅದಕ್ಕೆ ತಕ್ಕ ಸ್ಥಾನಮಾನವನ್ನು ಕೊಟ್ಟು ಒಂದು ಬಗೆಯ ಸಾಮರಸ್ಯವನ್ನೂ ಸಮಗ್ರತೆಯನ್ನೂ ತಂದಿದ್ದಾರೆ. ಮಾನವನ ಆಚಾರ-ವಿಚಾರಗಳ ಇತಿಹಾಸದಲ್ಲಿ ಈ ಸಮನ್ವಯತೆಯು ಅಪ್ರತಿಮಕೋಟಿಗೆ ಸೇರಿದುದಾಗಿದೆ.

ಎಲ್ಲ ಉಪನಿಷತ್ತುಗಳಲ್ಲಿ ಅತಿ ಪ್ರಾಚೀನವೆನಿಸಿಕೊಂಡ ‘ ಈಶಾವಾಸ್ಯ ’ ದಲ್ಲಿ ಈ ಸಮನ್ವಯವು ಸ್ಪಷ್ಟವಾಗಿ ತಿಳಿಸಿ ಹೇಳಲ್ಪಟ್ಟಿದೆ. ಅದು ಹೇಳುತ್ತದೆ: ‘ ಬರಿಯ ಅವಿದ್ಯೆಯ, ಅಂದರೆ ವ್ಯಕ್ತ ವಿಶ್ವದ ಜ್ಞಾನದ ಉಪಾಸನೆ ಮಾಡುವವರು ಅಜ್ಞಾನಾಂಧಕಾರದಲ್ಲಿ ಮುಳುಗುವರು. ಬರಿಯ ವಿದ್ಯೆಯ, ಅಂದರೆ ಅವ್ಯಕ್ತದ ಜ್ಞಾನದ ಉಪಾಸನೆ ಮಾಡುವವರು ಅದಕ್ಕೂ ಹೆಚ್ಚಿನ ಗಾಢಾಂಧಕಾರದಲ್ಲಿ ಮುಳುಗುವರು. ವಿದ್ಯೆಯ ಫಲವು ಬೇರೆ, ಅವಿದ್ಯೆಯ ಫಲವು ಬೇರೆ ಎಂದು ನಮಗೆ ಸತ್ಯೋಪದೇಶವನ್ನು ಕೊಟ್ಟ ಧೀರರು ಹೇಳಿದರು. ವಿದ್ಯೆ ಅವಿದ್ಯೆ ಮತ್ತು ಇವೆರಡನ್ನೂ ಒಳಗೊಂಡಿರುವ ಅದನ್ನು ಅಂದರೆ ಪರತತ್ತ್ವವನ್ನು ತಿಳಿದವನು ಅವಿದ್ಯೆಯ ಬಲದಿಂದ ಅಂದರೆ ವ್ಯಕ್ತಸೃಷ್ಟಿಯ ಜ್ಞಾನದಿಂದ ಮೃತ್ಯುಲೋಕವನ್ನು ದಾಟಿ, ವಿದ್ಯೆಯ ಬಲದಿಂದ ಅಂದರೆ ಅವ್ಯಕ್ತದ ಜ್ಞಾನದಿಂದ ಅಮೃತತ್ವವನ್ನು ಪಡೆಯುವನು. ಬರಿಯ ಅಸಂಭೂತಿಯ ಅಂದರೆ ವ್ಯಕ್ತಸೃಷ್ಟಿಯ ಉಪಾಸನೆ ಮಾಡುವವರು, ಅಜ್ಞಾನಾಂಧಕಾರಕ್ಕೆ ಗುರಿಯಾಗುವರು. ಬರಿಯ ಸಂಭೂತಿಯಲ್ಲಿಯೆ ಅಂದರೆ ಅವ್ಯಕ್ತದಲ್ಲಿಯೆ ನಿರತರಾಗುವವರು ಹೆಚ್ಚಿನ ಅಜ್ಞಾನದಲ್ಲಿ ಮುಳುಗಿ ಹೋಗುವರು. ಸಂಭವದ ಅಂದರೆ ಅವ್ಯಕ್ತದ ಉಪಾಸನೆಯಿಂದ ಬರುವ ಫಲವು ಬೇರೆ ಎಂದು ನಮಗೆ ಸತ್ಯಜ್ಞಾನದ ಉಪದೇಶವನ್ನು ಮಾಡಿದ ಧೀರರು ಹೇಳಿದರು. ಸಂಭೂತಿಯನ್ನು ಅಂದರೆ ಅವ್ಯಕ್ತವನ್ನು, ವಿನಾಶವನ್ನು ಅಂದರೆ ವ್ಯಕ್ತವನ್ನು, ಮತ್ತು ಇವೆರಡನ್ನೂ ಒಳಗೊಂಡಿರುವ ಅದನ್ನು ಅಂದರೆ ಪರತತ್ತ್ವವನ್ನು ಅರಿತವನು, ವಿನಾಶದ ಉಪಾಸನೆಯಿಂದ ಮೃತ್ಯುಲೋಕವನ್ನು ದಾಟಿ, ಸಂಭೂತಿಯ ಉಪಾಸನೆಯಿಂದ ಅಮೃತತ್ವವನ್ನು ಪಡೆಯುವನು.’ ಹೀಗೆ ‘ ಈಶ ’ ಉಪನಿಷತ್ತು ಕಂಠೋಕ್ತವಾಗಿ ಸಾರುತ್ತದೆ: ಬಾಹ್ಯ ಮತ್ತು ಅಂತರ್ಲೋಕಗಳಲ್ಲಿ ಕಂಡುಬರುವ ವೈಪರೀತ್ಯದ ಆಭಾಸವನ್ನು ಒಳ್ಳೆ ಸುಸಂಗತವಾಗಿ ಸಮನ್ವಯಗೊಳಿಸಬಲ್ಲ ಒಂದು ಸದ್ವಸ್ತು ಇದೆಯೆಂದು. ಆ ಸಮನ್ವಯ ಜ್ಞಾನವನ್ನು ಪಡೆದ ಸಾಧಕನು, ಇವೆರಡೂ ಮಾರ್ಗಗಳಿಂದ ಒಳ್ಳೆ ಉತ್ತಮ

ಪ್ರಯೋಜನವನ್ನು ಹೊಂದಬಲ್ಲನು. ಅವನು ಪೂರ್ಣ ಪ್ರಜ್ಞೆಯಲ್ಲಿಯೆ ಕರ್ಮ-ಪ್ರವೃತ್ತನಾಗುತ್ತಾನೆ.

ಆಧ್ಯಾತ್ಮಿಕ ಸತ್ಯವೆ ತುರೀಯ ಸತ್ಯವೆಂದು ಭಾರತ ದೇಶವು ಗ್ರಹಿಸುತ್ತ ಬಂದಿದೆಯೆಂಬ ಮಾತನ್ನು ನೋಡಿಯಾಯ್ತು. ಮಾನವೀ ಚೇತನದ ವಿಕಾಸದ ಪ್ರೇರಣೆಯೂ ಹಾಗೂ ಅದರ ಸಾಮಾನ್ಯ ಓಘವೂ ಆ ಪರಾತ್ಪರ ಸತ್ಯದ ಸಾಕ್ಷಾತ್ಕಾರದತ್ತಲೆ ಇರುತ್ತದೆ. ಭಾರತೀಯರು ಎಷ್ಟೋ ವರ್ಷಗಳಿಂದ ಇದನ್ನೂ ಸಮಾಲೋಚಿಸಿ ಇಟ್ಟಿದ್ದಾರೆ,— ಪರಾತ್ಪರ ಸತ್ಯದ ಕೇವಲಾನಂದದಲ್ಲಿ ಇದ್ದುಕೊಂಡಿರುವದೆ ಸರ್ವಶ್ರೇಷ್ಠ ಜೀವನವೆಂದು. ಹೀಗೆಲ್ಲ ಇದ್ದುದರಿಂದಲೆ, ಭಾರತವು ಮಾನವ ಚೇತನದ ವಿಷಯಕ್ಕೆ, ಹಾಗೂ ಅದರ ಅಂತರ್ಗತ ಶಕ್ತಿ-ಸಾಮರ್ಥ್ಯಗಳ ವಿಷಯಕ್ಕೆ, ಕ್ರಮಬದ್ಧ ಪ್ರಯೋಗಗಳನ್ನು ಮಾಡಿರುವದಿಷ್ಟೆ ಅಲ್ಲ; ಅಧ್ಯಾತ್ಮ ಸಾಧನದ ಬಗೆಗೆ ಸುನಿರ್ದಿಷ್ಟ ಪಥ-ಪದ್ಧತಿಗಳನ್ನೆ ನಿರ್ಮಿಸಿ ಇಟ್ಟಿರುತ್ತದೆ.

ಶ್ರೀ ಅರವಿಂದರ ಸಾಧನದ ವಿಷಯವಾಗಿ ಬರೆಯುವ ಮೊದಲಿಗೆ ಓರ್ವ ವ್ಯಕ್ತಿಯು ತನ್ನ ದೈನಂದಿನದ ಇಂದ್ರಿಯಗತ ಜೀವನದಿಂದ ಹಿಂದೆಗೆದು, ಆಧ್ಯಾತ್ಮಿಕ ಜೀವನದತ್ತ ಹೇಗೆ ಮತ್ತು ಏಕೆ ಆಕರ್ಷಿತನಾಗುತ್ತಾನೆ ಎಂಬುದನ್ನು ಹುಡುಕಿ ತೆಗೆವುದು ವಿಹಿತವೆಂದು ತೋರುತ್ತದೆ. ಈ ಆಧ್ಯಾತ್ಮಿಕ ಆಕರ್ಷಣವು ಕೆಲವರಲ್ಲಿ ಇನ್ನುಳಿದವರಿಗಿಂತ ಹೆಚ್ಚು ತೀವ್ರವಾಗಿರುವದುಂಟು. ಕೆಲಕೆಲ ಸಂದರ್ಭದಲ್ಲಿ-ಯಂತೂ ಜೀವನದ ಯಾವುದೊ ಒಂದು ಘಟನೆಯ ಅಥವಾ ಯಾವುದೊ ಒಂದು ಅನುಭವದ ಮೂಲಕವಾಗಿ ಇಂತಹ ಪರಿವರ್ತನವು ಉಂಟಾಗುವದನ್ನು ನಾವು ಕಾಣುತ್ತೇವೆ. ಈ ವಿಷಯದಲ್ಲಿ ಹೀಗೆಯೆ ಎಂಬ ನಿರ್ದಿಷ್ಟ ನಿಯಮಗಳನ್ನು ಹೇಳುವದು ಕಠಿಣ; ಏಕೆಂದರೆ ಓರ್ವ ವ್ಯಕ್ತಿಯನ್ನೊ ಅಥವಾ ವ್ಯಕ್ತಿಗಳನ್ನೊ ಆಧ್ಯಾತ್ಮಿಕತೆಯತ್ತ ಆಕರ್ಷಿಸುವ ಕಾರಣಗಳು ಒಂದೇ ಬಗೆಯಾಗಿ ಇರುತ್ತಿರುವದಿಲ್ಲ. ಅದೆಷ್ಟೊ ಸಲ ಈ ಪ್ರವೃತ್ತಿಯು ಒಬ್ಬರಲ್ಲಿ ನೈಸರ್ಗಿಕವಾಗಿಯೆ ಇರಬಹುದು, ಇನ್ನೊಬ್ಬರಲ್ಲಿ ಅದೊಂದು ಎಂದೂ ಮರೆಯದ ಅನುಭವವೆ ಆಗಿರಬಹುದು. ಓರ್ವ ವ್ಯಕ್ತಿಯ ಜೀವನವನ್ನು ಆಧ್ಯಾತ್ಮಿಕತೆಯತ್ತ ಹೊರಳಿಸಬಹುದಾದ ಅನೇಕ ಕಾರಣಗಳಲ್ಲಿ ಯಾವುದಾದರೂ ಒಂದು ಕಾರಣವು ಅದಿದ್ದರೂ ಇರಬಹುದು. ಆದರೆ, ಸರ್ವಸಾಮಾನ್ಯವಾಗಿ, ಬಹಿರ್ಮುಖ ವೃತ್ತಿಯವರಿಗಿಂತ ಅಂತರ್ಮುಖ ವೃತ್ತಿಯವರೆ ಆಧ್ಯಾತ್ಮಿಕತೆಯತ್ತ ಒಲಿಯುವದು ಹೆಚ್ಚು ಎಂದು ಹೇಳಲಡ್ಡಿಯಿಲ್ಲ. ಕಠೋಪನಿಷತ್ತು ಹೇಳುತ್ತದೆ: ಸ್ವಯಂಭುವಾದ ಆತ್ಮತತ್ತ್ವವೆ ಹೊರಹೊಮ್ಮಿ ಈ ವಿಶ್ವವನ್ನು ಹುಟ್ಟಿಸಿತು. ಆ ಕಾರಣದಿಂದಲೆ ಜನರು ಸಾಮಾನ್ಯವಾಗಿ ಬಹಿರ್ಮು-ಖರಾಗಿ, ಬಾಹ್ಯಪ್ರಪಂಚದಲ್ಲಿ ತಲ್ಲೀನರಾಗಿ ಬಿಡುತ್ತಾರೆ. ಅವರು ತಮ್ಮ ಅಂತಸ್ಥ

ಆತ್ಮದತ್ತ ಹೊರಳಿ ನೋಡುವದಿಲ್ಲ. ಅದು ಮತ್ತೆ ಹೇಳುತ್ತದೆ, ಅಂತಸ್ಥವಾದ ಚೇತನವನ್ನು ಶೋಧಿಸಿ, ಪರಮ ಆತ್ಮನನ್ನು ಕಂಡುಕೊಳ್ಳುವವರು ತೀರ ವಿರಲ, ಇತ್ಯಾದಿ.

ಓರ್ವ ವ್ಯಕ್ತಿಯು ಆಧ್ಯಾತ್ಮಿಕ ಜೀವನದತ್ತ ಅದೇಕೆ ಹೊರಳುತ್ತಾನೆ ಎಂಬುದರ ಕಾರಣಗಳು ವಾಡಿಕೆಯಾಗಿ ವಸ್ತುಗತವಾಗಿರದೆ ಆತ್ಮಗತವಾಗಿರುವದು ಕಂಡುಬರುವದು. ಈ ಆಂತರಿಕ ಪರಿವರ್ತನವು, ಒಂದು ವಿಶಿಷ್ಟ ರೀತಿಯಲ್ಲಿ ಸಂಗತಿಗಳು ಘಟಿಸುವದರ ಮೇಲೆಯೆ ಅಷ್ಟೊಂದು ಅವಲಂಬಿಸಿಲ್ಲ. ಆದರೆ ಈ ಘಟನೆಗಳತ್ತ ಅಥವಾ ಪ್ರಸಂಗಗಳತ್ತ ಅಥವಾ ಅನುಭವಗಳತ್ತ ಜನರು ಯಾವ ಮನೋವೃತ್ತಿಯಿಂದ, ಯಾವ ದೃಷ್ಟಿಕೋನದಿಂದ ನೋಡುತ್ತಾರೆ ಎಂಬುದರ ಮೇಲೆ ಹೆಚ್ಚಾಗಿ ಅವಲಂಬಿಸಿದೆ. ಎಷ್ಟೋಬಾರಿ ತನ್ನ ವ್ಯಕ್ತಿತ್ವಕ್ಕೆ ತಗುಲಿದ ಆಘಾತ ಮೂಲಕವಾಗಿ ಒಬ್ಬನಿಗೆ ತಾನೆಷ್ಟು ಅಲ್ಪನು ಎಂಬ ಅರಿವು, ಹಾಗೂ ಜೊತೆ ಜೊತೆಗೆ, ತಾನಲ್ಲದೆ ಇನ್ನೊಂದು ಅದಾವುದೊ ಶಕ್ತಿಯುಂಟು ಎಂಬುದರ ಎಚ್ಚರ ಉಂಟಾಗಿ, ಅದನ್ನು ಗಣನೆಗೆ ತಂದುಕೊಳ್ಳಲೆ ಬೇಕಾಗುವದು. ತ್ರಿವಿಧತಾಪವೆನ್ನಿಸಿ ಕೊಳ್ಳುವ, ಅಧಿಭೌತಿಕ, ಅಧಿದೈವಿಕ ಮತ್ತು ಆಧ್ಯಾತ್ಮಿಕ ಎಂಬ ಮೂರು ಬಗೆಯ ದುಃಖಗಳ ಮೂಲಕವಾಗಿಯೂ ಮಾನವನ ಆತ್ಮಚೈತನ್ಯವು ಜಾಗ್ರತವಾಗುವದೆಂದೂ ತನ್ಮೂಲಕ ತಾನೆಷ್ಟು ಅಲ್ಪನು ಎಂಬುದು ಅವನಿಗೆ ಹೊಳೆಯುವದೆಂದೂ ಎಣಿಸಲ್ಪಡುತ್ತದೆ. ಇವುಗಳು ಅವನ ಅಹಂಕಾರವನ್ನು ಚದುರಿಸಿ, ತನಗಿಂತ ಹೆಚ್ಚಿನ 'ಸದ್ವಸ್ತು' ಒಂದು ಉಂಟೆಂಬುದನ್ನು ಅವನಿಗೆ ಅರಿಕೆ ಮಾಡಿಕೊಡುತ್ತವೆ. ತನ್ನ ಅಲ್ಪತ್ವದ ಅರಿವು, ಹಾಗೂ ಇನ್ನೊಂದು ಉಚ್ಚತರ ಶಕ್ತಿಯ ಅಸ್ತಿತ್ವದ ಎಚ್ಚರ, ಇವೇ ಮಾನವನ ಆಧ್ಯಾತ್ಮಿಕ ಜೀವನಕ್ಕೆ ಅತ್ಯಗತ್ಯವಾಗಿ ಬೇಕಾದ ಮೂಲಭೂತ ಅಂಶಗಳು.

ಮಾನವರ ಜೀವನವನ್ನು ಆಧ್ಯಾತ್ಮಿಕತೆಯತ್ತ ಸಾಗಿಸಿದ ಈ ಬಗೆಯ ಕಾರಣ ಗಳಲ್ಲದೆ ಇನ್ನು ಮೂರು ಬೇರೆ ಸಂಗತಿಗಳೂ ಉಂಟು; ಇವು, ಇಂದಲ್ಲದಿದ್ದರೂ ಒಂದಾನೊಂದು ದಿನ, ಮಾನವಕುಲವು ಆಧ್ಯಾತ್ಮಿಕ ಜೀವನವಿಧಾನವನ್ನು ಅನುಸರಿಸುವ ಹಾಗೆ ಮಾಡಿಯೆ ಮಾಡುವವು. ಮೊದಲನೆಯದಾಗಿ, ಮಾನವಕುಲವು ಚೇತನದ ಅಂತರ್ಲೋಕದಲ್ಲಿ ಖಂಡಿತವಾಗಿ ಮುಂದುವರಿಯತೊಡಗಿದೆ. ವಾನರ ನಿಂದ ಮಾನವನನ್ನು ಈ ಮಟ್ಟಕ್ಕೆ ತಂದು ಮುಟ್ಟಿಸಿದ ಪ್ರಕೃತಿಯ ವಿಕಾಸಕ್ರಮವು ಈಗಲೂ ಅಖಂಡವಾಗಿ ಸಾಗಿರುತ್ತದೆ. ಅದು, ಎಂದಿಗಿಂತಲೂ ಇಂದು, ಹೆಚ್ಚು ನಿಚ್ಚಳವಾಗಿ, ಅಂತಶ್ಚೇತನದ ಪ್ರಗತಿಯನ್ನು ತೋರಿಸಿಕೊಡುತಿದೆ. ಮಾನವ ಚೇತನವು ಪ್ರಗತಿಹೊಂದಿದಂತೆಲ್ಲ ಅದು ಆತ್ಮಿಕ ಸೂಕ್ಷ್ಮ ಜೀವನದತ್ತ ಹೊರಳ ತಕ್ಕುದು. ಎರಡನೆಯದಾಗಿ, ಅಂತರ್ಭೂತ ಸತ್ಯದ ಅನ್ವೇಷಣಪ್ರವೃತ್ತಿಯು

ಮಾನವಕುಲದಲ್ಲಿ ಹೆಚ್ಚುಹೆಚ್ಚಾಗಿ ದೃಢಮೂಲವಾಗತೊಡಗಿದೆ. ಕೇವಲ ಬಹಿರ್ಲೋಕದ ಸತ್ಯಾನ್ವೇಷಣದಿಂದ ಮಾನವನಿಗೆ ಸಮಾಧಾನವೆನಿಸಿಲ್ಲ. ಅವಚೇತನ ಮಯ (ಅರ್ಧಜಾಗ್ರತ ಚೇತನ) ಮತ್ತು ಅಚೇತನಮಯ ಮನೋಲೋಕಗಳ ರಹಸ್ಯವನ್ನು ಅರಿಯಲು ಹಾಗೂ ಅವುಗಳ ಮೇಲೆ ತನ್ನ ಪ್ರಭುತ್ವವನ್ನು ಪ್ರಸ್ಥಾಪಿಸಿ ಅವನ್ನು ನಿಗ್ರಹಿಸಲು ಈ ಅನ್ವೇಷಣವು ಎಡೆಬಿಡದೆ ಹೆಣಗುತಿದೆ. ಈ ಪ್ರವೃತ್ತಿಯು ಸಹ ಪ್ರಗತಿಪರವಾದ ಆತ್ಮಿಕ ಜೀವನದ ಹವ್ಯಾಸವನ್ನೆ ಹೆಚ್ಚಾಗಿ ತೋರಿಸುತ್ತದ-ಲ್ಲದೆ ಇಂದ್ರಿಯಗತ ವೈಷಯಿಕ ಜೀವನಲಾಲಸೆಯನ್ನಲ್ಲ. ಮೂರನೆಯದಾಗಿ, ಮಾನವಚೇತನದಲ್ಲಿ ಇನ್ನೊಂದು ಪ್ರವೃತ್ತಿಯು ಸ್ವಭಾವಗತವಾಗಿಯೆ ಇದ್ದು ಬಿಟ್ಟಿದೆ; ಅದು ತನ್ನ ಸಕಲ ಕ್ರಿಯಾಕರ್ಮಗಳ ಮುಖಾಂತರವಾಗಿ ಶಾಂತಿಯನ್ನೂ ಶುದ್ಧ ಆನಂದವನ್ನೂ ಅರಸುತಿರುತ್ತದೆ. ಇದು ಕೂಡ ಸಾಧಕನನ್ನು, ಒಂದು ಭೌತ ಆನಂದದಿಂದ ಇನ್ನೊಂದು ಬಗೆಯ ಭೌತ ಆನಂದದತ್ತ ಸಾಗಿಸಿಕೊಂಡು ನಡೆ-ಯುತ್ತದೆ. ಆದರೆ ಈ ಬಗೆಯ ಆನಂದವು ಅವಿಮಿಶ್ರವಾದುದಲ್ಲ; ಅವಿಚ್ಛಿನ್ನ-ವಾದುದೂ ಅಲ್ಲ. ಅಂತೆಯೆ ಮುಂದೆ ಅದು ಶಾಶ್ವತವಾದ ಆನಂದದ ಬಗೆಗೆ ಪಿಪಾಸೆ ಯನ್ನು ಹುಟ್ಟಿಸುತ್ತದೆ. ಕಟ್ಟಕಡೆಗೆ, ಅವರ್ಣನೀಯ ಆನಂದ ಲಾಭದ ಬಗೆಗೆ ಇನ್ನು ಸಂದೇಹವೆ ಇಲ್ಲವೆಂಬಂಥ ಒಂದು ಆತ್ಮಾವಸ್ಥೆಯನ್ನೆ ಮಾನವ ಮನವು, ಅನಿವಾರ್ಯವಾಗಿ ಶೋಧಿಸಿಕೊಳ್ಳಬೇಕಾಗುತ್ತದೆ. ಈ ವಿಧವಾಗಿ ವಿಕಾಸಕ್ರಮದ ಶಕ್ತಿಗಡಣಗಳು, ಕ್ರಮಕ್ರಮೇಣವಾಗಿ ಆದರೂ ಖಚಿತವಾಗಿ, ಮಾನವಕುಲವನ್ನು ಭೌತ ಜೀವನಕ್ಕಿಂತ ಹೆಚ್ಚಾಗಿ ಆಧ್ಯಾತ್ಮಿಕ ಜೀವನವಿಧಾನದ ಸಮಿಸಮೀಪಕ್ಕೆ ಕರೆದೊಯ್ಯತೊಡಗಿವೆ. ಅದರ ದಿಕ್ಕು-ಧ್ಯೇಯಗಳು ಸುನಿರ್ದಿಷ್ಟವಿದ್ದರೂ, ಅದರ ಗತಿಯು ಮಾತ್ರ ನಾವು ನಿರೀಕ್ಷಿಸುವಷ್ಟು ದ್ರುತವಾಗಿ, ಅಸಂದಿಗ್ಧವಾಗಿ, ನಿಶ್ಚಿತವಾಗಿ ಇರುವದಿಲ್ಲ, ಇಷ್ಟೆ.

## ೯ ಸಾಧನೆ ಮತ್ತು ಸಾಕ್ಷಾತ್ಕಾರ

'ಮೂರು ವರ್ಷದ ಬುದ್ಧಿ ನೂರು ವರ್ಷದ ವರೆಗೆ' ಎಂಬೊಂದು ಗಾದೆ ಇದೆ-ಯಷ್ಟೆ? ಬಾಲ್ಯದ ಪರಿಸ್ಥಿತಿಯು ಮುಂದಿನ ಜೀವನದ ಮೇಲೆ ಬಹು ವರ್ಚಸ್ಸನ್ನು ಬೀರುವದೆಂಬುದೆ ಇದರರ್ಥ; ಮುಂಚಿನಿಂದ ನಡೆದು ಬಂದ ಆಚಾರ ವಿಚಾರಗಳನ್ನು ಮುಂದೆ ಬದಲಿಸಬೇಕಾದರೆ ಬಹಳೆ ಶ್ರಮ ವಹಿಸಬೇಕಾಗುವದೆಂಬ ಅರ್ಥವೂ ಈ ಗಾದೆಯಲ್ಲಿ ಅಡಕವಾಗಿರುವದು. ಈ ಎಲ್ಲ ಮಾತನ್ನು ನಾವು ವಾಡಿಕೆಯಾಗಿ

ಒಪ್ಪಿಕೊಳ್ಳುತ್ತೇವೆ; ಇದಕ್ಕೆ ಶ್ರೀ ಅರವಿಂದರಾದರೊ ಅಪವಾದವಾಗಿದ್ದಾರೆ. ಬಾಲ್ಯದ ಪರಿಕರವೂ ಕೌಮಾರ್ಯದ ಶೈಕ್ಷಣಿಕ ಸಂಸ್ಕಾರಗಳೂ ಇವರ ಮೇಲೆ ಮಾಡಿದ ಪರಿಣಾಮಗಳನ್ನು ತರುವಾಯದಲ್ಲಿ ಇವರು ಅಲ್ಲಗಳೆದರು. ಇವರ ತಂದೆ ಬಗೆದುದು ಒಂದು, ಇವರು ಆದುದು ಇನ್ನೊಂದು. ಇವರ ಎದೆಯೊಳಗಿನ ಕುದಿಯೆ ಬೇರೆ ಬಗೆಯದಾಗಿತ್ತು. ಶಿಕ್ಷಣವು ಮುಗಿಯಲು ಬಂದ ಕಾಲಕ್ಕೇ ಅನಿರೀಕ್ಷಿತ ವಾದೊಂದು ಶಕ್ತಿ ಅವರ ಅಂತಃಕರಣವನ್ನು ಆವರಿಸಿಬಿಟ್ಟಿತು. ಅವರ ಐದನೆಯ ವರ್ಷದಲ್ಲಿಯೆ ಪ್ರಾರಂಭವಾದ ಶುದ್ಧ ಪಾಶ್ಚಾತ್ಯ ಪದ್ಧತಿಯ ಅತ್ಯಾಧುನಿಕ ಅಧಿಭೌತಿಕ ಶಿಕ್ಷಣದ ಪರಿಣಾಮವೆಲ್ಲವೂ ಅಂತಃಪ್ರೇರಣೆಯ ಎದುರಿಗೆ ಸೂರ್ಯನೆದುರು ಮಂಜು ಮಾಯವಾಗುವಂತೆ ಮಾಯವಾಯಿತು. ತೇಜಸ್ವಿಯೂ ಅತಿ ಬುದ್ಧಿಶಾಲಿಯೂ ಆಗಿ ಉಜ್ವಲ ಭವಿಷ್ಯತ್ತುಳ್ಳ ಸಾಂಸಾರಿಕ ಗೃಹಸ್ಥನೊಬ್ಬನು ಪ್ರಖರ ಬ್ರಹ್ಮತೇಜವುಳ್ಳ ಸಾಧಕನಾಗಿ ಪರಿವರ್ತಿತನಾದಂತಾಯಿತು. ಎಷ್ಟೋ ಕಠಿಣವಾದ ಒಳತೋಟಿ ಮಸಗಿದರೂ ಕೊನೆಯಲ್ಲಿ ವಿಜಯಿಯಾಗಿ ಅನಂತ ಶಾಂತಿಯನ್ನು ಹೊಂದಿ ತಮ್ಮ ಸುತ್ತು ನೆರೆದವರಿಗೆಲ್ಲ ನವೀನ ತತ್ತ್ವಜ್ಞಾನವೊಂದನ್ನು ಅವರು ಧಾರೆಯೆರೆದರು.

ನಿಯಮಿತವಾಗಿ ಯೋಗಸಾಧನೆಯನ್ನು ಕೈಯತೊಡಗುವದಕ್ಕಿಂತ ಬಹು ಮುಂಚೆಯೆ ಅವರಿಗೆ ಕೆಲವು ಆಧ್ಯಾತ್ಮಿಕ ಅನುಭವಗಳು ಬಂದಿದ್ದವೆಂಬುದು ಶ್ರುತವೆ ಇದೆ. ಎಂದ ಮೇಲೆ ಈ ರಾಜ್ಯಕ್ಕೆ ಅವರು ಎಂದೂ ಅಪರಿಚಿತರಾಗಿರಲಿಲ್ಲ. ಈ ರಾಜ್ಯವನ್ನು ಒಮ್ಮೆ ಒಳಹೊಕ್ಕಬಳಿಕ, ಭಗೀರಥ ಪ್ರಯತ್ನಗಳಿಂದ ಭದ್ರತಮ ವಾದ ತಳಹದಿಯಮೇಲೆ ಒಂದು ಸಾಮ್ರಾಜ್ಯವನ್ನೆ ಅವರು ಸ್ಥಾಪಿಸಿದರು. ೧೯೦೮ರ ಫೆಬ್ರುವರಿಯಲ್ಲಿ ಅವರು ಮುಂಬಯಿಯ ಅಪ್ಪೋಲೊ ಬಂದರದಲ್ಲಿ ಕಾಲಿಟ್ಟೊಡನೆ ಅತಿ ವಿಶಾಲವಾದ ಸ್ಥಿರಶಾಂತಿಯೊಂದು ಇಳಿಯುತ್ತ ಬಂದಂತೆ ಅವರಿಗೆ ಅನಿಸಿತು. ಆ ಸ್ಥಿರಶಾಂತಿ ಅವರನ್ನು ಪೂರ್ಣವಾಗಿ ಆವರಿಸಿಬಿಟ್ಟಿತು. ಮುಂದೆ ಅನೇಕ ತಿಂಗಳುಗಳ ವರೆಗೆ ಇಂಥ ಮನಃಸ್ಥಿತಿಯಲ್ಲಿಯೆ ಅವರಿದ್ದರು.

ಈ ಮುಂಬಯಿ-ಅನುಭವವೆ ಅವರ ಆಧ್ಯಾತ್ಮಿಕ ಅನುಭವಗಳಲ್ಲಿ ಮೊಟ್ಟ ಮೊದಲನೆಯದೆಂದು ಯಾರಿಗೂ ಹೇಳಬರುವಂತಿಲ್ಲ. ಲೋಕಕ್ಕೆ ಗೊತ್ತಿದ್ದಂತೆ ಖಂಡಿತವಾಗಿಯೂ ಇದೇ ಮೊದಲನೆಯದು. ಅನೇಕ ಸಾಧಕರ ಹಾಗೂ ಸಿದ್ಧರ ಚರಿತ್ರೆಗಳಲ್ಲಿ ಇಂಥ ಅಪೂರ್ವ ಅನುಭವಗಳು ಉಲ್ಲೇಖಿತವಾಗಿದ್ದು ಅವರವರ ಜೀವನದ ಪ್ರಾರಂಭಕಾಲದಲ್ಲಿಯೆ ಅವು ಒದಗಿಬಂದವೆಂದು ತಿಳಿದುಬರುತ್ತದೆ. ಇವು ನಿಃಸಂಶಯವಾಗಿಯೂ ಉಪಯುಕ್ತವಾಗಿದ್ದು ಆಯಾ ವ್ಯಕ್ತಿಗಂತೂ ಅವು ಅಮೌಲ್ಯವಾಗಿವೆ. ಇಂಥದೊಂದು ಅನುಭವವು ಏಕಮಾತ್ರವಾಗಿ ಆಕಸ್ಮಿಕವೆಂಬಂತೆ ತೋರಿದರೂ ಅದು ಆಯಾ ವ್ಯಕ್ತಿಗೆ ಅತಿ ಪ್ರಿಯವಾಗಿದ್ದು ಸಂಕೇತರೂಪದಲ್ಲಿ ಅದರ ಸ್ಮರಣೆಯಾಗುವದುಂಟು: ಶ್ರದ್ಧಾಳುಗಳಿಗೆ ಅದರಿಂದ ಧೈರ್ಯವುಂಟಾಗಿ

ಆತ್ಮವಿಶ್ವಾಸವು ಬೆಳೆಯುತ್ತ ಹೋಗಲು ಅನುಕೂಲವಾಗುವದು. ಇಂದಿನ ಸಾಧ್ಯತೆಗಳನ್ನೂ ಮುಂದಿನ ಭರವಸೆಗಳನ್ನೂ ಅದು ಸೂಚಿಸುವದು. ಆದರೆ ಇಂಥ ಅನುಭವವು ಜಾಗ್ರತಾವಸ್ಥೆಯಲ್ಲಿ ಪ್ರಾಪ್ತವಾಗಿ ಸ್ಪಷ್ಟವೂ ನಿತಾಂತವೂ ಸಾಕಷ್ಟು ಪ್ರಗಲ್ಭವೂ ಆಗಿರಬೇಕು. ಅಸ್ಪಷ್ಟವೂ ಸಂದಿಗ್ಧವೂ ಸ್ವಪ್ನ-ಭ್ರಮೆಗಳಿಂದ ತುಂಬಿದುದೂ ಆಗಿ ಗೊಂದಲಗೆಡಿಸುವಂತಿರಬಾರದು.

ಮಹಾಪುರುಷರ ಚರಿತ್ರೆಗಳ ಪ್ರಾರಂಭಕಾಲದಲ್ಲಿ ಬರುವ ಇಂಥ ಅಪೂರ್ವ ಅನುಭವಗಳು ಅತ್ಯಂತ ಚಿತ್ತಾಕರ್ಷಕವಾಗಿರುವವು. ಆಯಾ ವ್ಯಕ್ತಿಗಳ ಯುಗ-ಪರಿಸ್ಥಿತಿಗನುಸರಿಸಿ ಅವರವರ ಅನುಭವಗಳು ನಾನಾವಿಧವಾಗಿರುವದರಿಂದ ಅವನ್ನು ಒಂದಕ್ಕೊಂದು ಹೋಲಿಸುವ ಗೊಡವೆಗೆ ನಾವು ಹೋಗದಿದ್ದರೆ ಒಳ್ಳೆಯದು. ಗೌತಮಬುದ್ಧನು ಚಿಕ್ಕಂದಿನಲ್ಲಿ ತಂದೆಯ ತೋಟದಲ್ಲಿ ವಿಹರಿಸುವಾಗ ಒಂದಾನೊಂದು ನೆಲ್ಲಿಯ ಗಿಡದ ಕೆಳಗೆ ಕುಳಿತಾಗೆಲ್ಲ ಅದೊಂದು ಬಗೆಯ ಅನಿಮಿತ್ತ ಸ್ವರ್ಗೀಯ ಸುಖದ ಅನುಭವವು ಆತನಿಗೆ ಉಂಟಾಗುತಿತ್ತು. ಮುಂದೆ ಆತನು ತನ್ನ ಕಠಿಣ ಘೋರ ತಪಶ್ಚರ್ಯೆಯನ್ನು ಮುಗಿಸಿ ಅಲಾರ್ಕಲಾಂ ಎಂಬ ಯೋಗಿಯ ಬಳಿಗೆ ಉಪದೇಶಕ್ಕೆಂದು ಬಂದಾಗ ತನ್ನ ಬಾಲ್ಯದ ಆ ಅನುಭವದ ನೆನಪಾಗಿ ಅದು ಮರಳಿ ಬರಬಹುದೆ ಎಂದು ಆ ಯೋಗಿಗೆ ಕೇಳಿದನಂತೆ. ಮುಂದೆ ರಾಮಕೃಷ್ಣ ಪರಮಹಂಸರೆಂದು ಪ್ರಖ್ಯಾತಿ ಪಡೆದ ಗದಾಧರಕುಮಾರನು ಎಂಟನೆಯ ವರ್ಷದಲ್ಲಿ ಒಂದು ದಿನ ಒಂದು ಹೊಲದಲ್ಲಿ ಅಡ್ಡಾಡುತಿರಲು ಆಕಾಶದಲ್ಲಿ ಬಿಳಿ ಹಂಸಗಳ ಸಾಲೊಂದು ನೀಲಮೇಘಗಳನ್ನು ಕೊರೆಕೊರೆಯುತ್ತ ಮುಂದೆ ಸಾಗಿದ ದೃಶ್ಯವನ್ನು ಕಂಡಾಗ ಆತನಿಗೆ ಒಮ್ಮೆಲೆ ಸಮಾಧಿ ಹತ್ತಿತು. ಈ ಅನುಭವದ ಸ್ಮರಣೆ ಮುಂದೆ ಬಹುಕಾಲದ ವರೆಗೂ ಅವರಿಗೆ ನಿಚ್ಚಳವಾಗಿ ಬರುತಿತ್ತು. ಮತ್ತೊಮ್ಮೆ ಬಯಲಾಟವೊಂದರಲ್ಲಿ ಶಿವನ ಪಾತ್ರ ವಹಿಸಿ ನೃತ್ಯ ಮಾಡಿದಾಗ ಪುನಃ ಸಮಾಧಿ ಹತ್ತಿತು. ನರೇಂದ್ರನಿನ್ನೂ ವಿವೇಕಾನಂದನಾಗದೆ ವಿದ್ಯಾರ್ಥಿಯಿದ್ದಾಗಲೆ, ಮಲಗಬೇಕೆಂದು ಕಣ್ಣು ಮುಚ್ಚಿದಾಗೆಲ್ಲ ಜ್ವಲಂತ ಜ್ವಾಲೆಯೊಂದನ್ನು ಹೊಕ್ಕ ದೃಶ್ಯವು ಕಣ್ಣಮುಂದೆ ಕಟ್ಟುತಿತ್ತು. ಏಶಿಯದ ಕವೀಂದ್ರರಾದ ರವೀಂದ್ರರು ಹದಿನೇಳನೆಯ ವರ್ಷದವರಿದ್ದಾಗ ಒಂದು ದಿನ, ಅತ್ಯಾಕರ್ಷಕವಾದ ಪ್ರಕಾಶವೊಂದರಲ್ಲಿ ಸಮಸ್ತ ಜಗತ್ತೆ ಸ್ನಾನ ಮಾಡುತಿರುವ ದೃಶ್ಯವೊಂದನ್ನು ಕಂಡರು; ಈ ದೃಶ್ಯವು ಮುಂದೆ ಬಹುಕಾಲದ ವರೆಗೂ ಅವರ ಚಿತ್ತವನ್ನು ಬೆಂಬತ್ತಿ ಬರುತಿತ್ತು. ಪೂರ್ವ ಪಶ್ಚಿಮ ದೇಶಗಳಲ್ಲಿ ಪ್ರಾಚೀನ ಇಲ್ಲವೆ ಅರ್ವಾಚೀನ ಕಾಲದಲ್ಲಿ ಆಗಿ ಹೋದ ಅನೇಕಾನೇಕ ಸಾಧುಸಂತರ ಚರಿತ್ರೆಗಳಲ್ಲಿ ಇಂಥ ಅನೇಕ ಉದಾಹರಣೆಗಳು ನಮಗೆ ದೊರೆಯುತ್ತವೆ. ಆಯಾ ಜಿಜ್ಞಾಸುಗಳ ಆಧ್ಯಾತ್ಮಿಕ ಜೀವನದಲ್ಲಿ ಇಂಥ ಅಮೌಲ್ಯ ಅನುಭವಗಳಿಗೆ ಅತಿ ಮಹತ್ವದ ಸ್ಥಾನವಿದೆಯೆಂಬುದನ್ನು ನಾವು ಲಕ್ಷಿಸುವಂತಿದೆ.

ಇಂಥ ಆಧ್ಯಾತ್ಮಿಕ ಸ್ವರೂಪದ ಇತರ ಅನುಭವಗಳೂ ಶ್ರೀ ಅರವಿಂದರ ಚರಿತ್ರೆಯಲ್ಲಿ ಉಲ್ಲೇಖಿತವಾಗಿವೆ. ಕಾಶ್ಮೀರದಲ್ಲಿ ಶ್ರೀನಗರದ ಬಳಿಯಲ್ಲಿರುವ ಶಂಕರಾಚಾರ್ಯಗಿರಿ (ತಾಖ್ತೆ-ಸುಲೇಮಾನ್ ಎಂದೂ ಇದಕ್ಕೆ ಹೆಸರಿದೆ) ಯ ಮೇಲ್ಭಾಗದಲ್ಲಿ ಶ್ರೀ ಅರವಿಂದರು ಒಮ್ಮೆ ಅಡ್ಡಾಡುತಿರುವಾಗ, ಶೂನ್ಯ ಅನಂತ-ತೆಯು ಧಾವಿಸಿ ಬಂದು ವ್ಯಾಪಿಸುತ್ತಲೆ ಇದ್ದುದನೆಲ್ಲ ಸುಂಗಿಬಿಡುವ ದೃಶ್ಯವೊಂದನ್ನು ಕಂಡರು. ಅನನುಮೇಯ ನಿರ್ಗುಣ ನಿರಾಕಾರತೆಯ ಸ್ಪಷ್ಟ ಅನು-ಭವವೊ ಎಂಬಂತೆ ಆ ದೃಶ್ಯವಿತ್ತು. ಇನ್ನೊಂದು ಪ್ರಸಂಗದಲ್ಲಿ ಚಾಂದೋಡದ ಬ್ರಹ್ಮಾನಂದರ ದರ್ಶನಕ್ಕೆ ಹೋಗಿರಲು ನರ್ಮದಾತೀರದಲ್ಲಿರುವ ಕಾಲೀಮಂದಿರವೊಂದನ್ನು ಪ್ರವೇಶಿಸಿದಾಗ ಅವರಿಗೆ ಕಾಲೀಮಾತೆಯ ಪ್ರತ್ಯಕ್ಷ ಸಂನಿಧಾನದ ಅನುಭವವಾಯಿತು; ಆಗಲೆ ಅವರಿಗೆ ಮೂರ್ತಿಪೂಜೆಯಲ್ಲಿ ನಂಬಿಗೆ ನೆಲೆಯೂರಿತು. ಬಡೋದಾವಾಸದ ಆರಂಭಕಾಲದಲ್ಲಿ ಒಂದು ದಿನ ನಾಲ್ವರೊಡನೆ ಅವರು ಕುಳಿತ ಕುದುರೆಬಂಡಿಯು ಇನ್ನೊಂದು ಕ್ಷಣವೆಂದರೆ ಘೋರ ಅಪಘಾತಕ್ಕೆ ಈಡಾಗುವ-ದಿತ್ತು; ಅಷ್ಟರಲ್ಲಿ ದೇವತಾಮೂರ್ತಿಯೊಂದು ಒಳಗಿನಿಂದ ಪ್ರಕಟವಾಗಿ ಆಗಲಿರುವ ಅನಾಹುತವನ್ನು ತಪ್ಪಿಸಿದ ದೃಶ್ಯವನ್ನು ಅವರು ಕಂಡರು.

ಆಧ್ಯಾತ್ಮಿಕ ಮಾರ್ಗದತ್ತ ಅವರು ಕೊನೆಗೊಮ್ಮೆ ಒಲಿದುದು ಹೇಗೆ? ಈ ಮಾರ್ಗದಿಂದಲೆ ನಿಜವಾದ ಬ್ರಹ್ಮತೇಜವೂ ಪೂರ್ಣತ್ವವೂ ಪ್ರಾಪ್ತವಾಗುವದೆಂಬ ಮನವರಿಕೆಯು ಅವರಲ್ಲಿ ಕ್ರಮೇಣ ಒಡಮೂಡುತಲೆ ಇತ್ತು. ಪಶ್ಚಿಮದ ದಾರಿಯನ್ನು ಭಾರತವು ಕಣ್ಣು ಮುಚ್ಚಿ ಅನುಸರಿಸಿದರೆ ವಿನಾಶವು ಖಂಡಿತವೆಂದು ಕೊನೆಗೆ ಅವರಿಗೆ ಖಚಿತ ಮನವರಿಕೆಯಾಗಿ ಬಿಟ್ಟಿತು. ಸ್ವಧರ್ಮವೆ ಶ್ರೇಷ್ಠವೆಂಬ ಗೀತೆಯ ಮಂತ್ರೋಪದೇಶವು ಅವರನ್ನು ಮುಗ್ಧರನ್ನಾಗಿ ಮಾಡಿತು. 'ಎಷ್ಟೇ ಚೆನ್ನಾಗಿ ಆಚರಿಸಿದ ಪರಧರ್ಮಕ್ಕಿಂತ ವೈಗುಣ್ಯದಿಂದ ಕೂಡಿದ ಸ್ವಧರ್ಮವೆ ಲೇಸು; ಭಯಂಕರವಾದ ಪರಧರ್ಮದಲ್ಲಿ ಬಾಳುವದಕ್ಕಿಂತ ಸ್ವಧರ್ಮದಲ್ಲಿ ಸಾವುದೆ ಲೇಸು' ಎಂಬ ಗೀತೋಕ್ತಿಯು* ಅವರು ಭಾರತೀಯ ಜೀವನಪದ್ಧತಿಯನ್ನೆ ಅನುಸರಿಸುವಂತೆ ಮಾಡಿತು. ಆಂಗ್ಲ ಪದ್ಧತಿಯಲ್ಲಿ ಸುಶಿಕ್ಷಿತರಾದವರು ಸನಾತನಧರ್ಮವನ್ನು ಸಹಸಾ ಮೆಚ್ಚರು. ಆದರೆ ಇದೇ ಸನಾತನಧರ್ಮದಲ್ಲಿ ಗಭೀರತರವೂ ಉದಾತ್ತತರವೂ ಸೂಕ್ಷ್ಮತರವೂ ಹೆಚ್ಚು ಪ್ರಭಾವಶಾಲಿಯೂ ಪ್ರಾಣಪ್ರಚೋದಕವೂ ಆದ ಒಂದಾನೊಂದು ಶಕ್ತಿಯಿದೆಯೆಂಬ ಮಾತು ಶ್ರೀ ಅರವಿಂದರಲ್ಲಿ ಅವರ ಆಳವಾದ ಅಭ್ಯಾಸದ ಮೂಲಕ ಹೆಚ್ಚು ದೃಢಮೂಲವಾಯಿತು. ಹೀಗಾಗಿ ನಿರ್ಧಾರದಿಂದ

---

* ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥
—ಅ. ೩, ಶ್ಲೋ. ೩೫

ಯೋಗಪಥದಲ್ಲಿ ಕ್ರಮಕ್ರಮವಾಗಿ ಹೆಜ್ಜೆಯಿಡುತ್ತ ಅವರು ನಡೆದರು. ಯೋಗವೆಂದರೆ, ಅಹಂಕಾರದ ಅಣುವನ್ನು ಛೇದಿಸಿ ಅಂತರಂಗವನ್ನು ಪರಾತ್ಪರತೆಯತ್ತ ಹೊರಳಿಸಿ ಕೊನೆಗೆ ಅಂತರ್ವಾಸಿಯಾದ ಆತ್ಮದ ಸಾಕ್ಷಾತ್ಕಾರದ ಮೂಲಕ ಸಾಯುಜ್ಯಾನುಭವದತ್ತ ಕರೆದೊಯ್ಯುವ ಪ್ರಾಯೋಗಿಕ ಶಾಸ್ತ್ರವೆಂಬುದನ್ನು ಇಲ್ಲಿ ಬೇರೆ ಹೇಳಬೇಕಾಗಿಲ್ಲ.

ಅಪವಾದವೆನಿಸುವಷ್ಟು ಉನ್ನತವೂ ಅಪರೂಪವೂ ಆದ ಹಲವು ಗುಣವಿಶೇಷಗಳನ್ನು ಶ್ರೀ ಅರವಿಂದರು ಪಡೆದುದರಿಂದ ಅವರ ಯೋಗಸಾಧನಕ್ಕೆ ಒಂದು ವಿಶಿಷ್ಟ ಕಳೆಯೇರಿತು. ಇಷ್ಟೊಂದು ಸದ್ಗುಣಗಳು ಒಂದೇ ವ್ಯಕ್ತಿಯಲ್ಲಿ ನೆಲೆಸಿರುವದು ಬಹು ಅಪರೂಪ. ಅವರ ನಿಷ್ಠೆ ಅಪಾರವಾದುದು. ನಿರಾಡಂಬರದ ಸರಳ ಜೀವನವು ಅವರದು; ಅದನ್ನವರು ನಿರಾಯಾಸವಾಗಿ ನಡೆಸುತಿದ್ದರು. ಪ್ರಸಿದ್ಧಿಯೆಂದರೆ ಅವರಿಗೆ ಸೇರದು. ಮುಂದೆ ಬರಲು ಸಹಸಾ ನಾಚಿಕೊಳ್ಳುವ ಪ್ರವೃತ್ತಿ ಅವರದು. ಹುದುಗಿಕೊಂಡಿರುವ ಇಂಥ ಪ್ರವೃತ್ತಿಯ ಮೂಲಕವೆ ಸಮಾಜದ ಮಧ್ಯದಲ್ಲಿ ನಿರರ್ಥಕವಾಗಿ ಸುತ್ತಾಡುವದು ತಪ್ಪಿತು. ನಿರ್ಲಿಪ್ತತೆಯೆಂಬುದು ಅವರಿಗೆ ಹುಟ್ಟುಗುಣವಾಗಿತ್ತು. ಅವರು ಅತ್ಯಂತ ಮೇಧಾವಿಗಳು. ಏಕಾಗ್ರತೆಯ ಸಾಮರ್ಥ್ಯವು ಅವರಲ್ಲಿ ಅತ್ಯದ್ಭುತವಾಗಿತ್ತು. ಒಮ್ಮೆ ಅವರು ಠಾಣೆಯ ಆಯ್. ಸಿ. ಎಸ್. ಅಧಿಕಾರಿಗಳಾದ ತಮ್ಮ ಕ್ರಾಂತಿಕಾರ ಮಿತ್ರ ಚಾರುಚಂದ್ರ ದತ್ತರ ಮನೆಗೆ ಸಹಜ ಭೆಟ್ಟಿಗೆಂದು ಹೋಗಿದ್ದರು; ತುಬಾಕಿ ಹೊಡೆಯುವದರಲ್ಲಿ ಯಾರಾರು ಎಷ್ಟೆಷ್ಟು ಗುರಿಯಿಡಬಲ್ಲರೆಂಬ ಮಾತು ಹೊರಟಿತು. ಶ್ರೀ ಅರವಿಂದರ ಸರತಿಯೂ ಬಂದಿತು. ಗೋಡೆಯಲ್ಲಿ ದೀಪದ ಕಡ್ಡಿಯೊಂದನ್ನು ನೆಡಲಾಗಿತ್ತು. ಇದಕ್ಕೂ ಮೊದಲು ತುಬಾಕಿಯನ್ನು ಒಮ್ಮೆಯೂ ಕೈಯಲ್ಲಿ ಹಿಡಿಯದ ಅವರು ಆ ಕಡ್ಡಿಯ ಮದ್ದಿನ ಮೊನೆಗೇ ಸರಿಯಾಗಿಯೆ ಗುರಿಯಿಟ್ಟು ಒಂದಲ್ಲ ಮೂರು ಬಾರಿ ಹೊಡೆದರು. ಒಬ್ಬ ಸಿದ್ಧಪುರುಷನೆ ತಮ್ಮ ಮಧ್ಯದಲ್ಲಿರುವನೆಂದು ಮಿತ್ರರು ಉದ್ಗಾರ ತೆಗೆದರು. ಚಿತ್ತದ ಏಕಾಗ್ರತೆಗೆ ಬಾಣದ ಗುರಿಯ ಸಾಮ್ಯವನ್ನು ಮುಂಡಕೋಪನಿಷತ್ತಿನಲ್ಲಿ ಸಹ ಹೇಳಿದೆ. ಅವರ ವ್ಯಾಸಂಗವು ಅಪಾರವಾಗಿದ್ದು ಬೇಕಾದ ವಿಷಯವನ್ನು ಚರ್ಚಿಸಲು ಅವರು ಸಮರ್ಥರಾಗಿದ್ದರು. ಉಚ್ಚಮಟ್ಟದ ಗದ್ಯಪದ್ಯ ಗ್ರಂಥರಾಶಿಯು ಅವರ ಸಾಹಿತ್ಯಕ ಪ್ರತಿಭೆಗೆ ಸಾಕ್ಷಿಯಾಗಿದೆ. ಅವರ ಭಾವಸಂಪತ್ತು ಸಮೃದ್ಧವಾದುದು, ಕಲ್ಪನಾವಿಲಾಸವು ವಿಪುಲವಾದುದು; ಅಂತೆಯೆ ಅವರ ಕೃತಿಗಳ ಗದ್ಯಶೈಲಿಯು ಕೂಡ ಪದ್ಯಗಂಧಿಯಾಗಿದೆ. ಎಲ್ಲಕ್ಕೂ ಹೆಚ್ಚಿನದೆಂದರೆ ಅವರಲ್ಲಿ ಆತ್ಮವಿಶ್ವಾಸವಿತ್ತು, ತಮ್ಮ ಬಾಳಿನ ನಿಶ್ಚಿತ ಧ್ಯೇಯವನ್ನು ಅವರು ಅರಿತಿದ್ದರು. ಈ ಆತ್ಮವಿಶ್ವಾಸಕ್ಕೆ ಅವರ ಆಧ್ಯಾತ್ಮಿಕ ಅನುಭವಗಳು ಹೆಚ್ಚಿನ ಮೆರುಗನ್ನು ಉಂಟುಮಾಡಿದ್ದವು. ಇಂತು ತಾವಾಗಿ ಅರಿಸಿಕೊಂಡ ಪಥದಲ್ಲಿ

ಅವರು ಧೀರರಾಗಿ ಮುಂದುವರಿದರು.

ಶ್ರೀ ಅರವಿಂದರು ಅಲ್ಲಲ್ಲಿ ಸೂಚಿಸಿದ ಕೆಲವು ಮಾತುಗಳಿಂದಲೂ ಇತರ ಆಧಾರಗಳಿಂದಲೂ ಅವರು ಅನುಷ್ಠಾನಗೈದ ಸಾಧನೆಯ ಸಾಧಾರಣ ಕಲ್ಪನೆಯು ನಮಗೆ ಬರುವಂತಿದೆ. ಯಾವ ಯಾವ ಸೂಕ್ಷ್ಮ ಅವಸ್ಥೆಗಳೊಳಗಿಂದ ಅವರು ದಾಟಿಹೋದರು, ಕಾಲಕಾಲಕ್ಕೆ ತಮ್ಮ ಸಾಧನದ ರೀತಿನೀತಿಗಳಲ್ಲಿ ಅವರು ಮಾಡಿ ಕೊಂಡ ಮಾರ್ಪಾಡುಗಳಾವುವು, ಅವರು ಮುಟ್ಟಿದ ಉಚ್ಚಮಟ್ಟವೆಂತಹದು, ಅವರ ಯೋಗಮಾರ್ಗದ ಮುಖ್ಯ ಲಕ್ಷಣಗಳೇನು, ಕೊನೆಯದಾಗಿ ಅವರನ್ನು ಒರೆಗೆ ಹಚ್ಚಿದ ದಾರುಣ ವ್ಯಥೆಗಳಾವುವು, 'ಕರ್ತಾರನ ಕಮ್ಮಟ' ದೊಳಗಿಂದ ಪುಟಗೊಂಡು ಅವರು ಚೊಕ್ಕ ಚಿನ್ನವೆಂತಾದರು ಎಂಬೀ ಮಾತುಗಳನ್ನು ನಾವು ತಿಳಿಯಬಲ್ಲೆವು. ಈ ಸಾಧನೆಯ ದಾರಿ ಸುಲಭ ಸಸೂತ್ರ ದಾರಿಯೆಂದು ಯಾರೂ ತಿಳಿಯಬಾರ ದಾಗಿ ಅವರು ಎಚ್ಚರಿಸಿದ್ದಾರೆ. ಇದು ಉಚ್ಚಮಟ್ಟದ ಉಗ್ರಸಾಹಸವು, ಸಮಸ್ತ ಆತ್ಮದೊಂದಿಗೆ ವ್ಯಕ್ತಿಯು ಮಾಡುವ ಅಪೂರ್ವ ಪ್ರಯೋಗವು. ಶ್ರೀ ಅರವಿಂದರಿ-ಗಂತೂ ಈ ಮಾತು ಸರಿಯಾಗಿ ಅನ್ವಯಿಸುವದು. ಯಾರೂ ತುಳಿಯದ ದಾರಿಯನ್ನು ಅವರು ಹುಡುಕಿ ತೆಗೆದರು. ಯಾರೂ ಕ್ರಮಿಸದ ಸಾಗರಗಳಲ್ಲಿ ಏಕೈಕಧೀರರಾಗಿ ಹುಟ್ಟುಹಾಕುತ್ತ ಅವರು ತಮ್ಮ ನೌಕೆಯನ್ನು ಮುನ್ನೂಕಿದರು. ದಾರಿಯೆ ಇರದ ದಟ್ಟಡವಿಗಳಲ್ಲಿ ಕಾಲುದಾರಿಯನ್ನು ಮಾಡಿದ ಮೊದಲಿಗರವರು. ಈ ಸಾಹಸ-ವನೆಲ್ಲ ಗುರುವಿನ ನೆರವಿಲ್ಲದೆಯೆ ಅವರು ಕೈಕೊಂಡರು. ಆಧ್ಯಾತ್ಮಿಕ ಮಾರ್ಗವನ್ನು ಅನುಸರಿಸುವವರೆಲ್ಲರೂ ಸಾಮಾನ್ಯವಾಗಿ ಶರೀರಸುಖಗಳಿಗೆ ಶರಣುಹೊಡೆದು ಮಾನಸಿಕ ನೈತಿಕ ಧರ್ಮಸಂಕಟದ ಘರ್ಷಣೆಯಲ್ಲಿ ಗಾಸಿಯಾಗುತ್ತ ಮುಂಬರಿಯ ಬೇಕಾಗುವದು. ಈ ಘರ್ಷಣೆಯೆಂದರೆ ಅದೊಂದು 'ಚಿತ್ರಹಿಂಸೆಯ ಯಮ-ಯಾತನೆಯೆ' ಸರಿ. ಹೀಗಿದ್ದರೂ ಈ ಮಾರ್ಗದಲ್ಲಿ ಕೂಡ ವಿಶಿಷ್ಟ ಶೋಭೆ ಗಳುಂಟು, ಆಕರ್ಷಣೆಯುಂಟು. ಕೊನೆಯಲ್ಲಿ ದೊರೆವ ಸಮೃದ್ಧ ಶಾಂತಿ, ಸಮಗ್ರ ಸಮರಸ ವ್ಯಕ್ತಿಮತ್ವ ಇವು ಯಾರ ಚಿತ್ತವನ್ನು ಸೆಳೆಯಲಿಕ್ಕಿಲ್ಲ?

'ಶ್ರೀ ಅರವಿಂದರೂ ಅವರ ಆಶ್ರಮವೂ' ಎಂಬ ಪುಸ್ತಕದಲ್ಲಿ ಅವರದೊಂದು ಪತ್ರವು ಉದ್ಧೃತವಾಗಿದ್ದು ಅದರಲ್ಲಿ ಅವರ ಸಾಧನೆಯ ಬಗೆಗೆ ಕೆಲವು ವಿವರ ಗಳುಂಟು. ಆ ಪತ್ರದಲ್ಲಿ ಅವರು ಹೀಗೆ ಹೇಳುತ್ತಾರೆ: '೧೯೦೪ರಲ್ಲಿ ಮಹಾರಾಷ್ಟ್ರದ ಯೋಗಿಗಳೊಬ್ಬರಿಂದ ಮಹತ್ವದ ಸಹಾಯವು ನನಗೆ ದೊರೆತು ನನ್ನ ಸಾಧನದ ತಳಹದಿಯನ್ನು ನಾನು ಹಾಕಿಕೊಂಡೆ. ಅಂದಿನಿಂದ ಶ್ರೀ ತಾಯಿಯವರು ( ಮಿರಾ ರಿಚರ್ಡ ) ಭಾರತಕ್ಕೆ ಬರುವವರೆಗೂ ನನಗೆ ಯಾರಿಂದಲೂ ಆಧ್ಯಾತ್ಮಿಕ ಸಹಾಯ ವೆಂಬುದು ದೊರೆಯಲಿಲ್ಲ. ಮುಂಚೆಯಾಗಲಿ ಹಿಂದುಗಡೆಯಾಗಲಿ ನನ್ನೀ ಸಾಧನಕ್ಕೆ ಯಾವ ಗ್ರಂಥಗಳೂ ಆಧಾರವಾಗಿರಲಿಲ್ಲ. ಒಳಗಿನಿಂದಲೆ ಎದ್ದು ನನ್ನನ್ನು ಮುತ್ತ-

ಬಂದ ಸ್ವಾನುಭವಗಳನ್ನೆ ನನ್ನ ಸಾಧನವು ಆಧರಿಸಿತ್ತು. ಸೆರೆಮನೆಯಲ್ಲಿ ಮಾತ್ರ ಗೀತೆ-ಉಪನಿಷತ್ತುಗಳು ನನ್ನ ಬಳಿ ಇದ್ದವು. ಗೀತೆಯಲ್ಲಿ ಉಕ್ತವಾದಂತೆ ಯೋಗದ ಸಾಧನೆಗೈದೆ; ಉಪನಿಷತ್ತುಗಳ ಸಹಾಯದಿಂದ ಧ್ಯಾನಗೈದೆ. ಈ ಗ್ರಂಥಗಳು ಮಾತ್ರ ನನಗೆ ಕೈಪಿಡಿಗಳಾಗಿದ್ದವು. ಪಾಂಡಿಚೇರಿಗೆ ಬಂದ ಬಳಿಕ ಬಹುದಿನಗಳ ಮೇಲೆ ನಾನು ವೇದವನ್ನೋದತೊಡಗಿದೆ; ವೇದಾಭ್ಯಾಸದಿಂದ ನನ್ನ ಸಾಧನದಲ್ಲಿ ಪ್ರತ್ಯಕ್ಷ ಸಹಾಯವು ದೊರೆಯಿತೆನ್ನುವದಕ್ಕಿಂತ ಈ ಮೊದಲೆ ಬಂದ ನನ್ನ ಅನುಭವ ಗಳಿಗೆ ಪುಷ್ಟಿ ದೊರೆಯಿತೆಂದೆನ್ನಬಹುದು. ತೊಡಕು ತೊಂದರೆಗಳು ಉಂಟಾದಾಗ ಬೆಳಕಿಗಾಗಿ ಆಗೀಗ ಗೀತೆಯನ್ನೆ ನಾನು ಆಶ್ರಯಿಸುತಿದ್ದೆ; ಹಾಗೆ ಅದನ್ನು ನಾನು ಆಶ್ರಯಿಸಿದಾಗೆಲ್ಲ ನನ್ನ ಪ್ರಶ್ನೆಗೆ ತಕ್ಕ ಉತ್ತರ ದೊರೆತು ಸಮಾಧಾನವಾಗುತಿತ್ತು. ಸೆರೆಮನೆಯ ಏಕಾಂತದಲ್ಲಿ ನಾನು ಧ್ಯಾನಲೀನನಾದಾಗ ಹದಿನೈದು ದಿನಗಳವರೆಗೆ ವಿವೇಕಾನಂದರ ವಾಣಿ ನನ್ನೊಡನೆ ಮಾತನಾಡಿದುದು ಸತ್ಯಸಂಗತಿಯು. ಆಗ ನಾನು ಅವರ ಸಾಂನಿಧ್ಯಸುಖವನ್ನು ಅನುಭವಿಸಿದೆ. ಆ ವಾಣಿ ಆಧ್ಯಾತ್ಮಿಕ ಅನುಭವದ ಒಂದು ವಿಶಿಷ್ಟ ಸೀಮಿತ ಕ್ಷೇತ್ರದ ಬಗೆಗೆ ನನ್ನೊಡನೆ ಮಾತನಾಡಿತು. ಆ ಕ್ಷೇತ್ರವೂ ಅತಿ ಮಹತ್ವದ್ದಾಗಿತ್ತು. ಆ ವಿಷಯವಾಗಿ ಆ ವಾಣಿಗೆ ಹೇಳಬೇಕಾ-ದುದೆಲ್ಲ ಮುಗಿದೊಡನೆ ಅದು ನಿಂತುಹೋಯಿತು.'

ಅವರ ಸಾಧನದಲ್ಲಿ ಇದೊಂದು ಸಣ್ಣ ಚಿತ್ರ ಮಾತ್ರ. ಅವರ ಲೇಖನಿಯಿಂದಲೆ ಈ ಮಾತು ಬಂದುದರಿಂದ ಈ ಸಂದರ್ಭದಲ್ಲಿ ಅದೊಂದು ಒಳ್ಳೆಯ ಮುನ್ನುಡಿ ಯಾಗಿ ಉಪಯುಕ್ತವಾಗುವದು. ಒಮ್ಮೆ ನಿರ್ಧಾರವಾದ ಬಳಿಕ ಈ ಸಾಧನಮಾರ್ಗ ದಲ್ಲಿ ಏಕನಿಷ್ಠೆಯಿಂದಲೂ ತೀವ್ರ ಸಂಕಲ್ಪದಿಂದಲೂ ಧುಮುಕಿಬಿಟ್ಟರು. ಅವರು ಏನೇ ಆಡಲಿ ಏನೇ ಮಾಡಲಿ ಅದರಲ್ಲೆಲ್ಲ ಇಂಥ ನಿಷ್ಠೆ-ಸಂಕಲ್ಪಗಳು ಇದ್ದೇ ಇರುತಿದ್ದವು. ಸಾಮಾನ್ಯವಾಗಿ ಆಧ್ಯಾತ್ಮಿಕ ಸಾಧನದಲ್ಲಿ ಮಾರ್ಗದರ್ಶನ ಮಾಡಲು ಗುರುವೊಬ್ಬನು ಬೇಕೇಬೇಕೆಂದು ಹೇಳುವದುಂಟು. ಆತನಿಂದಲೆ ಶಿಷ್ಯನಿಗೆ ದೀಕ್ಷೆ ದೊರೆತು, ಒಂದು ಅವಸ್ಥೆಯಿಂದ ಮತ್ತೊಂದಕ್ಕೆ ಹೋಗುವಾಗ ಆತನು ದಾರಿ-ದೋರುವದುಂಟು. ಯೋಗಪಥದಲ್ಲಂತೂ ಗುರುವಿಲ್ಲದೆ ಮುಂದೆ ಸಾಗಲೇ ಬಾರ ದೆಂದು ಹೇಳುತ್ತಾರೆ. ಏಕೆಂದರೆ ಅನನುಭವಿಕರು ದಾರಿ ತಪ್ಪಿ ಅವರ ದೇಹ-ಮನ ಗಳು ನಿಷ್ಕಾರಣವಾಗಿ ವ್ಯಥೆಪಡುವ ಸಂಭವವುಂಟು. ಎಷ್ಟೊ ಉತ್ಸಾಹಿಗಳು ದಾರಿ-ಕಾಣದಾಗಿ ಅಥವಾ ಅಡ್ಡದಾರಿ ಹಿಡಿದು ಕಂಗೆಟ್ಟು ಗೋಳಾಡಿದ ಉದಾಹರಣೆ ಗಳುಂಟು. ಆದುದರಿಂದಲೆ ಬಹುಶಃ ಎಲ್ಲ ಯೋಗಿಗಳಿಗೂ ಗುರುಗಳಿದ್ದುದು ಕಂಡುಬರುತ್ತದೆ. ನಮ್ಮ ಶಾಸ್ತ್ರಪರಂಪರೆಯಲ್ಲಂತೂ ಗುರುವಿಗೆ ಉಚ್ಚ ಸ್ಥಾನ ವುಂಟು; ಏಕೆಂದರೆ ಗ್ರಂಥಗಳಿಂದಲೂ ವ್ಯಾಸಂಗದಿಂದಲೂ ದೊರೆಯಲಾರದುದನ್ನು ಗುರುವು ತನ್ನ ಪ್ರಯತ್ನ-ಸಂಪರ್ಕಗಳಿಂದ ದೊರಕಿಸಿಕೊಡಬಲ್ಲನು. ಶಿಷ್ಯನಿಗೆ

ಗುರುವು ಆಧ್ಯಾತ್ಮಿಕ ದೃಷ್ಟಿಯಿಂದ ನವಜನ್ಮವನ್ನೆ ಒದಗಿಸುವನಾದ್ದರಿಂದ ತಂದೆಗಿಂತ ಆತನೆ ಶ್ರೇಷ್ಠನೆಂದು ಕೆಲವು ಪಂಥಗಳು ಸಾರಿವೆ. ಪರಮಾತ್ಮನೆಡೆಗೆ ಶಿಷ್ಯನನ್ನು ಕರೆದೊಯ್ಯಲು ಗುರುವೆ ಸಾಧನವಾದುದರಿಂದ ಆತನು ಸಾಕ್ಷಾತ್ ಬ್ರಹ್ಮಸ್ವರೂಪನೆಂದು ಇನ್ನು ಕೆಲ ಪಂಥಗಳು ಘೋಷಿಸಿವೆ. ಉಪನಿಷತ್ ಕಥೆಗಳನ್ನು ಓದಿದರೆ ಗುರುವು ತನ್ನಲ್ಲಿಯ ಬ್ರಹ್ಮವಿದ್ಯೆಯನ್ನು ಶಿಷ್ಯರಿಗೆ ದೀರ್ಘಕಾಲದ ಪರಿಪ್ರಶ್ನೆ-ಸೇವೆಗಳನಂತರ ಧಾರೆಯೆರೆದುದು ಕಂಡುಬರುತ್ತದೆ. ತೈತ್ತಿರೀಯ ಉಪನಿಷತ್ತಂತೂ 'ಆಚಾರ್ಯದೇವೋ ಭವ' ಎಂದು ಶಿಷ್ಯರಿಗೆ ಉಪದೇಶಿಸಿದೆ. ಈ ಎಲ್ಲ ಮಾತುಗಳಿಂದ ಗುರುವಿನ ಮಹತ್ವವೆಷ್ಟೆಂಬುದು ಸಿದ್ಧವಾಗುತ್ತದೆ.

ಯಾವಾಗಲೂ ಶಿಷ್ಯನೆ ಗುರುವಿನೆಡೆಗೆ ಧಾವಿಸುವದುಂಟೆಂದು ಹೇಳಲಿಕ್ಕಾಗುವದಿಲ್ಲ. ದಾರಿ ಕಾಯುತಿರುವ ಶಿಷ್ಯನನ್ನು ಗುರುವೆ ಹುಡುಕಿಕೊಂಡು ಹೋದ ಉದಾಹರಣೆಗಳೂ ಉಂಟು. ನಿಜವಾದ ಗುರುಗಳೂ ಸಿದ್ಧಪುರುಷರೂ ತಮ್ಮೊಳಗಿನ ವಿದ್ಯೆಯನ್ನು ಯೋಗ್ಯ ಶಿಷ್ಯರಿಗೆ ದಾನಮಾಡಲು ಸದಾ ತವಕಪಡುವದುಂಟು. ಅಂಥ ಶಿಷ್ಯರು ದೊರೆಯದೆ ಹೋದರೆ ಅವರ ಆ ವಿದ್ಯೆ ಲುಪ್ತವಾಗಿ ಹೋಗುವದು. ವಿವೇಕಾನಂದರು ತಮ್ಮ ಬಳಿ ಬರುವದಕ್ಕಿಂತ ಮುಂಚೆ ರಾಮಕೃಷ್ಣ ಪರಮಹಂಸರು ಯೋಗ್ಯ ಶಿಷ್ಯರು ಇಲ್ಲವಲ್ಲಾ ಎಂದು ಬಹು ಚಡಪಡಿಸುತಿದ್ದರಂತೆ. ಶ್ರೀ ಅರವಿಂದರ ಬಗ್ಗೆ ಹೇಳುವುದಾದರೆ ಗುರುವೊಬ್ಬನು ಬೇಕೆಂಬ ಬಗೆಗಾಗಲಿ ಆತನನ್ನು ಹುಡುಕಲು ಪ್ರಯತ್ನಿಸಬೇಕೆಂಬ ಬಗೆಗಾಗಲಿ ಅವರು ಎಂದೂ ವಿರುದ್ಧ ಇರಲಿಲ್ಲ. ನಿಜವೇನೆಂದರೆ, ತಮಗೆ ಮಾರ್ಗದರ್ಶನ ಮಾಡಬಲ್ಲ ವ್ಯಕ್ತಿಗಳಿಂದ ಅವರು ಸಹಾಯವನ್ನು ಅಗತ್ಯವಾಗಿ ಪಡೆದುದುಂಟು. ವಾಡಿಕೆಯ ಅರ್ಥದಲ್ಲಿ ಅವರಿಗೆ ಗುರುವೊಬ್ಬನು ಇರಲಿಲ್ಲ. ಒಳಗಿನ ಕರೆ ಬಂದೊಡನೆ, ಚಾಂದೋಡದ ಬ್ರಹ್ಮಾನಂದರ ಶಿಷ್ಯರಲ್ಲೊಬ್ಬರಾದ ದೇವಧರರೆಂಬೊಬ್ಬ ಎಂಜನಿಯರರಿಂದ ಪ್ರಾಣಾಯಾಮದ ವಿಷಯದಲ್ಲಿ ಪ್ರಥಮಪಾಠವನ್ನು ಕಲಿತುಕೊಂಡರು. ಅದಿಷ್ಟೆ ಅವರಿಗೆ ಸಾಕಷ್ಟೆನಿಸಿ ೧೯೦೪ ರಲ್ಲಿ ಯೋಗದ ಸಾಧನೆಯನ್ನು ನಿತ್ಯವೂ ಗೈಯತೊಡಗಿದರು. ಆಗಿನ ಕಾಲದಲ್ಲಿ ಯೋಗಕ್ಕೆ ಪ್ರಾಣಾಯಾಮವು ಅತ್ಯವಶ್ಯವೆಂಬ ಕಲ್ಪನೆಯು ಜನರಲ್ಲಿ ರೂಢವಾಗಿತ್ತು. ಈ ಮಾತು ನಿಜವೆಂದೇನೂ ಅಲ್ಲ. ಪ್ರಾಣಾಯಾಮವಿಲ್ಲದೆ ಯೋಗಸಾಧನೆ ಗೈಯಬಹುದು. ಆದರೆ ಯಾರೊಬ್ಬರು ನಿತ್ಯವೂ ಕ್ಲಿಪ್ತಕಾಲದಲ್ಲಿ ಅದನ್ನು ಮಾಡಬಲ್ಲರಾದರೆ ಅದರಿಂದ ಬಹಳ ಪ್ರಯೋಜನವುಂಟು.

ಈ ಪ್ರಾಣಾಯಾಮದ ವಿಷಯದಲ್ಲಿ ಶ್ರೀ ಅರವಿಂದರ ಉಕ್ತಿಗಳು ಬೋಧಪ್ರದವಾಗಿವೆ. ಅವರು ಹೀಗೆ ಹೇಳಿದ್ದಾರೆ: 'ಪ್ರಾಣಾಯಾಮದಿಂದ ಬುದ್ಧಿ ಬಲ ಪಡುವದೆಂದೂ ಮಿದುಳು ಚುರುಕಾಗುವದೆಂದೂ ನನ್ನ ಸ್ವಂತ ಅನುಭವವಿದೆ. ಬಡೋದೆಯಲ್ಲಿದ್ದಾಗ ಮುಂಜಾವಿನಲ್ಲಿ ಮೂರು ಗಂಟೆ ಕಾಲ, ಸಂಜೆಯಲ್ಲಿ ಎರಡು-

ಮೂರು ಗಂಟೆ ಕಾಲ ನಿತ್ಯವೂ ನಾನು ಪ್ರಾಣಾಯಾಮ ಮಾಡುತಿದ್ದೆ. ಇದರಿಂದ ನನ್ನ ಮನವು ಪ್ರಜ್ವಾಲಿತವಾಗಿ ಪ್ರಬಲವಾದುದರ ಅನುಭವವು ನನಗೆ ಬಂತು. ಆಗಿನ ದಿನಗಳಲ್ಲಿ ನಾನು ಕಾವ್ಯ ಬರೆಯುತಲಿದ್ದೆ. ಪ್ರಾಣಾಯಾಮವನ್ನು ಪ್ರಾರಂಭಿಸುವದಕ್ಕಿಂತ ಮುಂಚೆ ತಿಂಗಳಿಗೆ ಸುಮಾರು ಇನ್ನೂರು ಸಾಲು ನಾನು ರಚಿಸುತಲಿದ್ದೆ; ನನ್ನ ಸ್ಮರಣಶಕ್ತಿಯಾದರೂ ಈ ಮುಂಚೆ ಒಂದಿಷ್ಟು ಮಂದವೆ ಆಗಿತ್ತು. ಆದರೆ ಅದನ್ನು ಪ್ರಾರಂಭಿಸಿದ ಅನಂತರದ ಅನುಭವವೆಂದರೆ, ಪ್ರೇರಣೆ ಯಾದಾಗೆಲ್ಲ ಕಾವ್ಯವು ಮನದಲ್ಲಿ ರಚಿತವಾಗಿ ತೆರವು ದೊರೆತಾಗ ಅದನ್ನು ಕಾಗದದ ಮೇಲೆ ಬರೆಯುವವರೆಗೂ ಅದು ಸಮಗ್ರವಾಗಿ ಸ್ಮರಣೆಯಲ್ಲಿ ಉಳಿಯುತಿತ್ತು. ನನ್ನ ಮಿದುಳಿನ ಸುತ್ತಲೂ ವಿದ್ಯುತ್ತಿನ ಪ್ರಭೆಯೊಂದು ಗುಡಿಗಟ್ಟದೆಯೆಂಬುದಾಗಿ ನನಗೆ ಅನಿಸುತಿತ್ತು.' (ಪುಟ ೨೩೫, 'ದಕ್ಷಿಣಾ' ಫೆಬ್ರುವರಿ ೧೯೫೧). ಇನ್ನೊಂದೆಡೆಗೆ ಪ್ರಾಣಾಯಾಮದ ಆಧ್ಯಾತ್ಮಿಕ ಪರಿಣಾಮವನ್ನು ಕುರಿತು ಅವರು ಹೇಳಿದುದು ಇಂತಿದೆ: '. . . .ಐದು ವರ್ಷಗಳ ವರೆಗೆ ಧಡಪಡಿಸಿದರೂ ಆಧ್ಯಾತ್ಮಿಕ ದೃಷ್ಟಿ ಯಿಂದ ಯಾವ ಫಲವೂ ನನಗೆ ದೊರೆಯಲಿಲ್ಲ. ಆದರೆ ಪದ್ಯಶಕ್ತಿಯು ನದೀ ಪ್ರವಾಹದಂತೆ ನನ್ನೆಡೆಗೆ ಹರಿದು ಬಂತು; ಗದ್ಯಶಕ್ತಿಯು ಮಹಾಪೂರದಂತೆ ನನ್ನೊಳಗೆ ಸೂಸಿ ಬಂತು. ಮನ-ಪ್ರಾಣ-ದೇಹಗಳಿಗೆ ಸಂಬಂಧಿಸಿದ ಇತರ ಕೆಲವು ಶಕ್ತಿಗಳು ನನ್ನಲ್ಲಿ ತುಂಬಿಕೊಂಡವು. ಆದರೆ ಆಧ್ಯಾತ್ಮಿಕ ಸಂಪತ್ತೆಂಬುದು ದೊರೆಯ ಲಿಲ್ಲ, ಚೈತ್ಯಶಕ್ತಿಯು ತೆರೆಯಲಿಲ್ಲ. . . . .' ಕೆಲವು ವರ್ಷಗಳು ಕಳೆದ ಮೇಲೆ ಪ್ರಾಣಾಯಾಮವನ್ನು ಅವರು ನಿಲ್ಲಿಸಿಬಿಟ್ಟರು. ಅವರ ಯೋಗಸಾಧನೆಯೇನೂ ತಡೆದು ನಿಲ್ಲಲಿಲ್ಲ. ಆದರೆ ಯಾವದೆ ಯೋಗಕ್ಕಾಗಲಿ ಸಾಧನೆಗಾಗಲಿ, ಕೈಕೊಂಡ ಕಾರ್ಯದಲ್ಲಿ ಏಕಾಗ್ರತೆ-ಧ್ಯಾನಗಳೂ ಸತತ ಸ್ಥಿರನಿಷ್ಠೆಯೂ ಅತ್ಯವಶ್ಯವಾಗಿವೆ.

ಈ ಸಂದರ್ಭದಲ್ಲಿ ಆಧ್ಯಾತ್ಮಿಕ ಸಾಧನೆ, ಪ್ರಾಣಾಯಾಮ, ಸಾಧನೆಯಲ್ಲಿ ಬರುವ ಇತರ ಅನುಷ್ಠಾನಗಳು ಇವುಗಳಲ್ಲಿಯ ಭೇದವನ್ನು ಒಂದಿಷ್ಟು ಅರಿತು ಕೊಳ್ಳುವದು ಕಾಲೋಚಿತವಾಗಿದೆ. ಶ್ರೀ ಅರವಿಂದರ ಸಾಧನೆಯು ಉಗಮಾವಸ್ಥೆ ಯಲ್ಲಿ ಯಾವ ರೂಪ ತಾಳಿತ್ತೆಂಬುದನ್ನು ಊಹಿಸಿಯೆ ತಿಳಿದುಕೊಳ್ಳಬೇಕು. ನಿತಾಂತ ಮನನ, ಹೃದಯದ ಶೋಧನ ಮತ್ತು ಚಿಂತನ ಇವುಗಳಲ್ಲಿಯೆ ಬಹುಶಃ ಆಗ ಅವರು ತತ್ಪರರಾಗಿರಬೇಕು. ತಮ್ಮ ಆ ಸಾಧನೆಯನ್ನು ತ್ವರಿತಗೊಳಿಸಿ ಪರಿಪೂರ್ಣತೆಗೊಯ್ಯುವದಕ್ಕಾಗಿಯೆ ಅವರು ಯೋಗವನ್ನು ಆಶ್ರಯಿಸಿದರು. ಪತಂಜಲಿಮುನಿಗಳ ಅಷ್ಟಾಂಗಯೋಗ*ದಲ್ಲಿ ಪ್ರಾಣಾಯಾಮವು ಸಮಾವಿಷ್ಟ ವಾದುದು ಪ್ರಸಿದ್ಧವೆ ಇದೆ.

* ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ ಮತ್ತು ಸಮಾಧಿ ಇವೇ ಆ ಎಂಟು ಅಂಗಗಳು.

'ಜೀವನವೆಲ್ಲವೂ ಯೋಗವಾಗಿದೆ'ಯೆಂದು ಶ್ರೀ ಅರವಿಂದರು ಒಂದೆಡೆಗೆ ಉಸುರಿದ್ದಾರೆ. ಅವರ ಜೀವನಕ್ಕೆ ಈ ಮಾತು ಅಕ್ಷರಶಃ ಅನ್ವಯಿಸುವದು. ಉಚ್ಚ-ತರವಾದ ಆಧ್ಯಾತ್ಮಿಕ ಜೀವನವೊಂದು ಇದೆಯೆಂಬುದರ ಅರಿವಾಗಿ ತಮ್ಮ ಜೀವನದ ಗುರಿಯನ್ನವರು ಕಂಡುಕೊಂಡಂದಿನಿಂದಲೆ ಕ್ಷಣಾರ್ಧವನ್ನು ಕೂಡ ವ್ಯರ್ಥ ಕಳೆಯದೆ ಯೋಗಾರೂಢರಾಗಿ ಜೀವಿಸತೊಡಗಿದರು. ಅಂದಿನಿಂದ ಅವರ ಜೀವನದಲ್ಲಿ ಕೊನೆಯ ನಿಮಿಷದ ವರೆಗೂ ಶಿಥಿಲತೆಯೆಂಬುದಾಗಲಿ ಚ್ಯುತಿಯೆಂಬುದಾಗಲಿ ಒಮ್ಮೆಯೂ ಕಾಣಿಸಿಕೊಳ್ಳಲಿಲ್ಲ.

ವಸ್ತುತಃ, ವಿಶ್ವದ ಆಕುಂಚನ-ವಿಕಾಸಗಳ ಇಲ್ಲವೆ ನಿವರ್ತನ-ವಿವರ್ತನ (Involution and evolution) ಗಳ ಪೂರ್ಣವಿಧಾನವೊಂದು ಪರಮಾತ್ಮನ ನಿತ್ಯಯೋಗವೆ ಆಗಿದೆ. ಅಂತೆಯೆ ಶ್ರೀಕೃಷ್ಣನಿಗೆ 'ಯೋಗೇಶ್ವರ'ನೆಂದೂ ಆ ಪ್ರಭುವಿನ ಚಾಲನಶಕ್ತಿಗೆ 'ಯೋಗಮಾಯೆ'ಯೆಂದೂ ಕರೆಯುವರು. ಯೋಗದ ಮಾರ್ಗದಲ್ಲಿ ಪ್ರತಿ ವ್ಯಕ್ತಿಯೂ ಸಾಗಿರುತ್ತಾನೆ; ಆದರೆ ಅರಿವು ಉಂಟಾಗುವವರೆಗೆ ಈ ಮಾತು ಆ ವ್ಯಕ್ತಿಯ ಲಕ್ಷ್ಯಕ್ಕೆ ಸಹಸಾ ಬರುವದಿಲ್ಲ. ಆ ಬಗೆಯ ಅರಿವು ಒದಗಿಬಂದು ಈ ವಿಶ್ವಯೋಗದಲ್ಲಿ ತನ್ನ ಪಾತ್ರವೇನೆಂಬುದರ ಸೂಚನೆಯಾದೊಡನೆ ಆಯಾ ವ್ಯಕ್ತಿಯು ತನ್ನ ಪಾತ್ರವನ್ನು ಪ್ರಜ್ಞಾಪೂರ್ವಕವಾಗಿ ವಹಿಸತೊಡಗಿ ಅದನ್ನು ತ್ವರಿತಗೊಳಿಸಲು ತವಕಪಡುತ್ತಾನೆ. ಹೀಗಾಗಿ ವ್ಯಕ್ತಿಗೆ ತನ್ನರಿವು ತನ-ಗಾಗಿ ಅನಂತದೊಡನೆ ಏಕತಾನತೆಯುಂಟಾಗಿ ಸಹಯೋಗದ ಆನಂದಾನುಭವವು ಪ್ರಾಪ್ತವಾಗುವದು. ಆಯಾ ವ್ಯಕ್ತಿಗೆ ತನ್ನ ಪಾತ್ರದ ಬಗೆಗೆ ಆತ್ಮೀಯತೆಯೆನಿಸಿ ಅದು ಮಹತ್ವದ್ದೆಂದು ತೋರಿಬರುವದು. ಹೀಗಿದ್ದರೂ ಈ ಯೋಗವು ಆಗ ವೈಯಕ್ತಿಕ ಕಾರ್ಯವೆಂದೆನಿಸಲಾರದು. ಇಂತು ಶ್ರೀ ಅರವಿಂದರ ಯೋಗಸಾಧ-ನೆಯು ಸೌಮ್ಯ ರೂಪದಲ್ಲಿ ಪ್ರಾರಂಭವಾಗಿ ಆಧ್ಯಾತ್ಮಿಕ ಪ್ರಗತಿಗೆ ಅನುಕೂಲ ವಾಯಿತು. ಕ್ರಮೇಣ ಅದು ಸಮಸ್ತ ಮನುಕುಲಕ್ಕಾಗಿ ಸಾಧನೆಗೈವ ಯೋಗವಾಗಿ ಪರಿಣಮಿಸಿ ವಿಶ್ವಯೋಗದೊಡನೆ ಸಮರಸವಾಯಿತು. ಈ ಮೂಲಕ ಅಮೋಘ ವಾದ ಊರ್ಧ್ವಮುಖ ವಿಕಾಸದಲ್ಲಿಯೂ ದೇವತ್ವದೆಡೆಗೆ ಕರೆದೊಯ್ಯುವ ಆರೋ ಹಣದಲ್ಲಿಯೂ ಅವರು ಪ್ರಜ್ಞಾವಂತ ಪಾಲುಗಾರರಾದರು. ದೇವತ್ವವು ಮನ-ಪ್ರಾಣ-ಜಡಗಳಲ್ಲಿ ಪುನಃ ಅವತರಣಗೊಳ್ಳುವಂತೆ ಮಾಡುವ ವಿಷಯದಲ್ಲಿ ಅವರ ವಿಶಿಷ್ಟ ಸಾಹಸವು ನಡೆಯಿತು.

ಶ್ರೀ ಅರವಿಂದರ ಆಧ್ಯಾತ್ಮಿಕ ಸಾಧನೆಯ ಚರಿತ್ರೆಯಲ್ಲಿ ಇಂತು ಯೋಗಕ್ಕೆ ಒಂದು ವಿಶಿಷ್ಟ ಸಾಂಕೇತಿಕ ಸ್ಥಾನವಿದೆಯೆಂಬುದು ಸ್ಪಷ್ಟವೆ ಇದೆ. ಬರಬರುತ್ತ ಈ ಯೋಗವೆಂಬುದು ವಿಶಿಷ್ಟ ರೂಪವನ್ನು ತಾಳಲಾಗಿ ಅದಕ್ಕೆ ನವೋನವ ಮಹತ್ವವು ಪ್ರಾಪ್ತವಾಯಿತು. ಈ ವಿಶಿಷ್ಟರೂಪವನ್ನೆ ಅವರು ಒತ್ತಿ ಹೇಳತೊಡಗಿದರು.

ದಿನದಿನಕ್ಕೂ ಆ ವಿಶಿಷ್ಟತೆ ನಳನಳಿಸತೊಡಗಿ ಅದಕ್ಕೆ ಹೆಚ್ಚುಹೆಚ್ಚು ಆಳವಾದ ಅರ್ಥವು ಉಂಟಾಗತೊಡಗಿತು. ಕೊನೆಗೆ ಅದಕ್ಕೆ 'ಪೂರ್ಣಯೋಗ' ವೆಂದು ಹೆಸರು ಬಂತು. ಗೀತೆಯಲ್ಲಿ 'ಯಜ್ಞ' ಪದಕ್ಕೆ ಅತಿ ವಿಶಾಲವಾದ ಅರ್ಥವಿರುವಂತೆ ಶ್ರೀ ಅರವಿಂದರ ಜೀವನದಲ್ಲಿ 'ಯೋಗ' ಪದಕ್ಕೆ ಬಹು ವಿಶಾಲವಾದ ಅರ್ಥವುಂಟು. ಈ ವಿಷಯವನ್ನು ಆಮೂಲಾಗ್ರವಾಗಿ ಚರ್ಚಿಸುವದಕ್ಕಿಂತ ಮೊದಲು ಈ 'ಯೋಗ' ಪದಕ್ಕೆ ಇದ್ದ ಸಾಮಾನ್ಯ ಅರ್ಥವಾವುದು ಹಾಗೂ ಯೋಗಸೂತ್ರ-ಗಳನ್ನು ರಚಿಸಿದ ಪತಂಜಲಿಮುನಿಗಳು ಇದಕ್ಕೆ ಯಾವ ಅರ್ಥವನ್ನು ಕೊಟ್ಟಿದ್ದಾರೆ ಎಂಬುದನ್ನಿಷ್ಟು ಅರಿತುಕೊಳ್ಳುವದು ಅವಶ್ಯವಾಗಿದೆ.

'ಯೋಗ' ಎಂಬ ಪದವು ಸಂಸ್ಕೃತ ಭಾಷೆಯಲ್ಲಿಯ 'ಯುಜ್' ಎಂಬ ಧಾತುವಿನಿಂದ ಬಂದಿದೆ. 'ಯುಜ್' ಎಂದರೆ 'ಕೂಡಿಕೊಳ್ಳು, ಒಂದಾಗು, ಸಮರಸವಾಗು' ಎಂದರ್ಥ; ಯೋಗವೆಂದರೆ ಕೂಡುಕೊಳ್ಳುವಿಕೆ, ಒಂದಾಗುವಿಕೆ, ಸಮರಸವಾಗುವಿಕೆ. ಶಿವಭಕ್ತಿಯು ಪಂಥದಂತೆ ಯೋಗಪಂಥವಾದರೂ ಸಿಂಧ-ದಕ್ಷಿಣಪಂಜಾಬಗಳಲ್ಲಿರುವ ಮೊಹೆಂಜೊದಾರೊ ಮತ್ತು ಹರಪ್ಪಾ ಪ್ರದೇಶದಲ್ಲಿ ವಾಸವಾಗಿದ್ದ ಆರ್ಯಪೂರ್ವ ಜನಾಂಗದ ಸಂಸ್ಕೃತಿಯ ಮುಖ್ಯಲಕ್ಷಣವೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಧರ್ಮ-ಅನುಭಾವಗಳಿಗೆ ಮೀಸಲಾದ ಈ ಯೋಗಶಾಸ್ತ್ರದ ಉಗಮವು ನಿಗಮ (ವೇದ) ಗಳಲ್ಲಿರದೆ ಆಗಮ ಗಳಲ್ಲಿದೆಯೆಂದು ಈ ವಿದ್ವಾಂಸರು ಊಹಿಸುತ್ತಾರೆ. ಅಂತೆಯೆ ಯೋಗದೀಕ್ಷೆಯು ಕಾಲಕ್ಕೆ ಜಾತಿ-ವರ್ಣಗಳನ್ನು ಲೆಕ್ಕಕ್ಕೆ ತರುವದಿಲ್ಲ. ಮೊಹೆಂಜೊದಾರೊ ಲಿಪಿ-ಯನ್ನು ಓದಲು ಇನ್ನೂ ಯಾರೂ ಸಮರ್ಥರಾಗಿಲ್ಲ. ಆದರೂ ಸಂಸ್ಕೃತ-ದಲ್ಲಿ ತರುವಾಯ ನಿರ್ಮಿತವಾದ ಎಲ್ಲ ಯೋಗವಾಙ್ಮಯದಲ್ಲಿ ಪಶುಪತಿಯಾದ ಶಿವನಿಗೆ ಯೋಗಿರಾಜನೆಂದು ಕರೆದ ಸಂದರ್ಭವೆ ಈ ವಿದ್ವಾಂಸರ ಆ ಊಹೆಗೆ ಮುಖ್ಯ ಆಧಾರವಾಗಿದೆ. ಪಶುಗಳ ಮಧ್ಯದಲ್ಲಿ ಯೋಗಿಗಳ ಆಸನದಲ್ಲಿ ಕುಳಿತ ಶಿವಪ್ರತಿಮೆಯೊಂದು ಸಿಂಧದ ಭೂಶೋಧನೆಯಲ್ಲಿ ದೊರೆತುದು ಆ ಊಹೆಗೆ ಪುಷ್ಟಿಯನ್ನೀಯುವದು. ಆದರಂತೆಯೆ ಋಗ್ವೇದದಲ್ಲಿ 'ಯೋಗ'ದ ಉಲ್ಲೇಖವು ಅನೇಕ ಸಂದರ್ಭಗಳಲ್ಲಿ ಬಂದಿದೆಯೆಂಬ ಮಾತೂ ಅಷ್ಟೇ ನಿಜವಾಗಿದೆ. ಕಠೋಪ-ನಿಷತ್ತು ಸ್ಪಷ್ಟ ಶಬ್ದಗಳಲ್ಲಿ ಯೋಗವನ್ನು ಉಲ್ಲೇಖಿಸುತ್ತದೆ. ಯೋಗದ ಮೂಲವು ಎಲ್ಲಿಯೆ ಇರಲಿ, ಅದೊಂದು ತಂತ್ರವಾಗಿ, ಪದ್ಧತಿಯಾಗಿ ಹಾಗು ಗುಹ್ಯವಿದ್ಯೆಗಳ ಪ್ರಾಪ್ತಿಗೂ ಆಧ್ಯಾತ್ಮಿಕ ಪರಮಸಿದ್ಧಿಗೂ ಒಂದು ಅಮೌಲ್ಯ ಸಾಧನವಾಗಿ, ಭಾರತ-ದಲ್ಲಿ ಪರಿಣಮಿಸಿದುದು ಅತಿ ಪುರಾತನ ಕಾಲದಲ್ಲಿಯೆ ಎಂಬ ಮಾತು ಸ್ಪಷ್ಟವೆ ಇದೆ.

ಯೋಗವೆಂದರೆ ವೇದಾಂತವಾಗಲಿ ತತ್ತ್ವಶಾಸ್ತ್ರವಾಗಲಿ ಆಗಿರದೆ ಅದು ಆಧ್ಯಾತ್ಮಿಕ ಸಿದ್ಧಿಯನ್ನು ಪಡೆಯುವ ಒಂದು ಮಾರ್ಗವೆಂದೆ ಬಹುಕಾಲದಿಂದ

ಜನರಲ್ಲಿ ತಿಳಿವಳಿಕೆಯಿದೆ. ತರುವಾಯದ ಸಂಸ್ಕೃತಸಾಹಿತ್ಯದಲ್ಲಿ ಯೋಗದ ಉಲ್ಲೇಖವು ಬೇಕಾದಷ್ಟಿದೆ. 'ಯೋಗೋಪನಿಷತ್ತು'ಗಳೂ ಮಹಾಭಾರತದಲ್ಲಿ ಅಂತರ್ಗತವಾದ 'ಗೀತೆ'ಯೂ 'ಯೋಗವಾಸಿಷ್ಠ'ವೂ ಈ ವಿಷಯವನ್ನು ತಕ್ಕಮಟ್ಟಿಗೆ ವಿವರವಾಗಿ ಪರ್ಯಾಲೋಚಿಸಿವೆ. ಆದರೂ 'ಪಾತಂಜಲ ಯೋಗ-ಸೂತ್ರಗಳು' ಎಂಬ ಗ್ರಂಥವೆ ಈ ದೆಸೆಯಲ್ಲಿ ಬಹು ದೊಡ್ಡ ಪ್ರಮಾಣಗ್ರಂಥವು. ಈ ಗ್ರಂಥಕ್ಕಿಂತ ಪೂರ್ವದಲ್ಲಿ ಈ ವಿಷಯವಾಗಿ ವಿಪುಲ ಸಾಹಿತ್ಯವು ಇದ್ದಿರಬಹುದು; ಆದರೆ ಕ್ರಿ. ಪೂ. ೨ ನೆಯ ಶತಕದಷ್ಟು ಪ್ರಾಚೀನವಾದ ಈ ಪ್ರಭಾವಶಾಲಿ ಗ್ರಂಥವು ಮುಂಚಿನ ಎಲ್ಲ ಸಾಹಿತ್ಯವನ್ನು ಮರೆಮಾಡಿಬಿಟ್ಟಿದೆ. ಏಕೆಂದರೆ ಇದರಲ್ಲಿ ವಿಷಯದ ಪೂರ್ಣ ಆಕಲನವು ಅದ್ಭುತವೆನಿಸುವಷ್ಟು ಸೂತ್ರಬದ್ಧವಾಗಿಯೂ ಸಾರವತ್ತಾಗಿಯೂ ಮಾಡಲ್ಪಟ್ಟಿದೆ. ಶ್ರೀ ಝಿಮ್ಮರರೆಂಬ ವಿದ್ವಾಂಸರು ಈ ಬಗ್ಗೆ ಬರೆಯುತ್ತ 'ಯೋಗಸೂತ್ರಗಳು (ಭಾಷ್ಯಗಳೂ ಸರಿ) ಜಗತ್ತಿನ ಸಾಹಿತ್ಯದಲ್ಲಿ ತತ್ತ್ವಜ್ಞಾನವಿಷಯಕವಾಗಿ ಇದ್ದ ಗದ್ಯಗ್ರಂಥಗಳಲ್ಲೆಲ್ಲ ಅತ್ಯಂತ ವಿಸ್ಮಯಕಾರಕ ಕೃತಿಯಾಗಿವೆ' ಯೆಂದು ಉದ್ಗಾರ ತೆಗೆದಿದ್ದಾರೆ. ಅವರು ಮತ್ತೆ ಹೀಗೆ ಹೇಳಿದ್ದಾರೆ: 'ಈ ಕೃತಿಗಳಲ್ಲಿಯ ಪದಪ್ರಯೋಗದಲ್ಲಿ ಅದ್ಭುತವಾದ ಮಿತಿ-ಯಿದೆ, ಸ್ಪಷ್ಟತೆಯಿದೆ, ಸಂಕ್ಷೇಪತೆಯಿದೆ, ವ್ಯಾಪಕಾರ್ಥವೂ ಇದೆ.' (ಪು. ೨೫೨, "ಭಾರತದ ತತ್ತ್ವ ಶಾಸ್ತ್ರಗಳು (Philosophies of India").

ಯೋಗವೆಂಬುದು ಶಾಸ್ತ್ರವೂ ಸರಿ, ಕಲೆಯೂ ಸರಿ. ಅಂತರಾತ್ಮನನ್ನು ಕುರಿತ ಸರಳ ಸಿದ್ಧಾಂತವೊಂದು ಇದಕ್ಕೆ ಆಧಾರವಾಗಿದೆ. ಈ ಆತ್ಮವೆಂಬುದು ನಿರ್ಲಿಪ್ತವಾಗಿದ್ದು ಅದಕ್ಕೆ ಸ್ವಯಂಪ್ರಕಾಶವುಂಟು. ಮಾನವೀ ಚೇತನಸ್ಥ ವ್ಯಾಪಾರಗಳ ಅಂತಜ್ಞಾನದಿಂದ ಆತ್ಮಪ್ರಾಪ್ತಿಯಾಗುವದು. ದ್ವಂದ್ವಾತೀತವೂ ಸ್ವಯಂಭು ಆನಂದದ ಪ್ರಕೃತಿಯುಳ್ಳುದೂ ಆದ ಅಂತರಾತ್ಮನನ್ನು ಶೋಧಿಸಿ ಅದರೊಡನೆ ತಾದಾತ್ಮ್ಯಹೊಂದುವುದೆ ಪಾತಂಜಲಯೋಗದ ಗುರಿಯಾಗಿದೆ. ಈ ಯೋಗವು ಸಾಂಖ್ಯದರ್ಶನದಂತೆ ಪುರುಷನು ಶಾಶ್ವತವಾಗಿ ಆತ್ಮಭಾವವುಳ್ಳವನಾದರೂ ಕರ್ತಾರನಲ್ಲವೆಂಬ ಸಿದ್ಧಾಂತವನ್ನು ಒಪ್ಪಿಕೊಳ್ಳುತ್ತದೆ. ಇದಿಷ್ಟು ಯೋಗದ ಶಾಸ್ತ್ರವಿಭಾಗವಾಯಿತು. ಗುರಿಯನ್ನು ಸಾಧಿಸುವ ವಿಷಯದಲ್ಲಿ ಹೇಳಲಾದ ಅನೇಕ ಅನುಷ್ಠಾನಗಳು ಯೋಗದ ಕಲಾವಿಭಾಗಕ್ಕೆ ಸೇರಿವೆ. ಮಾನವೀ ಚೇತನದ ಆಳದಾಳದಲ್ಲಿ ಮುಳುಮುಳುಗಿ ಯೋಗವು ನಮಗೆ ಸಾರಿ ಹೇಳುವದೇನಂದರೆ, ವಸ್ತುಗಳಾಗಲಿ ಅವನ್ನು ಅರಿಯುವ ಇಂದ್ರಿಯಗಳಾಗಲಿ ಸಂವೇದನೆಗಳನ್ನು ಚಿತ್ತಕ್ಕೆ ಕೊಂಡೊಯ್ಯುವ ನಾಡಿಗಳಾಗಲಿ ಚಿತ್ತವೆ ಆಗಲಿ ಜ್ಞಾತೃವು ಅಲ್ಲವೇ ಅಲ್ಲವೆಂದು. ಇವೆಲ್ಲವುಗಳಿಂದ ಜ್ಞಾತೃವು ಪ್ರತ್ಯೇಕವಾಗಿ ಇರುವನೆಂಬುದಕ್ಕೆ ಇವೆಲ್ಲವು ಕಾರ್ಯ ಮಾಡುತಿದ್ದಾಗ ಜ್ಞಾತೃವಾದ ಆ ಅಂತಃಪುರುಷನು ಲಕ್ಷ್ಯ ಹಾಕಿದ ಹೊರತು ಯಾವುದನ್ನೂ

ತಾನಾಗಿ ಅರಿಯುನೆಂಬ ಸತ್ಯಸಂಗತಿಯೆ ಸಾಕ್ಷಿಯಾಗಿದೆ. ಆದುದರಿಂದ ಜ್ಞಾತೃವಿನ ಅಸ್ತಿತ್ವವೂ ಆತನ ಭಾನವೂ ಎಲ್ಲ ಜ್ಞಾನದಲ್ಲಿ ಪ್ರಧಾನ ಅಂಶಗಳಾಗಿವೆ. ಎಲ್ಲ ಅನುಭವವೂ ಭಾವವೂ ಜ್ಞಾನವೂ ಚಿತ್ತದಲ್ಲಿಯೆ ಉಂಟಾಗುವವು. ಚಿತ್ತವು ಸ್ವಭಾವತಃ ಬಹಿರ್ಮುಖಿಯಾಗಿದ್ದು ಅಂತರ್ಮುಖಿಯಾಗಬಲ್ಲ ಶಕ್ತಿಯೂ ಅದ-ಕ್ಕಿದೆ. ಬಾಹ್ಯ ಪ್ರಭಾವಗಳನ್ನು ಅದು ಹೊರಗಿನಿಂದ ಒಳಗೆ ಒಯ್ಯುವದಲ್ಲದೆ ಅಂತರಾತ್ಮನ ಆಜ್ಞೆಗಳನ್ನು ಇಂದ್ರಿಯಗಳಿಗೆ ತಂದು ಮುಟ್ಟಿಸುತ್ತದೆ. ಕಾಲಕ್ರಮ ದಲ್ಲಿ ಜೀವಾತ್ಮನು ತನಗೊಂದು ಭವ್ಯವಾದ ಅಸ್ತಿತ್ವವನ್ನು ಉಂಟುಮಾಡಿಕೊಂಡು ಇಂದ್ರಿಯಗಮ್ಯವಾದ ಅಸಂಖ್ಯ ವಸ್ತುಗಳಲ್ಲಿ ಆಸಕ್ತನಾಗುತ್ತಾನೆ. ಯೋಗವು ಚಿತ್ತದ ಅನೇಕಾನೇಕ ವೃತ್ತಿಗಳನ್ನು ನಿರೋಧಿಸಿ ಜೀವಾತ್ಮನನ್ನು ಅವುಗಳಿಂದ ಮುಕ್ತಗೊಳಿಸಿ ಆತನು ಬಾಹ್ಯ ವಸ್ತುಗಳೊಡನೆಯಾಗಲಿ ಇಂದ್ರಿಯಗಳೊಡನೆ ಯಾಗಲಿ ಸಮರಸವಾಗುವದಕ್ಕಿಂತ ಅಂತಃಪುರುಷನೊಡನೆಯೆ ಸಮರಸವಾಗುವಂತೆ ಮಾಡುವದು. ಚಿತ್ತವನ್ನು ಆಕುಂಚನದಿಂದ ವಿಕಸನದೆಡೆಗೆ ಒಯ್ಯುವ ಪ್ರಯತ್ನವೆ ಯೋಗವು. ಸಾಮಾನ್ಯ ಮಾನವನೊಬ್ಬನ ಚಿತ್ತವು ಅಸಂಖ್ಯ ವಸ್ತುಗಳಲ್ಲಿ ಅಡಕ ವಾಗಿರುತ್ತದೆ. ಹೀಗೆ ಅಡಕವಾಗಿರುವುದೆ ನಿವರ್ತನೆಯು. ದುಃಖದುಮ್ಮಾನ ಗಳಿಗೂ ಅಪಜಯ-ಅಪಮಾನಗಳಿಗೂ ಈ ನಿವರ್ತನೆಯು ಕಾರಣವಾಗಿರದೆ ಆ ವಸ್ತುಗಳಲ್ಲಿ ಜೀವಾತ್ಮನಿಟ್ಟ ಆಸಕ್ತಿಯೆ ಕಾರಣವಾಗಿದೆ. ವ್ಯಕ್ತಿಯು ಈ ಆಸಕ್ತಿ ಯಿಂದಲೂ ತಜ್ಜನ್ಯ ಅಸ್ಥಿರತೆಯಿಂದಲೂ ಮುಕ್ತನಾಗಬೇಕು, ಅಂತಃಪುರುಷನಿಗೆ ಸಹಜವಾದ ಸ್ಥಿರತೆಯನ್ನು ಅನುಭವಿಸಬೇಕು, ಈ ಸ್ಥಿರತೆ ಇಲ್ಲವೆ ಪ್ರತಿಷ್ಠೆಯೆಂಬುದು ಜೀವಾತ್ಮನ ಜನ್ಮಸಿದ್ಧ ಹಕ್ಕು—ಎಂಬುದಾಗಿ ವಿಕಾಸದ ಊರ್ಮಿಯು ಒತ್ತಿಹೇಳು ತ್ತದೆ. ವೃತ್ತಿಗಳಿಂದ ಚಿತ್ತವನ್ನು ಮುಕ್ತಗೊಳಿಸಿ ಅದನ್ನು ಸ್ತಬ್ಧಗೊಳಿಸಿದಾಗ, ಜೀವಾತ್ಮನು ಅಂತರಾತ್ಮನೊಂದಿಗೆ ತಾದಾತ್ಮ್ಯ ಹೊಂದಿ ಮೂಲಭೂತವಾದ ಆನಂದ ಸ್ಥಿತಿಯಲ್ಲಿ ಇದ್ದುಬಿಡುತ್ತಾನೆ.

ಶ್ರೀ ಅರವಿಂದರ ಯೋಗವು ಒಂದು ಸೌಮ್ಯ ರಾಜಯೋಗವಾಗಿ ಆರಂಭ-ವಾಯಿತು. ಪ್ರತಿಯೊಂದು ಯೋಗದಲ್ಲಿಯೂ ಅನುಭವ ಪಡೆದು ಅವನ್ನೆಲ್ಲ ಕೌಶಲ್ಯ ದಿಂದ ಸಮನ್ವಯಗೊಳಿಸಿದ ಬಳಿಕ ಕೊನೆಯಲ್ಲಿ ಅದು ' ಪೂರ್ಣಯೋಗ ' ವಾಗಿ ಪರಿಣಮಿಸಿತು. ಈಗ ನಾವು ಪುನಃ ಅವರ ಸಾಧನೆಯ ಕಥೆಯತ್ತ ಹೊರಳಿ, ೧೯೦೪ ರಲ್ಲಿ ಪ್ರಾಣಾಯಾಮದಿಂದ ಆರಂಭಿಸಿ ಅವರು ಹೇಗೆ ಮುಂದುವರಿದರೆಂಬು ದನ್ನು ನೋಡುವಾ.

ಮುಂದೆ ಎರಡು ವರ್ಷಗಳು ಸರ್ವಸಾಧಾರಣವಾಗಿ ಸಮಾಧಾನದಿಂದ ಕಳೆದವು. ಆ ಮೇಲೆ ಅವರು ಸ್ವದೇಶಿ ಚಳವಳಿಯ ಸುಂಟರಗಾಳಿಯಲ್ಲಿ ಸೇರಿ-ಬಿಟ್ಟರು. ಈ ಎರಡು ವರ್ಷಗಳನ್ನೂ ತರುವಾಯದ ರಾಜಕೀಯ ಕ್ಷೋಭೆಯ

ನಾಲ್ಕು ವರ್ಷಗಳನ್ನೂ ಬೇರೆ ಬೇರೆಯಾಗಿ ಸಮಾಲೋಚಿಸಿದರೆ ಹೆಚ್ಚು ಅನುಕೂಲವಾಗುವದು. ಶ್ರೀ ಅರವಿಂದರು ಗೀತೆ-ಉಪನಿಷತ್ತುಗಳನ್ನು ಮೇಲಿಂದ ಮೇಲೆ ಉಲ್ಲೇಖಿಸುವಂತೆ ಯೋಗಸೂತ್ರಗಳನ್ನು ಒಮ್ಮೆಯಾದರೂ ಉಲ್ಲೇಖಿಸಿದುದು ಕಂಡುಬರುವದಿಲ್ಲ. ಬಹುಶಃ ನಿಶ್ಚಿತ ಮಾರ್ಗದರ್ಶನವೆಂಬುದು ಅವರಿಗೆ ನಿತ್ಯವೂ ಅವಶ್ಯವಿರಲಿಲ್ಲವೆಂದು ಇದರಿಂದ ಊಹಿಸಬಹುದಾಗಿದೆ. ಮಾರ್ಗದ ದಿಕ್ಕೊಂದು ಸೂಚಿತವಾಗಿ ನಿರ್ಧಾರಕ ಅಂಶಗಳಿಷ್ಟು ತಿಳಿದರೆ ಅವರಿಗೆ ಸಾಕಿತ್ತು. ಈ ಅವಧಿಯಲ್ಲಿ ಪ್ರಾಣಾಯಾಮದ ಕಾಲಾವಧಿಯು ದಿನದಿನಕ್ಕೂ ಬೆಳೆಯುತ್ತ ನಡೆಯಿತು; ಆ ಬಗ್ಗೆ ಅವರು ಹೆಚ್ಚು ಹೆಚ್ಚು ಆಳವಾಗಿ ಆಲೋಚಿಸತೊಡಗಿದರು. ಅವರ ಸಾಧನೆಯು ಪ್ರಭಾವಶಾಲಿಯಾಗುತ್ತ ನಡೆದು ಆಚಾರ ವಿಚಾರಗಳಲ್ಲೆಲ್ಲ ಆಧ್ಯಾತ್ಮಿಕತೆಯ ಸ್ಪಷ್ಟ ಮುದ್ರೆ ಒಡೆದು ಕಾಣತೊಡಗಿತು. ಭಾರತದ ಪ್ರಾಚೀನ ವೈಭವವು ಪುನಃ ಪ್ರಕಟವಾಗಿ ಇಂದಿನ ಜೀವನದಲ್ಲಿ ಸ್ವಚ್ಛಂದ ಪ್ರಾಣಸ್ಪಂದನೆಯು ಮತ್ತೆ ಹೇಗೆ ಕಾಣಿಸಿಕೊಂಡೀತೆಂಬ ವಿಷಯದಲ್ಲಿ ಅವರು ವಿಚಾರಮಗ್ನರಾದರು. ಆದರೆ ಈ ಬಗೆಯ ಪುನರುಜ್ಜೀವನಕ್ಕೆಲ್ಲ ಆಧ್ಯಾತ್ಮಿಕ ಜಾಗ್ರತಿಯೆ ಆಧಾರವಾಗಿರಬೇಕೆಂದು ಅವರಿಗೆ ದೃಢವಾದ ಮನವರಿಕೆಯಾಯಿತು. ಗತವೈಭವವನ್ನು ಒಂದಿಷ್ಟು ಮೆಚ್ಚುವದಾಗಲಿ ಪರಲೋಕಪ್ರೀತಿಯನ್ನು ಕೊಂಚ ತಳೆಯುವದಾಗಲಿ ಜೀವನದ ಸಮಸ್ಯೆಗಳನ್ನು ಕೇವಲ ತಾತ್ತ್ವಿಕವಾಗಿ ಚರ್ಚಿಸುವದಾಗಲಿ ಇಂಥ ಜಾಗ್ರತಿಯ ಲಕ್ಷಣವೆಂದು ಅವರೇನೂ ಭಾವಿಸಿರಲಿಲ್ಲ. ಶತಕಾನುಶತಕಗಳವರೆಗೆ ಮಲಗಿಕೊಂಡಿದ್ದ ವೇದಾಂತಕೇಸರಿಯ ಚೇತನವು ಕೊನೆಗೊಮ್ಮೆ ಚೇತರಿಸಿಕೊಂಡೇಳುವ ಚಿತ್ರಮಯ ದೃಶ್ಯವನ್ನು ಅವರು ಕಂಡರು. ಗತಕಾಲದಲ್ಲಿ ಸಮೃದ್ಧವಾಗಿದ್ದ ರಾಷ್ಟ್ರಜೀವನದ ಸಮಸ್ತ ಚಟುವಟಿಕೆಗಳೂ ಭವಿಷ್ಯತ್ತಿನಲ್ಲಿ ಪ್ರಜ್ವಾಲಿತವಾಗಬೇಕೆಂದು ಅವರು ಎಣಿಕೆ ಹಾಕಿದರು. ಈ ಅವಧಿಯಲ್ಲಿ ಅವರ ಯೋಗಸಾಧನೆಯು ಅತ್ಯಂತ ದ್ರುತಗತಿಯಿಂದ ಮುನ್ನುಗ್ಗಿತು. ಅವರ ಆತ್ಮವು ಇಂದ್ರಿಯಗಳ ಬಂಧನಗಳನ್ನು ಕಳಚಿ ಸಾಂಸಾರಿಕ ಆಶೆ-ಆಕಾಂಕ್ಷೆಗಳನ್ನು ತೊರೆದು ನಿಂತಿತು. ಆಗ ಅವರೆದುರು ಜ್ವಲಂತವಾದ ಆಧ್ಯಾತ್ಮಿಕ ಅಭೀಪ್ಸೆಯುಳ್ಳ ನವಭಾರತದ ಚೇತೋಹಾರಿ ದೃಶ್ಯವು ಕಂಗೊಳಿಸತೊಡಗಿತು.

ಅವರು ಬಡೋದೆಯಲ್ಲಿದ್ದಾಗ ಮುಂದಿನ ಎರಡು ವರ್ಷಗಳಲ್ಲಿ ಎಂದರೆ ೧೯೦೪ ರಿಂದ ೧೯೦೬ ರ ವರೆಗೆ ಅವರ ಯೋಗಾನುಷ್ಠಾನದಲ್ಲಿ ನಿಶ್ಚಿತ ಪ್ರಗತಿಯೇನಾಯಿತೆಂಬುದನ್ನು ಹೇಳುವದು ಒಂದಿಷ್ಟು ಕಠಿಣವೆ ಸರಿ. ೧೯೦೮ ಎನ್ನುವಷ್ಟರಲ್ಲಿ ನಿಷ್ಣಾತ ಯೋಗಿಗಳೊಬ್ಬರ ನೆರವು ಅವರಿಗೆ ಬೇಕಾಯಿತೆಂದಮೇಲೆ ಅವರ ಸಾಧನದ ಗತಿಯು ಮೀನಮೇಷದ ಮಂದಗತಿಯಾಗಿರಲಿಲ್ಲವೆಂಬುದು ಸ್ಪಷ್ಟವೆ ಇದೆ. ಆ ಕಾಲಕ್ಕೆ ಅವರ ಆಧ್ಯಾತ್ಮಿಕ ಪ್ರಗತಿಯು ಎಲ್ಲಿಗೆ ಬಂದಿತ್ತು, ಅವರ ಚಿತ್ತದಲ್ಲಿ

ಎಂಥದೊಂದು ಸ್ಥಿರ ಪ್ರಜ್ಞೆ ನೆಲೆಯೂರಿತ್ತು ಎಂಬೀ ಸಂಗತಿಗಳು ತಿಳಿಯಬೇಕಾದರೆ ಅವರು ತಮ್ಮ ಪತ್ನಿ ಮೃಣಾಲಿನಿಯವರಿಗೆ ೩೦-೮-೧೯೦೫ ನೆಯ ದಿನ ಬಂಗಾಲಿಯಲ್ಲಿ ಬಹು ಸಲಿಗೆಯ ಶೈಲಿಯಲ್ಲಿ ಬರೆದ ಧೀರೋದಾತ್ತ ಪತ್ರವೊಂದನ್ನು ಓದಲೇಬೇಕು. ಅವರೀಗ ಎಂಥ ಗಂಡಾಂತರಗಳನ್ನೂ ಲೆಕ್ಕಿಸದೆ ಹಂಗುದೊರೆದು ಮುಂದಿನ ಪ್ರಯಾಣಕ್ಕೆ ಸಿದ್ಧರಾಗಿದ್ದರೆಂಬುದು ಈ ಪತ್ರದಿಂದ ಒಡೆದು ಕಾಣುತ್ತದೆ. ಆ ಕಾಲದ ಅವರ ಮನೋಭೂಮಿಕೆಯ ಚಿತ್ರವು ಇಲ್ಲಿ ನಿಚ್ಚಳವಾಗಿ ಮೂಡಿದುದರಿಂದ ಅದರ ಬಹುಭಾಗವನ್ನು ಇಲ್ಲಿ ಕನ್ನಡಿಸಲಾಗಿದೆ :—

‘ ನನ್ನ ಪ್ರಿಯತಮೆ ಮೃಣಾಲಿನಿಯೆ,

. . . . ನಾನೀಗ ಆ ಮಾತಿಗೆ ಹೊರಳಿಬರುವೆ. ( ಬಹುಶಃ ಈ ವಿಷಯವಾಗಿ ಅವರು ತಮ್ಮ ಪತ್ನಿಗೆ ಈ ಮೊದಲೆ ಒಮ್ಮೆ ಬರೆದಿರಬೇಕು.) ನೀನು ಕೈಹಿಡಿದ ಈ ಗೃಹಸ್ಥನು ಎಂಥ ವಿಚಿತ್ರ ವ್ಯಕ್ತಿಯಿದ್ದಾನೆಂಬುದು ಇಷ್ಟರಲ್ಲಿ ನಿನಗೆ ತಿಳಿದಿರ ಬಹುದು. ಅದೇಕೊ ಈ ದೇಶದಲ್ಲಿಯ ಇತರ ಜನರಂತೆ ನಾನಿಲ್ಲ. ನನ್ನ ವಿಚಾರ ಗಳೂ ಭಾವನೆಗಳೂ ಇತರರ ವಿಚಾರ-ಭಾವನೆಗಳಂತೆ ಇಲ್ಲ. ನನ್ನ ಆದರ್ಶಗಳಿಗೂ ಇತರರ ಆದರ್ಶಗಳಿಗೂ ಬಹಳ ಬಿಡುತ್ತದೆ. ನನ್ನ ಕಾರ್ಯಕ್ಷೇತ್ರವಾದರೊ ಇತರರ ಕಾರ್ಯಕ್ಷೇತ್ರದಂತೆ ಇಲ್ಲವೆ ಇಲ್ಲ. ಪ್ರತಿಯೊಂದರಲ್ಲಿಯೂ ನಾನು ಭಿನ್ನನಾಗಿದ್ದು ಸಾಮಾನ್ಯತೆಯೆಂಬುದೆ ನನ್ನಲ್ಲಿ ಇಲ್ಲ. ವಾಡಿಕೆಗಿಂತ ಒಬ್ಬನ ಅಭಿಪ್ರಾಯವು ಭಿನ್ನವಾಗಿದ್ದರೆ, ಅಸಾಧಾರಣ ಪ್ರಯತ್ನಗಳಿಗೆ ಅವನು ಕೈಹಾಕಿದರೆ ಇಲ್ಲವೆ ಒಂದಿಷ್ಟು ಹೆಚ್ಚಿನ ಮಹತ್ವಾಕಾಂಕ್ಷೆ ಅವನಲ್ಲಿ ಒಡೆದುಕಂಡರೆ ಆ ಬಗ್ಗೆ ಜನರು ಹೇಗೆ ಅಂದುಕೊಳ್ಳುತ್ತಾರೆಂಬುದನ್ನು ನೀನು ಬಲ್ಲೆ. ಇಂತಹದಕ್ಕೆಲ್ಲ ಹುಚ್ಚೆಂದೆ ಹೆಸರಿಡುತ್ತಾರೆ. ಇದೇ ಹುಚ್ಚ ಮನುಷ್ಯನು ತನ್ನ ಕಾರ್ಯದಲ್ಲಿ ಯಶಸ್ವಿಯಾದರೆ ಆ ಮೇಲೆ ಯಾರೂ ಅವನನ್ನು ಹುಚ್ಚನೆಂದು ಕರೆಯುವದಿಲ್ಲ. ಅವನೊಬ್ಬ ಬಹುದೊಡ್ಡ ಪ್ರತಿಭಾವಂತನೆಂದು ಎಲ್ಲೆಡೆಗೂ ಪ್ರಶಂಸೆ ನಡೆಯುವದು. ಆದರೆ ಎಷ್ಟು ಜನ ಹೀಗೆ ಯಶಸ್ವಿಯಾಗಬಲ್ಲರು? ವಾಡಿಕೆಗಿಂತ ಹೀಗೆ ಅಸಾಧಾರಣ-ರಾದವರು ಸಾವಿರ ಜನಗಳಲ್ಲಿ ಎಲ್ಲಿಯೊ ಒಂದು ಹತ್ತು ಜನ ಹೊರಡುವರು. ಆ ಹತ್ತು ಜನರಲ್ಲಿ ಒಬ್ಬನು ಮಾತ್ರ ಯಶಸ್ವಿಯಾಗಬಲ್ಲನು. ನಾನು ಹೀಗೆ ಯಶಸ್ವಿ ಯಾಗುವದು ಎಂದೊ ಏನೊ! ಯಶಸ್ಸಿಗಾಗಿ ಹೋರಾಡುವ ಹುರಿಯಾಳುಗಳ ಪಟ್ಟಿಯಲ್ಲಿ ಸಹ ಇನ್ನೂ ನನ್ನ ಹೆಸರು ಬಂದಿಲ್ಲ. ಆದುದರಿಂದ ನಾನಿನ್ನೂ ಹುಚ್ಚನೆ ಸರಿ. ಇಂಥವನ ಹೆಂಡತಿಯಾಗುವದೆಂದರೆ ಯಾವ ಹೆಣ್ಣುಮಗಳಿಗೂ ಅಷ್ಟೊಂದು ಒಳ್ಳೆಯದಲ್ಲ. ಏಕೆಂದರೆ ವಾಡಿಕೆಯಾಗಿ ಸ್ತ್ರೀಮನವು ಸಾಂಸಾರಿಕ ಸುಖ-ದುಃಖ ಗಳ ಜೊಂಜಾಟದಲ್ಲಿ ಸಿಲುಕಿಕೊಂಡಿರುವದು. ಹುಚ್ಚನು ತನ್ನ ಹೆಂಡತಿಗೆ ಸುಖ ಕೊಟ್ಟಾನೇ? ಅವನಿಂದ ಆಕೆಗೆ ದೊರೆಯುವದು ಕೇವಲ ದುಃಖವೆ ಸರಿ.

'ಹಿಂದೂ ಧರ್ಮದ ಸ್ಥಾಪಕರಿಗೆ ಈ ಎಲ್ಲ ಮಾತು ಚೆನ್ನಾಗಿ ಗೊತ್ತು. ಅಸಾಧಾರಣ ಜೀವನ, ಮಹತ್ತರ ಸಾಹಸ, ಉಚ್ಚತರ ಆಕಾಂಕ್ಷೆ ಎಂಬೀ ಗುಣಗಳು ಪೂಜಾಸ್ಥಾನವೆಂದು ಅವರು ತಿಳಿಯುತಿದ್ದರು. ಅಸಾಧಾರಣ ಗುಣಗಳು ಹುಚ್ಚರೆಂಬವರಲ್ಲಿಯೆ ಇರಲಿ ದೊಡ್ಡವರೆಂಬವರಲ್ಲಿಯೆ ಇರಲಿ ಎಲ್ಲಿದ್ದರೂ ಅವನ್ನು ಗೌರವದಿಂದ ಕಾಣುತಿದ್ದರು. ಆದರೆ ಇಂಥವರ ಕೈ ಹಿಡಿದ ಹೆಂಡಂದಿರಿಗೆ ಮಾತ್ರ ಇದರಿಂದ ತುಂಬ ತೊಂದರೆ! ಇದಕ್ಕೆ ಉಪಾಯವೇನು? ಋಷಿಗಳು ಒಳ್ಳೆಯದೊಂದು ಉಪಾಯವನ್ನು ಹುಡುಕಿದರು. ಅವರು ಹೆಣ್ಣುಮಕ್ಕಳಿಗೆ ಹೀಗೆ ಹೇಳಿದರು: 'ನಿಮ್ಮ ಪತಿಯನ್ನೆ ಶ್ರೇಷ್ಠ ಗುರುವೆಂದು ಭಾವಿಸಿರಿ; ಬೇರೊಬ್ಬ ಗುರುವು ನಿಮಗೆ ಬೇಕಿಲ್ಲ'. ಪತಿಯ ಧರ್ಮದಲ್ಲಿ ಸತಿಗೆ ಸರಿ ಅರ್ಧಪಾಲು: ಅಂತೆಯೆ ಆಕೆ ಅರ್ಧಾಂಗಿ, ಸಹಧರ್ಮಿಣಿ. ಸತಿಯಾದವಳು ತನ್ನ ಪತಿಯು ಆಯ್ದುಕೊಂಡ ಧರ್ಮಕಾರ್ಯದಲ್ಲಿ ನೆರವಾಗಿ ಸಹಕರಿಸಬೇಕು. ಪ್ರಿಯೆಯಾದವಳು ತನ್ನ ಪ್ರಿಯನ ವೃತ್ತಿ ಪ್ರವೃತ್ತಿಗಳಲ್ಲಿ ಸಚಿವಳಾಗಿ ಸಲಹೆಯಿತ್ತು ಸಖಿಯಾಗಿ ಉತ್ಸಾಹವೀಯಬೇಕು. ಪತಿಯನ್ನು ಇಷ್ಟದೇವತೆಯಂತೆ ಕಂಡು ಸುಖದುಃಖಗಳಲ್ಲಿ ಪಾಲುಗಾರಳಾಗಬೇಕು. ಜೀವನಕ್ಕಾಗಿ ಎಂಥ ವೃತ್ತಿಯನ್ನು ಆಯ್ದುಕೊಳ್ಳಬೇಕೆಂಬುವದನ್ನು ಪುರುಷನೆ ನಿರ್ಧಾರ ಮಾಡಬೇಕು; ಅದು ಆತನ ಹಕ್ಕು. ಆತನಿಗೆ ನೆರವಾಗಿ ಉತ್ಸಾಹವೀಯುವದು ಸ್ತ್ರೀಯ ಕರ್ತವ್ಯ.

'ಈಗ ನಿನ್ನೆದುರು ಎರಡು ಮಾರ್ಗಗಳಿವೆ. ಹಿಂದೂಧರ್ಮದ ಆದೇಶದಂತೆ. ಯಾದರೂ ನೀನು ನಡೆಯಬೇಕು; ಇಲ್ಲವೆ ನವನಾಗರಿಕತೆಯ ನವೀನ ರೀತಿಗಳನ್ನಾದರೂ ಅನುಸರಿಸಬೇಕು. ಮದುವೆಯ ಮೂಲಕ ನಿನಗೂ ಈ ಹುಚ್ಚನಿಗೂ ಬ್ರಹ್ಮಗಂಟು ಬಿದ್ದಿದೆ. ಬಹುಶಃ ಇದು ಪೂರ್ವಜನ್ಮದಲ್ಲಿ ನೀನು ಮಾಡಿರಬಹುದಾದ ಯಾವುದೊ ಒಂದು ಪಾಪದ ಫಲವಾಗಿರಬಹುದು. ನಿನ್ನ ದೈವದೊಡನೆ ಒಂದು ಬಗೆಯ ಒಪ್ಪಂದಕ್ಕೆ ನೀನು ಬರಲೇಬೇಕು. ಜನಮರುಳು ಜಾತ್ರೆಮರುಳು ಎಂಬಂತೆ ಹೆರವರ ಮಾತು ಕೇಳಿ ಈ ಹುಚ್ಚನನ್ನು ನೀನು ಬಿಟ್ಟುಕೊಡುವಿಯಾ? ಹುಚ್ಚನಂತೂ ತನ್ನ ಮನಸ್ಸಿಗೆ ತೋಚಿದ ದಿಕ್ಕು ಹಿಡಿದು ತಾನು ಮುನ್ನುಗ್ಗುವವನೇ. ಅವನು ನಿನಗೆ ಅಸುಗೊಳ್ಳುವದಿಲ್ಲ. ನಿನ್ನ ವರ್ಚಸ್ಸಿಗೆ ಆತನು ಒಳಗಾಗಲಾರ. ಸ್ವಭಾವದಲ್ಲಿ ನಿನಗಿಂತ ಆತನು ಬಲಶಾಲಿ. ನೀನು ಮುಂದೇನು ಮಾಡುವಿ? ಮೂಲೆಯಲ್ಲಿ ಕುಳಿತು ಮುಳುಮುಳು ಅಳುತ್ತ ಕಣ್ಣೀರು ಸುರಿಸುವಿಯಾ? ನೀನು 'ಹಾಗಲೇರ ಸಂಗೆ ಹಾಗಲಿ' ಎಂಬಂತೆ ಹುಚ್ಚನ ಬೆನ್ನು ಬಿದ್ದುದಕ್ಕೆ ಹೇಗಾದರೂ ಸಾವರಿಸಿಕೊಂಡು ಸಾಗಿ ಆತನಿಗೆ ನೆರವಾಗುತ್ತ ನೀನೂ ಹುಚ್ಚಿಯಾಗುವಿಯಾ? ಗಾಂಧಾರಿರಾಣಿಯ ಕಥೆಯನ್ನು ನೀನು ಕೇಳಿಬಲ್ಲೆ. ಅಂಥ ಪತಿಯಾದ ಧೃತರಾಷ್ಟ್ರ ರಾಜನ ಕೈ ಹಿಡಿದುದಕ್ಕೆ ಪತಿವ್ರತೆಯಾದ ಆಕೆ ಯಾವಾಗಲೂ ಕಣ್ಣುಕಟ್ಟಿಕೊಂಡು

ಕೊನೆವರೆಗೂ ಬಾಳ್ವೆ ಮಾಡಿದಳಂತೆ. ಬ್ರಹ್ಮಸಮಾಜದ ಶಾಲೆಗಳಲ್ಲಿ ನೀನು ಶಿಕ್ಷಣ ಪಡೆದಿದ್ದರೂ ಎಷ್ಟೆಂದರೂ ನೀನು ಒಂದು ಹಿಂದೂ ಕುಟುಂಬಕ್ಕೆ ಸೇರಿದವಳು. ನಿನ್ನ ಧಮನಿಗಳಲ್ಲಿ ಹಿಂದೂ ಪುರಾತನರ ರಕ್ತ ಹರಿಯುತಿದೆ. ಆದುದರಿಂದ, ನೀನು ಪತಿಯಲ್ಲಿ ಭಕ್ತಿಯನ್ನಿಟ್ಟ ಹಿಂದೂ ಸತಿಯಾಗಿ ಬಾಳ್ವೆಮಾಡುವಿಯೆಂದು ನನಗೆ ಆಶೆಯಿದೆ.

'ನಾನು ಮೂರು ಬಗೆಯ ಹುಚ್ಚುಗಳಿಗೆ ಬಲಿಯಾಗಿರುವೆ. ಅವಕ್ಕೆ ಬೇರೆ ಹೆಸರು ನಾನೇನು ಕೊಡಲಿ? ನನ್ನ ಮೊದಲನೆಯ ಹುಚ್ಚೆಂದರೆ, ನನಗೆ ಭಗವಂತನು ಇತ್ತ ಎಲ್ಲ ಸೌಕರ್ಯಗಳೂ ಆತನ ಒಡೆತನಕ್ಕೆ ಸೇರಿವೆಯೆಂಬ ನನ್ನ ದೃಢವಾದ ನಂಬಿಕೆ. ವಿದೇಶದ ಪರೀಕ್ಷೆಗಳಲ್ಲಿ ದೊರೆತ ಈ ಎಲ್ಲ ಪದವಿಗಳು, ಈ ಪ್ರತಿಭೆ, ಈ ಉಚ್ಚಶಿಕ್ಷಣ, ಈ ವಿದ್ವತ್ತೆ, ಈ ಸಂಪತ್ತು ಇದೆಲ್ಲವೂ ಆತನವೇ. ನಮ್ಮ ಕುಟುಂ-ಬದ ಪೋಷಣೆಗೆ ತೀರ ಅವಶ್ಯವಿದ್ದಷ್ಟನ್ನು ಮಾತ್ರ ವೆಚ್ಚಮಾಡಲು ನಮಗೆ ಅಧಿಕಾರ ವಿದೆ. ಉಳಿದ ಸಿಲುಕನ್ನು ಒಡೆಯನಾದ ಭಗವಂತನಿಗೆ ಒಪ್ಪಿಸಿಬಿಡಬೇಕು. ನನ್ನ ಲ್ಲಿದ್ದ ಸಂಪತ್ತನ್ನೆಲ್ಲ ನನ್ನ ಸುಖವಿಲಾಸಗಳಿಗಾಗಿಯೆ ವೆಚ್ಚಮಾಡಿದರೆ ನಾನೊಬ್ಬ ಶುದ್ಧ ಕಳ್ಳನೆನಿಸುವೆ. ಪ್ರಭುವು ದಯಪಾಲಿಸಿದುದನ್ನು ಆತನಿಗೆ ಮರಳಿ ಕೊಡದ-ವನು ಚೋರನೆಂದು ಹಿಂದೂ ಶಾಸ್ತ್ರಗಳು ಸಾರುವವು. ಇದುವರೆಗೆ ಗಳಿಸಿದುದರಲ್ಲಿ ಎಂಟರಲ್ಲಿ ಒಂದು ಪಾಲನ್ನು ಮಾತ್ರ ಪ್ರಭುವಿಗೆ ನಾನು ಮರಳಿಕೊಟ್ಟದ್ದೇನೆ; ಉಳಿದ ಏಳುಪಾಲಿನಷ್ಟು ಧನವನ್ನು ನನ್ನ ಸ್ವಂತ ಸುಖಕ್ಕಾಗಿ ಬಳಿಸಿದ್ದೇನೆ. ಎಂದ ಬಳಿಕ ನಾನು ಇದುವರೆಗೆ ಇಷ್ಟೊಂದು ಐಹಿಕ ಸುಖದಲ್ಲಿಯೆ ಮುಗ್ನನಾದಂತಾಯಿತು. ಈಗಾಗಲೆ ನನ್ನ ಅರ್ಧ ಆಯುಷ್ಯವು ವ್ಯರ್ಥ ಹೋದಂತಾಯಿತು. ಒಂದು ಪಶುವು ಕೂಡ ತನ್ನೊಂದಿಗೆ ತನ್ನ ಕುಟುಂಬದ ಪೋಷಣೆಯನ್ನು ಮಾಡುವದುಂಟು.

'ಇಲ್ಲಿಯವರೆಗೆ ನಾನು ಕೇವಲ ಒಂದು ಪಶುವಿನಂತೆ ಜೀವಿಸಿರುವೆನೆಂದೂ ನೈತಿಕದೃಷ್ಟಿಯಿಂದ ನಾನೊಬ್ಬ ಕಳ್ಳನೆ ಎಂದೂ ನನಗೆ ಈಗ ಪೂರ್ಣ ಮನವರಿಕೆ ಯಾಗಿದೆ. ಈ ಬಗ್ಗೆ ನನಗೆ ಅತಿ ವಿಷಾದವೆನಿಸಿದೆ. ನನ್ನ ಬಗ್ಗೆ ನನಗೇ ಬೇಸರ ಬಂದಿದೆ. ಇದುವರೆಗೆ ಆದದ್ದಾಯಿತು. ಇನ್ನುಮುಂದೆ ಹೀಗಾಗದಂತೆ ನಾನು ನೋಡಿಕೊಳ್ಳಲೇಬೇಕು. ಈಗ ಗೈದ ಪಾಪವು ಸಾಕಷ್ಟಿದೆ. ಇನ್ನುಮುಂದೆ ಇಂಥ ಪಾಪಕೃತ್ಯ ನನ್ನಿಂದ ಘಟಿಸಕೂಡದು. ಹಾಗಾದರೆ ಪ್ರಭುವಿಗೆ ಮರಳಿಕೊಡುವ-ದೆಂದರೆ ಏನರ್ಥ? ಅರ್ಥಾತ್, ಧಾರ್ಮಿಕ ಮತ್ತು ಆಧ್ಯಾತ್ಮಿಕ ಸ್ವರೂಪದ ಎಲ್ಲ ಬಗೆಯ ಉತ್ತಮ ಕಾರ್ಯಗಳಿಗಾಗಿ ನಮ್ಮ ಧನವನ್ನು ವೆಚ್ಚಮಾಡಬೇಕು. ಸಹೋ ದರಿ ಸರೋಜಿನಿಗಾಗಲಿ ಉಷೆಗಾಗಲಿ ಹಣ ಕೊಟ್ಟ ಬಗ್ಗೆ ನನಗೆ ಕೆಡುಕೆನಿಸದು. ಇತರರಿಗೆ ಕೊಡುವದು ಧರ್ಮದ ಒಂದು ಭಾಗವೆ ಆಗಿದೆ. ಆದರೆ ಬಂಧುಭಗಿನಿ ಯರಿಗೆ ನೆರವಾದ ಮಾತ್ರಕ್ಕೆ ನಮ್ಮ ಕರ್ತವ್ಯವನ್ನು ಪೂರ್ಣವಾಗಿ ನಿರ್ವಹಿಸಿದಂತೆ

ಆಗಲಿಲ್ಲ. ಈಗಿನ ಕಠಿಣ ದಿನಗಳಲ್ಲಿ ಸಮಸ್ತ ರಾಷ್ಟ್ರವೂ ನನ್ನ ಬಾಗಿಲಿಗೆ ಬಂದು ನನ್ನ ಸಹಾಯವನ್ನು ಕೋರುತಿದೆ. ಈ ಭಾರತರಾಷ್ಟ್ರದಲ್ಲಿಯ ಮೂವತ್ತುಕೋಟಿ ಜನರೂ ನನ್ನ ಬಂಧುಗಳು. ಅವರಲ್ಲಿ ಅನೇಕರು ಹಸಿದು ಕಂಗಾಲಾಗಿದ್ದಾರೆ. ಬಹುಸಂಖ್ಯಾಕರು ಕಷ್ಟನಷ್ಟಗಳಲ್ಲಿ ಗಾಸಿಯಾಗಿದ್ದಾರೆ. ಅವರೆಲ್ಲ ಹೇಗೊ ಜೀವ ಹಿಡಿದುಕೊಂಡು ಇದ್ದಾರೆ ಇಷ್ಟೇ. ಅವರೆಲ್ಲರಿಗೆ ನೆರವಾಗುವ ಹೊಣೆ ನಮ್ಮ ಮೇಲೆ ಇದೆ.

'ಇದಕ್ಕೆ ನಿನ್ನ ಉತ್ತರವೇನು? ಈ ಪುಣ್ಯಕಾರ್ಯದಲ್ಲಿ ನನ್ನೊಡನೆ ಪಾಲುಗಾರ್ತಿಯಾಗುವಿಯಾ? ಅತಿ ಸಾಮಾನ್ಯ ಮನುಷ್ಯನಂತೆ ನಾನು ಜೀವಿಸ ಬೇಕೆನ್ನುವೆ, ಅವನಂತೆಯೆ ಉಂಡು ಅವನಂತೆಯೆ ಬಟ್ಟೆ ಹಾಕಿಕೊಳ್ಳುವೆ. ನನ್ನ ಸ್ವಂತ ವೆಚ್ಚವನ್ನು ತೀರ ಕನಿಷ್ಠ ಪ್ರಮಾಣಕ್ಕೆ ಇಳಿಸುವೆ. ನಾನು ಉಳಿಸಬಲ್ಲುದ-ನ್ನೆಲ್ಲ ಪ್ರಭುವಿಗಾಗಿ ಬಳಿಸಬೇಕೆನ್ನುವೆ. ನಿನ್ನ ವಿಚಾರಗಳೂ ಹೀಗೆಯೆ ಉಂಟೆ? ಸ್ವಾರ್ಥದ ತ್ಯಾಗಕ್ಕಾಗಿ ನೀನು ಸಿದ್ಧಳೇ? ಹಾಗಿದ್ದರೆ ನನ್ನ ಇಚ್ಛೆ ಈಡೇರುವದು. 'ನನ್ನಲ್ಲಿ ಇನ್ನೂ ಪ್ರಗತಿಯಾಗಿಲ್ಲ' ವೆಂದು ನೀನು ಅನ್ನುತಿದ್ದೆ. ನಿನಗೊಂದು ಸುಪ್ರಸಂಗವನ್ನು ಈಗ ಒದಗಿಸಿದ್ದೇನೆ. ಪ್ರಗತಿಗಾಗಿ ದಾರಿಯೊಂದನ್ನು ತೋರಿಸು ತಿದ್ದೇನೆ. ಈ ದಾರಿಯನ್ನು ನೀನು ಅನುಸರಿಸುವಿಯಾ?

'ಇದೀಗ ಹೊಸದಾಗಿ ನನ್ನನ್ನು ಮುತ್ತಿದ ನನ್ನ ಎರಡನೆಯ ಹುಚ್ಚೆಂದರೆ: ಬಂದುದು ಬರಲಿ, ಯಾವ ಮಾರ್ಗದಿಂದಾದರೂ ದೇವರನ್ನು ಪ್ರತ್ಯಕ್ಷ ಕಾಣ ಬೇಕೆಂಬುದು. ಇತ್ತೀಚೆಗೆ ನಮ್ಮ ಜನರಲ್ಲಿ ಧರ್ಮದ ಹೆಸರಿನಲ್ಲಿ ಒಂದು ಬಗೆಯ ಬೆಡಗು ಬೆಳೆಯುತಿದೆ. ದೇವರ ಹೆಸರನ್ನು ಪ್ರತಿ ಹೆಜ್ಜೆಗೂ ತೆಗೆದುಕೊಂಡು ಸಾರ್ವಜನಿಕವಾಗಿ ಪ್ರಾರ್ಥನೆ ಮಾಡುತ್ತ ತಾವು ಎಷ್ಟೊಂದು ಧರ್ಮಿಷ್ಠರಿದ್ದೇವೆಂದು ಜಾಹೀರ ಮಾಡಬಯಸುತ್ತಾರೆ. ಅದೊಂದು ಅವರಿಗೆ ಚಟವಾಗಿ ಬಿಟ್ಟಿದೆ. ಈ ಬಗೆಯ ಧರ್ಮಾಚರಣೆ ನನಗೆ ಬೇಕಿಲ್ಲ. ದೇವರು ಇದ್ದುದೇ ಆದರೆ ಆತನ ಅಸ್ತಿತ್ವ ವನ್ನು ಅನುಭವದಿಂದ ಅರಿಯಲೂ ಆತನನ್ನು ಮುಖಾಮುಖಿಯಾಗಿ ಕಾಣಲೂ ನೆರವಾಗಬಲ್ಲ ಒಂದು ದಾರಿ ಇರಲೇ ಬೇಕು. ದೇವರೆಡೆಗೆ ಕರೆದೊಯ್ಯುವ ಮಾರ್ಗ ವನ್ನೆ ಅನುಸರಿಸುವದನ್ನು ನಾನು ನಿರ್ಧರಿಸಿದ್ದೇನೆ. ಈ ಮಾರ್ಗವು ಬೇಕಾದಷ್ಟು ದುರ್ಗಮವಿರಬಹುದು. ಇದು ನಮ್ಮ ನಮ್ಮ ದೇಹದಲ್ಲಿಯೆ ನಮ್ಮ ನಮ್ಮ ಚಿತ್ತ ದಲ್ಲಿಯೆ ಇದೆಯೆಂದು ಹಿಂದೂ ಧರ್ಮವು ಸಾರಿ ಹೇಳುತಿದೆ. ನಾವು ಪಾಲಿಸ ಬೇಕಾದ ನಿಯಮುಗಳನ್ನು ಅದು ಹಾಕಿಕೊಟ್ಟಿದೆ. ಅವನ್ನೆಲ್ಲ ಪಾಲಿಸಲು ನಾನು ಪ್ರಾರಂಭಿಸಿದ್ದೇನೆ! ಹಿಂದೂ ಧರ್ಮವು ಈ ಬಗೆಗೆ ಹೇಳಿದುದರ ಸತ್ಯತೆಯನ್ನು ಸರಿಹಚ್ಚಿ ನೋಡಲು ಒಂದೇ ತಿಂಗಳಲ್ಲಿ ನಾನು ಸಮರ್ಥನಾಗಿದ್ದೇನೆ. ಅದು ಸೂಚಿಸಿದ ಲಕ್ಷಣಗಳನೆಲ್ಲ ಅನುಭವದಿಂದ ಕಂಡುಕೊಳ್ಳುತಿದ್ದೇನೆ. ಈಗ

ನಿನ್ನನ್ನೂ ನನ್ನ ಜೊತೆಗೆ ಕರೆದೊಯ್ಯಬೇಕೆಂಬ ಇಚ್ಛೆ ನನಗಾಗಿದೆ. ನಾನು ತುಳಿದಷ್ಟು ದಾರಿಯನ್ನೆಲ್ಲ ಸರಿಯಾಗಿ ನನ್ನ ರೀತಿಯಲ್ಲಿಯೆ ನೀನು ಒಮ್ಮೆಲೆ ತುಳಿಯಲಾರಿ; ಏಕೆಂದರೆ ಅದಕ್ಕೆ ಬೇಕಾದ ಜ್ಞಾನವು ನಿನ್ನಲ್ಲಿ ಸಾಕಷ್ಟಿಲ್ಲ. ಆದರೆ ಕ್ರಮಕ್ರಮವಾಗಿ ನಿಧಾನವಾಗಿಯಾದರೂ ಮುಂದೆ ಸಾಗುವದರಲ್ಲಿ ಯಾವ ಅಪಾಯವೂ ಇಲ್ಲ. ಈ ಮಾರ್ಗದಲ್ಲಿ ಇದ್ದವರಿಗೆಲ್ಲ ಸಿದ್ಧಿಯೆಂಬುದು ಒಮ್ಮಾನೊಮ್ಮೆ ಪ್ರಾಪ್ತವಾಗಲೆ ಬೇಕು. ಆದಾಗ್ಯೂ, ಈ ಮಾರ್ಗವನ್ನು ಆರಿಸಿಕೊಳ್ಳುವದು ಅಥವಾ ಬಿಡುವದು ಆಯಾ ವ್ಯಕ್ತಿಯನ್ನೆ ಅವಲಂಬಿಸಿದೆ. ಈ ವಿಷಯದಲ್ಲಿ ಒತ್ತಾಯವು ಒಳ್ಳೆಯದಲ್ಲ. ಇದನ್ನು ಸ್ವೀಕರಿಸಲು ನಿನ್ನ ಸಮ್ಮತಿಯಿದ್ದಲ್ಲಿ ಈ ಬಗೆಗೆ ಮತ್ತೆ ಬರೆಯುವೆ.

'ನನ್ನ ಮೂರನೆಯ ಹುಚ್ಚು ಭಾರತಮಾತೆಯನ್ನು ಕುರಿತು ಇದೆ. ತಮ್ಮ ದೇಶವೆಂದರೆ ವಿಸ್ತಾರವಾದ ಹೊಲ-ಗದ್ದೆಗಳೂ ಹಳ್ಳ-ಕೊಳ್ಳಗಳೂ ಹೊಳೆ-ಬೆಟ್ಟಗಳೂ ಕಾಡು-ಬೀಡುಗಳೂ ಇರುವ ಒಂದು ಭೌತಿಕ ವಸ್ತುವೆಂದು ಜನರು ಭಾವಿಸುತ್ತಾರೆ. ಭಾರತವು ನನ್ನ ಮಟ್ಟಿಗೆ ಮಾತೃಸ್ವರೂಪವು. ಮಾತೆಯ ಭಕ್ತನು ನಾನು. ಪೂಜಕನು ನಾನು. ಹೆರವರು ಬಂದು ತಾಯಿಯ ಎದೆಯಮೇಲೆ ಕುಳಿತು ಆಕೆಯ ರಕ್ತ ಹೀರತೊಡಗಿದರೆ ಮಗನಾದವನು ಆಗ ಏನು ಮಾಡುವನು? ಸಮಾಧಾನದಿಂದ ಊಟಮಾಡುತ್ತ ಹೆಂಡರುಮಕ್ಕಳೊಡನೆ ಚಕ್ಕಂದವಾಡುವನೊ? ಅಥವಾ ದುಃಖದಿಂದ ನರಳುವ ತಾಯಿಯನ್ನು ಬಿಡಿಸಿಕೊಳ್ಳಲು ಧಾವಿಸಿ ಬರುವನೊ? ನಮ್ಮ ಈ ಪತಿತ ಜನರನ್ನು ಉದ್ಧರಿಸಬಲ್ಲ ಶಕ್ತಿ ನನ್ನಲ್ಲಿ ಇದೆಯೆಂಬ ನಂಬಿಗೆ ನನಗುಂಟು. ಶರೀರದ ಶಕ್ತಿಯನ್ನು ಕುರಿತು ನಾನು ಹೇಳುತಿಲ್ಲ; ನಾನು ಹೇಳುತಿರುವದು ಜ್ಞಾನದ ಶಕ್ತಿಯನ್ನು ಕುರಿತು. ಈ ಜಗತ್ತಿನಲ್ಲಿ ಇದ್ದುದು ಯೋಧರ ಕ್ಷಾತ್ರತೇಜವೊಂದೆ ಅಲ್ಲ; ಜ್ಞಾನಿಗಳ ಬ್ರಹ್ಮತೇಜವೂ ಒಂದಿದೆ. ಇದೇನೂ ಹೊಸ ಕಲ್ಪನೆಯಲ್ಲ; ಇಂದಿನ ಮನ್ವಂತರಕ್ಕೆ ಮಾತ್ರ ಇದು ಅನ್ವಯಿಸುವದೆಂದು ತಿಳಿಯುವ ಕಾರಣವೂ ಇಲ್ಲ. ಈ ಕಲ್ಪನೆಯೊಡನೆಯೆ ನಾನು ಹುಟ್ಟಬಂದಿದ್ದೇನೆ. ನನ್ನ ನಾಡಿನಾಡಿಗಳಲ್ಲಿ ಇದು ಮಿಡಿಯುತಿದೆ. ಈ ಮಹಾಕಾರ್ಯವನ್ನು ಪೂರ್ತಿಗೊಳಿಸುವದಕ್ಕಾಗಿ ಭಗವಂತನು ನನ್ನನ್ನು ಈ ಭೂಮಿಗೆ ಕಳಿಸಿದ್ದಾನೆ. ನನಗೆ ಹದಿನಾಲ್ಕು ವರ್ಷ ಇನ್ನೂ ತುಂಬದಿದ್ದಾಗಲೆ ಈ ಮಹಾಕಲ್ಪನೆ ನನ್ನಲ್ಲಿ ಅಂಕುರಿಸಿದೆ. ಅದು ಆಳದಲ್ಲಿ ಬೇರೂರಿ ನಾನು ಹದಿನೆಂಟು ವರ್ಷದವನಿದ್ದಾಗ ಅತ್ಯಂತ ದೃಢವಾಗಿ ಬಿಟ್ಟಿತು. ನಿನ್ನ ಸಾಧುಪತಿಯನ್ನು ಯಾವನೊ ನೀಚನು ವಾಮಮಾರ್ಗಕ್ಕೆ ಎಳೆಯುತಿದ್ದಾನೆಂದು ಮೊನ್ನೆ ನೀನು ನಿನ್ನ ಮಾವನ ಮುಂದೆ ಅಂದೆಯಲ್ಲವೆ? ಆದರೆ ಸಾಧುವೆಂದು ತೋರುವ ನಿನ್ನ ಈ ಪತಿಯೆ ಆ ಒಬ್ಬನನ್ನಲ್ಲ ನೂರಾರು ಜನರನ್ನು ತನ್ನ ಈ ಮಾರ್ಗಕ್ಕೆ ಎಳೆಯುತಿದ್ದಾನೆ. ಇಷ್ಟಕ್ಕೆ ಅವನು ನಿಲ್ಲುವದಿಲ್ಲ.

ಸಾವಿರಾರು ಜನರನ್ನೂ ತನ್ನತ್ತ ಎಳೆಯುಲಿರುವನು. ಈ ಮಾರ್ಗದಲ್ಲಿ ಸಿದ್ಧಿಯು ನನಗೆ ಇದೇ ಜನ್ಮದಲ್ಲಿ ದೊರೆತೀತೊ ಇಲ್ಲವೊ ನನಗೆ ಗೊತ್ತಿಲ್ಲ. ಅದನ್ನು ನಾನು ಹೇಳಲಾರೆ. ಆದರೆ ಅದು ಬಂದೇ ಬರುವದೆಂಬ ಭರವಸೆ ಮಾತ್ರ ನನಗಿದೆ.

'ಈ ವಿಷಯದಲ್ಲಿ ನೀನೇನು ಮಾಡುವಿಯೆಂದು ನಾನೀಗ ಕೇಳುವೆ. ಸತಿಯು ಪತಿಯು ಶಕ್ತಿಸ್ವರೂಪಳು. ಪರಕೀಯ ಪ್ರಭುಗಳಾದ ಸಾಹೇಬರ ಹೆಸರಿನ ಜಪವನ್ನು ನಮ್ಮ ಉಷೆಯಂತೆ ನೀನೂ ಮಾಡಬೇಕೆನ್ನುವಿಯಾ? ಉದಾಸೀನಳಾಗಿದ್ದು-ಕೊಂಡು ನಿನ್ನ ಪತಿಯ ಶಕ್ತಿಯನ್ನು ಉಡುಗಿಸಬೇಕೆನ್ನುವಿಯಾ? ಸಹಾನುಭೂತಿ-ಯಿಂದ ಉತ್ಸಾಹವನ್ನಿತ್ತು ಅವನ ಶಕ್ತಿಗಳನ್ನು ಇಮ್ಮಡಿಸುವದಿಲ್ಲವೆ? ನೀನೆನ್ನ-ಬಹುದು: 'ಇಂಥ ಮಹತ್ವದ ಪ್ರಸ್ತಾಪದಲ್ಲಿ ನನ್ನಂಥ ಸಾಮಾನ್ಯ ಬಾಲೆಯೊಬ್ಬಳು ಏನು ತಾನೆ ಮಾಡಬಲ್ಲಳು? ಈ ಮಹತ್ಕಾರ್ಯಕ್ಕೆ ಅವಶ್ಯವಿದ್ದ ಮನೋದಾರ್ಢ್ಯ-ವಾಗಲಿ ಬುದ್ಧಿಬಲವಾಗಲಿ ಯಾವುದೂ ನನ್ನಲ್ಲಿಲ್ಲ. ಇಂಥ ವಿಷಯಗಳನ್ನು ಕುರಿತು ವಿಚಾರಿಸುವದೆಂದರೆ ನನಗೆ ಅಂಜಿಕೆ ಬರುತ್ತದೆ' ಎಂದು ಮುಂತಾಗಿ. ನಿನಗಾಗಿ ಸುಲಭ ಉಪಾಯವೊಂದನ್ನು ಸೂಚಿಸುವೆ. ದೇವರ ಚರಣಗಳನ್ನು ಸ್ಮರಿಸಿ ಅವಕ್ಕೆ ಶರಣುಹೋಗು. ದೇವರೆಡೆಗೆ ಕರೆದೊಯ್ಯುವ ಮಾರ್ಗವನ್ನು ಪತಿಕರಿಸು. ಅಂದರೆ ನಿನ್ನ ಲೋಪಗಳೆಲ್ಲ ಲಯವಾಗುವವು. ನಿನ್ನಲ್ಲಿಯ ಕೊರತೆಯನ್ನು ಭಗವಂತನೆ ತಡವಿಲ್ಲದೆ ತುಂಬಿಕೊಡುವನು. ಆತನನ್ನು ಆಶ್ರಯಿಸಿದವರು ಕಾಲಕ್ರಮದಲ್ಲಿ ಎಲ್ಲ ಭಯದಿಂದ ಮುಕ್ತರಾಗುವರು. ನೀನು ಸಿಕ್ಕ ಸಿಕ್ಕವರ ಮಾತು ಕೇಳದೆ ನನ್ನನ್ನೆ ನಂಬಿದಲ್ಲಿ, ನನ್ನ ಬಲವನ್ನು ನಿನಗೆ ನೀಡಬಲ್ಲೆ. ಅದರಿಂದ ನನ್ನ ಆ ಬಲವೇನೂ ಉಡುಗುವದಿಲ್ಲ. ತದ್ವಿರುದ್ಧವಾಗಿ, ಅದು ಹೆಚ್ಚುತ್ತಲೆ ಹೋಗುವದು. ಸತಿಯು ಪತಿಯ ಪ್ರತ್ಯಕ್ಷ ಶಕ್ತಿಯಾಗಿದ್ದಾಳೆಂದು ನಾವೆಲ್ಲರೂ ಹೇಳುತ್ತೇವೆ. ಇದರರ್ಥವೇನು? ಪತಿಯು ತನ್ನ ಸಾಕ್ಷಾತ್ ಪ್ರತಿಬಿಂಬವನ್ನು ತನ್ನ ಸತಿಯಲ್ಲಿ ಕಂಡುಕೊಳ್ಳುವನು ಎಂದಲ್ಲವೆ? ತನ್ನ ಮಹದಾಶೆಯು ತನ್ನ ಪತ್ನಿಯಲ್ಲಿ ಪ್ರತಿ-ಧ್ವನಿತವಾಗುವದನ್ನು ಅವನು ಆಲಿಸುವನು. ಇದರಿಂದ ಅವನ ಶಕ್ತಿ ಇಮ್ಮಡಿಸುವದು.

'ವಸ್ತುತಃ ನಿನ್ನ ಜೀವನದುದ್ದೇಶವು? 'ಸೊಗಸಾದ ಬಟ್ಟೆಯನ್ನು ಉಡುವೆ, ಸೊಗಸಾದ ಊಟವನ್ನು ಮಾಡುವೆ, ನಗುತ್ತ ಕುಣಿಯುತ್ತ ಸುಖಗಳನ್ನೆಲ್ಲ ಅನುಭವಿಸುವೆ' ಎಂಬೀ ಚಿತ್ತಪ್ರವೃತ್ತಿಯು ನಿನ್ನ ಆತ್ಮೋನ್ನತಿ-ಯನ್ನು ಪ್ರತಿಬಿಂಬಿಸಲಾರದು. ಇತ್ತೀಚೆಗೆ ದುರ್ದೈವದಿಂದ ನಮ್ಮ ಸ್ತ್ರೀಯರಲ್ಲಿ ಇಂಥ ಕ್ಷುದ್ರ ಸ್ವಾರ್ಥಮಯ ಮನೋವೃತ್ತಿಯು ಅಸಹ್ಯವೆನಿಸುವಷ್ಟು ತುಂಬಿ-ಕೊಂಡಿದೆ. ಇದನ್ನೆಲ್ಲ ತೊರೆದು ನನ್ನೊಡನೆ ಬಾ. ದೇವರ ಕಾರ್ಯವನ್ನು ನೆರವೇರಿಸಲು ನಾವೆಲ್ಲ ಇಲ್ಲಿಗೆ ಬಂದಿದ್ದೇವೆ. ಅದನ್ನು ಈಗಲೆ ಆರಂಭಿಸುವಾ.

'ನಿನ್ನ ಮನಸ್ಸು ಬಹಳ ಸರಳವಿದೆ. ನಿನ್ನ ಸ್ವಭಾವದಲ್ಲಿ ಸರಳತನವೆಂಬುದು

ದೋಷವೆ ಆದಂತೆ ತೋರುತ್ತದೆ. ಯಾರೇನು ಹೇಳಿದರೂ ಅದನ್ನೆಲ್ಲ ನೀನು ಕೇಳಿಕೊಳ್ಳುವಿ. ಇದರಿಂದ ನಿನ್ನ ಮನಸ್ಸು ಅಸ್ಥಿರವಾಗುತ್ತದೆ. ನಿನ್ನ ಸ್ವಂತದ ವಿವೇಚನಶಕ್ತಿಯು ಜಾಗ್ರತವಾಗುವ ಸಂಭವವೆ ಇಲ್ಲ. ಏಕಾಗ್ರತೆಯ ಸಾಮರ್ಥ್ಯವನ್ನೆ ನೀನು ಕಳೆದುಕೊಂಡಿರುವಿ. ಈ ಪರಿಸ್ಥಿತಿಯನ್ನು ನೀನು ಸುಧಾರಿಸಲೆ ಬೇಕು. ಒಂದೇ ಧ್ವನಿಯನ್ನು ನೀನು ಆಲಿಸಿದರೆ ನಿನ್ನಲ್ಲಿ ಜ್ಞಾನಸಂಚಯವಾದೀತು. ಒಂದೇ ಗುರಿಯನ್ನು ಮನದ ಎದುರು ಗಟ್ಟಿಯಾಗಿಟ್ಟುಕೊಂಡು ಅನನ್ಯ ನಿಷ್ಠೆಯಿಂದ ಅದನ್ನು ನೀನು ಸಾಧಿಸಿಕೊಳ್ಳಬೇಕಾಗುವದು. ಇತರರ ವಿರೋಧಾಭಿಪ್ರಾಯಕ್ಕೂ ಟೀಕೆಗೂ ಸೊಪ್ಪುಹಾಕದೆ ನಿನ್ನ ಕಾರ್ಯದಲ್ಲಿ ಸ್ಥಿರಳೂ ನಿಶ್ಚಲಳೂ ಆಗಬೇಕಾಗುವದು.

‘ ಇನ್ನೂ ಒಂದು ದೋಷವು ನಿನ್ನಲ್ಲಿದೆ. ಅದು ನಿನ್ನ ಸ್ವಭಾವಗತವಾದುದಲ್ಲ. ಸದ್ಯದ ಯುಗಪರಿಸ್ಥಿತಿಗೆ ಅನುಸರಿಸಿ ನಿನ್ನಲ್ಲಿಯೂ ಅದು ಬಂದುಬಿಟ್ಟಿದೆ. ಇಡಿ ಬಂಗಾಲವೆ ಅದಕ್ಕೆ ಒಳಪಟ್ಟಿದೆ. ಗಂಭೀರ ವಿಷಯಗಳನ್ನು ಸಹ ಗಂಭೀರವಾಗಿ ಆಲೋಚಿಸಲು ಜನರು ಸಿದ್ಧರಿಲ್ಲ. ಧರ್ಮ, ಪರೋಪಕಾರ, ಉನ್ನತ ಆದರ್ಶ, ಸಾಹಸ, ದೇಶೋದ್ಧಾರ ಈ ಮುಂತಾದ ಉಚ್ಚ ಉದಾತ್ತ ವಿಷಯಗಳನ್ನು ಜನರು ಗೇಲಿ ಮಾಡುತ್ತಾರೆ, ಉಪಹಾಸಮಾಡುತ್ತಾರೆ. ಇವನ್ನು ಅತ್ಯಂತ ಉಪೇಕ್ಷೆಯಿಂದ ಕಂಡು, ಕಂಡೂ ಕಾಣದಂತೆ ಮುಂದೆ ಸಾಗುತ್ತಾರೆ. ನಿನ್ನಲ್ಲಿಯ ಈ ಬಗೆಯ ದೋಷಕ್ಕೆ ಬ್ರಹ್ಮಸಮಾಜದ ಶಾಲೆಯೊಂದರಲ್ಲಿ ನೀನು ಕಲಿತುದೆ ಕಾರಣವು. ನಮ್ಮ ಬಾರೀಂದ್ರನಲ್ಲಿಯೂ ಇದನ್ನು ನಾನು ಕಂಡಿದ್ದೇನೆ. ನಮ್ಮೆಲ್ಲರಲ್ಲಿಯೂ ಈ ದೋಷವು ಹೆಚ್ಚುಕಡಿಮೆ ಪ್ರಮಾಣದಲ್ಲಿ ಇದ್ದೇ ಇದೆ. ದೇವಘರದ ಜನರಲ್ಲಂತೂ ಅದು ಓತಪ್ರೋತವಾಗಿ ತುಂಬಿಕೊಂಡಿದೆ. ನಮ್ಮ ಮನದಲ್ಲಿ ಗಟ್ಟಿತನವಿದ್ದರೆ ಈ ದೋಷದಿಂದ ಬಿಡುಗಡೆ ಹೊಂದಬಲ್ಲೆವು. ಇದನ್ನು ಸುಲಭವಾಗಿ ದೂರಪಡಿಸುವ ಯೋಗ್ಯತೆ ನಿನ್ನಲ್ಲಿಯೂ ಇದೆ. ನಿನ್ನಷ್ಟಕ್ಕೆ ನೀನು ವಿಚಾರಮಾಡತೊಡಗಬೇಕು. ಸ್ವಂತ ವಿಚಾರಶಕ್ತಿ ನಿನ್ನಲ್ಲಿ ಒಮ್ಮೆ ಕುದುರಿದರೆ ನಿನ್ನ ನಿಜವಾದ ಸ್ವಭಾವವು ಪ್ರಕಟವಾಗುವದು. ಪರರಿಗೆ ಕಲ್ಯಾಣಮಾಡುವ ಪ್ರವೃತ್ತಿ ನಿನ್ನಲ್ಲಿದೆ; ಸ್ವಾರ್ಥತ್ಯಾಗದ ಸ್ವಭಾವವು ನಿನ್ನಲ್ಲಿದೆ. ಸ್ಥಿರಚಿತ್ತ ಮಾತ್ರ ನಿನ್ನಲ್ಲಿ ಇಲ್ಲ. ದೇವರಲ್ಲಿ ಭಕ್ತಿಯನ್ನು ಇಟ್ಟರೆ ನಿನ್ನಲ್ಲಿ ಆ ಬಲವನ್ನು ಆತನೆ ದಯಪಾಲಿಸುವನು.

ನಿನ್ನೊಡನೆ ಏಕಾಂತವಾಡಬೇಕೆಂದು ನಾನು ಅಂದುಕೊಂಡುದು ಈ ವಿಷಯವಾಗಿಯೆ. ಯಾರಿಗೂ ಇದರ ಗುಟ್ಟನ್ನು ರಟ್ಟುಮಾಡದೆ ಇದರೊಳಗಿನ ಎಲ್ಲ ಮಾತುಗಳ ಬಗೆಗೆ ಸ್ಥಿರಚಿತ್ತದಿಂದ ನೀನು ಆಲೋಚಿಸಬೇಕು. ಇದರಲ್ಲಿ ಭಯಪಡಬೇಕಾದುದು ಏನೂ ಇಲ್ಲ. ನಾವು ಆಲೋಚಿಸಲೇಬೇಕಾದ ಅನೇಕ ವಿಷಯಗಳಿವೆ. ಪ್ರಾರಂಭದಲ್ಲಿ ದೇವರನ್ನು ಕುರಿತು ದಿನಾಲು ಅರ್ಧ ಗಂಟೆ ಧ್ಯಾನ

ಮಾಡುತ್ತ ನಡೆ; ಹೆಚ್ಚಿಗೇನೂ ಸದ್ಯಕ್ಕೆ ನೀನು ಮಾಡಬೇಕಾದುದಿಲ್ಲ. ನಿನ್ನ ಪ್ರಬಲ ಇಚ್ಛೆಯನ್ನು ಅನನ್ಯ ಪ್ರಾರ್ಥನೆಯ ರೂಪದಲ್ಲಿ ಆತನ ಎದುರು ನೀನು ಇಡಬೇಕು. ಇದರಿಂದ ನಿನ್ನ ಚಿತ್ತದಲ್ಲಿ ಸಿದ್ಧತೆಯು ಕ್ರಮೇಣ ಒಡಮೂಡಿ ಬರುವದು ನಿಶ್ಚಿತ. ನಿನ್ನ ಪತಿಯ ಜೀವನಕ್ರಮಕ್ಕಾಗಲಿ ಅವನ ಆದರ್ಶಕ್ಕಾಗಲಿ ದೇವರನ್ನು ಪಡೆಯುವ ಅವನ ಪ್ರಯತ್ನಕ್ಕಾಗಲಿ ನಿನ್ನಿಂದ ಯಾವ ಅಡ್ಡಿಯೂ ಬರದಿರಲೆಂದು ದೇವರಲ್ಲಿ ನೀನು ಸದಾ ಪ್ರಾರ್ಥಿಸಬೇಕು. ಇಷ್ಟೇ ಅಲ್ಲ, ನಿನ್ನ ಪತಿಗೆ ಯಾವಾಗಲೂ ನೆರ ವಾಗುತ್ತ ಅವನ ಕಾರ್ಯದಲ್ಲಿ ಉಪಕರಣವಾಗುವಂತೆ ನಿನ್ನನ್ನು ಮಾಡೆಂದೂ ಆ ದೇವರಲ್ಲಿಯೇ ನೀನು ಪ್ರಾರ್ಥಿಸಬೇಕು. ಇದನ್ನು ನೀನು ಮಾಡುವಿಯಾ?

ನಿನ್ನ .......'

ಅವರ ಸಾಧನವೆ ಇಲ್ಲಿ ಪ್ರಸ್ತುತ ವಿಷಯವಾದುದರಿಂದ ಅದಕ್ಕೆ ಸಂಬಂಧಿಸಿದ ಯಾವ ಮಹತ್ವದ ಅಂಶಗಳು ಮೇಲ್ಕಂಡ ಪತ್ರದಿಂದ ತಿಳಿದುಬರುವವೆಂಬುದನ್ನು ಈಗ ನೋಡುವಾ. ಅವರು ಇಂಗ್ಲಂಡದಲ್ಲಿದ್ದಾಗ ಹದಿನಾಲ್ಕನೆಯ ವಯುಸ್ಸಿನಲ್ಲಿಯೆ ಅಧ್ಯಾತ್ಮನಿಷ್ಠ ರಾಷ್ಟ್ರೀಯತ್ವದ ಬೀಜದ ಬಿತ್ತಿಗೆಯು ಅವರ ಚಿತ್ತದಲ್ಲಿ ಆಗಿ ಬಿಟ್ಟಿತ್ತು. ಭಾರತವು ಮಾತೃಸಮಾನವೆಂದೆ ಅವರ ಭಾವನೆಯಾಗಿತ್ತು; ಈ ದೇಶವು ರಾಜಕೀಯ ದೃಷ್ಟಿಯಿಂದ ಸ್ವತಂತ್ರವಾಗಲೂ ಹಾಗು ಆಧಿಭೌತಿಕತೆ ಯುಂಥ ಪಶ್ಚಿಮದ ಆದರ್ಶಗಳ ಪ್ರಭಾವದಿಂದ ಮುಕ್ತವಾಗಲೂ ಆಧ್ಯಾತ್ಮಿಕತೆಯ ಮತ್ತು ಬ್ರಹ್ಮತೇಜದ ಪುನರುಜ್ಜೀವನವು ಅತ್ಯವಶ್ಯವೆಂದು ಅವರು ನಂಬಿದ್ದರು. ಅವರು ಕೇಂಬ್ರಿಜದಲ್ಲಿದ್ದಾಗ ಹದಿನೆಂಟನೆಯ ವಯಸ್ಸೆನ್ನುವಷ್ಟರಲ್ಲಿ, ಈ ಮೊದಲು ಬಿತ್ತಲಾದ ಆ ಅಧ್ಯಾತ್ಮನಿಷ್ಠ ರಾಷ್ಟ್ರೀಯತ್ವದ ಬೀಜವು ಆಳದಲ್ಲಿ ಬಲವಾಗಿ ಬೇರೂರಿತ್ತು. ಆಯ್. ಸಿ. ಎಸ್. ಪರೀಕ್ಷೆಯಲ್ಲಿ ಅವರು ಏಕೆ ತೇರ್ಗಡೆ ಹೊಂದಲಿಲ್ಲವೆಂಬುದರ ಅರ್ಥವು ಈಗ ನಮಗೆ ಆಗುತ್ತದೆ. ಆಂಗ್ಲಸಾಮ್ರಾಜ್ಯದಲ್ಲಿ ರಾಜಭೃತ್ಯನಾಗಲೋಸುಗ ತಮ್ಮ ಜನ್ಮವಾಗಿಲ್ಲವೆಂಬುದಾಗಿಯೂ ಉಚ್ಚತರ ಉದಾತ್ತತರ ಧ್ಯೇಯವೊಂದರ ಪೂರ್ತಿಗಾಗಿ ತಾವು ಜನಿಸಿಬಂದಿರುವದಾಗಿಯೂ ನಿಶ್ಚಿತ ಪ್ರೇರಣೆಯೊಂದು ಅವರ ಹೃದಯದಲ್ಲಿ ಇಷ್ಟರಲ್ಲಿ ಮಿಡಿಯತೊಡಗಿತ್ತು. ತಮ್ಮ ಜೀವನದ ಇಷ್ಟಸಿದ್ಧಿಯ ದೀಕ್ಷೆ ದೇವಲೋಕದಿಂದಲೆ ತಮಗೆ ಉಂಟಾಗಿದೆ ಎಂದೂ ಆ ಸಿದ್ಧಿಯ ಪ್ರಾಪ್ತಿಗಾಗಿ ಅವಶ್ಯವಿರುವ ದೀರ್ಘ ದುರ್ಗಮ ಪ್ರಯಾಣ ಕ್ಕಾಗಿ ಪ್ರಸ್ಥಾನದ ಗಂಟನ್ನು ತಾವು ಈಗಾಗಲೆ ತೆಗೆದಿಟ್ಟಿರುವೆವೆಂದೂ ಅವರು ಭಾವಿಸಿದ್ದರು. ತಮ್ಮ ಆದರ್ಶಗಳ ಬೆಳವಣಿಗೆಯೆಂತಾಯಿತು ಹಾಗೂ ಅವುಗಳ ಸಿದ್ಧಿಗಾಗಿ ತಾವು ಕೈಕೊಳ್ಳುವ ಸಾಧನಗಳಾವವು ಎಂಬ ವಿಷಯವಾಗಿ ಚಾರಿತ್ರಿಕ ಸಿಂಹಾವಲೋಕನವನ್ನು ಅವರು ೧೯೦೫ರಲ್ಲಿಯೆ ಮಾಡಿದ್ದರು. ಕ್ಷಾತ್ರತೇಜದ ದಾರಿ ತಮ್ಮದಲ್ಲವೆಂದೂ ಬ್ರಹ್ಮತೇಜವನ್ನೆ ತಾವು ಬಳಿಸಿಕೊಳ್ಳುವವರೆಂದೂ ಖಂಡಿತವಾಗಿ

ನಿರ್ಧರಿಸಿದ್ದರು. ಈ ಬ್ರಹ್ಮತೇಜಕ್ಕೆ ಜ್ಞಾನ-ತಪಗಳೂ ಶೀಲ-ಅನುಭಾವಗಳೂ ಆಧಾರವೆಂಬುದನ್ನು ಅವರು ಅರಿತಿದ್ದರು.

'ಯೋಗ' 'ಅನುಷ್ಠಾನ' ಎಂಬೀ ಮಾತುಗಳು ವಾಡಿಕೆಯಾಗಿ ಒಂದು ವಿಶಿಷ್ಟ ಜೀವನಕ್ರಮವನ್ನು ನೆನಪಿಗೆ ತಂದುಕೊಡುತ್ತವೆ. ನಿತ್ಯಚರ್ಯೆಯನ್ನು ಕುರಿತು ವಿಧಿಸಲಾದ ನಿಯಮ-ನಿಷ್ಠೆಗಳನ್ನೆಲ್ಲ ಚಾಚೂ ತಪ್ಪದೆ ಪಾಲಿಸಲೋಸುಗ ಸಾಕಷ್ಟು ಬಿಡುವು ಇರುವಂಥ ನಿಯಮಿತ ಶಾಂತಿಯುತ ಜೀವನಕ್ರಮವೊಂದು ನಮ್ಮ ಕಣ್ಣಮುಂದೆ ಕಟ್ಟುತ್ತದೆ. ಸಂಕಟಗಳಿಂದ ಕೂಡಿದ ಪ್ರಕ್ಷುಬ್ಧ ರಾಜಕೀಯ ಕುರುಕ್ಷೇತ್ರದಲ್ಲಿ ಧುಮುಕಿದವರಿಗೆ ಯೋಗಾನುಷ್ಠಾನಕ್ಕೆಂದು ಸಹಸಾ ಸಮಯವು ದೊರೆತೀತೆ? ಅಂಥವರಿಗೆ ಸಾಮಾನ್ಯವಾಗಿ ಈ ಮಾರ್ಗವು ಅನುಕೂಲವೂ ಅಲ್ಲ, ಹಿತಕರವೂ ಅಲ್ಲ. ಆದರೆ ರಾಜಕೀಯ ಝುಂಝಾವಾತದಲ್ಲಿ ನುಗ್ಗಿ ಸಾಹಸಯುಕ್ತ ಜೀವನವನ್ನು ನಡೆಸಿದ ಶ್ರೀ ಅರವಿಂದರು ನಿತಾಂತ ಯೋಗಸಾಧನೆಯನ್ನು ಸಂತತ ವಾಗಿ ಗೈಯಲು ಹೇಗೆ ಸಮರ್ಥರಾದರೆಂಬುದನ್ನು ಅರಿಯಬೇಕಾದರೆ ಆಗಿನ ಕಾಲದ ಅವರ ಮನೋಭೂಮಿಕೆಯ ಚಿತ್ರಣದ ಪರಿಶೀಲನೆಯನ್ನು ಮಾಡುವದು ಕಾಲೋ-ಚಿತವೆ ಆಗಿದೆ. 'ಪೂರ್ಣಯೋಗ'ದ ಸಿದ್ಧಾಂತದ ರೂಪರೇಷೆಯನ್ನು ಸಹ ಇನ್ನೂ ಅವರು ಹಾಕಿದ್ದಿಲ್ಲ; ಅದರ ಸಮನ್ವಯ ವಿಭಾಗವನ್ನು ಸಹ ಇನ್ನೂ ಅವರು ಪೂರ್ಣವಾಗಿ ಸ್ಥಾಪಿಸಿರಲಿಲ್ಲ. ಆದರೂ ಒಂದು ಮಾತು ನಿಶ್ಚಿತವಿತ್ತು, ವೈಯಕ್ತಿಕ ಮೋಕ್ಷಕ್ಕಾಗಲಿ ಕೈವಲ್ಯದ ಶಾಂತಿಗಾಗಲಿ ಸಾಧನೆಗೈಯಲು ಅವರು ಸಿದ್ಧರಿರಲಿಲ್ಲ-ವೆಂಬುದು. ಈ ಮೊದಲೆ ನಮಗೆ ಗೊತ್ತಿದ್ದಂತೆ, ಕರ್ಮಕ್ಷೇತ್ರದ ಹೊಣೆ ತಪ್ಪಿಸಿ ಕೊಂಡು ಓಡಿಹೋಗುವ ಯಾವದೆ ಬಗೆಯ ಅಧೀರ ವೈರಾಗ್ಯವನ್ನು ಅವರ ಸ್ವಭಾವವು ಎಂದೂ ಒಪ್ಪಲಿಲ್ಲ. ಆದುದರಿಂದ ಯೋಗಸಾಧನೆ ಕೈಕೊಂಡ ಪ್ರಾರಂ-ಭಾವಸ್ಥೆಯಲ್ಲಿ ಸಹ ಅವರ ಪ್ರಯತ್ನದ ಉದ್ದೇಶವು ಇಬ್ಬಗೆಯದಾಗಿತ್ತು: ಹೇಗೆಂದರೆ, ಸಮಾಧಿಸ್ಥಿತಿ (ಸ್ವರೂಪೇ ಅವಸ್ಥಾನಂ) ಯನ್ನು ಹೊಂದಲು ಪ್ರಯತ್ನಿ ಸುತಿರುವಾಗಲೆ, ಭಾರತದ ರಾಜಕೀಯ ಮುಕ್ತಿಗಾಗಿ ಆವಶ್ಯವಿರುವ ಎಂಥ ರಭಸದ ರಂಗದಲ್ಲಿಯೂ ನೂಕಿಸಿಕೊಳ್ಳಲು ಭಗವಂತನ ಕೈಯಲ್ಲಿ ತಾವು ಮೀಸಲಾಗಿ ಅರ್ಪಿತರಾಗಿದ್ದರು. ಅವರ ಯೋಗದ ಈ ಪಾರ್ಶ್ವವು, ಶ್ರೀ ಲೇಲೆಯವರನ್ನು ಅವರು ಬಡೋದೆಯಲ್ಲಿ ೧೯೦೮ ರಲ್ಲಿ ಸಂದರ್ಶಿಸಿದಾಗ ನಮಗೆ ಸ್ಪಷ್ಟವಾಗಿ ಕಂಡುಬರುವದು.

ಪರಾತ್ಪರದೊಡನೆ ಉಂಟಾಗುವ ಅನಿರ್ವಚನೀಯ ಅಂತಜ್ಞಾನಯುಕ್ತ ಸಾಯುಜ್ಯಾನುಭವವನ್ನು ಪಡೆಯುವದೆ ಶ್ರೀ ಅರವಿಂದರ ಆಧ್ಯಾತ್ಮಿಕ ಸಾಧನೆಯ ತಾತ್ಕಾಲಿಕ ಧ್ಯೇಯವಾಗಿತ್ತು. ಈ ಸಿದ್ಧಿಯ ಪ್ರಾಪ್ತಿಗಾಗಿ ಅವಶ್ಯವಿರುವ ಮೂಲ-ಭೂತ ಉಪಾಧಿಗಳನ್ನು ಪೂರೈಸಲು ಅವರು ಪ್ರಯತ್ನಪಟ್ಟರು. ನೈತಿಕ ಜೀವನದ

ಉಚ್ಚ್ರಮಟ್ಟವನ್ನಂತೂ ಈಗಾಗಲೆ ಅವರು ಮುಟ್ಟಿದ್ದರು. ಕಾಮ-ಕ್ರೋಧಾದಿ ಮನೋವಿಕಾರಗಳನ್ನು ಪೂರ್ಣವಾಗಿ ಅಂಕೆಯಲ್ಲಿ ಇಟ್ಟುಕೊಂಡಿದ್ದರು. ಬ್ರಹ್ಮ-ಚರ್ಯವನ್ನು ಅವರು ಅಕ್ಷರಶಃ ಪಾಲಿಸುತಿದ್ದರು; ಎಂದರೆ ಸ್ತ್ರೀಸಂಗವನ್ನು ತೊರೆಯುವದೊಂದಲ್ಲದೆ ಬ್ರಹ್ಮತತ್ತ್ವದ ಚಿಂತನೆಯಲ್ಲಿಯೂ ಅವರು ಮಗ್ನರಾಗು ತಿದ್ದರು. ಚಿತ್ತವನ್ನು ಎಲ್ಲ ಕ್ರಿಯೆಯಿಂದ ಮುಕ್ತಗೊಳಿಸಿ ಅದನ್ನು ನಿಸ್ತರಂಗ-ವನ್ನಾಗಿ ಮಾಡುವದರಲ್ಲಿ ಸಾಧ್ಯವಿದ್ದ ಎಲ್ಲ ಪ್ರಯತ್ನವನ್ನು ಇಷ್ಟರಲ್ಲಿ ಅವರು ಮಾಡಿದ್ದರು. ಪ್ರಾಣಾಯಾಮದಿಂದ ಉಸಿರನ್ನು ಅಂಕೆಯಲ್ಲಿಟ್ಟುಕೊಂಡು ದೇಹ-ಶುದ್ಧಿಯ ಪ್ರಯೋಗವನ್ನು ಅವರು ನಡೆಸಿದ್ದರು. ಜೀವಾತ್ಮನನ್ನು ಇಂದ್ರಿಯಾನು-ಭವ, ಸಂವೇದನೆ, ವಿಚಾರ, ಕಲ್ಪನೆ, ಭಾವನೆ, ಇತರ ಚಿತ್ತಪ್ರವೃತ್ತಿ ಇವೇ ಮೊದ ಲಾದವುಗಳಿಂದ ನಿಃಸಂಗಗೊಳಿಸಿ ನಿಜವಾದ ಆತ್ಮತತ್ತ್ವದೊಡನೆ ತಾದಾತ್ಮ್ಯಗೊಳಿ-ಸುವದೆ ಅವರ ಕೊನೆಯ ಗುರಿಯಾಗಿತ್ತು. ಆತ್ಮತತ್ತ್ವದೊಡನೆ ಹೀಗೆ ತಾದಾತ್ಮ್ಯ ಹೊಂದುವದೆ ಎಲ್ಲ ಜ್ಞಾನದ ತಳಹದಿಯಾಗಿದೆ. ಈ ಆತ್ಮತತ್ತ್ವಕ್ಕೆ ಸ್ವಯಂ ಪ್ರಕಾಶವುಂಟು; ಅದು ಸ್ವಯಂಭುವೂ ಆಗಿದೆ. ಇದಲ್ಲದೆ ಅದು ಚೇತನಾತೀತವೂ ವಿಶ್ವಾತೀತವೂ ಆದ ಸದ್ವಸ್ತುವಾಗಿದೆ. ಈ ಎಲ್ಲ ಮಾತಿನಲ್ಲಿ ಅವರ ನಂಬಿಗೆಯಿತ್ತು. ಇಂದ್ರಿಯಲೋಕವು ನಿಷ್ಫಲವಾದ ಹೊತ್ತಿನಲ್ಲಿ ಇಲ್ಲವೆ ಇಂದ್ರಿಯಸುಖಗಳ ಸಮೃದ್ಧಿಯಿಂದ ಜುಗುಪ್ಸೆಯುಂಟಾದ ಹೊತ್ತಿನಲ್ಲಿ ಮಾತ್ರ ಆ ಸದ್ವಸ್ತುವನ್ನು ಬೆಂಬತ್ತಿ ಹೋಗಬೇಕೆಂಬ ವಿಧಿಯೇನೂ ಇಲ್ಲವೆಂಬ ವಿಷಯದಲ್ಲಿ ಅವರಿಗೆ ಖಚಿತ ಮನವರಿಕೆಯಾಗಿತ್ತು. ಎಲ್ಲ ಹೊತ್ತಿನಲ್ಲಿಯೂ ಹಾಗೆ ಮಾಡಲು ಸಾಧ್ಯವಿದೆ, ಏಕೆಂದರೆ ಆತ್ಮತತ್ತ್ವಕ್ಕಾಗಿ ಉಂಟಾದ ನಿಜವಾದ ಹಸಿವೇ ಹಾಗೆ ಬೆಂಬತ್ತಿ ಹೋಗುವಂತೆ ಮಾಡುವದು. ಅಂಥ ಹಸಿವು ಒಮ್ಮೆ ಉಂಟಾಯಿತೆಂದರೆ ಅಂತಸ್ಥ ಸತ್ತ್ವವೆಂಬುದು ಭವ್ಯಅವಸ್ಥೆಯನ್ನು ತಾಳಿ ಸೂಜಿಗಲ್ಲಿನಂತೆ ಆಕರ್ಷಿಸತೊಡಗುವದು. ಈ ಮಾರ್ಗದಿಂದ ವಿಕಾಸಹೊಂದುವದು ಸಮಸ್ತ ಮಾನವಚೇತನದ ಮೂಲಭೂತ ಸ್ವಭಾವವೆಂದು ಶ್ರೀ ಅರವಿಂದರು ಬಗೆದರು. ಹೀಗೆ ವಿಕಾಸಹೊಂದಿದ ಮಾತ್ರಕ್ಕೆ ಎಲ್ಲವೂ ಮುಗಿಯಿತೆಂದಾಗಲಿ ಇದುವೆ ಯೋಗದ ಅಂತಿಮ ಧ್ಯೇಯವೆಂದಾಗಲಿ ಅವರೆಂದೂ ಭಾವಿಸಲಿಲ್ಲ. ಕೇವಲ ಕೆಲವೊಂದು ಅನುಷ್ಠಾನಗಳೆ ಏಕೆ ಜೀವನದ ಸಮಸ್ತ ಚಟುವಟಿಕೆಗಳು ಯೋಗವಾಗಲು ಸಾಧ್ಯವಿದೆಯೆಂದೂ ಭಗವಂತನ ಕೈಯಲ್ಲಿಯ ಉಪಕರಣವಾಗಿ ಕಾರ್ಯಮಾಡುವದೆಂದರೆ ಅದ್ವೈತದ ಇಲ್ಲವೆ ಕೈವಲ್ಯದ ಅನುಭವಕ್ಕಿಂತಲೂ ಹೆಚ್ಚಿನ ಮಟ್ಟದ ಅವಸ್ಥೆಯೆಂದೂ ಅವರ ಹೃದ್ದೇಶ ದಲ್ಲಿ ಈಗಾಗಲೆ ಒಳದನಿಗಳು ಮಿಡಿಯತೊಡಗಿದ್ದವು. ಅಂತೆಯೆ ತಮ್ಮ ರಭಸದ ರಾಜಕೀಯ ಜೀವನವು ತಮ್ಮ ಆಧ್ಯಾತ್ಮಿಕ ಸಾಧನೆಗಾಗಲಿ ಯೋಗಾನುಷ್ಠಾನಕ್ಕಾಗಲಿ ಅಡ್ಡಬರುವದಿಲ್ಲವೆಂಬ ಭರವಸೆ ಅವರಿಗಿತ್ತು. ರಾಜಕೀಯ ಕ್ಷೇತ್ರದಲ್ಲಿ ಒಳನುಗ್ಗ-

ಬೇಕೆಂಬ ಕರೆಯು ಬಂದೊಡನೆ ಅದಕ್ಕೆ ಅವರು ಕೂಡಲೆ ಓಗೊಟ್ಟರು. ಏಕೆಂದರೆ ನವೋನವ ನಿತಾಂತತರ ಸಾಧನೆಗೆ ಅದೊಂದು ಮುಂದಿನ ಹೆಜ್ಜೆಯೆಂದು ಅವರು ತಿಳಿದಿದ್ದರು.

ಸಾಮಾನ್ಯವಾದ ಎಲ್ಲ ಅನುಭವಗಳನ್ನು ಮೀರಿ ಇರುವ ಪ್ರಜ್ಞಾನಾವಸ್ಥೆ (Supraconscious stage) ಯಲ್ಲಿ ಮಹತ್ತರವೂ ಅನಂತವೂ ಸಮರಸವೂ ಆದ ಅದ್ವೈತಾನುಭೂತಿಯು ಆಗುವುದುಂಟೆಂದು ಉಪನಿಷತ್ತುಗಳು ಉಸಿರುವವು. ಇದುವೆ ಆತ್ಮನ ಭಾವಾತೀತವಾದ ಅಂತರ್ಜ್ಞಾನಾವಸ್ಥೆಯಾಗಿದ್ದು ಇಲ್ಲಿಯೆ ಜ್ಞಾತೃ-ಜ್ಞಾನ-ಜ್ಞೇಯಗಳೆಲ್ಲವೂ ಒಂದರಲ್ಲಿ ಲೀನವಾಗುತ್ತವೆ. ಆಗ ಇಷ್ಟದೇವತೆಯ ಪ್ರಶ್ನೆಯೆ ಉಂಟಾಗುವದಿಲ್ಲ. ಸರಳವೂ ವಿಂಗಡಿಸಲು ಬಾರದಂತಹದೂ ಆದ ಸಮಗ್ರ ಅನುಭವವೆ ಅದಾಗಿದ್ದು ಅದುವೆ ಎಲ್ಲ ಸಾಮಾನ್ಯ ಚೇತನದ ಹಾಗೂ ಜ್ಞಾನದ ತಾಯಿಬೇರಾಗಿದೆ. ಜೀವಾತ್ಮನ ಸತ್ತ್ವವೆಂದರೂ ಇದೇ ; ವಿಶ್ವದ ಪರಮ ತತ್ತ್ವವಾದ ಬ್ರಹ್ಮತತ್ತ್ವ ಇಲ್ಲವೆ ಪರಮಾತ್ಮತತ್ತ್ವವೆಂದರೂ ಇದೇ. ಉಪ್ಪಿನ ಹರಳು ನೀರಲ್ಲಿ ಕರಗುವಂತೆಯೊ ನದಿಗಳು ಸಮುದ್ರದಲ್ಲಿ ಒಂದಾಗಿ ಒರಗುವಂತೆಯೊ ಬ್ರಹ್ಮತತ್ತ್ವದಲ್ಲಿ ಲೀನವಾಗಿ ಹೋಗಲು ಶ್ರೀ ಅರವಿಂದರು ಇಚ್ಛಿಸಿದರೇ ಎಂಬ ಪ್ರಶ್ನೆ ಇಲ್ಲಿ ಹುಟ್ಟಬಹುದು. ಇದಕ್ಕೆ ಉತ್ತರವನ್ನು ಮುಂಡಕೋಪನಿಷತ್ತಿನ ಮಾತುಗಳಲ್ಲಿ ಹೀಗೆ ಹೇಳಬಹುದು : ಆತ್ಮದೊಡನೆ ಪ್ರೇಮದಿಂದ ವಿಹರಿಸುತಲಿರುವಾಗಲೆ ಕ್ರಿಯಾವಂತನಾಗಿರುವ ಆತ್ಮಾರಾಮನೆ ಬ್ರಹ್ಮಜ್ಞಾನಿಗಳಲ್ಲಿ ಮಿಗಿಲಾದವನು. ಇಲ್ಲಿ ಸೂಚಿತವಾಗಿರುವ ಕ್ರಿಯೆಯು ಯಾವಾಗಲೂ ಅವಶ್ಯವಾಗಿ ಶಾರೀರಿಕ ಕ್ರಿಯೆಯೆ ಆಗಿರಬೇಕೆಂಬ ವಿಧಿಯೇನೂ ಇಲ್ಲ. ಈ ಮಾತು ಸ್ಪಷ್ಟವೆ ಇದೆ. ಆನಂದದ ಉನ್ಮಾದದಲ್ಲಿ ಶಿವನು ನಟರಾಜನಾಗಿ ಗೈಯುತಿರುವ ಸನಾತನ ನೃತ್ಯವೆಂಬುದು ಪರಮಾತ್ಮನ ವಿಶ್ವವ್ಯಾಪಾರದ ನಿಜವಾದ ಸಂಕೇತವೆಂದು ಶ್ರೀ ಅರವಿಂದರ ಅಭಿಪ್ರಾಯವಿದೆ. ಅವರು ಬಡೋದೆಯಲ್ಲಿ ಪ್ರಾಧ್ಯಾಪಕರೆ ಆಗಿರಲಿ, ಕಾಂಗ್ರೆಸ್ಸಿನಲ್ಲಿ ರಾಜಕೀಯ ನಾಯಕರೆ ಆಗಿರಲಿ, ಅಲಿಪುರದಲ್ಲಿ ರಾಜಬಂದಿಯೆ ಆಗಿರಲಿ, ಪಾಂಡಿಚೇರಿಯಲ್ಲಿ ಯೋಗಿಗಳೆ ಆಗಿರಲಿ ಎಲ್ಲ ಕಾಲಕ್ಕೂ ಅವರು ಅಷ್ಟೇ ದಕ್ಷತೆಯಿಂದಲೂ ನಿತಾಂತ ತತ್ಪರತೆಯಿಂದಲೂ ಕಾರ್ಯಗೈಯುತಿದ್ದುದರ ರಹಸ್ಯವು ಇಲ್ಲಿದೆ. ಆಯಾ ಕಾಲದ ಯಾವ ಚಟುವಟಿಕೆಯೂ ತಮ್ಮ ಯೋಗದಿಂದ ಪ್ರತ್ಯೇಕವಾದುದೆಂದಾಗಲಿ ಅದಕ್ಕೆ ವಿಸಂಗತವಾದುದೆಂದಾಗಲಿ ಅವರು ಎಂದೂ ಭಾವಿಸಲಿಲ್ಲ. ಆ ಚಟುವಟಿಕೆಗಳೆಲ್ಲವೂ ಅವರ ಸಮಗ್ರ ದೃಷ್ಟಿಗೆ ಅಖಂಡವಾಗಿಯೆ ಕಂಡವು. ಯಾವ ಕಾರ್ಯಗಳೆ ಆಗಲಿ ಅವೆಲ್ಲವುಗಳ ಮೂಲಭೂತ ಸಾಮರಸ್ಯವನ್ನು ಸರಿಯಾಗಿ ತಿಳಿದುಕೊಂಡು ಯೋಗ್ಯಭಾವನೆಯಿಂದ ಅವನ್ನು ನೆರವೇರಿಸಿದುದಾದರೆ ಅವೆಲ್ಲವೂ ಒಂದೇ ಗುರಿಯತ್ತ ಕರೆದೊಯ್ಯುವವೆಂದು ಅವರು ತಿಳಿದಿದ್ದರು. ಏಕೆಂದರೆ, ಆಗ ಜೀವನದ

ಎಲ್ಲ ವ್ಯಾಪಾರಗಳು ಗೀತೆಯಲ್ಲಿ ಹೇಳಲಾದ ಪುರುಷೋತ್ತಮನ ಪ್ರಜ್ಞಾನಾವಸ್ಥೆ-ಯೊಳಗಿಂದಲೆ ಹೊರಗೆ ಬಂದವುಗಳಾಗಿರುತ್ತವೆ.

ಶ್ರೀ ಅರವಿಂದರ ಚಿತ್ತದಲ್ಲಿ ಪ್ರತ್ಯೇಕ ಪಟಲಗಳೆಂಬವು ಇದ್ದಿರಲಿಲ್ಲವೆಂದು ಧಾರಾಳವಾಗಿ ಹೇಳಬಹುದು. ಹೊರಗಿನ ಚಟುವಟಿಕೆಗಳು ಏನೇ ನಡೆದಿರಲಿ, ಅವರ ಸಾಧನೆಯೆಂಬುದು ದ್ರುತಗತಿಯಿಂದ ಮುಂದುವರಿದಿತ್ತು. ಎಂಥ ಪ್ರಕ್ಷುಬ್ಧ ಕಾರ್ಯರಂಗದಲ್ಲಿದ್ದರೂ ತಮ್ಮ ಜಾಗ್ರತ ಜೀವನದ ಪ್ರತಿ ಕ್ಷಣವನ್ನೂ ಅವರು ತಮ್ಮ ಯೋಗಸಾಧನೆಗಾಗಿ ಉಪಯೋಗಿಸಿಕೊಂಡರು. ಪ್ರಾರಂಭದಲ್ಲಿ ಒಂದು ಮಟ್ಟದ ಸಿದ್ಧಿ ಪ್ರಾಪ್ತವಾದಾಗ ಅವರ ಚಿತ್ತವು ನಿಸ್ತರಂಗವಾಗಿದ್ದು ಜೊತೆಜೊತೆಗೆ ಎಲ್ಲ ಚಟುವಟಿಕೆಗಳೂ ಭಗವಂತನ ಪ್ರೇರಣೆಯಿಂದಲೆ ಎಂಬಂತೆ ಸಾಗಿದ್ದವು. ೧೯೦೭ರ ಫೆಬ್ರುವರಿ ೧೭ಕ್ಕೆ ೨೩, ಸ್ಕಾಟ್ ಬೀದಿ, ಕಲಕತ್ತೆ ಈ ವಿಳಾಸದಿಂದ ಅವರು ತಮ್ಮ ಪತ್ನಿಗೆ ಬರೆದ ದ್ವಿತೀಯ ಪತ್ರವು ಈ ದೃಷ್ಟಿಯಿಂದ ಬಹಳ ಮಹತ್ವದ್ದಾಗಿದೆ. ಮೂಲದಲ್ಲಿ ಅದು ಬಂಗಾಲಿಯಲ್ಲಿದ್ದು ಅದರ ಕನ್ನಡ ರೂಪವು ಇಂತಿದೆ:

'ಪ್ರಿಯ ಮೃಣಾಲಿನಿಯೆ,

'ನಿನಗೆ ಪತ್ರ ಬರೆದು ಬಹುಕಾಲವಾಯಿತು. ಇದೊಂದು ನನ್ನ ತೀರ ಹಳೆಯ ದೋಷವು. ಸಾಧುಸ್ವಭಾವದವಳಾದ ನಿನ್ನಿಂದ ಕ್ಷಮೆ ಕೋರದೆ ಬೇರೆ ಉಪಾಯ ವನ್ನು ನಾನೇನು ಹುಡುಕಲಿ? ನೈಯುಂಡ ಚಟಗಳನ್ನು ಚಟ್ಟನೆ ಕಿತ್ತೆಸೆಯುವದು ಸಾಧ್ಯವೆ ಇಲ್ಲ. ಈ ದೋಷದಿಂದ ಮುಕ್ತನಾಗಲು ಬಹುಶಃ ಈ ಇಡಿ ಒಂದು ಆಯುಷ್ಯವೆ ಬೇಕಾದೀತು.

'ಜನೇವರಿ ೮ ಕ್ಕೆ ನಾನು ಅಲ್ಲಿಗೆ ಬರಬೇಕೆಂದು ಮಾಡಿದ್ದೆ. ಆದರೆ ಬರುವ-ದಾಗಲಿಲ್ಲ. ಬರುವದು ಬಿಡುವದು ನನ್ನ ಅಧೀನದಲ್ಲಿಯೆ ಇರಲಿಲ್ಲ. ಭಗವಂತನು ಕರೆದೊಯ್ದಲ್ಲಿ ನಾನು ಹೋಗಬೇಕಾಯಿತು. ಈ ಸಲ ನನ್ನ ಸ್ವಂತ ಕಾರ್ಯಕ್ಕಾಗಿ ಹೋಗಿರಲಿಲ್ಲ. ಆತನ ಕಾರ್ಯವೆ ನನ್ನನ್ನು ಮುತ್ತಿಬಿಟ್ಟಿತ್ತು. ಈ ಸಲ ನನ್ನ ಮನಃಸ್ಥಿತಿಯಲ್ಲಿ ಸಂಪೂರ್ಣ ಬದಲಾವಣೆ ಆಗಿಹೋಗಿದೆ. ಅದನ್ನೆಲ್ಲ ಈ ಪತ್ರದಲ್ಲಿ ಬಿಚ್ಚಿ ಹೇಳಲು ಇಚ್ಛೆಯಿಲ್ಲ. ನೀನು ಇಲ್ಲಿಗೆ ಬಾ. ಆಗ, ನನಗೆ ಹೇಳಬೇಕಾಗಿರು-ವದನ್ನೆಲ್ಲ ಹೇಳುವೆ. ಆದರೆ ಇಷ್ಟನ್ನು ಮಾತ್ರ ಈಗ ಹೇಳಬಯಸುವೆ: ನನ್ನ ಸ್ವಾಧೀನದಲ್ಲಿ ಈಗ ನಾನಿಲ್ಲ. ಇನ್ನು ಮುಂದೆ ನನ್ನ ಒಡೆಯನು ನಾನಲ್ಲ. ಈಗ ಭಗವಂತನ ಕೈಯಲ್ಲಿಯ ಸೂತ್ರದ ಬೊಂಬೆ ನಾನು. ಆತನು ಕೈಚಾಚಿ ಕಳಿಸಿದತ್ತ ನಾನು ಹೋಗಲೆಬೇಕು. ಆತನ ಅಡಿಯಾಳು ನಾನು. ಅವನ ಅಪ್ಪಣೆಯಂತೆ ನಾನು ನಡೆಯಲೆಬೇಕು. ಈ ಭಾಷೆಯ ಅರ್ಥ ಮಾಡಿಕೊಳ್ಳುವದು ನಿನಗೆ ಕಠಿಣ ವಾದೀತೆಂಬುದನ್ನು ನಾನು ಬಲ್ಲೆ. ಆದರೆ ವಸ್ತುಸ್ಥಿತಿಯನ್ನು ಇದ್ದಕಿದ್ದಂತೆ ನಿನಗೆ ಹೇಳುವದು ಅಗತ್ಯವಾಗಿದೆ. ಹಾಗೆ ಹೇಳದಿದ್ದರೆ ನನ್ನ ಚಲನವಲನಗಳಿಗೆಲ್ಲ ನೀನು

ಆಕ್ಷೇಪಿಸಬಹುದಾಗಿದೆ; ಅವು ನಿನಗೆ ದುಃಖವನ್ನೂ ವ್ಯಥೆಯನ್ನೂ ಕೊಟ್ಟವು. ನಾನು ನಿನ್ನನ್ನು ದುರ್ಲಕ್ಷಿಸುತಿರುವೆನೆಂದೂ ನನ್ನ ಮನಬಂದಂತೆಯೆ ನಾನು ನಡೆದು ಕೊಳ್ಳುತಿರುವೆನೆಂದೂ ನೀನು ತಪ್ಪುತಿಳಿದುಕೊಳ್ಳಬಹುದಾಗಿದೆ. ದಯವಿಟ್ಟು ಹಾಗೆ ತಿಳಿದುಕೊಳ್ಳಬೇಡ. ಇಲ್ಲಿಯ ವರೆಗೆ ನಿನ್ನ ವಿರುದ್ಧವಾಗಿ ನಾನು ಬಹಳ ಪಾಪ ಮಾಡಿದ್ದೇನೆ. ನನ್ನ ಆಚರಣೆಯನ್ನು ಕಂಡು ನೀನು ಅತಿಶಯವಾಗಿ ಅತೃಪ್ತ ಳಾದುದು ಸಹಜವೆ ಇದೆ. ಆದರೆ ನಾನೀಗ ನನ್ನ ಸ್ವಾತಂತ್ರ್ಯವನ್ನು ಕಳೆದು ಕೊಂಡಿದ್ದೇನೆ. ಇನ್ನು ಮುಂದೆ ನಾನು ಮಾಡುವದೆಲ್ಲವೂ ನನ್ನ ಇಚ್ಛೆಯನ್ನು ಅವಲಂಬಿಸಿರದೆ ಭಗವಂತನ ಆಜ್ಞೆಯನ್ನೆ ಸಂಪೂರ್ಣವಾಗಿ ಅವಲಂಬಿಸಿದೆಯೆಂದು ನೀನು ತಿಳಿಯಬೇಕಾಗುವದು. ನೀನು ಇಲ್ಲಿಗೆ ಬಂದೊಡನೆ ನನ್ನ ಮಾತಿನ ಪೂರ್ಣ ಅರ್ಥವು ನಿನಗೆ ಆಗುವದು. ಅಲ್ಲಿಯ ವರೆಗೆ, ಅನಂತ ದಯಾಸಾಗರನಾದ ಭಗ- ವಂತನು ನನಗೆ ಬೆಳಕು ತೋರಿಸಿದಂತೆ ನಿನಗೂ ಅದನ್ನು ತೋರಿಸಿ ಅನುಗ್ರಹಿಸುವ ನೆಂದು ನಂಬಿದ್ದೇನೆ. ಆದರೆ ಇದಕ್ಕೆಲ್ಲ ಅವನ ಅಪಾರ ಕೃಪೆ ಬೇಕು. ನನ್ನಲ್ಲಿ ಪೂರ್ಣ ನಂಬಿಗೆಯನ್ನಿಟ್ಟು ನನ್ನನ್ನೆ ಅನುಸರಿಸುವ ಪ್ರಬಲ ಇಚ್ಛೆ ನಿನಗೆ ಇದ್ದು- ದಾದರೆ ಆ ದಿಶೆಯಲ್ಲಿ ನೀನು ಹೃತ್ಪೂರ್ಣ ಪ್ರಯತ್ನಗಳನ್ನು ಮಾಡಬೇಕು. ದಯಾ ಶಾಲಿಯಾದ 'ಆತ'ನು ನಿನ್ನ ನಿಷ್ಠೆಗೆ ಮೆಚ್ಚಿ ನಿನಗೆ ಮಾರ್ಗದರ್ಶನ ಮಾಡುವದರಲ್ಲಿ ಸಂಶಯವಿಲ್ಲ. ಯಾರಿಗೂ ಈ ಪತ್ರವನ್ನು ನೀನು ತೋರಿಸಕೂಡದು. ಏಕೆಂದರೆ ನನ್ನ ಅಂತರಂಗದ ಆಳದಲ್ಲಿರುವ ರಹಸ್ಯವನ್ನೆ ನಿನಗಿಲ್ಲಿ ಹೇಳಿಬಿಟ್ಟಿದ್ದೇನೆ. ನಿನಗೊ- ಬ್ಬಳಿಗೆ ಮಾತ್ರ ಇದನ್ನು ಹೇಳಿದ್ದೇನೆ, ಇನ್ನಾರಿಗೂ ಹೇಳಿಲ್ಲ. ಇತರರಿಗೆ ಹೇಳ ಕೂಡದೆಂದು ಆದೇಶವಿದೆ. ಇಂದಿಗೆ ಇಷ್ಟೆ ಸಾಕು.

ನಿನ್ನ ಪ್ರೀತಿಯ ಪತಿ'

ಕುರುಕ್ಷೇತ್ರದಲ್ಲಿ ಶ್ರೀಕೃಷ್ಣನು ಅರ್ಜುನನಿಗಿತ್ತ ಎಚ್ಚರಿಕೆಯ ಮಾತುಗಳು ಇಲ್ಲಿ ನೆನಪಿಗೆ ಬರುತ್ತವೆ: 'ನೀನು ನಿಮಿತ್ತ* ಮಾತ್ರನಾಗು. ಎಲ್ಲವನ್ನೂ ನಾನೆ ಮಾಡಿದ್ದೇನೆ, ಮಾಡುತ್ತಲೂ ಇದ್ದೇನೆ, ಮುಂದೆಯೂ ಕಾಲಕ್ರಮದಲ್ಲಿ ಅವಶ್ಯ- ವಿದ್ದುದನ್ನು ಮಾಡಲಿದ್ದೇನೆ. ನೀನು ನನ್ನ ಕೈಯೊಳಗಿನ ಉಪಕರಣಮಾತ್ರ ನಾಗಿರುವೆ.' ಅರ್ಜುನನು ಎಲ್ಲವನ್ನೂ ತಾನೆ ಮಾಡುವವನೆಂಬುದಾಗಿ ಕಡು ಹೆಮ್ಮೆ ತಾಳಿದಾಗ ಈ ಬಗೆಯ ಎಚ್ಚರಿಕೆಯನ್ನು ಅವನಿಗೆ ಶ್ರೀಕೃಷ್ಣನು ಕೊಡಬೇಕಾ- ಯಿತು. ಶ್ರೀ ಅರವಿಂದರಿಗೆ ಪ್ರಭುವಿನಿಂದಲೆ ಪ್ರೇರಣೆಯೊದಗಿತ್ತು; ಅವರು ತಮ್ಮ ನಿತಾಂತಸಾಧನದಿಂದ ಆತನಿಗೆ ಪೂರ್ಣವಾಗಿ ತಮ್ಮನ್ನು ಅರ್ಪಿಸಿಕೊಂಡು ಬಿಟ್ಟಿದ್ದರು.

---

*ತಸ್ಮಾತ್ ತ್ವಮುತ್ತಿಷ್ಠ ಯಶೋ ಲಭಸ್ವ ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃದ್ಧಂ।
ಮಯ್ಯೈವೈತೇ ನಿಹತಾಃ ಪೂರ್ವಮೇವ ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥
—ಅ. ೧೧, ಶ್ಲೋ. ೩೩

ಇದರ ಫಲವಾಗಿ, ಅವರಲ್ಲಿಯು ಮಮತ್ವವು ಮಾಯವಾಗಿ ಪ್ರಭುವೆ ಮುಖ್ಯ ಪ್ರೇರಕನಾಗಿದ್ದನು. ಇದೊಂದು ತನ್ನ ಮಟ್ಟಿಗೆ ತೀರ ಹೆಚ್ಚಿನ ಸಿದ್ಧಿಯೆ ಆಗಿತ್ತು. ಅತಿ ಮುಖ್ಯವಾದ ಮಾತೊಂದನ್ನು ನಿರ್ಧರಿಸುವ ಪ್ರಸಂಗ ಬಂದಾಗ ಇಲ್ಲವೆ ಏನು ಮಾಡತಕ್ಕದೆಂಬ ಧರ್ಮಸಂಕಟದಲ್ಲಿ ಬಿದ್ದಾಗ ಯಾರು ಬೇಕಾದವರು ಪ್ರಸಂಗ ವಶಾತ್ ದೇವರಿಗೆ ಶರಣುಹೋಗುವದು ಸುಲಭವೆ ಇದೆ, ಸಾಮಾನ್ಯವೂ ಆಗಿದೆ. ಆತ್ಮಸಾಕ್ಷಿಯಾಗಿ ನಡೆಯುತ್ತ ದೇವಭೀರುಗಳಾಗಿರುವ ಅನೇಕ ಸ್ತ್ರೀಪುರುಷರು ಹೀಗೆ ಮಾಡುವದುಂಟು. ಆದರೆ ಭಗವಂತನನ್ನು ಸದಾ ಸರ್ವಕಾಲವೂ ಹೃದಯ ಸಿಂಹಾಸನದಲ್ಲಿ ಕುಳ್ಳಿರಿಸಿ ಆತನನ್ನೆ ಅನನ್ಯ ಗುರುವೆಂದು ಭಾವಿಸಿ ಅಹಂಕಾರವನ್ನು ಪೂರ್ಣವಾಗಿ ತೊಡೆದು ಹಾಕುವದೆಂದರೆ ಅದೊಂದು ಅತ್ಯುನ್ನತ ಶ್ರೇಣಿಯ ಆಧ್ಯಾತ್ಮಿಕ ಸಿದ್ಧಿಯೆ ಸರಿ. ಇಂಥ ಸಿದ್ಧಿಯನ್ನು ಪಡೆಯುವದೆಂದರೆ, ನಿಮ್ನ ಸ್ತರದಲ್ಲಿರುವ ಜೀವಾತ್ಮನ ಚಲನವನ್ನು ಸ್ಥಗಿತಗೊಳಿಸಿ ಉಚ್ಚಸ್ತರದಲ್ಲಿರುವ ಊರ್ಧ್ವಮುಖಿಯಾದ ಅಂತರಾತ್ಮನಿಗೆ ಸಕಲವನ್ನೂ ಒಪ್ಪಿಸಿಬಿಟ್ಟಂತೆ. ಇಂಥ ಪ್ರಸಂಗಗಳಲ್ಲಿ ಆ 'ಅಹಂ' ಎಂಬ ವ್ಯಕ್ತಿ ಅಲ್ಲಿ ಉಳಿಯುವನೇನೊ ನಿಜ, ಏಕೆಂದರೆ ಆ ವ್ಯಕ್ತಿಯಲ್ಲಿರುವ ಮಾನವೀ ಚೇತನಾಶಕ್ತಿಯು ಸುತ್ತುಸುತ್ತಿಲ್ಲದೆ ನೇರವಾಗಿ ಕಾಲುವೆಯಾಗಿ ಹರಿಯುತಲೆ ಇರುವದು ; ಆದರೆ 'ಅಹಂ' ಎಂಬ ವ್ಯಕ್ತಿ ತನ್ನ ಮನೆಯನ್ನು ತನಗಿಂತ ಮಿಗಿಲಾದ ಉಚ್ಚಶ್ರೇಣಿಯ ಶಕ್ತಿಯೊಂದು ನಡೆಸುತಿರುವದೆಂಬುದನ್ನು ಕೇವಲ ಸಾಕ್ಷಿಪುರುಷನಾಗಿ ನೋಡುವದುಂಟು !

ಸಮಸ್ತ ವಿಶ್ವವೂ 'ಯಂತ್ರಾರೂಢ' ವೆಂಬಂತೆ ಗತಿಶೀಲವಾಗಿದೆಯೆಂದು ಶ್ರೀಕೃಷ್ಣನು ಗೀತೆಯಲ್ಲಿ ಹೇಳುತ್ತಾನೆ. ಶ್ರೀ ಅರವಿಂದರು ಈ ಪತ್ರವನ್ನು ಬರೆಯುವಾಗ ಇಂಥ ಯಂತ್ರಾರೂಢ ಸ್ಥಿತಿಯಲ್ಲಿ ತಾವು ಇದ್ದುದನ್ನು ಕಂಡುಕೊಂಡರು. ಅವರ ಯೋಗವು ಸ್ವಯಂಚಾಲಿತವೂ ಸ್ವಯಂನಿಯಂತ್ರಿತವೂ ಆಗಿ ಸಾಗಿತ್ತು ; ಅಲ್ಲದೆ ಅವರ ಸಮಗ್ರ ಜೀವನವೆ ಭಗವತ್ಪ್ರೇರಿತವಾಗಿತ್ತು. ಕೊನೆಯ ನಿಮಿಷದ ವರೆಗೂ ಅದು ಹಾಗೆಯೆ ಮುಂದುವರಿಯಿತು. 'ಆರ್ಯ' ಪತ್ರಿಕೆಯಲ್ಲಿಯ ತಮ್ಮ ಲೇಖನಗಳ ಬಗೆಗೂ ಶ್ರೇಷ್ಠ ಸಾಹಿತ್ಯಕೃತಿಯಾದ 'ಸಾವಿತ್ರಿ' ಮಹಾಕಾವ್ಯದ ಬಗೆಗೂ ಪ್ರಸ್ತಾಪ ಹೊರಟಾಗ ಅವನ್ನು ತಾವು ಬರೆದೆವೆನ್ನುವುದಕ್ಕಿಂತ ಅವೇ ತಮ್ಮೆಡೆಗೆ ಧಾವಿಸಿ ಬಂದವೆಂದು ಹೇಳಿದರೆ ಹೆಚ್ಚು ಒಪ್ಪುವದೆಂದೂ ಆ ಕೃತಿಗಳ ರಚನೆಗೆ ತಾವು 'ನಿಮಿತ್ತಮಾತ್ರ'ವೆಂದೂ ಒಮ್ಮೆ ಅವರೆ ಉದ್ಗಾರ ತೆಗೆದುದುಂಟು.

ಅದೇ ವರ್ಷ ಡಿಸೆಂಬರ ತಿಂಗಳಲ್ಲಿ ಸತಿ ಮೃಣಾಲಿನಿಯವರಿಗೆ ಇನ್ನೊಂದು ಪತ್ರವನ್ನು ಬರೆದರು. ಆ ಪತ್ರದಲ್ಲಿಯಾದರೂ ತಮ್ಮ ಸಾಧನಾಕ್ರಮವು ಮೊದಲಿನಂತೆಯೆ ಮುಂದುವರಿದುದನ್ನು ಉಲ್ಲೇಖಿಸಿದ್ದಾರೆ. ಈ ಅವಧಿಯಲ್ಲಿ ಪ್ರಾಣಾಯಾಮದಲ್ಲಿ ಮಾತ್ರ ಒಂದಿಷ್ಟು ಅನಿಯಮಿತತೆ ಉಂಟಾದುದು ತಿಳಿದು ಬರುತ್ತದೆ.

ಆ ಕಾಲದಲ್ಲಿ ರಾಜಕೀಯ ಕಾರ್ಯಕಲಾಪಗಳ ಅತಿಶಯ ಭಾರವು ತಮ್ಮ ಮೇಲೆ ಬಿದ್ದಿದೆಯೆಂದು ಅವರಿಗೆ ಅನಿಸುತಿತ್ತು. ಈ ಸಾಧನಾಕ್ರಮದಲ್ಲಿ ಇನ್ನು ಮುಂದಿನ ಅವಸ್ಥೆ ಪ್ರಾಪ್ತವಾದುದು ಅಲಿಪುರ ಸೆರೆಮನೆಯಲ್ಲಿ ಅವರಿಗೆ ಶ್ರೀಕೃಷ್ಣನ 'ದರ್ಶನ' ವಾದ ಕಾಲಕ್ಕೆಯೆ ಸರಿ. ಅಂದು ನಿಜವಾಗಿ ಅವರಿಗೆ ಭಗವಂತನ ಸಾಕ್ಷಾತ್ಕಾರ ವಾಯಿತು. ಆತನನ್ನು ಕಣ್ಣಾರೆ ಕಂಡರು, ಮುಖಾಮುಖಿಯಾಗಿ ನೋಡಿದರು. ಇಂತು ಪ್ರಾರಂಭದ ಅವರ ಮಹದಾಶೆಯೊಂದು ಪೂರ್ತಿಯಾಯಿತು. ಈ ಮಾತನ್ನು ಚರ್ಚಿಸುವದಕ್ಕಿಂತ ಮೊದಲು, ಪ್ರಕಟವಾದ ಆ ಮೂರನೆಯ ಪತ್ರದಲ್ಲಿ ಅವರೇನು ಅನ್ನುತ್ತಾರೆಂಬುದನ್ನು ಒಂದಿಷ್ಟು ನೋಡುವಾ :

೬ನೆಯ ಡಿಸೆಂಬರ, ೧೯೦೭

'ಪ್ರಿಯ ಮೃಣಾಲಿನಿಯೆ,

'. . . . . . ಇಲ್ಲಿ ಒಂದು ಕ್ಷಣವೂ ನನಗೆ ತೆರವು ದೊರೆಯಲೊಲ್ಲದು. ಇಷ್ಟೊಂದು ಹೊಣೆಗಳನ್ನು ನಾನು ನಿರ್ವಹಿಸಬೇಕಾಗಿದೆ. ಇತ್ತ ಪತ್ರಿಕೆಗಳಿಗೆ ಬರೆಯಬೇಕು, ಅತ್ತ ಕಾಂಗ್ರೆಸ್ ಸಂಸ್ಥೆಯ ಸಂಘಟನಾಕಾರ್ಯವನ್ನು ನೋಡಿ-ಕೊಳ್ಳಬೇಕು. ದೈನಿಕವೂ ಸಾಪ್ತಾಹಿಕವೂ ಆಗಿರುವ 'ಬಂದೇ ಮಾತರಂ' ಪತ್ರಿಕೆಯ ಎಲ್ಲ ತೊಡಕುಗಳನ್ನು ನಾನು ಬಿಡಿಸಬೇಕಾಗಿದೆ. ಕಾರ್ಯದ ಭಾರವು ಹೊರಲಾರದಷ್ಟು ಆಗಿಬಿಟ್ಟಿದೆ. ಕೈಯೊಳಗಿನ ಕೆಲಸವನ್ನು ಮುಗಿಸುವದೆ ನನ-ಗಾಗಲೊಲ್ಲದು. ಇದೆಲ್ಲಕ್ಕಿಂತಲೂ ಮಿಗಿಲಾದ 'ನನ್ನ ಸ್ವಂತ ಕಾರ್ಯ'ವಂತೂ ಇದ್ದೇ ಇದೆ. ಅದನ್ನು ನಾನೆಂದೂ ದುರ್ಲಕ್ಷಿಸುವಂತಿಲ್ಲ; ಬಿಟ್ಟುಕೊಡುವ ಮಾತಂತೂ ದೂರವೆ ಉಳಿಯಿತು.

'ನನ್ನ ಒಲವಿನ ಒಲವೆ, ನನ್ನ ಮಾತನ್ನಿಷ್ಟು ಆಲಿಸುವಿಯಾ? ನಾನೊಂದು ದೊಡ್ಡ ಧರ್ಮಸಂಕಟದಲ್ಲಿ ಬಿದ್ದಿರುವೆ. ಇಷ್ಟೊಂದು ವಿವಿಧ ದಿಕ್ಕುಗಳಲ್ಲಿ ಎಳೆದಾಟ ನಡೆದಿದ್ದು ನನಗೆ ನಿಜವಾಗಿ ಹುಚ್ಚೆಲ್ಲಿ ಹಿಡಿಯುವದೊ ಎಂಬಂತಾಗಿದೆ. ಇಂಥ ಸಂದುಕಟ್ಟಿನ ಮಹತ್‌ಪ್ರಸಂಗದಲ್ಲಿ ನೀನೂ ಒಬ್ಬಳು ಸ್ಥಿರಚಿತ್ತದಿಂದ ಶಾಂತಳಾಗಿರ ದಿದ್ದರೆ ನನ್ನ ಚಿಂತೆ ಇಮ್ಮಡಿಸುವದು, ಮುಮ್ಮಡಿಸುವದು. ನನ್ನ ದುಃಖ ನೂರ್ಮಡಿ ಯಾಗುವದು. ಆದರೆ ಅದೇ ನೀನು ಉತ್ಸಾಹದಿಂದ ಉತ್ತರವಿತ್ತು ನನ್ನನ್ನು ಸಂತೈಸಿದರೆ ನಿನ್ನಿಂದ ವಿಶೇಷ ಶಕ್ತಿಯು ನನಗೆ ಪ್ರಾಪ್ತವಾಗುವದು. ಆಗ ನಾನು ಪ್ರಸನ್ನಚಿತ್ತದಿಂದ ಸಕಲ ಭಯವನ್ನೂ ಸಂಕಟಗಳನ್ನೂ ಎದುರಿಸಬಲ್ಲೆನು. ಅಲ್ಲಿ ದೇವಘರದಲ್ಲಿ ಏಕಾಕಿಯಾಗಿ ನೀನು ಇರಬೇಕಾದುದರಿಂದ ನಿನಗೆ ಬಹಳ ಕಷ್ಟ-ವಾಗಿದೆಯೆಂಬುದನ್ನು ನಾನು ಬಲ್ಲೆ. ನೀನು ಒಂದಿಷ್ಟು ಸ್ಥಿರಚಿತ್ತದಿಂದ ಶ್ರದ್ಧಾ-ನ್ವಿತಳಾದರೆ ದುಃಖವು ನಿನ್ನನ್ನು ಕಂಗೆಡಿಸಲಾರದು. ನನ್ನೊಡನೆ ನಿನ್ನ ಮದುವೆ-ಯಾದುದರಿಂದ ಒಂದಿಲ್ಲೊಂದು ಬಗೆಯ ದುಃಖವು ಅನಿವಾರ್ಯವೆ ಆಗಿದೆ.

ಆಗೀಗ ಪ್ರಸಂಗ ಬಂದಂತೆ ಪ್ರತ್ಯೇಕ ಸ್ಥಳಗಳಲ್ಲಿಯೆ ನಾವಿಬ್ಬರು ಇರಬೇಕಾಗಿದೆ. ಇದರ ಕಾರಣವು ಸ್ಪಷ್ಟವೆ ಇದೆ. ಕುಟುಂಬದ ಜನರನ್ನೂ ಆಪ್ತೇಷ್ಟರನ್ನೂ ಸುಖಿಗಳನ್ನಾಗಿಯೂ ತೃಪ್ತರನ್ನಾಗಿಯೂ ಇಡಲು ಸದಾ ಪ್ರಯತ್ನಿಸುವ ಆದರ್ಶವನ್ನು ಇತರ ಸಾಮಾನ್ಯಜನರಂತೆ ನನ್ನೆದುರು ಇಟ್ಟುಕೊಳ್ಳಲು ನನಗೆ ಶಕ್ಯವಿಲ್ಲ. ಪರಿಸ್ಥಿ-ತಿಯು ಹೀಗಿರುವದರಿಂದ, ನಾನು ಸ್ವೀಕರಿಸಿದ ಪಥವೂ ಧರ್ಮವೂ ನಿನ್ನವೂ ಆಗಿವೆ. ನಾನಾಗಿ ಗೊತ್ತುಪಡಿಸಿಕೊಂಡ ನನ್ನೀ ಕಾರ್ಯದಲ್ಲಿ ನನಗೆ ದೊರೆಯುಬಹುದಾದ ಸಿದ್ಧಿಯಿಂದಲೆ ಶಕ್ಯವಿದ್ದಷ್ಟು ಸುಖವನ್ನು ಹಚ್ಚಿಕೊಳ್ಳಲು ಪ್ರಯತ್ನಿಸದೆ ನಿನಗೆ ಗತ್ಯಂತರವಿಲ್ಲ. ಇನ್ನೊಂದು ಮಾತು. ಈಗ ನೀನು ಯಾರ ಮಧ್ಯದಲ್ಲಿ ಇರುವಿಯೊ ಅವರಲ್ಲಿ ಬಹುಜನರು ನಮಗೆ ಹಿರಿಯರಾಗಿದ್ದಾರೆ. ಅವರು ನಿನಗೆ ಏನಾದರೂ ಕಟುಶಬ್ದಗಳನ್ನಾಡಿದರೆ, ಅನ್ನಬಾರದುದನ್ನು ಏನಾದರೂ ಒಂದು ವೇಳೆ ಅಂದರೆ ನೀನು ತಾಳಿಕೊಳ್ಳಬೇಕೇ ಹೊರತು ಎಂದೂ ಸಿಟ್ಟಿಗೇಳಕೂಡದು. ಅದನ್ನೆಲ್ಲಾ ಅವರು ಮನಃಪೂರ್ವಕವಾಗಿ ಅನ್ನುವರೆಂದಾಗಲಿ, ವಿಚಾರಗೆಟ್ಟ ಮಾತುಗಳನ್ನಾಡಿ ನಿನಗೆ ಉದ್ದೇಶಪೂರ್ವಕವಾಗಿ ತೊಂದರೆಕೊಡಬಯಸುವರೆಂದಾಗಲಿ ನೀನು ಭಾವಿಸಬೇಡ. ಸಿಟ್ಟುಬಂದಾಗ ಒಂದೆರಡು ಕೆಟ್ಟ ನುಡಿಗಳು ಬಾಯಿಂದ ಜಾರಿ ಬರುವವು. ಅವನ್ನೆ ಮನಸ್ಸಿಗೆ ಹಚ್ಚಿಕೊಂಡು ಛೇನಿಸುತ್ತ ಕೂಡಬೇಡ. ನಿನಗೆ ಅಲ್ಲಿರುವದು ಅಸಹ್ಯವೆ ಆಗಿದ್ದರೆ ಗಿರೀಶಬಾಬುವಿಗೆ ನಾನು ಬರೆಯುವೆ. ನಾನು ಕಾಂಗ್ರೆಸ್ಸಿನಲ್ಲಿ ಇರುವ ವರೆಗೆ ನಿನಗಾಗಿ ಬೇರೆ ಏರ್ಪಾಡನ್ನು ಅವನು ಮಾಡುವನು . . . .

ನಿನ್ನವನೆ . . . .'

ದೇವನಿಯೋಜಿತ ಕರ್ತವ್ಯಗಳ ಭಾರವು ಅವರ ಮೇಲೆ ಎಷ್ಟು ಬಿದ್ದಿತ್ತೆಂಬುದು ಈ ಪತ್ರದಿಂದ ನಮಗೆ ತಿಳಿದುಬರುತ್ತದೆ. ಅದರಂತೆ ತಮ್ಮ ಅಸಹಾಯ ಪತ್ನಿಯ ಬಗೆಗೆ ಅವರು ಎಷ್ಟೊಂದು ಚಿಂತಾಕ್ರಾಂತರಾಗಿ ಕೋಮಲಾಂತಃಕರಣದಿಂದ ಪತ್ರ ಬರೆದಿರುವರೆಂಬುದೂ ಸ್ಪಷ್ಟವೆ ಇದೆ. ಸತಿಯು ಪತಿಗೆ ಶಕ್ತಿಸ್ವರೂಪಳಾದುದರಿಂದ ಆಕೆ ಪತಿಯ ಧರ್ಮದಲ್ಲಿ ಹೃತ್ಪೂರ್ವಕವಾಗಿ ಸಹಭಾಗಿನಿಯಾದರೆ ಅವನು ಆಕೆಯಿಂದ ಅಗಾಧ ಬಲವನ್ನು ಪಡೆಯಬಲ್ಲನೆಂಬ ಅವರ ಕಲ್ಪನೆಯು ಈ ಪತ್ರದಲ್ಲಿಯೂ ಸ್ಪಷ್ಟವಾಗಿ ಒಡಮೂಡಿದ್ದು ಬಹುಶಃ ಜೀವನದ ಕೊನೆಯ ವರೆಗೂ ಅದು ಮುಂಬರಿಯಿತೆಂದು ತೋರುತ್ತದೆ. ಭಗವಂತನ ಶ್ರೀಚರಣಗಳಲ್ಲಿ ಸಮರ್ಪಿತವಾದ ತಮ್ಮ ಅತ್ಯುನ್ನತ ಜೀವನದ ಮೂಲಕ ಪತ್ನಿಗೆ ಒದಗಿದ ಪ್ರತ್ಯೇಕ ವಾಸ ಮೊದಲಾದ ಕಷ್ಟಗಳು ಅನಿವಾರ್ಯವೆಂದು ಅವರು ಅರಿಕೆ ಮಾಡಿಕೊಂಡಿದ್ದಾರೆ.

ಆ ಮೇಲೆ ಸುರತ ಕಾಂಗ್ರೆಸ್ಸು ಬಂತು. ಆದರೆ ಅವರ ಅಂತಃಶಾಂತಿಗೂ ಸಮತ್ವಭಾವಕ್ಕೂ ಚ್ಯುತಿ ಬರಲಿಲ್ಲ. ಮುಂದೇನಾಗುವದೆಂಬುದನ್ನು ಬಲ್ಲರೆಂಬಂತೆ ಜೀವನ ನಾಟ್ಯರಂಗದಲ್ಲಿ ಪ್ರವೇಶಿಸಿ ಬಿಟ್ಟು ತಮ್ಮ ಪಾತ್ರವನ್ನು ಪೂರ್ಣವಾಗಿ ವಹಿಸಿ

ತೋರಿಸಿದರು. ನಮಗೆ ಈಗಾಗಲೆ ಗೊತ್ತಿದ್ದಂತೆ ಸುರತ ಅಧಿವೇಶನದ ಕಾಲಕ್ಕೆ ಕಾಂಗ್ರೆಸ್ ಸಂಸ್ಥೆಯಲ್ಲಿ ಇಬ್ಬಣವಾದ ಮೂಲಕ ತಮ್ಮ ಪಕ್ಷದ ಸಮರ್ಥನೆಗಾಗಿ ಅವರು ಅನೇಕ ಸ್ಥಳಗಳನ್ನು ಸಂದರ್ಶಿಸಬೇಕಾಯಿತು; ಹಾಗೂ ಅದೇ ಕಾಲಕ್ಕೆ ಆಧ್ಯಾತ್ಮಿಕ ಸಮಸ್ಯೆಯೊಂದು ಅವರನ್ನು ಎದುರಿಸಿದುದರಿಂದ ಶ್ರೀ ಲೇಲೆಯವರು ಗ್ವಾಲ್ಹೇರದಿಂದ ಬಡೋದೆಗೆ ಧಾವಿಸಿ ಬರಬೇಕಾಯಿತು. ಈ ಯೋಗಿದ್ವಯದ ಮಿಲನವು ಶ್ರೀ ಅರವಿಂದರ ಆಧ್ಯಾತ್ಮಿಕ ಸಾಧನಾಕ್ರಮದಲ್ಲಿ ಒಂದು ದೊಡ್ಡ ಘಟ್ಟವೆ ಸರಿ.

ಶ್ರೀ ಅರವಿಂದರಿಗೆ ಈ ಮೊದಲು ಉಂಟಾದ ಅನುಭವಗಳ ವೃತ್ತಾಂತವನ್ನೂ ಅವರು ಈ ವರೆಗೆ ಕೈಕೊಂಡ ಸಾಧನೆಯ ಕ್ರಮವನ್ನೂ ಶ್ರೀ ಲೇಲೆಯವರು ಕೇಳಿಕೊಂಡರು. ಆ ಮೇಲೆ, ವೃತ್ತಿಗಳಿಂದ ಚಿತ್ತವನ್ನು ಮುಕ್ತಗೊಳಿಸಿ ಶೂನ್ಯಗೊಳಿಸಲಿಕ್ಕೆ ಪ್ರಯತ್ನಗೈಯಬೇಕೆಂಬುದಾಗಿ ಶ್ರೀ ಅರವಿಂದರಿಗೆ ಅವರು ಸಲಹೆಯನ್ನಿತ್ತರು. ಮೂರು ದಿನವೂ ಪ್ರಯತ್ನಗೈದ ಬಳಿಕ ಶ್ರೀ ಅರವಿಂದರಿಗೆ ಯಶಸ್ಸು ದೊರೆಯಿತು. ಚಿತ್ತವೃತ್ತಿಗಳೊಡನೆ ಅಹಂಕಾರವೂ ಹೊರಟಿದ್ದು ಹೋಯಿತು. ಪರಮನಿಷ್ಪಂದ ಭಾವವು ಉಂಟಾಗಿ ಸ್ಥಿರಶಾಂತಿ ಅವರೆಡೆಗೆ ಇಳಿದು ಬಂದು ಹೃದಯದ ಆಳದಲ್ಲಿ ನೆಲೆಯೂರಿತು. ಇಂಥ ಭಾವದ ಅನುಭೂತಿಯು ಈ ಮೊದಲು ಕೆಲ ಸಲ ಅವರಿಗೆ ಬಂದಿತ್ತು. ಈ ಬಗೆಯ ನಿಷ್ಪಂದ ಭಾವವನ್ನು ಬೆಂಬತ್ತಿ ಒಳದನಿಯೊಂದು ಕೇಳಿಸುವದೆಂದೂ ಅದಕ್ಕೆ ಸಿದ್ಧರಿರಬೇಕೆಂದೂ ಶ್ರೀ ಲೇಲೆಯವರು ಹೇಳಿದರು. ಆದರೆ ಅಂಥ ಯಾವ ದನಿಯೂ ತತ್ಕಾಲಕ್ಕೆ ಕೇಳಿಸಲಿಲ್ಲ. ಬಳಿಕ ಶ್ರೀ ಅರವಿಂದರು ಕಾರ್ಯಾರ್ಥಿಯಾಗಿ ಪುಣೆ-ಮುಂಬೈಗಳಿಗೆ ಹೊರಟರು; ಶ್ರೀ ಲೇಲೆಯವರನ್ನೂ ಜೊತೆಯಲ್ಲಿಯೆ ಕರೆದುಕೊಂಡು ಹೋದರು. ಕಾಲ-ಸ್ಥಲಾತೀತವಾದ ಪರಮ ಬ್ರಹ್ಮತತ್ತ್ವದ ಪೂರ್ಣ ನೀರವತೆಯನ್ನೂ ಅನಂತ ನಿಷ್ಪಂದತೆಯನ್ನೂ ಅನುಭವದಿಂದ ಅರಿತರು. ಆ ಅನುಭವದಲ್ಲಿ ಸಮಸ್ತ ಸೃಷ್ಟಿಯೂ ಶೂನ್ಯವಾಗಿ ಕಂಡಿತು. ಆ ನಿಷ್ಪಂದತೆಯೊಂದೆ ಏಕಮಾತ್ರ ಸದ್ವಸ್ತುವಾಗಿ ತೋರಿತು, ಉಳಿದುದೆಲ್ಲವೂ ಶೂನ್ಯವಾಗಿತ್ತು. ಆದರೆ ಇದರಿಂದ ಹೊಸ ಅಡಚಣೆಗಳು ಉಂಟಾದವು. ಸಾಧನೆಯು ಸಮಾಪ್ತವಾಯಿತೆಂದು ಶ್ರೀ ಅರವಿಂದರಾಗಲಿ ಶ್ರೀ ಲೇಲೆಯವರಾಗಲಿ ಭಾವಿಸಲಿಲ್ಲ. ಆ ಸಮಗ್ರ ಸದ್ವಸ್ತುವಿನ ಒಂದು ಭಾಗವು ಮಾತ್ರ ಇದಾಗಿತ್ತು. ಸತ್ತ್ವ (Being)ದ ಅನುಭವವು ಮಾತ್ರ ಇದಾಗಿತ್ತಲ್ಲದೆ ಸಂಭೂತಿ (Becoming)ಯ ಅನುಭವವು ಇದರಲ್ಲಿ ಇರಲಿಲ್ಲ. ಆ ಸದ್ವಸ್ತುವೆಂಬುದಾಗಲಿ ಸತ್ಯವೆಂಬುದಾಗಲಿ ಸತ್ತ್ವಸಂಭೂತಿಗಳಿಂದ ಕೂಡಿದುದಾಗಿ ಸಮಗ್ರವಾದುದಾಗಿರುತ್ತದೆ. ಈ ಬಗೆಯ ಅನುಭೂತಿಯೂ ಖಂಡಸಾಕ್ಷಾತ್ಕಾರವೂ ಉಂಟಾದ ಬಳಿಕ ತಮ್ಮ ಆಗಿನ ರಾಜಕೀಯ ಕಾರ್ಯಕಲಾಪಗಳನ್ನು ಮುಂದುವರಿಸುವದು ಅಸಾಧ್ಯವೆನಿಸದಿದ್ದರೂ ಕಠಿಣವಾಗಿಬಿಡುವದೆಂದು

ಶ್ರೀ ಅರವಿಂದರಿಗೆ ಕಂಡುಬಂದಿತು. ಆಗ ಶ್ರೀ ಲೇಲೆಯವರು ತಮ್ಮ ಅಂತರ್ಜ್ಞಾನದ ಪ್ರೇರಣೆಯ ಮೇರೆಗೆ ಶ್ರೀ ಅರವಿಂದರಿಗೆ ಒಂದು ಉಪಾಯವನ್ನು ಸೂಚಿಸಿದರು : ಅದಾವುದೆಂದರೆ, ಶ್ರೀ ಅರವಿಂದರು ತಮ್ಮ ಸಮಸ್ತ ಸಾಧನೆಯನ್ನೂ ಅಂತಃಪ್ರಭುವಿಗೆ ಪೂರ್ಣವಾಗಿ ಸಮರ್ಪಣಮಾಡಿ ಊರ್ಧ್ವದಿಕ್ಕಿನಿಂದ ಬರುವ ಆದೇಶದಂತೆ ನಡೆದುಕೊಳ್ಳಲು ಪ್ರಯತ್ನಿಸಬೇಕೆಂಬುದು. ಪ್ರಸ್ತುತ ಸಾಧನೆಯು ಮುಂದುವರಿಯಬೇಕಾದರೆ ಮೇಲಿನಿಂದ ಬರುವ ಆಂತರಿಕ ಆದೇಶವನ್ನು ಪಡೆಯುವದೆ ಉತ್ತಮ ಉಪಾಯವೆಂದು ಶ್ರೀ ಲೇಲೆಯವರು ತಮ್ಮ ಈ ಸಾಧಕಸ್ನೇಹಿತನಿಗೆ ಸಲಹೆಯಿತ್ತರು. ಶ್ರೀ ಅರವಿಂದರು ಇದಕ್ಕೆ ಸಮ್ಮತಿಸಿದರು. ಅವರ ಆತ್ಮಾರ್ಪಣೆಯು ರಾಜಕೀಯಕಾರ್ಯಕಲಾಪಗಳ ಸಂದರ್ಭದಲ್ಲಿ ಪ್ರಭುವಿನ ಸೂತ್ರದ ಬೊಂಬೆಮಾತ್ರವನ್ನಾಗಿ ಅವರನ್ನು ಈಗಾಗಲೆ ಪರಿವರ್ತಿಸಿತ್ತು. ತಮ್ಮ ಸಾಧನೆಯ ಸಂದರ್ಭದಲ್ಲಿಯೂ 'ಆತ'ನಿಗೇ ಪೂರ್ಣ ಮೊರೆಹೋಗಲು ಅಣಿಯಾಗುವ ಪ್ರಸಂಗವೊದಗಿತು. ಹೃದಯದ ಪ್ರಭುವೆ ಇನ್ನು ಮೇಲೆ ಗುರುವಾಗುವ ಪ್ರಸಂಗವದು. ಅಸಾಧಾರಣ ಶಿಷ್ಯನಿಗೆ ಅಸಾಧಾರಣ ಗುರುವೆ ದೊರೆತಂತಾಯಿತು.

ಶ್ರೀ ಅರವಿಂದರು ಕೈಕೊಂಡ ಪ್ರವಾಸದ ಕಾಲಕ್ಕೆ ಸಭೆಯಲ್ಲಿ ಶ್ರೋತೃವೃಂದದ ಎದುರಿಗೆ ನಿಂತಾಗ ಅವರ ಮನವೆಲ್ಲವೂ ಒಮ್ಮೊಮ್ಮೆ ಶೂನ್ಯವಾಗಿಬಿಡುತಿತ್ತು. ಆಗ ಏನು ಮಾಡಬೇಕೆಂಬ ಸಮಸ್ಯೆ ಉದ್ಭವಿಸಿತು. ಈ ಸಮಸ್ಯೆಗೆ ಪರಿಹಾರವೇನೆಂದು ಶ್ರೀ ಅರವಿಂದರು ಲೇಲೆಯವರಿಗೆ ಕೇಳಿದರು. ಆಗ ಆ ಮಾರ್ಗದರ್ಶಕರು ಕೊಟ್ಟ ಸಲಹೆ ಈಗಾಗಲೆ ನಮಗೆ ವಿದಿತವಿದೆ. ಆ ಸಲಹೆಯಂತೆ ಶ್ರೀ ಅರವಿಂದರು ನಡೆದು-ಕೊಂಡೊಡನೆ ಮನದ ಊರ್ಧ್ವದಿಶೆಯಲ್ಲಿರುವ ಉಗಮದೊಳಗಿಂದ ಯೋಗ್ಯ ಪದಗಳ ಪ್ರವಾಹವೆ ಹರಿದುಬರತೊಡಗಿತು. ಅನೇಕ ವರ್ಷಗಳ ಹಿಂದೆ ಚಿಕ್ಯಾಗೊ ನಗರದಲ್ಲಿ ಸೇರಿದ ಸರ್ವಧರ್ಮಗಳ ಪಾರ್ಲಿಮೆಂಟಿನ ಕಾಲಕ್ಕೆ ವಿವೇಕಾನಂದರಿಗೂ ಇದೇ ಬಗೆಯ ಅನುಭವವು ಉಂಟಾಗಿತ್ತೆಂದು ತಿಳಿದುಬರುತ್ತದೆ. ಶ್ರೀ ಅರವಿಂದರಲ್ಲಾದರೂ ಅಹಂಕಾರದ ಉಗಮವೆಲ್ಲ ಬತ್ತಿಹೋಗಿ ಶ್ರೇಷ್ಠ ಬುಗ್ಗೆಯೊಂದು ರಭಸದಿಂದ ನುಗ್ಗಿಬಂತು. ಆಗ ಕಾಲೋಚಿತ ಕಲ್ಪನೆಗಳು ಕಾರಂಜಿಯಂತೆ ಪುಟಪುಟಿಯತೊಡಗಿ ಸಮಂಜಸ ಶಬ್ದಗಳು ತಾನೆತಾವಾಗಿ ಸೂಸಿ ಬರತೊಡಗಿದವು. ಅಂದಿನಿಂದ ಅವರ ರಾಷ್ಟ್ರೀಯತೆ ಅಧ್ಯಾತ್ಮಭೂಯಿಷ್ಠವಾಯಿತು ; ಅವರ ರಾಜನೀತಿ ಮತ್ತಷ್ಟು ಪವಿತ್ರವಾಯಿತು.

ಈ ಬಗೆಯ ಅನುಭವ ಬರುವದು ಅಪರೂಪವೂ ಅಲ್ಲ, ಸೋಜಿಗವೂ ಅಲ್ಲ. ಆದರೆ ಅದನ್ನು ಎಷ್ಟೊಂದು ತೀವ್ರವಾಗಿ ಶ್ರೀ ಅರವಿಂದರು ಸಾಧಿಸಿಕೊಂಡರೆಂಬುದೆ ನಿಜವಾಗಿ ವಿಸ್ಮಯಕಾರಕವಾಗಿದೆ. ಶೂನ್ಯದ ಅನುಭವವು ಅನೇಕ ಗ್ರಂಥಗಳಲ್ಲಿ ವರ್ಣಿತವಾಗಿದೆ. ಈ ಸ್ಥಿತಿಯನ್ನು ಮೀರಿಹೋದರೆ ಅಖಂಡ ಸತ್ಯದ ಅರಿವು

ಉಂಟಾದೀತೆಂದು ಸೂಚಿತವಾಗಿದೆ. ವ್ಯಕ್ತಿಯ ಚೇತನವು ಹೀಗೆ ಪೂರ್ಣವೂ ಶಾಶ್ವತವೂ ಆದ ನಿಷ್ಪಂದತೆಯನ್ನು ತಳೆದೊಡನೆಯೆ, ಕೆಲ ಕ್ಷಣಗಳ ಹಿಂದೆಯೆ ಸ್ಪರ್ಶವೇದ್ಯವೂ ಸಾಕಾರವೂ ಆದ ಈ ಜಗತ್ತು ಒಮ್ಮೆಲೆ ಕಣ್ಮರೆಯಾಗಿ ಇಲ್ಲ-ದಂತಾಗುವ ಅನುಭವವು ಆ ನಿಷ್ಪಂದತೆಯನ್ನು ಬೆಂಬತ್ತಿ ಬರುವದು. ಆದರೆ ಇದು ಕೇವಲ ನಿಷೇಧಾತ್ಮಕ ಅನುಭವವು. ಸದ್ವಸ್ತುವು ಕೇವಲ ಶೂನ್ಯವಾಗಿಲ್ಲ. ಅದು ಅಸ್ತಿತ್ವವನ್ನು ತಾಳಿ ಸತ್ತ್ವವೆಂದೂ ಅನಿಸಿಕೊಂಡಿದೆ. ಸಚ್ಚಿದಾನಂದವೆಂದು ಅದನ್ನು ವರ್ಣಿಸುತ್ತಾರೆ. ಕೆಲವು ತಿಂಗಳುಗಳು ಕಳೆದೊಡನೆ ಶ್ರೀ ಅರವಿಂದರು ಅಲಿಪುರ ಸೆರೆಮನೆಯಲ್ಲಿ ಕಾಲಕಳೆಯಬೇಕಾಯಿತು. ಆ ಅವಧಿಯಲ್ಲಿ, ಅದೇ ಪರಮಾತ್ಮ-ತತ್ತ್ವವು ಪರಿಪೂರ್ಣವೂ ಸರ್ವಾಂತರ್ಯಾಮಿಯೂ ಆಗಿದೆಯೆಂಬ ನಿಶ್ಚಯಾತ್ಮಕ ಅನುಭವವೂ ಅವರಿಗೆ ಪ್ರಾಪ್ತವಾಯಿತು.

ಶ್ರೀ ಅರವಿಂದರು ಶ್ರೀ ಲೇಲೆಯವರಿಗೆ ಸದಾ ಕೃತಜ್ಞರಾಗಿದ್ದು ಅವರ ಹೆಸರನ್ನು ಬಹು ಗೌರವಪೂರ್ವಕವಾಗಿ ಉಲ್ಲೇಖಿಸಿದ್ದಾರೆ. ಆ ಮಾರ್ಗದರ್ಶಕರು ತಮಗೆ ಮೂರು ಸಂಗತಿಗಳನ್ನು ಒದಗಿಸಿಕೊಟ್ಟರೆಂದು ಒಮ್ಮೆ ಸ್ಪಷ್ಟವಾಗಿ ಹೇಳಿದ್ದಾರೆ: (ಅ) ನಿಷ್ಪಂದ ಚಿತ್ತದ ಬಹು ಸ್ಫುಟವಾದ ಚೊಕ್ಕ ಅನುಭವ ಮತ್ತು ಅಪಾರವೂ ಅನಂತವೂ ಅಮಿತವೂ ಆದ ಬ್ರಹ್ಮಚೇತನದ ಕೈವಲ್ಯಾನುಭವ (ಆ) ಚಿತ್ತದ ಸಹಾಯವಿಲ್ಲದೆ ಮಾತನಾಡುವ ಹಾಗೂ ಬರೆಯುವ ಶಕ್ತಿ ಮತ್ತು (ಇ) ಚಿತ್ತದ ಮೇಲಕ್ಕಿರುವ ಉಚ್ಚ ಶಕ್ತಿಯ ನಿರ್ದೇಶನಕ್ಕೆ ಒಳಗಾಗುವ ಅಭ್ಯಾಸ. ಇದೆಲ್ಲವೂ ೧೯೦೮ರ ಫೆಬ್ರುವರಿಯೊಳಗಾಗಿ ಘಟಿಸಿತು. ಅದೇ ಕಾಲಕ್ಕೆ ಬಾರೀಂದ್ರರು ಬಂಗಾಲ ದಲ್ಲಿಯ ತಮ್ಮ ಕ್ರಾಂತಿಕಾರಕ ಯುವಕವೃಂದಕ್ಕೆ ಆಧ್ಯಾತ್ಮಿಕ ತರಬೇತಿಯನ್ನು ಒದಗಿಸುವ ಉದ್ದೇಶದಿಂದ ಲೇಲೆಯವರನ್ನು ಕಲಕತ್ತೆಗೆ ಆಮಂತ್ರಿಸಿದರು. ಅವರು ಕೆಲದಿನಗಳ ಮಟ್ಟಿಗೆ ಶೀಲಮನೆತನದವರ ನಿವಾಸದಲ್ಲಿ ಉಳಿದುಕೊಂಡಿದ್ದರು. ಆಗ ನಡೆದ ಮಾತುಕತೆಗಳ ಫಲವಾಗಿ ಶ್ರೀ ಅರವಿಂದರು ಆಗ ಬೆಂಬತ್ತಿರುವ ಧ್ವನಿಯು ಅಸುರೀ ಧ್ವನಿಯೆಂದು ಲೇಲೆಯವರಿಗೆ ಭಯವೆನಿಸಿತು. ಅದೇ ಧ್ವನಿಯನ್ನು ಶ್ರೀ ಅರವಿಂದರು ಇನ್ನು ಮುಂದೆಯೂ ಬೆಂಬತ್ತುವದಾದರೆ ಅವರಿಗೆ ಮಾರ್ಗದರ್ಶನ ಮಾಡುವ ಹೊಣೆಯನ್ನು ತಾವು ಹೊರುವದು ಸಾಧ್ಯವಿಲ್ಲವೆಂದು ಉದ್ಗಾರ ತೆಗೆದರು. ಆಗ ಆ ಹೊಣೆಯಿಂದ ಅವರನ್ನು ಶ್ರೀ ಅರವಿಂದರು ಮುಕ್ತಮಾಡಿ ಕೇವಲ ತಮ್ಮ ಅಂತರ್ವಾಣಿಯನ್ನೆ ಪೂರ್ಣವಾಗಿ ಮತ್ತೆ ಮೊರೆ ಹೊಕ್ಕರು. ಇಂತು ಈ ಯೋಗ ಸಾಧನೆಯ ನಿಮಿತ್ತದಿಂದ ಈ ಎರಡು ಜೀವಗಳ ನಡುವೆ ಉಂಟಾದ ಮಧುರ ಬಾಂಧವ್ಯವು ಇಲ್ಲಿಗೆ ಮುಕ್ತಾಯವಾಯಿತು.

ಶ್ರೀ ಅರವಿಂದರಿಗೆ ಕಾರ್ಯಭಾರವು ಅತಿಶಯವಾಗಿತ್ತೆಂಬುದನ್ನು ಈಗಾಗಲೆ ನಾವು ಬಲ್ಲೆವು. ವಿಚಿತ್ರ ರೀತಿಯಲ್ಲಿ ಪರಿಹಾರವು ಬಂದೊದಗಿತು. ಆಕಸ್ಮಿಕ

ವೆಂಬಂತೆ ಘಟನೆಗಳು ಜರುಗಿ ಮೇ ೧೯೦೮ರಲ್ಲಿ ಅವರನ್ನು ಸರಕಾರದವರು ಸೆರೆ ಹಿಡಿದರು. ಅಲಿಪುರ ಸೆರೆಮನೆಗೆ ಅವರನ್ನು ಕೊಂಡೊಯ್ಯಲಾಯಿತು. ಅಲ್ಲಿ ಒಂದು ವರ್ಷದ ವರೆಗೆ ಅವರು ಇರುವ ಪ್ರಸಂಗ ಬಿತ್ತು. ಯಾವ ಸೆರೆಮನೆಯೂ ಸುಖ-ನಿವಾಸವಾಗಲಾರದು. ಅನೇಕ ಕಷ್ಟಗಳನ್ನು ಅವರು ಅನುಭವಿಸಬೇಕಾಯಿತು. ಅನೇಕ ತಿಂಗಳುಗಳ ವರೆಗೆ ಸಾಮಾನ್ಯ ಕೈದಿಗಳ ಹಿಂಡಿನಲ್ಲಿಯೆ ಇರುವ ದುರ್ಧರ ಪ್ರಸಂಗವೂ ಬಂದು ಹೋಯಿತು. ಆದರೆ ಈ ಎಲ್ಲ ಪ್ರಸಂಗಗಳಲ್ಲಿ ಚಿತ್ತದ ಸಮತ್ವವನ್ನು ಅವರು ಕಳೆದುಕೊಳ್ಳಲಿಲ್ಲ. ಸೆರೆಮನೆಯ ಈ ವಾಸವನ್ನೆ ತಮ್ಮ ಅಖಂಡ ಸಾಧನೆಗೆ ಸುಯೋಗ್ಯ ಸಂಧಿಯನ್ನಾಗಿ ಮಾರ್ಪಡಿಸಿಕೊಂಡರು.

ಈ ಬಂಧಿತ ಜೀವನಾವಧಿಗೆ 'ಆಶ್ರಮವಾಸ'ವೆಂದು ಸ್ವತಃ ಶ್ರೀ ಅರವಿಂದರೆ ಕರೆದಿದ್ದಾರೆ. ತಮ್ಮ 'ಕಾರಾಕಾಹಿನಿ' ಎಂಬ ಪುಸ್ತಕದಲ್ಲಿ ಸೆರೆಮನೆಯ ವಾಸದ ಕಥೆಯನ್ನು ಹೇಳುತ್ತ ಕೊನೆಯಲ್ಲಿ ಹೀಗೆ ಉದ್ಗಾರ ತೆಗೆದಿದ್ದಾರೆ : 'ಅದರ ಒಂದೇ ಒಂದು ಫಲವೆಂದರೆ ನಾನು ದೇವರನ್ನು ಕಂಡೆ.' (ಈ ಪುಸ್ತಕವು ಬಂಗಾಲಿಯಲ್ಲಿ ಬರೆಯಲ್ಪಟ್ಟಿದ್ದು ಅದೊಂದು ಚಿತ್ತಾಕರ್ಷಕ ದಾಖಲೆಯಾಗಿದೆ) ಅಲ್ಲಿ ದೊರೆತ ಸಿದ್ಧಿಗಾಗಿ ಅವರ ಈ ವಿಶಿಷ್ಟಸಾಧನಕ್ಕೆ ಒಂದು ಮಹತ್ವವುಂಟು. ಈ ಕೈಸೆರೆಯೆಂಬುದು ಅನಪೇಕ್ಷಿತವಾಗಿ ಘಟಿಸಿ ದೇವರ ಕಾರ್ಯಕ್ಕೆ ವಿಘ್ನವಾಯಿತಲ್ಲಾ ಎಂದು ಮೊದಮೊದಲು ಸ್ವಲ್ಪಕಾಲ ಅವರ ಶ್ರದ್ಧೆ ಚಲವಿಚಲಿತವಾಯಿತೆಂದು ಅವರು ಹೇಳುತ್ತಾರೆ. ಆದರೆ ಮೂರು ದಿನಗಳ ಅನಂತರದಲ್ಲಿ ಧ್ವನಿಯೊಂದು ಕೇಳಿಸಿತು. 'ತಾಳು ; ನೋಡುತ್ತಿರು' ಎಂದು ಅದು ಹೇಳಿತು. ತಮ್ಮ ಈ ಬಂಧನಕ್ಕಿಂತ ಒಂದು ತಿಂಗಳೊಪ್ಪತ್ತು ಮುಂಚೆ 'ಏಕಾಂತದಲ್ಲಿದ್ದು ಅಂತರ್ಮುಖಿಯಾಗೆ'ಂದು ಹೇಳುವ ಒಂದು ಒಳದನಿಯು ತಮಗೆ ಕೇಳಿಸಿತ್ತೆಂದೂ ಅದನ್ನು ತಾವು ದುರ್ಲಕ್ಷಿಸಿದೆವೆಂದೂ ಆಗ ಸ್ಮರಣೆಗೆ ಬಂತು. ದೇವರ ಮಾತನ್ನು ಉಲ್ಲಂಘಿಸಿದುದರ ಪರಿಣಾಮವೆ ಈ ಬಂಧನ! ದೇವರ ರಾಜ್ಯದಲ್ಲಿಯೂ ಶಾಸನೋಲ್ಲಂಘನಕ್ಕಾಗಿ ವಿಧಿಸುವ ದಂಡನೆ ಕಾರಾಗೃಹವಾಸವೆ ಎಂದು ತೋರುತ್ತದೆ. ಗೀತೆ-ಉಪನಿಷತ್ತುಗಳನ್ನು ಜೊತೆ-ಯಲ್ಲಿಟ್ಟುಕೊಳ್ಳಲು ಸರಕಾರದಿಂದ ಅಪ್ಪಣೆ ದೊರೆಯಿತು. ಆ ಗ್ರಂಥಗಳೆ ಅವರ ಸತತಸ್ನೇಹಿತರಾದವು. ಈ ಕಾಲಾವಧಿಯನ್ನು ಕುರಿತು ಮಾಡಿದ ಒಂದು ಭಾಷಣದಲ್ಲಿ ('Speeches and Writings : ಭಾಷಣಗಳೂ ಲೇಖನಗಳೂ, ಪುಟ ೯೦) ಅವರು ಹೀಗೆ ಹೇಳುತ್ತಾರೆ. 'ಆತನ (ಶ್ರೀಕೃಷ್ಣನ) ಬಲವು ನನ್ನಲ್ಲಿ ಪ್ರವೇಶಿಸಿತು; ಇಂತು ಗೀತೆಯಲ್ಲಿ ಉಕ್ತವಾದ ಸಾಧನೆಯನ್ನು ಗೈಯಲು ನಾನು ಸಮರ್ಥನಾದೆ.' ಮತ್ತೊಂದು ಭಾಷಣದಲ್ಲಿ (ಅದೇ ಪುಸ್ತಕ, ಪುಟ ೯೨—೯೩) ಅವರು ಹೀಗೆ ಉಲ್ಲೇಖಿಸಿದ್ದಾರೆ.

'ಮನುಷ್ಯಸಂಪರ್ಕವಿಲ್ಲದಂತೆ ನನ್ನನ್ನು ದೂರ ಇರಿಸಿದ ಆ ಸೆರೆಮನೆಯನ್ನು

ನಾನು ನಿಟ್ಟಿಸಿ ನೋಡಿದೆ. ಆಗ ಆ 'ಜೇಲಿ'ನ ಬಹು ಎತ್ತರದ ಗೋಡೆಗಳಿಂದ ನಾನು ಬಂಧಿತನಾಗಿರಲಿಲ್ಲ; ಖಂಡಿತವಾಗಿಯೂ ಇಲ್ಲ. ವಾಸುದೇವನೆ ನನ್ನನ್ನು ಸುತ್ತುಗಟ್ಟಿದ್ದನು. ನನ್ನ ಕೋಣೆಯ ಎದುರಿಗಿರುವ ಗಿಡದ ಟೊಂಗೆಗಳ ಬುಡದಲ್ಲಿ ನಾನು ಅಡ್ಡಾಡುತಿರುವಾಗ ಆ ಗಿಡವು ಗಿಡವಾಗಿರದೆ ವಾಸುದೇವನೆ ಅಲ್ಲಿದ್ದನೆಂದು ನಾನು ಅರಿತೆ. ನನ್ನ ಮೇಲೆ ತನ್ನ ನೆರಳನ್ನು ಹರಹುತ್ತ ಶ್ರೀಕೃಷ್ಣನೆ ಅಲ್ಲಿ ನಿಂತಿದ್ದನೆಂಬುದನ್ನು ನಾನು ಕಂಡೆ. ನನ್ನ ಕೋಣೆಯ ಬಾಗಿಲದಂತಿರುವ ಕಬ್ಬಿಣದ ಸಲಾಕೆಗಳತ್ತ ನಾನು ದಿಟ್ಟಿಸಿ ನೋಡಿದೆ. ಮತ್ತೆ ವಾಸುದೇವನ ದರ್ಶನವೆ ನನಗಾಯಿತು. ನನ್ನನ್ನು ಕಾಯುತ್ತ ಕಾವಲುಗಾರನಾಗಿ ನಿಂತವನು ನಾರಾಯಣನೆ ಆಗಿದ್ದನು. ನನಗೆ ಕೊಟ್ಟ ಆ ಹುರಬರಕು ದಪ್ಪ ಕಂಬಳಿಗಳ ಮೇಲೆ ನಾನು ಮಲಗಿದಾಗ ನನ್ನ ಸುತ್ತಲೂ ಶ್ರೀಕೃಷ್ಣನ ತೋಳುಗಳ ಸ್ಪರ್ಶ ನನಗಾಯಿತು. ಪ್ರಾಣಸಖನ ಪ್ರಾಣಕಾಂತನ ತೋಳುಗಳ ಸ್ಪರ್ಶವದು. ಭಗವಂತನು ನನಗಿತ್ತ ಅಂತರ್ದೃಷ್ಟಿಯ ಪ್ರಥಮ ಉಪಯೋಗವೆ ಅದು. ಜೇಲಿನಲ್ಲಿ ಸೆರೆಯಾಳುಗಳಾದ ಕಳ್ಳರು-ಕೊಲೆಗಡಕರು-ದ್ರೋಹಿಗಳು ಇವರೆಲ್ಲರನ್ನೂ ನಾನು ನಿಟ್ಟಿಸಿ ನೋಡಿದೆ. ಇವರನ್ನು ನೋಡುತಿರುವಾಗ ವಾಸುದೇವನೆ ನನಗೆ ಕಾಣುತಿದ್ದ. ಈ ಎಲ್ಲ ಪತಿತರ ಅಂಧಃಕಾರಮಯ ಆತ್ಮಗಳಲ್ಲಿಯೂ ದುರುಪಯೋಗಗೊಳಿಸಿದ ದೇಹಗಳಲ್ಲಿಯೂ ನಾರಾಯಣನನ್ನೆ ನಾನು ಕಂಡೆ.'

ಸೆರೆಮನೆಯ ಜೀವನವೃತ್ತಾಂತವನ್ನು ಅವರು ಹೀಗೆ ಬಣ್ಣಿಸುತ್ತಾರೆ: '. . . . . ಭಗವಂತನು ಪ್ರತಿದಿನವೂ ತನ್ನ ಆಶ್ಚರ್ಯಗಳನ್ನು ತೋರಿ ಹಿಂದೂ ಧರ್ಮದ ಪರಮ ಸತ್ಯದ ಸಾಕ್ಷಾತ್ಕಾರವು ನನಗಾಗುವಂತೆ ಆತನೆ ಮಾಡಿದನು. ಈ ಮೊದಲು ನನ್ನ ತಲೆಯಲ್ಲಿ ಅನೇಕ ಸಂಶಯುಗಳಿದ್ದವು. ನನ್ನ ಬಾಲ್ಯವು ಇಂಗ್ಲಂಡದಲ್ಲಿಯ ಸಂಪೂರ್ಣ ಪರಕೀಯ ವಾತಾವರಣದಲ್ಲಿ ಪರಕೀಯ ಕಲ್ಪನೆಗಳ ಮಧ್ಯದಲ್ಲಿಯೆ ಕಳೆಯಿತು. . . . . . . . . ಆದರೆ ಈಗ ದಿನದಿನವೂ ಕಳೆದಂತೆ ಹಿಂದೂ ಧರ್ಮದ ಸತ್ಯ-ಸಿದ್ಧಾಂತಗಳು ನನ್ನ ದೇಹದಲ್ಲಿ ಬಿಂಬಿಸಿ ಅವುಗಳ ಅರಿವು ನನಗಾಯಿತು. ಅವೆಲ್ಲವೂ ನನಗೆ ಜಾಗ್ರತ ಅನುಭವಗಳಾಗಿ ಪರಿಣಮಿಸಿದವು. ಯಾವ ಭೌತಿಕ ಶಾಸ್ತ್ರವೂ ತಿಳಿಸಿ ಹೇಳಲಾರದ ಅನೇಕ ಮಾತುಗಳ ದರ್ಶನವು ನನಗಾಯಿತು.'

ಸ್ವಂತ ಸಾಹಸದ ಜೊತೆಯಲ್ಲಿ ಭಗವತ್ಕೃಪಾಪ್ರಾಪ್ತಿಯೂ ಸಿದ್ಧಿಯಲ್ಲಿ ಮುಖ್ಯವಾದ ಒಂದು ಅಂಶವಾಗಿದೆಯೆಂದು ಅವರಿಗೆ ಪೂರ್ಣವಾಗಿ ಅನುಭವಕ್ಕೆ ಬಂತು. ಉಪನಿಷತ್ತುಗಳಲ್ಲಿ ಸಹ ಈ ಬಗೆಯ ಕೃಪೆಯು ಉಲ್ಲೇಖಿತವಾಗಿದೆ: 'ಯಮೇವೈಷಾ ವೃಣುತೇ ತೇನ ಲಭ್ಯಃ'—ಆತನ ಕೃಪೆಯು ಯಾರನ್ನು ಹುಡುಕಿಕೊಂಡು ಬರುವದೊ ಅವರೆ ಸತ್ಯವನ್ನು ಅರಿಯುವರು.



ದಿವ್ಯಾತ್ಮವು ಜಡದೇಹವನ್ನು ಬಿಡಲು ನಿಶ್ಚಯಿಸಿದಾಗ



ಶ್ರೀ ಅರವಿಂದರ ಸಮಾಧಿ



ತಾಯಿಯವರು



ಪಾಂಡಿಚೆರಿಯ ಪುಣ್ಯಾಶ್ರಮ

ಆಲಿಪುರ ಸೆರೆಮನೆಯಲ್ಲಿದ್ದಾಗ ಜರುಗಿದ ಒಂದೆರಡು ಚಿಕ್ಕವಾದರೂ ಮಹತ್ವದ ಸಂಗತಿಗಳನ್ನು ಇಲ್ಲಿ ಉಲ್ಲೇಖಿಸಬೇಕಾಗಿದೆ; ಏಕೆಂದರೆ ಶ್ರೀ ಅರವಿಂದರ ಸಾಧನೆಗೆ ಅವು ನೇರವಾಗಿ ಸಂಬಂಧಿಸಿವೆ. ಸಹಬಂದಿಯಾದ ಉಪೇಂದ್ರನೆಂಬವನು ಒಮ್ಮೆ ಶ್ರೀ ಅರವಿಂದರಿಗೆ 'ಕೂದಲಿಗಾಗಿ ಎಣ್ಣೆಯನ್ನು ಎಲ್ಲಿಂದ ಪಡೆಯುವಿರಿ' ಎಂದು ಕೇಳಿದನಂತೆ. ಅವರ ಕೂದಲು ಬಹಳ ಕಪ್ಪಾಗಿದ್ದು ಮಿರಿಮಿರಿ ಮಿಂಚುತಿದ್ದುದರಿಂದ ಎಲ್ಲಿಂದಾದರೂ ಎಣ್ಣೆಯನ್ನು ಅವರು ಪಡೆಯುತಿರಬೇಕೆಂದು ಉಪೇಂದ್ರನು ಖಚಿತವಾಗಿ ನಂಬಿದ್ದನು. ಆದರೆ ಕೂದಲಿಗೆ ಬಂದ ಆ ಕಾಂತಿ ಯೋಗಾಭ್ಯಾಸದ ಫಲವಾಗಿತ್ತು. ಇನ್ನೊಂದು ದಿನ, ಅವರು ತಮ್ಮ ಕೋಣೆಯಲ್ಲಿ ವಿಚಿತ್ರವಾದೊಂದು ಆಸನದಲ್ಲಿ ಇದ್ದುದು ಕಂಡುಬಂತು. ಒಂದು ಮೊಳಕಾಲಿನ ಒಂದೆ ಸಂದು ನೆಲಕ್ಕೆ ಹತ್ತಿ ಅಷ್ಟೆ ಆಧಾರದ ಮೇಲೆ ಅವರ ಇಡಿ ದೇಹವು ನಿಂತಿತ್ತು. ಇದು ಯೋಗಾಭ್ಯಾಸದಲ್ಲಿ ಬರುವ 'ಲಘಿಮಾ' ಸಿದ್ಧಿಯ ಫಲವಾಗಿತ್ತು. ಆ ವಿಚಿತ್ರ ಸ್ಥಿತಿಯಲ್ಲಿ ದೇಹವನ್ನು ನಿಲ್ಲಿಸುವದು ಎಷ್ಟೆ ಪ್ರಯತ್ನಪಟ್ಟರೂ ಯಾರಿಗೂ ಆಗದ ಮಾತು. ಅಲ್ಲಿದ್ದ ಕಾವಲುಗಾರರಲ್ಲಿ ಒಬ್ಬನು ಈ ವಿಲಕ್ಷಣ ದೃಶ್ಯವನ್ನು ಕಂಡು ಬೆರಗಾಗಿ, ಈ ಸಂಗತಿಯನ್ನು ಮೇಲಧಿಕಾರಿಗೆ ವರದಿ ಮಾಡಲು ಓಡಿಹೋದನು; ಆಗ ಶ್ರೀ ಅರವಿಂದರಿಗೆ ನಡೆಯುತ್ತಿರುವ ಘಟನೆಯ ಅರಿವು ಉಂಟಾಯಿತು. ಮೇಲಧಿಕಾರಿಯು ಕೋಣೆಗೆ ಬರುವಷ್ಟರಲ್ಲಿ ಶ್ರೀ ಅರವಿಂದರ ದೇಹವು ವಾಡಿಕೆಯ ಸ್ವಾಭಾವಿಕ ಸ್ಥಿತಿಯಲ್ಲಿಯೆ ಇತ್ತು. ನಡೆದದ್ದೇನು ಎಂದು ಅಧಿಕಾರಿಯು ಪ್ರಶ್ನಿಸಿದಾಗ ಶ್ರೀ ಅರವಿಂದರು ನಕ್ಕುಬಿಟ್ಟರು.

ಸೆರೆಮನೆಯಿಂದ ಬಿಡುಗಡೆ ಹೊಂದಿದೊಡನೆ ಸ್ಪಷ್ಟವಾಗಿ ಕಂಡುಬಂದ ಸ್ಥಿತ್ಯಂತರವೆಂದರೆ ಅವರ ದೃಷ್ಟಿಕೋನವೆ ಬದಲಾಗಿತ್ತು, ಅವರ ಆಧ್ಯಾತ್ಮಿಕತೆ ಹೆಚ್ಚು ಗಭೀರವಾಗಿತ್ತು. ಈ ಮಾತು ಅವರ ಉತ್ತರಪಾರಾ ಉಪನ್ಯಾಸದಲ್ಲಿಯ ಈ ಕೆಲವು ಸಾಲುಗಳಲ್ಲಿ ಒಡೆದುಕಾಣುತ್ತದೆ: 'ಇದಕ್ಕೂ ಮುಂಚೆ ಒಮ್ಮೆ ನಾನಿಲ್ಲಿ ಮಾತನಾಡಿದಾಗ ಈ ಆಂದೋಲನವು ರಾಜಕೀಯ ಆಂದೋಲನವಲ್ಲವೆಂದೂ ರಾಷ್ಟ್ರೀಯತ್ವವೆಂದರೆ ರಾಜಕಾರಣವಲ್ಲವೆಂದೂ ಅದೊಂದು ಧರ್ಮ-ಧ್ಯೇಯ-ಶ್ರದ್ಧೆಯೆಂದೂ ನಾನು ಇಷ್ಟೇ ಶಕ್ತಿಯುತವಾಗಿ ಹೇಳಿದುದು ಸ್ಮರಣೆಗೆ ಬರುತ್ತದೆ. ಅದನ್ನೆ ಇಂದು ನಾನು ಪುನಃ ಉಚ್ಚರಿಸುತ್ತೇನೆ. ಆದರೆ ಮತ್ತೊಂದು ರೀತಿಯಲ್ಲಿ ಅದನ್ನು ಇಡಬಯಸುತ್ತೇನೆ. ರಾಷ್ಟ್ರೀಯತ್ವವೆಂದರೆ ಒಂದು ಧರ್ಮ-ಧ್ಯೇಯ-ಶ್ರದ್ಧೆಯೆಂದು ಇನ್ನು ಮುಂದೆ ನಾನು ಹೇಳುವದಿಲ್ಲ; ಆದರೆ ಸನಾತನಧರ್ಮವೆ ನಮಗೆ ರಾಷ್ಟ್ರಧರ್ಮವೆಂದು ನಾನೀಗ ಅನ್ನುತ್ತೇನೆ.'

ಸೆರೆಮನೆಯಲ್ಲಿ ಸಂಭವಿಸಿದ 'ಶ್ರೀಕೃಷ್ಣದರ್ಶನ'ದ ಪರಿಣಾಮವು ಅತ್ಯಂತ ಅಮೋಘವೂ ಪ್ರಭಾವಶಾಲಿಯೂ ಆಗಿತ್ತು. ಅದರ ಛಾಯೆ ಅವರ ಲೇಖನ-ಭಾಷಣ

ಗಳಲ್ಲಿಯೂ ಮನಃಪ್ರವೃತ್ತಿಯಲ್ಲಿಯೂ ಮೂಡಿರುತ್ತದೆ. ಈ ಪರಿಣಾಮದ ಆ ಪ್ರಭಾವವು ಮುಂದೆ ಅವರು ಚಂದ್ರನಗರ-ಪಾಂಡಿಚೇರಿಗಳತ್ತ ತೆರಳುವ ವರೆಗೂ ಇತ್ತು.

ತರುವಾಯದ ಸುಮಾರು ಒಂದು ವರ್ಷದ ಅವಧಿಯಲ್ಲಿ ಈ ಮುಂಚಿನ ವರ್ಷಗಳಲ್ಲಿ ನಡೆದಂಥ ಹಲವಾರು ಕಾರ್ಯಕಲಾಪಗಳು ಮತ್ತೆ ಸಾಗಿದವು. ಈಗ ಒಂದು ಅಂತರವಿತ್ತು. 'ಯೋಗಃ ಕರ್ಮಸು ಕೌಶಲಂ (ಕರ್ಮಗಳಲ್ಲಿ ಕಂಡುಬರುವ ಕೌಶಲ್ಯವೆ ಯೋಗವು)' ಎಂಬುದೆ ಅವರು ಹೊಸದಾಗಿ ಹೊರಡಿಸಿದ 'ಕರ್ಮಯೋಗಿನ್' ಪತ್ರಿಕೆಯ ಧ್ಯೇಯವಾಕ್ಯವಾಗಿತ್ತು. 'ವೇದಾಂತ-ಯೋಗಗಳನ್ನು ಜೀವನದಲ್ಲಿ ಪ್ರಯೋಗಿಸಿ ತೋರಿಸುವದಲ್ಲದೆ ಕರ್ಮಯೋಗವೆಂದರೆ ಬೇರೇನು' ಎಂದು ಅವರು ಪ್ರಶ್ನೆ ಹಾಕಿದುದುಂಟು. ಇನ್ನೊಂದು ಪ್ರಸಂಗದಲ್ಲಿ ಅವರು ಅಂದುದು ಹೀಗಿದೆ: 'ಜ್ಞಾನ-ಭಕ್ತಿ-ಕರ್ಮಗಳಿಗಾಗಿ ಭಗವಂತನೊಡನೆ ಸಮರಸವಾಗುವದೆ ಯೋಗ'. ಭಾರತದ ಸಾಂಸ್ಕೃತಿಕ ಪರಂಪರೆಯಲ್ಲಿ ಪುನಃ ಪ್ರಾಣಪ್ರತಿಷ್ಠೆ ಮಾಡಲು ಸಾಧನೆಯನ್ನು ಕೈಕೊಳ್ಳಬೇಕೆಂದು ಸಮಸ್ತ ರಾಷ್ಟ್ರವನ್ನೆ ಅವರು ಆಗ್ರಹಪಡಿಸಿದರು. ಸಿದ್ಧಿಯ ಪ್ರಾಪ್ತಿಗಾಗಿ ಬ್ರಹ್ಮಚರ್ಯ ಮತ್ತು ಯೋಗ ಇವೆರಡು ಅವಳಿ ಸಾಧನಗಳೆಂದು ಅವರು ಒತ್ತಿ ಹೇಳಿದರು. ಸಾಧನಾಕ್ರಮದಲ್ಲಿ ಇವೆರಡಕ್ಕೆ ಅವರು ಎಷ್ಟೊಂದು ಮಹತ್ವವಿತ್ತರೆಂಬುದು ಇದರಿಂದ ಸ್ಪಷ್ಟವಿದೆ. ಅಧ್ಯಾತ್ಮವಿದ್ಯೆಯಲ್ಲಿಯು ಅವರ ಶ್ರದ್ಧೆ ದೃಢತರವಾಯಿತು. 'ಆತ್ಮವೊಂದೆ ನಮ್ಮನ್ನು ಉದ್ಧರಿಸಬಲ್ಲದು' ಎಂದು ಒಂದೆಡೆ ಅವರು ಬರೆದಿದ್ದಾರೆ.

ಆದರೆ ಬಹಿರಂಗದಲ್ಲಿ ಕಾರ್ಯಭರಿತವಾದ ರಾಜಕೀಯ 'ಕುರುಕ್ಷೇತ್ರ'ವನ್ನು ತೊರೆದು, ಮನೋಲೋಕಕ್ಕೂ ಅದಕ್ಕಿಂತ ಮೇಲಿನ ಸ್ತರಗಳಿಗೂ ಸಂಬಂಧಿಸಿ ಹೆಚ್ಚು ನಿತಾಂತವಾಗಿ ಕಾರ್ಯಭರಿತವಾಗಿರುವ ಅಂತರಂಗದ 'ಧರ್ಮ-ಕ್ಷೇತ್ರ'ಕ್ಕೆ ಅವರಿನ್ನು ತೆರಳುವದು ಈಶಸಂಕಲ್ಪವಾಗಿತ್ತು. ಯಾವ ನೆಲೆಗಟ್ಟನ್ನು ಅವಲಂಬಿಸಿ ಅವರು ಈ ಮೊದಲು ಕಾರ್ಯಮಾಡುತಿದ್ದರೊ ಅದುವೆ ಸಾಕಷ್ಟು ತೃಪ್ತಿಕರವಿಲ್ಲವೆಂದು ಅವರಿಗೆ ತೋರಿಬಂತು; ಆದುದರಿಂದಲೆ, ಇನ್ನೂ ಹೆಚ್ಚಿನ ಎತ್ತರಗಳನ್ನು ಅಳೆಯಲೂ ಪೃಥ್ವಿಯಮೇಲಿನ 'ದೈವೀ ಜೀವನ'ಕ್ಕಾಗಿ ಹೊಸ ತಳಹದಿಯೊಂದನ್ನು ಹಾಕಲೂ ಅವರು ಎಂಟೆದೆಯ ಬಂಟರಾಗಿ ಹೊಸ ಹೋರಾಟವನ್ನು ಹೂಡಲು ಅಣಿಯಾದರು.

# ೧೦ ಅತಿಮಾನಸದ ಕಡೆಗೆ

ಶ್ರೀ ಅರವಿಂದರ ಸಾಧನದ ಮುಂದಿನ ಹಂತವು, ಮೊದಮೊದಲು ಒಂದುವರೆ ತಿಂಗಳಮಟ್ಟಿಗೆ ಮಾತ್ರ ಚಂದ್ರನಗರದಲ್ಲಿ ಪ್ರಾರಂಭವಾಗಿ, ಆಮೇಲೆ ಪಾಂಡಿಚೇರಿಗೆ ಸರಿಯಿತು. ಇವೆರಡೂ ಸ್ಥಳಗಳು ಫ್ರೆಂಚರ ಠಾಣ್ಯಗಳೆ. ಬ್ರಿಟಿಶ್ ಸರಕಾರವು, ಶ್ರೀ ಅರವಿಂದರ ಬೆನ್ನಟ್ಟಿ ಅವರನ್ನು ತಮ್ಮ ದಾರಿಯಿಂದ ಹೇಗಾದರೂ ಮಾಡಿ ದೂರ ಸರಿಸಿಬಿಡಬೇಕೆಂಬ ಎಷ್ಟೋ ನಿಷ್ಫಲ ಪ್ರಯತ್ನಗಳನ್ನು ಮಾಡಿದ ಸಂಗತಿಯು ಈಗ ಎಂದಿಗಿಂತ ಹೆಚ್ಚು ನಿಚ್ಚಳವಾಗಿ ವ್ಯಕ್ತವಾಯಿತು. ಸರಕಾರದವರು ಒಮ್ಮೆಯಲ್ಲ ಎರಡು ಮೂರು ಸಲವಲ್ಲ, ನಾಲ್ಕು ಸಲ ಈ ವಿಷಯದಲ್ಲಿ ವಿಫಲರಾದರು! ಆದರೆ ಇತ್ತ ಇನ್ನೆಲ್ಲವನ್ನೂ ತೊರೆದು, ಧ್ಯಾನಾಸಕ್ತವಾದ ಯೋಗಪಥವನ್ನೆ ಸಂಪೂರ್ಣವಾಗಿ ಅನುಸರಿಸತಕ್ಕುದೆಂಬ ಬಗೆಗೆ ತೀವ್ರವಾದ ಅಂತಃಪ್ರೇರಣೆಯು ಶ್ರೀ ಅರವಿಂದರಲ್ಲಿ ಮತ್ತೆ ಮತ್ತೆ ಬರತೊಡಗಿತು. ತತ್ಪರಿಣಾಮವಾಗಿ, ಒಂದು ಅಸಹಾಯವಾದ ಸೂತ್ರದ ಬೊಂಬೆಯಂತೆ ಮೊದಲು ಚಂದ್ರನಗರಕ್ಕೂ ಆ ಮೇಲೆ ಪಾಂಡಿಚೇರಿಗೂ ತೆರಳಬೇಕಾಯಿತು.

ಕಾರ್ಯಭರಿತವಾದ ರಾಜಕಾರಣದಲ್ಲಿ ಮತ್ತೆ ಕಾಲಿಕ್ಕತಕ್ಕುದಲ್ಲವೆಂಬ ಪೂರ್ವ ಸಂಕಲ್ಪದಿಂದೇನೂ ಅವರು ಹೊರಟವರಲ್ಲ. ತದ್ವಿಪರೀತವಾಗಿ, ಚಿತ್ತರಂಜನ ದಾಸರ ಆಮಂತ್ರಣಕ್ಕೆ ಉತ್ತರಕೊಡುತ್ತ ಹೀಗೆ ಬರೆದಿದ್ದರು: ‘ ಪ್ರಿಯ ಚಿತ್ತ, ನನ್ನ ಹಳೆಯ ಕಲ್ಪನೆಗಳನ್ನೆ ಸ್ಫೂರ್ತಿಗಳನ್ನೆ ಹತ್ತರಿಟ್ಟುಕೊಂಡು ಕರ್ಮಪ್ರಪಂಚದಲ್ಲಿ ಕಾಲಿಕ್ಕ ಬಯಸುವದಿಲ್ಲ. ನಾನು ಉಚ್ಚತರ ಧ್ಯೇಯದ ಅನುಸಂಧಾನದಲ್ಲಿದ್ದೇನೆ. ನಾನದನ್ನು ಮುಟ್ಟಿದೆನೆಂದರೆ, ಆ ನೆಲೆಗಟ್ಟಿನ ಮೇಲೆ ನಿಂತುಕೊಂಡೆ ನಾನು ನನ್ನ ಕಾರ್ಯಾರಂಭ ಮಾಡುವೆನು.’ ಇದರಿಂದ ಒಂದು ಮಾತು ಸ್ಪಷ್ಟವಾಗುವದು; ಇನ್ನುಳಿದ ಕಾರ್ಯ-ಕಲಾಪಗಳನ್ನು ಮುಂದುವರಿಸುವ ಮೊದಲು, ಉಚ್ಚತರವಾದ ಆಧ್ಯಾತ್ಮಿಕ ನೆಲೆ-ಗಟ್ಟನ್ನು ಕಂಡುಕೊಳ್ಳಲು ಅವರು ಬಯಸಿದ್ದರು. ಒಳಬೆಳವಣಿಗೆಯ ಬಗೆಗೆ ಅವರಲ್ಲಿ ಆಳವಾದ ನಿಷ್ಠೆಯಿತ್ತು. ಇದುವೆ ಪಾಂಡಿಚೇರಿಯಲ್ಲಿ ಪ್ರಾರಂಭಕ್ಕೆ ನಡಿಸಿದ ಸಾಧನೆಯ ಪ್ರಮುಖ ಲಕ್ಷಣವಾಗಿತ್ತು.

ಅತಿಮಾನಸದ ಸಾಕ್ಷಾತ್ಕಾರವೆ ಋತಚೇತನದಲ್ಲಿ ಕಾಲೂರಿ ನಿಲ್ಲುವದೆ ಈಗಿನ ಕಾಲದ ಅವರ ಗುರಿಯಾಗಿತ್ತು. ಈ ಋತಚೇತನವೆ ಅತಿಮಾನಸದ ಸಹಜ ಸ್ವಾಭಾವಿಕ ಸ್ಥಿತಿಯು; ಇದನ್ನು ಸಾಧಿಸಿದನಂತರ, ಅತಿಮಾನಸ ಶಕ್ತಿಯನ್ನು ಜಡ

ದಲ್ಲಿಯೂ ಪ್ರಾಣದಲ್ಲಿಯೂ ಮನಸ್ತತ್ತ್ವದಲ್ಲಿಯೂ ತುಂಬಿ ಅವನ್ನು ಇನ್ನಷ್ಟು ಸೂಕ್ಷ್ಮತರವಾದ ಉಪಕರಣಗಳನ್ನಾಗಿ ಮಾರ್ಪಡಿಸಲು ಅವರು ಉಜ್ಜುಗಿಸಿದ್ದರು. ಈ ಬಗೆಯ ಪರಿವರ್ತನವೆ ಮುಂದಿನ ಅತಿಮಾನಸ ಮನುಕುಲದ ನಿರ್ಮಾಣಕ್ಕೆ ಮಾರ್ಗಮಾಡಿಕೊಡುವದು. ಮುಂದಿನ ದಿನಗಳಲ್ಲಿ ಮಾನವರು ಹುಟ್ಟುತ್ತಲೆ ಜೊತೆ ಜೊತೆಗೆ, ಸತ್ಯದೃಷ್ಟಿಯನ್ನೂ ಆಚಾರ ವಿಚಾರಗಳಲ್ಲಿ ಸಮಂಜಸತೆಯನ್ನೂ ಅವರ್ಣನೀಯ ಆನಂದತುಂದಿಲತೆಯನ್ನೂ ತಂದಿರುವರು.

ವಾಡಿಕೆಯ ಸರ್ವಸಾಮಾನ್ಯ ಮಟ್ಟದಿಂದ ಶ್ರೀ ಅರವಿಂದರ ಸಾಧನೆಯನ್ನು ಪರೀಕ್ಷಿಸಿ ನೋಡುವದಾದರೆ, ಅದು ಆಗಲೆ ಬಹು ವಿಸ್ತೀರ್ಣವಾದ ಸೀಮೆಯನ್ನು ಆಕ್ರಮಿಸಿ ಹಸ್ತಗತ ಮಾಡಿಕೊಂಡಿತ್ತು. ಈಗಂತೂ ಅವರು ಇದಕ್ಕೂ ಹೆಚ್ಚಿನ ಸಾಹಸಕ್ಕಾಗಿ ಟೊಂಕಕಟ್ಟಿದ್ದರು. ಈ ಮೊದಲಿನ ಸಿದ್ಧಿಗಳೆಲ್ಲ ಈಗ ಖಂಡಪ್ರಾಯ ವಾಗಿ ಕಂಡವು. ಅವರು ಹಾದುಹೋದ ಒಂದೊಂದು ಅವಸ್ಥೆಯೂ ಓರ್ವ ನಿಷ್ಣಾತ ಯೋಗಿಗು ಕೂಡ, ಒಂದೊಂದು ದೀರ್ಘ ಜೀವಾವಧಿಯ ಸಾಧನಕ್ರಮವನ್ನೆ ಬೇಡಬಹುದಾಗಿತ್ತು. ಒಂದು ಅವಸ್ಥೆಯನ್ನು ಮುಟ್ಟುತ್ತಲೆ ಅನೇಕರಿಗೆ ಕೃತಾರ್ಥ ತೆಯ ಭಾವ ಮೂಡಿಬಿಡಬಹುದಾಗಿದೆ. ಆದರೆ ಶ್ರೀ ಅರವಿಂದರಿಗೆ, ಅವರ ಅನ್ವೇಷಣದ ಪ್ರಥಮಾವಸ್ಥೆಗಳಲ್ಲಿ ಸಹ, ವೈಯಕ್ತಿಕ ಮುಕ್ತಿಯಾಗಲಿ, ತಮ್ಮೊಬ್ಬರ ಸಮಸ್ಯಾಪರಿಹಾರವಾಗಲಿ, ಗುರಿಯಾಗಿರಲಿಲ್ಲ. ಈ ಸಾಧನಕ್ರಮದ ನಾಟ್ಯಕಥೆ ಬೆಳೆಯುತ್ತ ಸಾಗಿದಂತೆ, ಓರ್ವ ಮಹಾನಾಯಕನು ಅಂತರಂಗದ ಮತ್ತು ಬಹಿ-ರಂಗದ ಪ್ರತಿಕೂಲ ಶಕ್ತಿಗಳ ವಿರುದ್ಧ ಹೋರಾಡುತಿರುವದನ್ನು ನಾವು ಕಾಣುತ್ತೇವೆ. ಈ ಹೋರಾಟ ಏತಕ್ಕಾಗಿ? ತನ್ಮೂಲಕವಾಗಿ ಮಾನವಕುಲದ ದಾರಿಯನ್ನು ಸುಗಮ ಗೊಳಿಸುವದಕ್ಕಾಗಿ; ಇನ್ನೂ ಹುಟ್ಟದ ಮುಂದಿನ ಮಕ್ಕಳಿಗೋಸ್ಕರ ಈ ಜಡ, ಈ ಜೀವ, ಈ ಮನಸ್ಸು ಇವುಗಳ ಮೇಲೆ ವಿಜಯವನ್ನು ಪ್ರಸ್ಥಾಪಿಸಿ ಅವರ ಪಥ-ವನ್ನು ನಿರಾತಂಕಗೊಳಿಸುವದಕ್ಕಾಗಿ.

ಅವರ ಉತ್ತರಪಾರಾ ಭಾಷಣದಿಂದ ಎತ್ತಿಕೊಂಡ ಅವತರಣಿಕೆಯು ಈ ಬಗೆಯಾಗಿದೆ: 'ಆ ಕಾಲದಲ್ಲಿ ನಾನು ದೇವರ ಬಳಿ ಸಾರಿದಾಗ, ಅವನಲ್ಲಿ ನನಗೆ ಸಂಪೂರ್ಣ ಶ್ರದ್ಧೆಯೆ ಇರಲಿಲ್ಲ. ಆಗ ನಾನು ಅಜ್ಞೇಯವಾದಿಯಾಗಿದ್ದೆ, ನಾಸ್ತಿಕ ನಾಗಿದ್ದೆ, ಸಂಶಯವಾದಿಯೂ ನಾನಾಗಿದ್ದೆ. ಅಲ್ಲದೆ, ದೇವರೆಂಬವನು ಒಬ್ಬನಿದ್ದಾನೆ ಎಂಬುದನ್ನು ನಾನು ಎಳ್ಳಷ್ಟೂ ಆಗ ಒಪ್ಪಿರಲಿಲ್ಲ. ಈಶಾವಾಸದ ಅರಿವನ್ನು ನಾನು ಅನುಭವಿಸಿರಲಿಲ್ಲ. ಆದರೂ ಏನೊ ಒಂದು, ವೇದಗಳು ಸಾರುವ ಸತ್ಯದತ್ತ, ಭಗವದ್ಗೀತೆಯ ಸತ್ಯದತ್ತ, ಹಿಂದೂಧರ್ಮದ ಸತ್ಯದತ್ತ, ನನ್ನನ್ನು ಸೆಳೆಯುತಿತ್ತು. ಈ ಯೋಗದಲ್ಲಿಯೂ ವೇದಾಂತದ ಆಧಾರದಮೇಲೆ ನಿಂತ ಈ ಧರ್ಮದಲ್ಲಿಯೂ ಪ್ರಬಲ ಸತ್ಯವೊಂದು ಅಡಗಿರಲೆಬೇಕೆಂದು ನನಗೆ ಅನಿಸತೊಡಗಿತು.'

ಆಗಿನ ಕಾಲದಲ್ಲಿ ಅವರ ಗುರಿಯು ಸೀಮಿತವಾದುದಾಗಿದ್ದರೂ ಅದು ಕೇವಲ ವೈಯಕ್ತಿಕ ಸ್ವಾರ್ಥಪರತೆಯಿಂದ ಕೂಡಿದುದಾಗಿರದೆ ಅತ್ಯಂತ ಪರಹಿತರತವಾಗಿತ್ತು. ಅದೇ ಭಾಷಣದಲ್ಲಿ ಅವರು ಹೇಳಿದ್ದಾರೆ: 'ಉಳಿದವರು ಬೇಡಿಕೊಳ್ಳುವ ಹಾಗೆ ನಾನು ಯಾವುದನ್ನೂ ಬೇಡಿಕೊಳ್ಳಬಯಸುವದಿಲ್ಲ. ಈ ಜನಾಂಗವನ್ನು ಮೇಲಕ್ಕೆ ಎತ್ತುವ ಸಾಮರ್ಥ್ಯವನ್ನು ಮಾತ್ರ ನಾನು ಬೇಡುತ್ತೇನೆ; ನಾನು ಪ್ರೀತಿಸುವ ಈ ಜನಗಳ ಜೊತೆಗಿರಲು, ಅವರೊಡನೆ ಕೆಲಸಮಾಡಲು ನನಗೆ ಆಸ್ಪದಕೊಡಬೇಕೆಂದಿಷ್ಟೆ ನಾನು ಕೇಳುತ್ತೇನೆ, ಹಾಗು ನನ್ನ ಜೀವನವನ್ನು ಅವರಿಗಾಗಿ ಧಾರೆಯೆರೆಯಲು ಮಾತ್ರ ಪ್ರಾರ್ಥಿಸಿಕೊಳ್ಳುತ್ತೇನೆ.'

ಯೋಗದಲ್ಲಿಯೂ ಅದರ ಸಾಮರ್ಥ್ಯದಲ್ಲಿಯೂ ಇದ್ದ ಶ್ರೀ ಅರವಿಂದರ ಶ್ರದ್ಧೆಯು ಪರಮಾತ್ಮನ ವಿಷಯಕ್ಕಿದ್ದ ಅವರ ಶ್ರದ್ಧೆಯಷ್ಟೆ ಗಭೀರವಾಗಿತ್ತು. ಈ ಶ್ರದ್ಧೆಯೆ ಅವರ ಪ್ರತ್ಯಕ್ಷ ಅನುಭವ ಬಲದಿಂದ ಮುಂದೆ ಮತ್ತಷ್ಟು ಪುಷ್ಟಿಗೊಂಡು ಅವರನ್ನು ಹಂತದಿಂದ ಹಂತಕ್ಕೆ ಎತ್ತರಿಸಿತು. ದಿಲೀಪಕುಮಾರರು 'ತೀರ್ಥಂಕರ' ಎಂಬ ತಮ್ಮ ಪುಸ್ತಕದಲ್ಲಿ ಶ್ರೀ ಅರವಿಂದರೊಡನೆ ನಡೆದ ಒಂದು ಸಂದರ್ಶನದ ಸಂಭಾಷಣೆಯನ್ನು ಸಾರಾಂಶರೂಪವಾಗಿ ಅವರು ಹೀಗೆ ಹೇಳಿದರೆಂದು ಉಲ್ಲೇಖಿಸಿದ್ದಾರೆ: 'ಒಂದಾನೊಂದು ಕಾಲಕ್ಕೆ ನಾನೂ ನನ್ನ ಯೋಗಬಲದಿಂದ ಈ ಜಗತ್ತಿನ ಸ್ವರೂಪವನ್ನೆ ಪರಿವರ್ತನಗೊಳಿಸಲು ಬಯಸಿದ್ದೆನು. ಮಾನವಕುಲದ ಮೂಲಭೂತ ಸ್ವಭಾವವನ್ನೂ ಪ್ರವೃತ್ತಿಗಳನ್ನೂ ಬದಲಿಸಿಬಿಟ್ಟು, ಮರ್ತ್ಯಲೋಕವನ್ನು ಗಾಸಿಗೊಳಿಸುವ ಅನಿಷ್ಟಗಳನೆಲ್ಲ ತೊಡೆದುಬಿಡಬೇಕೆಂದು ಮಾಡಿದ್ದೆನು. . . . . . ಈ ದೃಷ್ಟಿಯಿಂದ, ಈ ಉದ್ದೇಶಸಾಧನಕ್ಕಾಗಿಯೆ ನಾನು ಮೊದಮೊದಲು ಯೋಗದತ್ತ ಹೊರಳಿದೆನು, ಮತ್ತು ನಾನು ಪಾಂಡಿಚೇರಿಗೆ ಹೋಗಿ ಇಲ್ಲಿಯೆ ನನ್ನ ಯೋಗ ಸಾಧನೆಯನ್ನು ಸಾಗಿಸಬೇಕೆಂದು ಅಂತರ್ವಾಣಿಯ ನಿರ್ದೇಶ ಬಂದುದರಿಂದಲೆ ಇಲ್ಲಿಗೆ ನಾನು ಬಂದೆನು.' ಆನುಷಂಗಿಕವಾಗಿ ಒಂದು ಸಂಗತಿಯನ್ನು ಅರಿಯುವದು ಚಿತ್ತರಂಜಕವೆನಿಸಬಹುದು. ಅದೆಂದರೆ, ನೂರಾರು ವರ್ಷಗಳ ಪೂರ್ವದಲ್ಲಿ ಪಾಂಡಿಚೇರಿಗೆ 'ವೇದಪುರಿ' ಎಂದು ಕರೆಯುತಿದ್ದು ಮಹಾಮಹಿಮ ಅಗಸ್ತ್ಯಋಷಿಯು ಅದರ ಅಧಿಷ್ಠಾತೃವಾಗಿದ್ದನು.

ಪಾಂಡಿಚೇರಿಯಲ್ಲಿ ಅವರ ಜೀವನಕ್ರಮಣದ ಮೊದಲ ನಾಲ್ಕು ವರ್ಷಗಳ ಸಮಯದಲ್ಲಿ ಶ್ರೀ ಅರವಿಂದರು ಯೋಗಸಮನ್ವಯವನ್ನು ಸ್ಥಾಪಿಸಿದರಲ್ಲದೆ, ಈಗ ಕರೆಯಲಾಗುವ ಪೂರ್ಣಯೋಗದ ಸಾಧನಕ್ರಮವನ್ನೂ ತಂತ್ರವನ್ನೂ ಪರಿಪೂರ್ಣತೆಗೆ ಮುಟ್ಟಿಸಿದರು. ಇಲ್ಲಿ ಎಲ್ಲ ಸಂಗತಿಗಳ ಸಮಗ್ರೀಕರಣವನ್ನೂ ಒಡೆದು ಕಾಣುವ ದ್ವಂದ್ವಗಳ ಅದ್ಭುತ ಮೈತ್ರೀಕರಣವನ್ನೂ ನಾವು ಕಾಣುತ್ತೇವೆ. ಮೂಲಭೂತವೂ ಸರ್ವಾಂತರ್ಗತವೂ ಆಗಿರುವ ಸಾಮರಸ್ಯವನ್ನು ಶ್ರೀ ಅರವಿಂದರು

ತನ್ನೊಳಗೂ ಕಂಡುಕೊಂಡರು; ತಮ್ಮ ಉಗ್ರಸಾಧನೆಯ ಬಲದಿಂದ ಸರ್ವಾಂಗೀಣ ವ್ಯಕ್ತಿಮತ್ತೆಯನ್ನು ತಮ್ಮಲ್ಲಿ ರೂಪಿಸಿಕೊಂಡರು; ತನ್ಮೂಲಕ, ಈ ವಿಶ್ವಗೋಲಕಗಳಲ್ಲಿರುವ ಸಾಂಗತ್ಯ-ಸಂಗೀತಗಳ ರಹಸ್ಯವನ್ನೂ ಈ ಬ್ರಹ್ಮಾಂಡದಲ್ಲಿ ಕಂಡುಬರುವ ಪರಸ್ಪರ ವಿರೋಧಿಯಾದ ದ್ವಂದ್ವಗಳ ಅಧಿಪತಿಯಾಗಿರುವ ಪುರುಷೋತ್ತಮನ ರಹಸ್ಯವನ್ನೂ ಅವರು ಅರಿತುಕೊಂಡರು.

ವೈಯಕ್ತಿಕವಾಗಿ ಸಿದ್ಧಿಸಿದ ಅತಿಮಾನಸ ಸಾಕ್ಷಾತ್ಕಾರದಿಂದ ಸಹ, ಅಖಂಡ ಮಾನವಕುಲವನ್ನೆ ಏಕಕಾಲಕ್ಕೆ ಪರಿವರ್ತನಗೊಳಿಸುವದು ಸಾಧ್ಯವಿಲ್ಲವೆಂಬುದು ಅವರಿಗೆ ಮನದಟ್ಟಾಗಿತ್ತು. ಸರ್ವತೋಮುಖವಾದ ಪ್ರಯತ್ನಕ್ಕೆ ಮಾನವಕುಲವಾದರೂ ಸಾಕಷ್ಟು ಮಾಗಿ ಸಿದ್ಧವಾಗಿರಬೇಡವೆ? ಆದರೆ ಆ ವರೆಗೆ ಈ ದಿಶೆಯಲ್ಲಿಯ ವೈಯಕ್ತಿಕ ಹಾಗೂ ಸಾಂಘಿಕ ಸಾಧನೆಯು ನಡೆಯಬಹುದೆಂದು ಅವರು ಗೊತ್ತು ಮಾಡಿಟ್ಟುಕೊಂಡಿದ್ದರು. ದಿಲೀಪಕುಮಾರರು ತಮ್ಮ 'ತೀರ್ಥಂಕರ'ದಲ್ಲಿ ಶ್ರೀ ಅರವಿಂದರ ಮಾತುಗಳೆಂದು ಹೀಗೆ ಎತ್ತಿ ಹೇಳಿದ್ದಾರೆ: 'ನನ್ನ ನವ ಯೌಗಿಕ ಚೇತನದಿಂದ ಉಂಟಾದ ಜ್ಞಾನೋದಯದ ಜೊತೆಜೊತೆಗೆ (ಅಂದರೆ ನನ್ನ ಆತ್ಮಸಿದ್ಧಿಯ ನಂತರ), ನನ್ನ ದೃಷ್ಟಿಕೋನವೆ ಬದಲಾಯಿತು. ಆಗ ಸಂಪೂರ್ಣವಾಗಿ ನನ್ನ ಭ್ರಮನಿರಸನವಾಯಿತು. ಅಶಕ್ಯಕೋಟಿಗೆ ಸೇರಿದ ಸಂಗತಿಯು ಇಲ್ಲಿಯೆ ಅದೂ ಈಗಲೆ, ಶಕ್ಯವಾಗಬಲ್ಲುದೆಂಬ ನಂಬಿಗೆಯು ಕೇವಲ ನನ್ನ ಅಜ್ಞಾನಜನ್ಯವಾದುದು ಎಂಬುದನ್ನು ನಾನು ಕಂಡುಕೊಂಡೆನು............ಮನುಕುಲವನ್ನೆಲ್ಲ ಉದ್ಧರಿಸಲೆಂದು ತೊಡಕುಗಳನೆಲ್ಲ ಕೊನೆಗೊಮ್ಮೆ ಬಿಡಿಸಿಬಿಡಬೇಕಾದರೆ ಕೇವಲ ಓರ್ವ ವ್ಯಕ್ತಿಯ ಸಾಮರ್ಥ್ಯವು ಅವನೆಷ್ಟೆ ಘನವಂತನಾಗಿದ್ದರೂ ಸಾಲದು; ಮಾನವ ಕುಲವು ಕೂಡ ಅದಕ್ಕಾಗಿ ಸಾಕಷ್ಟು ಮಾಗಿ ಸಿದ್ಧವಾಗಿರಬೇಕಾಗುತ್ತದೆ.'

ಸಾಮಾನ್ಯತಃ ಕರೆಯಲಾಗುವ ಆತ್ಮಸಿದ್ಧಿಯನ್ನು ಅದಾವಾಗಲೊ ಅವರು ಹೊಂದಿಬಿಟ್ಟಿದ್ದರು. ಪೂರ್ಣವಿಕಸಿತ ಆತ್ಮಸಿದ್ಧಿಯನ್ನೆ ಪಡೆದ ಶ್ರೀ ಅರವಿಂದರಿಗೆ ತಮಗಾಗಿ ಇನ್ನೇನನ್ನೂ ಹೆಚ್ಚಿಗೆ ಪಡೆಯಬೇಕೆಂಬುದೆ ಇರಲಿಲ್ಲ. ಮಾನವ ಕುಲವು ಇಡಲಿಬೇಕಾದ ವಿಕಾಸಕ್ರಮದ ಮುಂದಿನ ಹೆಜ್ಜೆಯಲ್ಲಿ ಪ್ರಜ್ಞಾಪೂರ್ಣ ಪ್ರಯತ್ನದಿಂದ ತಾವು ಪ್ರಕೃತಿಗೆ ಸಹಾಯ ನೀಡಬಹುದೆ ಎಂಬ ವಿಷಯಕ್ಕೆ ಅವರು ಪ್ರಯೋಗಗಳನ್ನು ನಡೆಸಿದ್ದರು. ಅವರ ದೃಷ್ಟಿಯಲ್ಲಿ ಭಾವೀ ಮಾನವಕುಲದ ಭವಿತವ್ಯವು—ಅದು ಇಂದೇ ಬರಲಿ ನಾಳೆಯೆ ಬರಲಿ ಅಥವಾ ಸಾವಿರಾರು ವರ್ಷಗಳ ನಂತರವೆ ಬರಲಿ—ಅತ್ಯಂತ ಸ್ಪಷ್ಟವೂ ಸುನಿರ್ದಿಷ್ಟವೂ ಆಗಿತ್ತು. ಅವರು ಅತಿಮಾನಸವನ್ನು ಅಂದರೆ ಋತಚೇತನವನ್ನು ಕಣ್ಣಾರೆ ಕಂಡಿದ್ದರು. ಅಚೇತನವನ್ನೂ ಒಳಗೊಂಡು ಚೇತನದ ಉಳಿದೆಲ್ಲ ನಿಮ್ನ ಕ್ಷೇತ್ರಗಳಲ್ಲಿಯೂ ಕೆಲಸಮಾಡಬಲ್ಲ ಪರಮೇಶ್ವರನ ಉಪಕರಣವು ಈ ಅತಿಮಾನಸಶಕ್ತಿಯೆ. ಇಂದಿನ ಮಾನವನು

ಬರುವ ಮೊದಲು, ಅವನ ಬರುವಿಕೆಯು ಅದೆಷ್ಟು ನಿಶ್ಚಿತವಾಗಿತ್ತೊ ಅಷ್ಟೆ ಅತಿ-ಮಾನವನ ಬರುವಿಕೆಯಾದರೂ ಸುನಿಶ್ಚಿತವಾಗಿದೆಯೆಂದು ಅವರು ಪ್ರಸ್ತಾಪಿಸಿದರು. ಮನದಿಂದ ಅತಿಮನವು ಮೂಡಿ ಬರುವದೆಂಬುದು ಪ್ರಾಣದಿಂದ ಮನವು ಮೂಡಿ ಬಂದಷ್ಟೆ ಖಚಿತವಾಗಿರುತ್ತದೆ. ಮಾನವನು ಆಗ ಪರಿವರ್ತನ ಹೊಂದುತ್ತಾನೆ; ಏಕೆಂದರೆ ಆಗ ಅವನು ಅಜ್ಞಾನದಲ್ಲಿದ್ದು ಅಜ್ಞಾನವಶದಿಂದಲೆ ಕರ್ಮಪ್ರವೃತ್ತನಾ-ಗಿರದೆ, ಜ್ಞಾನಾವಸ್ಥೆಯಲ್ಲಿದ್ದು ಜ್ಞಾನಮೂಲಕವಾಗಿ ಬಂದ ಪ್ರಕಾಶ-ಪ್ರೇಮ-ಸಾಮರಸ್ಯ-ಆನಂದಗಳಿಂದ ಕರ್ಮರತನಾಗುತ್ತಾನೆ. ಮಾನವನು ಮುಟ್ಟಲಿರುವ ಮುಂದಿನ ಮೆಟ್ಟಲಲ್ಲಿ ಅನ್ನಮಯ - ಪ್ರಾಣಮಯ - ಮನೋಮಯ ಸಮಸ್ತ ವ್ಯಕ್ತಿತ್ವವನ್ನು ಪರಿಶುದ್ಧಗೊಳಿಸುವದೂ ದಿವ್ಯವಾಗಿಸುವದೂ ಅತಿಮಾನಸ ಶಕ್ತಿಗೆ ಸಾಧ್ಯವೆಂಬುದನ್ನು ಶ್ರೀ ಅರವಿಂದರು ಅರಿತುಕೊಂಡರು. ಆದುದರಿಂದ, ತಮ್ಮ-ಲ್ಲಿಯೂ ತಮ್ಮನ್ನು ಶ್ರದ್ಧೆಯಿಂದ ಅನುಸರಿಸುತಿರುವವರಲ್ಲಿಯೂ ಈ ಕ್ರಮವು ಬೇಗ ಬರಲೆಂದೆ ಅವರ ಸಾಧನೆಯು ಉದ್ದೇಶಪಟ್ಟಿತ್ತು.

ಅವರು ಫ್ರೆಂಚ ಭಾರತಕ್ಕೆಹೊರಟುಹೋದುದು ಬಹಳ ಜಾಣತನದ್ದಾಗಿತ್ತು. ಇಲ್ಲದೆ ಹೋಗಿದ್ದರೆ, ಅಂದಿನ ಸಂಶಯಗ್ರಸ್ತ ಸರಕಾರವು ಅವರನ್ನು ಬೆನ್ನಟ್ಟ-ಬಹುದಾಗಿತ್ತು. ಹೆಚ್ಚಿನದೇನೂ ಆಗದಿದ್ದರೂ ಅದರಿಂದ ಇಲ್ಲದ ಅಡ್ಡಿ ಉಪಟಳ ಮಾತ್ರ ಆಗುತಿತ್ತು. ಮೇಲಾಗಿ, ಸರಕಾರವು ತೆಗೆದುಕೊಳ್ಳಬಹುದಾದ ಕ್ರಮದ ಮೂಲಕ, ಶ್ರೀ ಅರವಿಂದರನ್ನು ಕಾಣಬೇಕೆನ್ನುವವರಿಗೂ ಅವರೊಡನೆ ಇರಬೇ-ಕೆನ್ನುವವರಿಗೂ ಒಂದುಬಗೆಯ ಕೃತ್ರಿಮ ನಿರ್ಬಂಧವು ಉಂಟಾಗುವ ಸಂಭವವಿತ್ತು. ಅವರು ಪಾಂಡಿಚೇರಿಗೆ ಹೋದುದರಿಂದ ಇದೆಲ್ಲವೂ ಒಂದೆ ಹೊಡೆತಕ್ಕೆ ತೊಲಗಿ ಹೋಯಿತು. ಊಟ, ಉಡಿಗೆ, ನಿದ್ರೆ, ನೆಲೆ ಇವೇ ಮೊದಲಾದ ಆವಶ್ಯಕ ಜೀವನ ಸೌಕರ್ಯಗಳ ಬಗೆಗಿದ್ದ ಅವರ ಅಭ್ಯಾಸ ರೂಢಿಗಳು ಯಾವಾಗಲೂ ಸರಳತೆಗೆ ಮಾದರಿಯ ಹಾಗೆ ಇದ್ದವು. ನಿಜವೇನೆಂದರೆ ಅವರು ಇವೆಲ್ಲವುಗಳ ವಿಷಯಕ್ಕೆ ಉಪೇಕ್ಷಾಭಾವವನ್ನೆ ತಳೆದಿದ್ದರು. ಅವರು ವ್ಯಾಯಾಮವನ್ನು ಎಂದೂ ಅಷ್ಟೊಂದು ಪ್ರೀತಿಸಿದವರಲ್ಲ. ಸಾಮಾನ್ಯತಃ ಅವರ ಆರೋಗ್ಯವು ಚೆನ್ನಾಗಿಯೆ ಇತ್ತು. ಬಡೋದೆ ಯಲ್ಲಿದ್ದಾಗಲೂ ಕೆಲಕಾಲ ಅವರು ಸಾಮು ತೆಗೆಯುವ ಮತ್ತು ಕೂತೇಳುವ ಅಂಗ ಸಾಧನವನ್ನು ಮಾಡುತಿದ್ದರು. ಬರಬರುತ್ತ, ಮಾಳಿಗೆಯಮೇಲೆ ಅತ್ತಿತ್ತ ನಡೆಯು ವದು, ಅಥವಾ ಕೋಣೆಯಲ್ಲಿಯೆ ಶತಪಥ ಹಾಕುವದು ಇಷ್ಟೆ ಅವರಿಗ ವ್ಯಾಯಾಮ ವಾಗಿತ್ತು. ನಿದ್ರೆಯಾಗಲಿ ಶಾರೀರಿಕ ಅಥವಾ ಮಾನಸಿಕ ವಿಶ್ರಾಂತಿಯಾಗಲಿ ಸಂಪೂರ್ಣವಾಗಿ ಅವರ ಸ್ವಾಧೀನದಲ್ಲಿ ಇದ್ದು ಅವರ ವಿಶಿಷ್ಟ ಆವಶ್ಯಕತೆಗಳನ್ನು ಅವಲಂಬಿಸಿಕೊಂಡಿದ್ದವು.

ಬ್ರಹ್ಮಚರ್ಯೆಯ ಮಹತ್ವವನ್ನು ಅವರು ಬಹಳ ಒತ್ತಿ ಒತ್ತಿ ಹೇಳುತಿದ್ದರು.

ಇದು ಕೇವಲ ಉಚ್ಚ ಅರ್ಥದಲ್ಲಿಯಷ್ಟೆ ಅಲ್ಲ ವಿಶಾಲಾರ್ಥದಲ್ಲಿಯೂ. ರಾಜಕೀಯ ಜೀವನದಲ್ಲಿದ್ದಾಗ ಸ್ವಲ್ಪ ಸಮಯ ಮಾತ್ರ ಅವರು ಕಲಕತ್ತೆಯಲ್ಲಿ ತಮ್ಮ ಸತಿ ಸಹೋದರಿಯರೊಡನೆ ಇದ್ದುಕೊಂಡಿದ್ದರು. ಆದರೆ ಅವರು ಪಾಂಡಿಚೇರಿಗೆ ತೆರಳಿದ ಮೇಲೆ, ೧೯೧೮ರ ವರೆಗೆ ತಮ್ಮ ಪತ್ನಿ ಮೃಣಾಲಿನಿದೇವಿಯವರಿಗೆ ತಮ್ಮನ್ನು ಕಾಣಲು ಅವಕಾಶವನ್ನಾಗಲಿ ಅಪ್ಪಣೆಯನ್ನಾಗಲಿ ಕೊಟ್ಟಿರಲಿಲ್ಲ. ಅವರ ಅಪ್ಪಣೆ ಸಿಕ್ಕೊಡನೆ ಪಾಪ, ಆ ಧೀರ ಪ್ರೇಮಲ ಸತಿಯು, ಆ ವರ್ಷ ಡಿಸೆಂಬರದಲ್ಲಿ ಪಾಂಡಿಚೇರಿಗೆ ಹೊರಟಿರಲು ಹಾದಿಯಲ್ಲಿ ಕಲಕತ್ತೆಯಲ್ಲಿಯೆ ‘ ಇನ್‌ಫ್ಲುಯೆಂಝಾ ’ ಕ್ಕೆ ತುತ್ತಾಗಿ ತೀರಿಕೊಂಡರು. ಶ್ರೀ ಅರವಿಂದರು ತಮ್ಮೊಂದು ಪತ್ರದಲ್ಲಿ ಹೇಳಿದ್ದಾರೆ, ಕಾಮ-ಜೀವನವಷ್ಟೆ ಅಲ್ಲ, ಸ್ವೈರಾವಕಾಶವು ದೊರಕಿಬಿಟ್ಟರೆ, ಕಾಮುಕ ವಿಚಾರಗಳು ಸಹ ಸಾಧನೆಯ ಮಾರ್ಗದಲ್ಲಿ ಅಡ್ಡಿಯಾಗಿ ನಿಲ್ಲುವವು. ಕಾಮದ ಶಕ್ತಿ ಮತ್ತು ಜೀವನದ ಶಕ್ತಿ ಇವು ಒಂದೆ ಆಗಿರುವದರಿಂದ ಕಾಮಭೋಗವು ಸಾಧನೆಯನ್ನು ಬಹುಮಟ್ಟಿಗೆ ಕುಗ್ಗಿಸಿಬಿಡುತ್ತದೆ.

ಬ್ರಹ್ಮಚರ್ಯೆಯೆಂದರೆ ಕೇವಲ ಕಾಮಚೇಷ್ಟೆಯಿಂದ ದೈಹಿಕವಾಗಿ ದೂರಿರುವದಷ್ಟೆ ಅಲ್ಲ ಅಥವಾ ನಿಗ್ರಹ ತೋರಿಸುವದಷ್ಟೆ ಅಲ್ಲ. ನಿಜವಾದ ಬ್ರಹ್ಮಚರ್ಯೆಯಲ್ಲಿ ಕಾಮುಕ ವಿಚಾರಗಳನ್ನೂ ಕಾಮುಕ ಮಾತುಕತೆಗಳನ್ನೂ ನಿಗ್ರಹಿಸಬೇಕಾಗುತ್ತದೆ. ಕಾಮಪ್ರವೃತ್ತಿಯಂತೂ ಇರಲಿ ಬ್ರಹ್ಮಚಿಂತನಕ್ಕೆ ಆತಂಕವಾಗಿ ನಿಲ್ಲುವದೆಲ್ಲವನ್ನೂ ಸಾಧಕನು ತಳ್ಳಿಹಾಕತಕ್ಕದೆಂದು ನಿಜವಾದ ಬ್ರಹ್ಮಚರ್ಯೆಯು ವಿಧಿಸುತ್ತದೆ. ಬ್ರಹ್ಮಚರ್ಯೆಗೆ ನಿಷಿದ್ಧವಾದುದರ ಮಾತಿದಾಯ್ತು. ಇನ್ನು ಬ್ರಹ್ಮಚರ್ಯೆಯು ನಿರ್ದಿಷ್ಟ ಪಡಿಸುವ ಸಂಗತಿಯೆಂದರೆ, ಬ್ರಹ್ಮನ ಬಗೆಗೆ, ಉಚ್ಚತಮ ಸತ್ಯದ ಬಗೆಗೆ ಸದಾ ಮನವನ್ನು ಚಿಂತನಪರವಾಗಿ ಇರಿಸುವದು. ಈ ಬಗೆಯ ಬ್ರಹ್ಮಚಿಂತನದಲ್ಲಿ ಸದಾ ಅದರ ಬಗೆಗೆ ಶ್ರವಣ, ಮನನ, ನಿದಿಧ್ಯಾಸ, ಚಿಂತನ ಇವೆಲ್ಲ ಬರುವವು. ಬ್ರಹ್ಮಚರ್ಯೆಯನ್ನು ಹೀಗೆ ಕಟ್ಟುನಿಟ್ಟಾಗಿ ಪಾಲಿಸುವವನಲ್ಲಿ ತೇಜಸ್ಸು ಓಜಸ್ಸುಗಳು ಹೊರಹೊಮ್ಮುತ್ತವೆ; ಎಂದರೆ ಶಾರೀರಿಕ, ಬೌದ್ಧಿಕ ಮತ್ತು ನೈತಿಕ ಕಾಂತಿ ಸಾಮರ್ಥ್ಯಗಳನ್ನು ಅವನು ಪಡೆಯುತ್ತಾನೆ. ಬ್ರಹ್ಮಚರ್ಯೆಯನ್ನು ಚೆನ್ನಾಗಿ ಪಾಲಿಸಿದುದರ ಫಲವಾಗಿಯೂ ಬ್ರಹ್ಮಚಿಂತನದ ಫಲವಾಗಿಯೂ ಬ್ರಹ್ಮತೇಜವೆಂಬ ಬಲವು ಬೆಳೆದು ಬರುತ್ತದೆ. ಈ ಬ್ರಹ್ಮಚರ್ಯೆಯ ಪ್ರಭಾವದಿಂದಲೆ ಮುಂದೆ ಶ್ರೀ ಅರವಿಂದರ ದೇಹಕ್ಕೆ ಅಸಾಮಾನ್ಯವಾದ ಸುವರ್ಣಕಾಂತಿಯೊಂದು ಸಂಗದಿಸಿತು.

ಬಾಹ್ಯಜಗತ್ತಿನೊಡನೆ ಅವರಿಟ್ಟುಕೊಂಡ ಸಂಪರ್ಕದ ರೀತಿಯಾದರೊ ಬಹಳ ವಿಲಕ್ಷಣವೂ ಅಸಾಧಾರಣವೂ ಆದುದಾಗಿದೆ. ಪಾಂಡಿಚೇರಿಯಲ್ಲಿ ಮೊದಲ ನಾಲ್ಕು ವರ್ಷದ ಅವರ ಜೀವನವು ತೀರ ಏಕಾಂತಮಯವಾಗಿತ್ತು. ಅದಕ್ಕೆ ‘ ನೀರವಕಾಲ ’ ವೆಂದು ಹೇಳಬಹುದು. ಆಮೇಲೆ ‘ ಆರ್ಯ ’ ದ ಕಾಲ ಬಂದಿತು. ಆಗ ಅವರು

ಒಂದು ಅಮೋಘವಾದ ಪತ್ರಿಕೆಯನ್ನು ನಡೆಯಿಸಲು ಸಾಕಾಗುವಷ್ಟು ಸಂಪರ್ಕವನ್ನು ಬೆಳೆಯಿಸಿಕೊಂಡರು. ಇದಾದಮೇಲೆ, ಅವರು ತಮ್ಮ ನಿಕಟದ ಶಿಷ್ಯರೊಡನೆ ಕೂಡ, ಎಷ್ಟೋ ವರ್ಷ, ತಾಯಿಯವರ ಮುಖಾಂತರವೆ ಸಂಪರ್ಕವಿಟ್ಟುಕೊಂಡಿದ್ದರು. ೧೯೨೬ರ ನಂತರವಂತೂ ಅವರು ಮತ್ತಷ್ಟು ಏಕಾಂತವಾಸದಲ್ಲಿ ಪ್ರವೇಶಿಸಿದರು. ೧೯೩೦ ರಿಂದ ೧೯೩೮ ರ ವರೆಗೆ, ಪತ್ರದ್ವಾರದಿಂದ ವಿಪುಲ ಸಂಬಂಧವನ್ನೆ ಇಟ್ಟುಕೊಂಡಿದ್ದರೆಂದು ಹೇಳಬೇಕಾಗುತ್ತದೆ. ಆಗಿನ ಕಾಲಕ್ಕೆ ಅವರು ಪ್ರತಿದಿವಸ ನಸುಕಿನ ೫ ರ ವರೆಗೂ ಪತ್ರಗಳನ್ನು ಬರೆಯುತಲಿದ್ದರು. ಅವರು ಈ ಪತ್ರಲೇಖನದ ಪರಿಪಾಠವನ್ನು ನಿಲ್ಲಿಸಿದಮೇಲೆ, ಅವರ ಮತ್ತು ಬಾಹ್ಯ ಜಗತ್ತಿನ ನಡುವೆ, ಅದರಂತೆ ಅವರ ಹಾಗೂ ಅವರ ಶಿಷ್ಯರ ನಡುವೆ ಸಹ ತಾಯಿಯವರೆ ಸೇತುವೆಯ ಹಾಗೆ ಇದ್ದು ಸಂಬಂಧ ವನ್ನು ಕಲ್ಪಿಸುತಿದ್ದರು. ಬರಬರುತ್ತ ೧೯೨೭ ರಲ್ಲಿ ದರ್ಶನಪದ್ಧತಿಯನ್ನು ಸಂಘಟಿ ಸಲಾಯಿತು. ದರ್ಶನಕ್ಕಾಗಿ ವರ್ಷದಲ್ಲಿ ನಾಲ್ಕು ದಿವಸಗಳನ್ನು ಗೊತ್ತುಮಾಡಲಾ ಗಿತ್ತು. ಆ ದಿನಗಳಲ್ಲಿ, ಆಶ್ರಮವಾಸಿಗಳೂ ದರ್ಶನಾಕಾಂಕ್ಷಿಗಳಾಗಿ ಬಂದ ಹೊರ- ಗಿನ ಇನ್ನುಳಿದ ಜನಗಳೂ ಸಾಲಾಗಿ ನಿಂತು, ಶಾಂತವಾಗಿ ನಿಃಶಬ್ದವಾಗಿ ಅಂದು ಪ್ರತ್ಯೇಕ ಪೀಠವೊಂದರ ಮೇಲೆ ಮಂಡಿಸಿದ ಶ್ರೀ ಅರವಿಂದರನ್ನು ಸಂದರ್ಶಿಸಿ, ಅವರ ಕೃಪಾಕಟಾಕ್ಷದಿಂದ ಸಂತೃಪ್ತರಾಗುತಿದ್ದರು. ಒಮ್ಮೊಮ್ಮೆಯಂತೂ ವಿಶೇಷತಃ ೧೫ನೆಯ ಅಗಸ್ಟ ೧೯೪೭ ರಂತಹ ಸಂದರ್ಭಗಳಲ್ಲಿ, ಈ ಸಂಖ್ಯೆಯು ಎರಡು ಸಾವಿರಕ್ಕೂ ಮಿಕ್ಕುತಿತ್ತು. ಸಂದರ್ಭಾನುಸಾರವಾಗಿ ನಡೆಯುವ ಈ ದರ್ಶನಪದ್ಧ ತಿಯು ಅವರ ಮಹಾಸಮಾಧಿಯ ವರೆಗೂ ನಡೆದುಕೊಂಡು ಬಂದಿತು. ಈ ಬಗೆಯ ಅವರ ಕೊನೆಯ ದರ್ಶನವೆಂದರೆ, ೨೬ನೆಯ ನವೆಂಬರ ೧೯೫೦ ರ ದಿನಾಂಕ ನಡೆದುದೆ.

ಕೆಳಗೆ ಕೊಟ್ಟುದು, ಶ್ರೀ ನಿರೋದಚರಣರು 'ಮದರ ಇಂಡಿಯಾ' ಪತ್ರಿಕೆ ಯಲ್ಲಿ ೧೯ ನೆಯ ಮೇ ೧೯೫೧ ರಂದು ಬರೆದ ಲೇಖನದ ಒಂದು ಭಾಗವಾಗಿದೆ. ಅವರು ಆಗಿನ ಕಾಲಕ್ಕೆ ಶ್ರೀ ಅರವಿಂದರ ದೈನಂದಿನ ಕೆಲಸದಲ್ಲಿ ನೆರವಾಗುತಿದ್ದರು. ಅವರು ಬರೆಯುತ್ತಾರೆ: '............ಚಿರಸ್ಮರಣೀಯವಾದ 'ಸಾವಿತ್ರಿ' ಯಂತೂ ಸರಿಯೆ. ದಿನಪತ್ರಿಕೆಗಳನ್ನು ಓದುವದು, ಆಶ್ರಮಕ್ಕೆ ಸಂಬಂಧಿಸಿದವರಿಂದ ಬರೆಯ ಲ್ಪಟ್ಟ ಅಸಂಖ್ಯಾಕ ಪತ್ರಿಕೆಗಳಾದ ಸಾಪ್ತಾಹಿಕ-ಪಾಕ್ಷಿಕಗಳು, ತ್ರೈಮಾಸಿಕಗಳು ಇವನ್ನೆಲ್ಲ ಓದುವದು, ಹಾಗೂ ನಾಲ್ಕು ಐದು ಭಾಷೆಗಳಲ್ಲಿ ಬರೆಯಲ್ಪಟ್ಟ ಲೇಖನ ಗಳನ್ನೂ ಕವಿತೆಗಳನ್ನೂ ನಿಬಂಧಗಳನ್ನೂ ಪತ್ರಗಳನ್ನೂ ನೋಡುವದು, ಕೇಳಿದ ಪ್ರಶ್ನೆಗಳಿಗೆ ಉತ್ತರಗಳನ್ನು ಹೇಳಿ ಬರೆಯಿಸುವದು, ಇವಕ್ಕೆ ಕಳಸವಿಟ್ಟಂತೆ, ತಮ್ಮ ಸ್ವಂತ ಹಾಗು ಇನ್ನುಳಿದ ಪುಸ್ತಕಗಳನ್ನು ಸಿದ್ಧಗೊಳಿಸುವದು, ಅವುಗಳ ಕೈಬರೆಹದ ಪ್ರತಿಗಳತ್ತಲೂ ಮುದ್ರಣದ ಕರಡುಗಳತ್ತಲೂ ಲಕ್ಷ್ಯಕೊಡುವದು, ಇವೇ

ಮೊದಲಾದ ಕೆಲಸಗಳು ಅವರ ನಿತ್ಯಕ್ರಮಗಳಾಗಿದ್ದವು. ಇವೆಲ್ಲವುಗಳಲ್ಲದೆ, ಪತ್ರಿಕೆಗಳ ಅತ್ಯವಸರದ ಬೇಡಿಕೆಗಳನ್ನೂ ಲೌಕಿಕರು ಸಂಕಟನಿವಾರಣೆಗಾಗಿ ಕೋರಿದ ಆಶೀರ್ವಾದಗಳನ್ನೂ ಮಾರ್ಗದರ್ಶನಕ್ಕಾಗಿ ಕೇಳಿಕೊಂಡ ಆರ್ತರ ಸಹಾಯ ಯಾಚನೆಗಳನ್ನೂ ಒಟ್ಟುಗೂಡಿಸಿಬಿಟ್ಟರೆ ಈ ಪಟ್ಟಿಯು ಎಷ್ಟೊಂದು ಉದ್ದವಾದೀತು! ಈ ಎಲ್ಲ ಮಾತು ಸೂರ್ಯಪ್ರಕಾಶದಷ್ಟು ಸ್ಪಷ್ಟವಿದೆ. ಒಬ್ಬ ಹುಟ್ಟು ಕುರುಡನೂ ಇದನ್ನು ಒಪ್ಪಿಯಾನು! ಈ ಕೆಲಸಗಳನೆಲ್ಲ ಪ್ರತಿದಿನ ಎರಡೇ ಎರಡು ತಾಸುಗಳಲ್ಲಿ ಪೂರೈಸಿಬಿಡಬೇಕು ಬೇರೆ!' ಅವರ ಸಮಗ್ರ ತತ್ತ್ವದರ್ಶನವೂ ಮೂಲ-ಭೂತ ಸಾಧನವಿಧಾನವೂ ಎಲ್ಲವನ್ನೂ ಒಳಗೊಳ್ಳುವಷ್ಟು ವ್ಯಾಪಕವಾಗಿತ್ತು; ಸುತ್ತಲಿನ ಜಗತ್ತಿನಲ್ಲಿ ನಡೆದುದಾವುದನ್ನೂ ಕೀಳ್ಗೈದು ದೂರಿರಿಸಲು ಅವರು ಸಹಸಾ ಸಿದ್ಧರಿರಲಿಲ್ಲ.

ಅವರ ಸಾಧನೆಯು ಸಾಗಿರಲು, 'ಆರ್ಯ' ಪತ್ರಿಕೆಯನ್ನು ಹೊರಡಿಸಿ ಒಂದು ಮಹತ್ವದ ಹೆಜ್ಜೆಯನ್ನೆ ಇಡಲಾಯಿತು. ಆ ಪತ್ರಿಕೆಯು ೧೫ನೆಯ ಅಗಸ್ಟ ೧೯೧೪ರಂದು ಶ್ರೀ ಅರವಿಂದರ ೪೩ನೆಯ ಜನ್ಮದಿನ ಪ್ರಾರಂಭಿಸಲ್ಪಟ್ಟಿತು. ಈ ಮೊದಲೆ ನಮಗೆ ತಿಳಿದಿರುವಂತೆ, ಈ ಪತ್ರಿಕೆಯ ಪ್ರಸ್ತಾಪವು, ಪಾಲ ಮತ್ತು ಮಿರಾ ರಿಚಾರ್ಡರಿಂದ ಬಂತು. ಆಗ ಅವರು ಆ ವರ್ಷದ ಮಾರ್ಚ ತಿಂಗಳಿಂದ ಅಲ್ಲಿಯೆ ಇರುತಿದ್ದರು. ಶ್ರೀ ಅರವಿಂದರನ್ನು ಶ್ರೀ ಮಿರಾ ತಾಯಿಯವರು ಮೊಟ್ಟ ಮೊದಲು ೨೯ನೆಯ ಮಾರ್ಚ, ಬೈಗಿನ ೩-೩೦ಕ್ಕೆ, ಫ್ರಾಂಕ್ವಾ ಮಾರ್ಟಿಮಾ ಬೀದಿಯಲ್ಲಿದ್ದ ೧೦೩ನೆಯ ಮನೆಯಲ್ಲಿ ಭೆಟ್ಟಿಯಾದರು. ಶ್ರೀ ಅರವಿಂದರು ನೂತನ ಪತ್ರಿಕೆಯ ವಿಚಾರಕ್ಕೆ ಒಪ್ಪಿಕೊಂಡರು. ಏಕೆಂದರೆ, ೧೯೦೪-೧೪ರ ವರೆಗೆ ಬಂದ ತಮ್ಮ ಸ್ವಂತದ ಅನುಭವಗಳನ್ನೆ ಆಧರಿಸಿ, ಕೆಲವೊಂದು ವಿಚಾರಗಳನ್ನು ವಿವೇಚಿಸಲು ಅದು ತಕ್ಕ ಸಾಧನವಾಗಬಲ್ಲುದೆಂದು ಅವರು ಬಗೆದರು. ಅವರು ಉದ್ಗರಿಸಿದರು, 'ಅದು ಜಗದ ಸಲುವಾಗಿ ನಾನು ಮಾಡಿದ ಕಾರ್ಯದ ಬೌದ್ಧಿಕ ಅಂಗವಾಗಿ ಉಳಿಯುವದು.' ಅದರ ಫ್ರೆಂಚ್ ಆವೃತ್ತಿಯನ್ನು ಹೊರಡಿಸತಕ್ಕುದೆಂದೂ ನಿರ್ಧಾರವಾಗಿತ್ತು. ಆದರೆ ಯುದ್ಧ ಪ್ರಾರಂಭವಾದುದರಿಂದ ಆ ಮಾತು ಅಲ್ಲಿಯೆ ನಿಂತುಹೋಯಿತು.

ತತ್ತ್ವಜ್ಞಾನದ ಬಗೆಗೆ ಏನಾದರೂ ಬರೆಯುವ ವಿಷಯದಲ್ಲಿ ತಮಗಿದ್ದ ಸಾಮರ್ಥ್ಯವನ್ನು ಕುರಿತು ಅವರು ಹೇಗೆ ವಿನೋದ ಮಾಡಿದ್ದಾರೆಂಬುದನ್ನು ಅರಿತುಕೊಳ್ಳುವದು ಮನೋರಂಜಕವಾಗಿದೆ. ಅವರು ದಿಲೀಪಕುಮಾರರಿಗೆ ಬರೆದು-ದುಂಟು: 'ತತ್ತ್ವಜ್ಞಾನವೇ! ಗುಟ್ಟಿನ ಮಾತೊಂದು ಹೇಳಲೆ? ನಾನು ಎಂದೆಂದೂ ತತ್ತ್ವಜ್ಞಾನಿಯಲ್ಲ! ನಾನು ತತ್ತ್ವಜ್ಞಾನದ ಬಗೆಗೆ ಬರೆದಿರುವೆನೇನೊ ನಿಜ; ಆದರೆ ಅದೊಂದು ಕತೆಯೆ ಬೇರೆ. ನಾನು ಯೋಗಸಾಧನ ಮಾಡುವ ಮೊದಲು ಮತ್ತು

ಪಾಂಡಿಚೇರಿಗೆ ಬರುವ ಮೊದಲು, ತತ್ತ್ವಜ್ಞಾನವನ್ನು ಎಳ್ಳಷ್ಟೂ ಬಲ್ಲವನಲ್ಲ. ನಾನು ಓರ್ವ ಕವಿಯೂ ರಾಜಕಾರಣಿಯೂ ಆಗಿದ್ದೆನಲ್ಲದೆ, ತತ್ತ್ವಜ್ಞಾನಿಯಲ್ಲ! ಹಾಗಾದರೆ ಅದು ನನಗೆ ಹೇಗೆ ಸಾಧ್ಯವಾಯ್ತು ಹಾಗೂ ಏತಕ್ಕಾಗಿ? ಮೊದಲನೆಯ ಕಾರಣ, ರಿಚರ್ಡರು ತತ್ತ್ವಸಂಬಂಧದ ವಿಮರ್ಶೆಯಲ್ಲಿ ನನಗೆ ಸಹಾಯ ನೀಡುವ ದಾಗಿ ಹೇಳಿದ್ದರು. ಅಲ್ಲದೆ ನನ್ನ ಸಿದ್ಧಾಂತದ ಮೇರೆಗೆ ಯೋಗಿಗೆ ನೀಗದ ಕೆಲಸ ವಾವುದು? ಯೋಗಿಯಾದವನು ಬೇಕಾದ ಕೆಲಸಕ್ಕೆ ಕೈಯಿಕ್ಕಬಲ್ಲವನಾಗಿರಬೇಕು. ಆದ್ದರಿಂದ ನಾನು ಆ ಪ್ರಸ್ತಾಪಕ್ಕೆ ಇಲ್ಲೆನಲಿಲ್ಲ. ಆದರೆ ಮುಂದೆ ಅವರು ಯುದ್ಧಕ್ಕೆ ಹೋಗಬೇಕಾಗಿ ಬಂದುದರಿಂದ, ಪ್ರತಿ ತಿಂಗಳವೂ ಅರವತ್ತು ನಾಲ್ಕು ಪುಟಗಳ ತತ್ತ್ವಜ್ಞಾನದ ಭಾರ ಹೊರಿಸಿ ಅವರು ನನ್ನನ್ನು ನಡುನೀರಲ್ಲಿ ಕೈಬಿಟ್ಟರು. ಎಲ್ಲ ವನ್ನೂ ಏಕೈಕಹಸ್ತನಾಗಿ ನಾನೋರ್ವನೆ ಬರೆಯಬೇಕಾಗಿ ಬಂತು! ಎರಡನೆಯ ಕಾರಣ, ನಾನು ದಿನದಿನವೂ ಸಾಧನಮಾಡುತಿದ್ದ ಯೋಗಾಭ್ಯಾಸದಲ್ಲಿ ಗೋಚರಿಸಿದ ಹಾಗೂ ತಿಳಿದು ಬಂದ ಸಂಗತಿಗಳನೆಲ್ಲ ಬೌದ್ಧಿಕವಾಗಿ ಮಂಡಿಸಿ ಬರೆಯುವದಷ್ಟೆ ಇತ್ತಾದ್ದರಿಂದ, ತತ್ತ್ವಜ್ಞಾನವೆಂಬುದು ತಾನೆ ಸಿದ್ಧವಾಗಿಬಿಟ್ಟಿತ್ತು. ಆದರೆ ಇದಕ್ಕೆಯೆ ತತ್ತ್ವಜ್ಞಾನಿ ಎಂದರಾದೀತೆ?.. ......'

ಶ್ರೀ ಅರವಿಂದರ ಅಭಿಮತದಂತೆ, ತತ್ತ್ವಜ್ಞಾನವೆಂಬುದು ವಸ್ತುಗತ ಸತ್ಯವನ್ನು ಮಾನವಬುದ್ಧಿಯಿಂದ ಅರಸುವದು; ಆದರೆ ಅಂತರಾತ್ಮದಲ್ಲಿಯೂ ಬಾಹ್ಯಜೀವನ ದಲ್ಲಿಯೂ ಸತ್ಯ-ಪ್ರತೀತಿಯನ್ನುಪಡೆಯುವ ಪ್ರಯತ್ನವು ಧರ್ಮವೆನಿಸಿಕೊಳ್ಳುವದು. ಇವೆರಡರಲ್ಲಿ, ಶ್ರೀ ಅರವಿಂದರು ದಾರ್ಶನಿಕರಾಗಿರದೆ ಧರ್ಮಾತ್ಮರಾಗಿದ್ದರೆಂದು ಬೇರೆ ಹೇಳಬೇಕಾಗಿಲ್ಲ. ಹೀಗಿದ್ದರೂ ಶ್ರೀ ಅರವಿಂದರು ಧರ್ಮಾತ್ಮರೂ ಅಹುದು, ದಾರ್ಶನಿಕರೂ ಅಹುದು!

ಒಮ್ಮೆ 'ಆರ್ಯ'ವು ಪ್ರಕಟಗೊಳ್ಳುತ್ತಲೆ, ಅದು ತಪ್ಪದೆ, ಹೊತ್ತಿಗೆ ಸರಿ. ಯಾಗಿ ಹೊರಡುವ ಹಾಗೆ ಶ್ರೀ ಅರವಿಂದರು ನೋಡಿಕೊಂಡರು. ರಿಚರ್ಡ ದಂಪತಿ ಗಳು ಯುದ್ಧದ ಕಾಲಕ್ಕೆ ಫ್ರಾನ್ಸಕ್ಕೆ ತೆರಳಬೇಕಾಯ್ತಷ್ಟೆ? ಮುಂದೆ ಭಾರತಕ್ಕೆ ಅವರು ೧೯೨೦ ರಲ್ಲಿ ಮರಳಿದರು. ಅಂದಿನಿಂದ ಶ್ರೀ ತಾಯಿಯವರು ಭಾರತದಲ್ಲಿಯೆ ಇದ್ದುಬಿಟ್ಟಿದ್ದಾರೆ. ಮನೆಯನ್ನು ಒಮ್ಮೆ ಬದಲಿಸಬೇಕಾಗಿ ಬಂದಾಗಲ್ಲದೆ, ಶ್ರೀ ಅರವಿಂದರು ೧೯೨೦ ರ ತರುವಾಯದಿಂದ ಎಂದೂ ತಮ್ಮ ಕೋಣೆಗಳಿಂದ ಹೊರ ಬಂದಿರಲಿಲ್ಲ. ಅವರು ೧೯೧೪ ರಿಂದ 'ಆರ್ಯ'ದ ಕೆಲಸದಲ್ಲಿ ಮುಳುಗಿ ಹೋಗಿ-ದ್ದರೂ ಆಗಿನ ಕಾಲಕ್ಕೆ ಸಂದರ್ಶಕರನ್ನೂ ಇನ್ನುಳಿದ ಅನೇಕ ಜನಗಳನ್ನೂ ಅವರು ತಮ್ಮ ಚಹಾಪಾನದ ವೇಳೆಯಲ್ಲಿ ಬರಮಾಡಿಕೊಂಡರೂ ಅವರ ಸಾಧನಕ್ಕೆ ಯಾವುದೆ ವ್ಯತ್ಯಯವುಂಟಾಗುತಿರಲಿಲ್ಲವೆಂದು ಅವರೆ ಒಮ್ಮೆ ಸ್ವತಃ ಹೇಳಿದ್ದುಂಟು.

ಬ್ಯಾಪ್ಟಿಸ್ಟಾರವರಿಗೆ ಉತ್ತರರೂಪವಾಗಿ ಜನೆವರಿ ೧೯೨೦ ರಲ್ಲಿ ಶ್ರೀ ಅರವಿಂದರು

ಬರೆದ ಪತ್ರವು ಗಮನಾರ್ಹವಾಗಿದೆ. ಆ ಕಾಲದಲ್ಲಿ ಅವರ ಮನೋವಿಚಾರಗಳು ಹೇಗೆ ಸಾಗಿದ್ದವೆಂಬುದನ್ನು ಆ ಪತ್ರವು ತೋರಿಸಿಕೊಡುತ್ತದೆ. ರಾಜಕೀಯ ರಂಗಕ್ಕೆ ಮತ್ತೆ ಮರಳಿ ಬರಬೇಕೆಂದೂ ರಾಷ್ಟ್ರೀಯ ದೈನಿಕ ಪತ್ರಿಕೆಯೊಂದರ ಸಂಪಾದಕತ್ವ ವನ್ನು ವಹಿಸಬೇಕೆಂದೂ ಬ್ಯಾಪ್ಟಿಸ್ಟಾರವರು ಶ್ರೀ ಅರವಿಂದರನ್ನು ಬಿನ್ನವಿಸಿಕೊಂಡಿ ದ್ದರು. ಅರ್ಥಾತ್, ಈ ಬಿನ್ನಹದ ಹಿಂದೆ ಟಿಳಕರ ಧ್ವನಿಯೂ ಇತ್ತು.

ಈ ಪತ್ರದ ಸಾರಾಂಶವು ಹೀಗೆ ಕೆಳಗಿನಂತೆ: ' ನೀವು ಎದುರಿಗೆ ಇಟ್ಟುದು ಲೋಭನೀಯವಾಗಿದೆ. ಆದರೆ ನಾನದನ್ನು ಸ್ವೀಕರಿಸಲಾರೆನೆಂದು ತಿಳಿಸಲು ವಿಷಾದ ವೆನಿಸುತ್ತದೆ. ಅದಕ್ಕೆ ನನ್ನ ಕಾರಣಗಳನ್ನು ಸಂಕ್ಷೇಪದಲ್ಲಿ ಹೇಳಲೆಬೇಕು. ಈಗ ನಾನು ಬ್ರಿಟಿಶ್ ಭಾರತಕ್ಕೆ ಮರಳಲು ಬಯಸುವದಿಲ್ಲ. ನನಗೆ ತಿಳಿದ ಮಟ್ಟಿಗೆ, ಬ್ರಿಟಿಶ ಸರಕಾರವೂ ನನ್ನ ಬರುವಿಕೆಗಾಗಿ ಅಷ್ಟೊಂದು ಅನುಕೂಲವಾಗಿರುವದಿಲ್ಲ. ನಾನು ಅಲ್ಲಿಗೆ ಬರುತ್ತಲೆ ನನಗೆ ಬಹುಶಃ ಕೂಡಲೆ ಕಾರಾಗೃಹವಾಸವೆ ಸೈ. ನನಗೀಗ ಕೈತುಂಬ ಕೆಲಸವಿದೆ. ಆದ್ದರಿಂದ ಅರಮನೆಯ ಅತಿಥಿಯಾಗಿ ನನ್ನ ಸಮಯವನ್ನು ವ್ಯರ್ಥ 'ಕಳೆದುಕೊಳ್ಳಲು ನನಗೆ ಮನಸ್ಸಿಲ್ಲ. ಮೇಲಾಗಿ, ಅಲ್ಲಿ ಬಂದಾಗ ನಾನು ಸರ್ವಸ್ವತಂತ್ರನಾಗಿದ್ದರೂ ಈಗ ಅತ್ತಕಡೆಗೆ ಮರಳುವ ಇಚ್ಛೆ ನನಗಿಲ್ಲ.

' ನಾನು ಇಲ್ಲಿಗೆ ಒಂದು ವಿಶಿಷ್ಟ ಧ್ಯೇಯಕ್ಕಾಗಿ ಬಂದಿದ್ದೇನೆ. ಅದಕ್ಕೋಸ್ಕರ ನನಗೆ ಸ್ವಾತಂತ್ರ್ಯವೂ ಶಾಂತಿ ಸಮಾಧಾನಗಳೂ ಬೇಕಾಗಿದ್ದವು. ದೇಶದ ರಾಜಕೀಯ ಪರಿಸ್ಥಿತಿಗೂ ಇದಕ್ಕೂ ಯಾವ ಸಂಬಂಧವೂ ಇರುವದಿಲ್ಲ. ಭಾರತಕ್ಕಾಗಿ ನಾನು ಮಾಡಬೇಕಾದುದನ್ನು ನನ್ನ ರೀತಿಯಲ್ಲಿ ನಾನು ಮಾಡುತ್ತಲೆ ಇದ್ದೇನೆ. ಸದ್ಯದ ನನ್ನ :ಧ್ಯೇಯವು ಸಿದ್ಧಿಸುವತನಕ, ಇನ್ನಾವುದೆ ಬೇರೆ ಹೊಸ ಕೆಲಸ ದಲ್ಲಿ ಕೈಯಿಕ್ಕುವದು ನನಗೆ ಶಕ್ಯವಿಲ್ಲ. ಈಗ ನಾನು ಬ್ರಿಟಿಶ್ ಭಾರತಕ್ಕೆ ಬಂದು- ದಾದರೆ, ನಾನು ಇನ್ನೆಷ್ಟೊ ಬೇರೆ ವಿಷಯಗಳಲ್ಲಿ ಭಾಗವಹಿಸಬೇಕಾಗುವದು.

' ಪಾಂಡಿಚೇರಿಯು ನನ್ನ ಏಕಾಂತಸ್ಥಾನವಾಗಿದೆ. ಅದು ನನ್ನ ತಪೋ- ಗುಹೆಯು. ಈ ತಪಸ್ಸಿಗೆ ನನ್ನದೇ ನನ್ನದಾದ ಮುದ್ರೆಯಿದ್ದು ಇದು ವಾಡಿಕೆಯ ವೈರಾಗ್ಯಮಾರ್ಗವಲ್ಲ. ಹೊರಬರುವ ಮೊದಲು, ನಾನು ಕೈಕೊಂಡ ಸಾಧನೆಯಲ್ಲಿ ನನ್ನೊಳಗೆ ಪರಿಪೂರ್ಣ ಸಿದ್ಧಿಯನ್ನು ನಾನು ಸಂಪಾದಿಸಿಕೊಳ್ಳಬೇಕು.

' ರಾಜಕಾರಣವು ಕೀಳೆಂದು ನಾನು ಗಣಿಸುವದಿಲ್ಲ; ಅಥವಾ ನಾನದನ್ನೆಲ್ಲ ಮೀರಿ ನಿಂತಿದ್ದೇನೆಂದೂ ಎಣಿಸುವದಿಲ್ಲ. ಯಾವಾಗಲೂ ಆಧ್ಯಾತ್ಮಿಕ ಜೀವನವನ್ನೆ ನಾನು ಒತ್ತಿ ಒತ್ತಿ ಹೇಳುತ್ತ ಬಂದಿದ್ದೇನಾದುದರಿಂದ ಈಗ ನಾನು ಸಂಪೂರ್ಣವಾಗಿ ಹೆಚ್ಚುಹೆಚ್ಚಾಗಿ ಅದನ್ನೆ ಸಾಧಿಸುತಿದ್ದೇನೆ. ಆದರೆ ನನ್ನ ಆಧ್ಯಾತ್ಮಿಕ ಕಲ್ಪನೆಯು ಸಂನ್ಯಾಸವನ್ನು ಬೋಧಿಸುವದಿಲ್ಲ, ಪ್ರಪಂಚದ ಹೊಣೆಯನ್ನು ತಪ್ಪಿಸಿಕೊಳ್ಳಲು

ಹೇಳುವದಿಲ್ಲ. ಈ ಪ್ರಾಪಂಚಿಕ ಪದಾರ್ಥಗಳ ವಿಷಯಕ್ಕೆ ತಿರಸ್ಕಾರವನ್ನಾಗಲಿ ಬೇಸರವನ್ನಾಗಲಿ ಹೊರಪಡಿಸುವ ಬಗೆಗೆ ನನಗೆ ನಂಬಿಗೆಯಿಲ್ಲ. ತುಸು ಹೆಚ್ಚು-ಕಡಿಮೆ ಪ್ರಮಾಣದಲ್ಲಿ ಆಧ್ಯಾತ್ಮಿಕತೆಯನ್ನು ಒಳಗೊಳ್ಳದೆ ಇದ್ದ ವಿಷಯವೆ ಇಲ್ಲ. ಶುದ್ಧ ಆಧ್ಯಾತ್ಮಿಕ ಜೀವನದಲ್ಲಿ ಪ್ರತಿಯೊಂದಕ್ಕೂ ಅವಕಾಶವುಂಟು.

'ರಾಜಕೀಯ ರಂಗದಲ್ಲಿ ಈಗ ನಡೆದಿರುವದನ್ನು ನೋಡಿದರೆ ಅದಕ್ಕೂ ನಾನು ಏನೇನನ್ನು ಮಾಡಬೇಕೆನ್ನುವೆನೋ ಅದಕ್ಕೂ ತುಂಬ ವ್ಯತ್ಯಾಸವುಂಟೆಂದು ತೋರುತ್ತದೆ. ಜನರಲ್ಲಿ ಸ್ವಾತಂತ್ರ್ಯಪ್ರಿಯತೆಯನ್ನು ಹುಟ್ಟಿಸುವದು, ಹಾಗೂ ಕೆಲಸಕ್ಕೆ ಬಾರದ ದಿಕ್ಕಿನಲ್ಲಿ ವ್ಯರ್ಥವಾಗಿ ಸಾಗಿದ ಕಾಂಗ್ರೆಸ್ಸಿನ ಶಕ್ತಿಪ್ರವಾಹವನ್ನು ಬದಲಿಸಿ, ಸ್ವಾವಲಂಬನಪರವಾದ ಮತ್ತು ವೀರೋಚಿತವಾದ ಪಾತ್ರದಲ್ಲಿ ಹರಿ ಬಿಡುವದು ೧೯೦೩-೧೦ರ ಕಾಲಕ್ಕೆ ನನ್ನ ಮುಖ್ಯ ಗುರಿಯಾಗಿತ್ತು. ಆ ಕೆಲಸವು ಈಗ ಪೂರೈಸಲ್ಪಟ್ಟದ್ದು, ಅಮೃತಸರ ಕಾಂಗ್ರೆಸ್ಸು ಅದನ್ನು ಸಿದ್ಧಮಾಡಿ ತೋರಿಸಿ ಕೊಟ್ಟಿದೆ.

'ದೇಶವು ಈಗ ಸ್ವಾತಂತ್ರ್ಯದ ದಾರಿಯಲ್ಲಿದ್ದು ಅದು ದೊರಕಿಯೆ ದೊರಕುವ ದೆಂದು ನಾನು ನೆರೆನಂಬಿದ್ದೇನೆ. ಆದರೆ ಸ್ವಾತಂತ್ರ್ಯಪ್ರಾಪ್ತಿಯ ನಂತರ ದೇಶವು ತನ್ನನ್ನು ತಾನು ಹೇಗೆ ರೂಪಿಸಿಕೊಳ್ಳುವದೊ ಎಂದು ಕೆಲ ಸಲ ನಾನು ಆಲೋಚಿ ಸುತ್ತೇನೆ. ಅದು ಮಹತ್ವದ ಸಂಗತಿಯಾಗಿದೆ.

'ಭಾರತಕ್ಕೆ ಆತ್ಮವೆಂಬುದುಂಟೆಂದೂ ತನ್ನದೆ ತನ್ನದಾದ ಪ್ರತಿಭೆಯ ವೈಖರಿ ಯುಂಟೆಂದೂ ನನ್ನ ನಂಬಿಗೆ. ಸಾಮಾನ್ಯತಃ ನಾನು ಒಂದು ಪ್ರಕಾರದ ಸಾಮಾಜಿಕ ಲೋಕಸತ್ತೆಯ ತತ್ತ್ವಗಳಿಗೆ ಬೆಂಬಲಕೊಡುತ್ತೇನೆ. ಆದರೆ ಆ ತತ್ತ್ವಗಳು, ಭಾರತೀಯ ಸಂಸ್ಕೃತಿಗೂ ಪರಂಪರೆಗೂ ಹೊಂದುಗೂಡಿರಬೇಕು. ಈ ವಿಷಯದ ಬಗೆಗೆ ಸ್ಪಷ್ಟ ಕಲ್ಪನೆಯಿದ್ದವರು ತೀರ ವಿರಳವೆಂದೆ ತೋರುತ್ತದೆ.

ಸುನಿರ್ದಿಷ್ಟವಾದ ಯಾವ ಯೋಜನೆಯೂ ಈಗ ನನ್ನ ಬಳಿಗಿರುವದಿಲ್ಲ. ಈ ವಿಷಯಗಳನ್ನು ಕುರಿತು ನಾನು ದೀರ್ಘಾಲೋಚನೆಯಲ್ಲಿ ಮಗ್ನನಾಗಿರುವೆನಾ ದರೂ ಇನ್ನೂ ಅದಕ್ಕೆ ಸ್ಪಷ್ಟ ಮೂರ್ತಸ್ವರೂಪ ಬಂದಿಲ್ಲ. ಆದುದರಿಂದ ಸುಸ್ಪಷ್ಟ ವಾದುದೇನನ್ನೂ ಜನತೆಗೆ ಕೊಡುವ ಪರಿಸ್ಥಿತಿಯಲ್ಲಿ ನಾನಿರುವದಿಲ್ಲ.'

ಇದೇ ಬಗೆಯಾಗಿ, ಬಾರೀಂದ್ರರು ಅಂದಮಾನದಿಂದ ಬಿಡುಗಡೆಹೊಂದಿ ಬಂದ ನಂತರ ತಮ್ಮ ಪತ್ರಕ್ಕೆ ಶ್ರೀ ಅರವಿಂದರಿಂದ ಪಡೆದ ಉತ್ತರವು ಕೂಡ ಚರಿತ್ರಾರ್ಹ ವಾಗಿದೆ. ಆ ಪತ್ರವು ಎಪ್ರಿಲ ೧೯೨೦ ರಲ್ಲಿ ಬರೆಯಲ್ಪಟ್ಟಿತು. ಅದನ್ನು ಸಂಪೂರ್ಣ ವಾಗಿ ಉದ್ಧರಿಸುವದೆ ಯುಕ್ತವಾಗಿದೆ. ಏಕೆಂದರೆ, ಅದು ಅನೇಕ ಸಂಗತಿಗಳ ಬಗೆಗೆ ಬೆಳಕು ಬೀರುತ್ತದೆ. ಅದಿಲ್ಲದೆ ಹೋಗಿದ್ದರೆ ಆ ಮಾತೆಲ್ಲ ಮಬ್ಬುಗತ್ತ-ಲಲ್ಲಿಯೆ ಉಳಿದುಹೋಗಬಹುದಿತ್ತು. ಆ ಪತ್ರ ಹೀಗುಂಟು :—

೭ ನೆಯ ಎಪ್ರಿಲ, ೧೯೨೦

'ಪ್ರಿಯ ಬಂಧು,

'ನಿನ್ನ ಪತ್ರ ಸಿಕ್ಕಿದೆ; ಆದರೆ ಈ ವರೆಗೆ ಅದಕ್ಕೆ ಉತ್ತರ ಬರೆಯಲು ನನಗೆ ಸಾಧ್ಯವಾಗಲಿಲ್ಲ. ನಿನಗೆ ನಾನೀಗ ಪತ್ರ ಬರೆಯಲು ಕುಳಿತಿರುವದೆಂದರೆ ಒಂದು ಬಗೆಯ ಅಘಟಿತ ಘಟನೆಯೆ ಸರಿ. ಏಕೆಂದರೆ ನನಗೆ ಆಸಿಗೆಗೊಮ್ಮೆ ಬೇಸಿಗೆಗೊಮ್ಮೆ ಬರೆಯುವ ಅನುವಾಗುವದು; ಅದೂ ಬಂಗಾಲಿಯಲ್ಲಿ ಐದು ವರ್ಷಕ್ಕೊಮ್ಮೆಯೊ ಏಳು ವರ್ಷಕ್ಕೊಮ್ಮೆಯೊ. ಆದರೆ ಈ ಅದ್ಭುತ ಘಟನೆಯು, ನಾನೀ ಪತ್ರವನ್ನು ಮುಗಿಸಿ ಅಂಚೆಗೆ ಕೊಟ್ಟಾಗಲೆ ಪೂರ್ತಿಯಾದಂತೆ!

'ಮೊದಲಿಗೆ ನಿನ್ನ ಯೋಗದ ವಿಷಯವನ್ನು ತೆಗೆದುಕೊಳ್ಳುವಾ. ನೀನು ಅದರ ಹೊಣೆಯನ್ನೆಲ್ಲ ನನ್ನ ಮೇಲೆ ಹೊರಿಸಬೇಕೆನ್ನುವಿ. ನಾನು ನಿಃಸಂದೇಹವಾಗಿ ಆ ಹೊಣೆಯನ್ನು ಹೊತ್ತುಕೊಳ್ಳಲು ಸಿದ್ಧನಿದ್ದೇನೆ. ಇದರ ಅರ್ಥ, ಆ ಭಾರವನ್ನು ಭಗವಂತನ ಹೆಗಲಿಗೆ ಸ್ಥಾನಾಂತರಿಸುವದು ಎಂದೇ ಆಗುವದು. ಏಕೆಂದರೆ ಆತನೇ ನಿನ್ನನ್ನೂ ನನ್ನನ್ನೂ ಕಾಣುವಂತೆಯೊ ಕಾಣದಂತೆಯೊ, ಭಗವತೀಶಕ್ತಿಯ ಮೂಲಕ, ಕೈ ಹಿಡಿದು ಕರೆದೊಯ್ಯುತಿದ್ದಾನೆ. ಇದರ ಅನಿವಾರ್ಯವಾದ ಪರಿಣಾಮವೇನು ಗೊತ್ತೆ? ತೋರಿಸಿಕೊಟ್ಟ ಹಾದಿಯಲ್ಲಿ ನಾನು ಹೆಜ್ಜೆಹಾಕುತಿದ್ದು, ನೀನಾದರೂ ಅದೇ ಹಾದಿಯಲ್ಲಿ ನಡೆಯಬೇಕಾಗುವದು. ಅದಕ್ಕೆ ನಾವು ಪೂರ್ಣಯೋಗವೆಂದು ಕರೆಯುತ್ತೇವೆ .. .. .... ನಾನು ಯಾವುದರಿಂದ ಪ್ರಾರಂಭಿಸಿದೆನೊ ಮತ್ತು ಯಾವುದಕ್ಕೆ ಅನುಗುಣವಾಗಿ ಲೇಲೆಯುವರು ಪುಷ್ಟಿಯನ್ನಿತ್ತರೊ, ಅದೆಲ್ಲ ಅನ್ವೇಷಣದ ಸಮಯದಲ್ಲಿ ನಡೆದುದು. ಆ ಮೇಲೆ ನಾನು ಈ ಮಾರ್ಗ, ಆ ಮಾರ್ಗ ಹೀಗೆ ಏಷ್ಟೊ ಹುಡುಕಿ-ನೋಡಿದೆ, ಎಷ್ಟೊ ಸಂಗತಿಗಳನ್ನು ಪರೀಕ್ಷಿಸಿ ನೋಡಿದೆ. ಹಳೆಯ ಕಾಲದ ಏಕದೇಶೀಯ ಅಪೂರ್ಣ ಯೋಗಗಳನ್ನು ಹೊಕ್ಕು ಹುಡುಕಿದೆ, ಅವನ್ನು ಒಂದೊಂದಾಗಿ ಅಭ್ಯಸಿಸಿದೆ, ಒರೆಹಚ್ಚಿದೆ, ಅಲ್ಲದೆ ಒಂದೊಂದಾಗಿ ಅನೇಕ ಅನುಭವಗಳೊಳಗಿಂದಲೂ ಹಾಯ್ದು ಬಂದೆ.

'ಪಾಂಡಿಚೇರಿಗೆ ಬಂದಮೇಲೆ, ಈ ಹೊಯ್ದಾಟದ ಮತ್ತು ಅಸ್ಥಿರತೆಯ ಸ್ಥಿತಿಯು ತೊಲಗಿತು. ನನ್ನ ಹೃದಯಸ್ಥನಾದ ಜಗದ್ಗುರುವು, ತನ್ನ ಮಾರ್ಗವನ್ನು ಸಂಪೂರ್ಣವಾಗಿ ತೋರಿಸಿಕೊಟ್ಟನು. ಈ ಯೋಗದ ಸಂಪೂರ್ಣ ಸಿದ್ಧಾಂತದ ಪ್ರಕಾರವಾಗಿ ಇದರಲ್ಲಿ ಹತ್ತು ಹಂತಗಳುಂಟು. ಕಳೆದ ಹತ್ತುವರ್ಷಗಳಿಂದ, ಬಗೆ ಬಗೆಯ ಅನುಭವಗಳೊಳಗಿಂದ ಹಾಯ್ದು ಹಾಯ್ದು, ಈ ಯೋಗಸಿದ್ಧಾಂತದ ಬೆಳವಣಿಗೆಯನ್ನು ಪರಿಪೂರ್ಣತೆಗೆ ಮುಟ್ಟಿಸಲು ಹೆಣಗುತಿದ್ದೇನೆ. ಈ ಬೆಳವಣಿಗೆಯು ಇನ್ನೂ ಪೂರ್ತಿಗೊಂಡಿಲ್ಲ. ಇನ್ನೂ ಎರಡು ವರ್ಷಗಳು ಬೇಕಾದಾವೆಂದು ಇಲ್ಲಿ ಹೇಳಲಡ್ಡಿಯಿಲ್ಲ.

‘ ಈ ಯೋಗದ ಗುಣವಿಶೇಷದ ಬಗೆಗೆ ನಿನಗೆ ಮುಂದೆ ಬರೆಯುವೆನು. ಅಥವಾ ನೀನೆ ಇಲ್ಲಿಗೆ ಬಂದುದಾದರೆ ಅದರ ವಿಷಯಕ್ಕೆ ಮಾತಾಡುವಾ. ಈ ಬಗೆಯ ವಿಷಯಗಳನ್ನು ಬರೆಯುವದಕ್ಕಿಂತ ಒಬ್ಬರಿಗೊಬ್ಬರು ಮಾತನಾಡಿಯೆ ತಿಳಿದು ಕೊಳ್ಳುವದು ಮೇಲು. ಈಗಿಂದೀಗಲೆ ನಾನು ನಿನಗೆ ಇಷ್ಟು ಮಾತ್ರ ಹೇಳಬಲ್ಲೆ: ಇದರೊಳಗಿನ ಮೂಲಭೂತ ತತ್ತ್ವವೆಂದರೆ, ಪೂರ್ಣ ಜ್ಞಾನ, ಪೂರ್ಣ ಕರ್ಮ, ಪೂರ್ಣ ಭಕ್ತಿ ಇವುಗಳ ಸಮನ್ವಯ ಮತ್ತು ಸರ್ವಾಂಗೀಣ ಸಾಮರಸ್ಯ ಉಂಟು ಮಾಡುವದಾಗಿದೆ. ಈ ಸಮನ್ವಯ, ಈ ಸಾಮರಸ್ಯವು, ಮನೋಮಯಕೋಶವನ್ನು ಮೀರಿ, ಮುಂದೆ ಇನ್ನೂ ಆಚೆಗಿರುವ ಪ್ರಜ್ಞಾನಮಯ ಅಥವಾ ಅತಿಮಾನಸಕೋಶಕ್ಕೆ ಏರಿ, ಇವನ್ನು ಅಲ್ಲಿ ಪರಿಪೂರ್ಣತೆಗೆ ಮುಟ್ಟಿಸಬೇಕು. ಮೊದಲಿನ ಯೋಗಗಳಲ್ಲಿದ್ದ ಮುಖ್ಯ ವೈಗುಣ್ಯವೆಂದರೆ ಮನಸ್ಸು, ಬುದ್ಧಿ, ಆತ್ಮ ಇವಿಷ್ಟನ್ನೆ ಅವು ಅರಿತಿದ್ದವು. ಮನೋಮಯ ಲೋಕದಲ್ಲಿ ಬಂದ ಆಧ್ಯಾತ್ಮಿಕ ಅನುಭವಗಳಿಂದಲೆ ಆ ಯೋಗಗಳು ಸಂತೃಪ್ತಿಹೊಂದುತಿದ್ದವು. ಆದರೆ, ಮನಸ್ಸು ಜ್ಞಾನವನ್ನು ಅಂಶತಃ ಮಾತ್ರ ಗ್ರಹಣ ಮಾಡಿಕೊಳ್ಳಬಲ್ಲದು, ಹಾಗೂ ಮನಸ್ಸಿಗೆ ಖಂಡಜ್ಞಾನವಿಲ್ಲದೆ ಅಖಂಡಜ್ಞಾನವು ಸಾಧ್ಯವಿಲ್ಲ. ಅನಂತತೆಯನ್ನೂ ಸಮಗ್ರ ಸತ್ಯವನ್ನೂ ಮನಸ್ಸು ಸಂಪೂರ್ಣವಾಗಿ ಆಕಲನಮಾಡಲರಿಯದು. ಮನಸ್ಸು, ಅನಂತವೂ ಸರ್ವತೋಮುಖವೂ ಆದ ಸದ್ವಸ್ತುವನ್ನು ಸಮಾಧಿಮೂಲಕವಾಗಿಯೊ ಮೋಕ್ಷಮೂಲಕವಾಗಿಯೊ ಅಥವಾ ನಿರ್ವಾಣಮೂಲಕವಾಗಿಯೊ ಅರಿತುಕೊಳ್ಳಬಲ್ಲದು; ಇನ್ನು ಬೇರೆ ಮಾರ್ಗವಿಲ್ಲ. ಎಷ್ಟೋ ಜನರು ಈ ಬಗೆಯ ಮೋಕ್ಷವನ್ನು ಖಂಡಿತ ಹೊಂದುತ್ತಾರೆ ನಿಜ; ಆದರೆ ಅವರ ದಾರಿ ಇಕ್ಕಟ್ಟಾದ ದಾರಿಯೆಂದು ಹೇಳಬಹುದು. ಆದರೆ ಅದರಿಂದ ಅಗುವ ಪ್ರಯೋಜನವೇನು? ಬ್ರಹ್ಮನು, ಆತ್ಮನು, ಭಗವಂತನು ಅಲ್ಲಿ ಇರುತ್ತಾರೆ; ಹಾಗೂ ಅವರವರು ಇರುವದು ತಮ್ಮತಮ್ಮ ಸಾಧನೆಗಳಲ್ಲಿಯೆ. ಆದರೆ ಭಗವಂತನು ಮಾನವನ ಜೊತೆಗೂಡಿ ಏನು ಮಾಡಬಯಸಿದ್ದಾನೆ ಗೊತ್ತೆ? ಮಾನವನು ತನ್ನ ಜೀವನದಲ್ಲಿಯೆ ದೇವರನ್ನು ಸಾಕ್ಷಾತ್ಕರಿಸಿಕೊಳ್ಳಲು, ವ್ಯಕ್ತಿಜೀವನದಲ್ಲಿಯೂ ಸಾಮೂಹಿಕವಾಗಿರುವ ಸಮಾಜಜೀವನದಲ್ಲಿಯೂ ದೇವರನ್ನು ಪ್ರಕಟಗೊಳಿಸಲು ಅವರಿಗೆ ಶಕ್ತಿ ನೀಡಬಯಸಿದ್ದಾನೆ (ಜೀವನದಲ್ಲಿ ದೇವರ ಆವಿಷ್ಕಾರ).

‘ ಹಳೆಯ ಕಾಲದ ಯೋಗಪದ್ಧತಿಗಳಿಗೆ, ಸಮನ್ವಯವನ್ನು, ಅಥವಾ ಆಧ್ಯಾತ್ಮಿಕತೆ ಮತ್ತು ಜೀವನ ಇವೆರಡರಲ್ಲಿ ಐಕ್ಯವನ್ನು ಉಂಟುಮಾಡುವದು ಸಾಧ್ಯವಾಗಲಿಲ್ಲ; ಮಾಯೆಯೆಂದು ಅಥವಾ ಪ್ರಭುವಿನ ಭಂಗುರ ಲೀಲೆಯೆಂದು ಈ ಜಗತ್ತನ್ನು ಅವು ಅಲ್ಲಗಳೆದುಬಿಟ್ಟವು. ಅದರ ಫಲವಾಗಿ ಜೀವನದ ಪ್ರಾಣಬಲ ಓಜೋಬಲಗಳೆ ಹೀರಿಹೋಗಿ ಭಾರತದೇಶವು ಅವನತಿಗಿಳಿಯಿತು. ಗೀತೆಯಲ್ಲಿ ಹೇಳಲಾಗಿದೆ: ‘ ನಾನು (ಶ್ರೀಕೃಷ್ಣ) ಒಂದುವೇಳೆ ಕರ್ಮಮಾಡುವದನ್ನು ನಿಲ್ಲಿಸಿ

ಬಿಟ್ಟೆನಾದರೆ, ಈ ಲೋಕಗಳೆಲ್ಲ ನಿರ್ನಾಮ ಹೊಂದಿಬಿಡುವವು' * ಹಾಗೆಯೆ ಆಗಿ ಕೂತಿದೆ; 'ಈ ಜಗತ್ತು', ಭಾರತದೇಶದ ಮಟ್ಟಿಗಾದರೂ ನಿಜವಾಗಿಯೂ ನಿರ್ನಾಮವಾಗಿ ಹೋಗಿದೆ. ಕೆಲವು ಸಂನ್ಯಾಸಿಗಳು, ವೈರಾಗಿಗಳು, ಸಾಧುಗಳು, ಸಿದ್ಧರು, ಆಧ್ಯಾತ್ಮಿಕ ಪರಿಪೂರ್ಣತೆಯನ್ನು ಹೊಂದಿ 'ಮುಕ್ತ' ರಾಗಿರುತ್ತಾರೆಂಬಲ್ಲಿ ಸಂದೇಹವಿಲ್ಲ. ಕೆಲಕೆಲ ಭಕ್ತರು ಭಗವಂತನ ಬಗೆಗಿದ್ದ ಪ್ರೇಮಮೂಲಕವಾಗಿ ಮತ್ತು ತೀವ್ರ ಭಾವಾವೇಗಮೂಲಕವಾಗಿ, ಆನಂದೋನ್ಮಾದದಲ್ಲಿ ಕುಣಿಕುಣಿದಾಡಬಹುದು; ಆದರೆ ಸಮಗ್ರ ಜನಾಂಗಕ್ಕೆ ಜನಾಂಗವೆ ದುರ್ಬಲವಾಗಿ, ಸರಿಯಾದ ತಿಳಿವಳಿಕೆಯಿಲ್ಲದೆ ಉಳಿದುಬಿಡುವದು. ಜನರೆಲ್ಲ ತಮಸ್ಸಿನಲ್ಲಿ ಮುಳುಗಿಹೋಗುವರು. ಇದೆಂತಹ ಆಧ್ಯಾತ್ಮಿಕ ಮುಕ್ತಿ? ಮೊದಮೊದಲು ಮನೋಮಯ ಕೋಶದ ಮಟ್ಟದಲ್ಲಿ ಬರುವ ಆಂಶಿಕ ಅನುಭವಗಳೊಳಗಿಂದ ಹಾಯ್ದು, ಆಮೇಲೆ ಮನಸ್ಸನ್ನು ಆಧ್ಯಾತ್ಮಿಕತೆಯಲ್ಲಿ ಅದ್ದಿ, ಆತ್ಮತತ್ತ್ವದ ಪ್ರಭೆಯಿಂದ ಮನಸ್ಸನ್ನು ಉಜ್ವಲಗೊಳಿಸಿ, ಅದನ್ನು ಇನ್ನೂ ಮೇಲಮೇಲಕ್ಕೆ ಎತ್ತಬೇಕು. ಅತಿಮಾನಸದಲ್ಲಿ ಪ್ರವೇಶಿಸಿದ ಹೊರತು, ಈ ಸೃಷ್ಟಿಯ ಅಂತಿಮ ರಹಸ್ಯವನ್ನು ಅರಿತುಕೊಳ್ಳುವದು ಮಾನವನಿಗೆ ಅಸಾಧ್ಯವಾಗಿದೆ. ಇದಾದ ವಿನಾ, ಈ ಜಗತ್ತಿನ ಜಟಿಲ ಸಮಸ್ಯೆಯನ್ನು ಬಿಡಿಸುವದೂ ಸಾಧ್ಯವಾಗಲಾರದು. ಆ ಅತಿಮಾನಸದ ಸ್ತರದ ಮೇಲೆಯೆ ಈ ಜೀವ-ಜಡಗಳ ಆಧ್ಯಾತ್ಮಿಕತೆ ಜೀವನಗಳ ದ್ವಂದ್ವವಿಷಯಕವಾಗಿದ್ದ ಅಜ್ಞಾನವು ದೂರವಾಗಬಲ್ಲದು. ಆ ಮಟ್ಟಕ್ಕೆ ಮುಟ್ಟಿದಾಗ, ಅಲ್ಲಿ ಈ ಜಗವು ಮುಂದೆಂದೂ ಮಾಯೆಯೆಂದು ತೋರಿಬರುವದಿಲ್ಲ; ಆದರೆ ಅದು ಭಗವಂತನ ಚಿರಂತನ ಲೀಲೆಯೆಂದು ಗೋಚರಿಸುವದು; ಅಲ್ಲದೆ ಅಲ್ಲಿ, ದಿನದಿನವೂ ಅಂತರಾತ್ಮನು ಬೆಳೆಯುತ್ತಿರುವದನ್ನು ಸಾಧಕನು ಕಣ್ಣಾರೆ ಕಾಣತೊಡಗುತ್ತಾನೆ. ಕೇವಲ ಆಗಲೆ ಸಾಧಕನು ಭಗವಂತನ ಸಂಪೂರ್ಣ ಜ್ಞಾನಮಾಡಿಕೊಂಡು ಅವನನ್ನು ಹೊಂದಲು ಸಮರ್ಥನಾಗುತ್ತಾನೆ. 'ನನ್ನನ್ನು ಸಮಗ್ರವಾಗಿ, ಅಶೇಷವಾಗಿ ತಿಳಿದುಕೊಳ್ಳುವದು' ಎಂಬುದಾಗಿ ಗೀತೆಯಲ್ಲಿ ಇದರ ಉಲ್ಲೇಖ ಮಾಡಲಾಗಿದೆ.† ಈ ಜಡದೇಹ, ಪ್ರಾಣ, ಬುದ್ಧಿಗತ

* ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಂ ।
ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥ —ಅ. ೩, ಶ್ಲೋ. ೨೪

† ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಞ್ಜನ್ ಮದಾಶ್ರಯಃ ।
ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥
ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।
ಯಜ್ಜ್ಞಾತ್ವಾ ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ ॥
—ಅ. ೭, ಶ್ಲೋ. ೧-೨

ಮನ, ಅತಿಮನ ಹಾಗು ಆನಂದ ಇವು ಐದು ಆತ್ಮನ ಕೋಶಗಳು ಅಥವಾ ಭೂಮಿಕೆಗಳಾಗಿವೆ. ಮಾನವನು ಮೇಲಮೇಲಕ್ಕೆ ಹೋದಹೋದಂತೆಲ್ಲ ಆತ್ಮ ವಿಕಾಸದಲ್ಲಿಯ ಸಿದ್ಧಿಯು ಉನ್ನತತಮ ಶಿಖರದ ಸಮಿಸಮೀಪಕ್ಕೆ ತಲುಪುತ್ತಾನೆ. ಅತಿಮಾನಸದ ಗಡಿಯಲ್ಲಿ ಕಾಲಿಕ್ಕಿದಾಗ ಆನಂದದಲ್ಲಿ ಅವಸ್ಥಾಂತರ ಹೊಂದುವದು ಸಾಧಕನಿಗೆ ಬಲು ಸುಲಭ. ಆಗ ಸಾಧಕನು ಅನಂತ ಆನಂದದ ಸ್ಥಿತಿಯಲ್ಲಿ ಪ್ರತಿಷ್ಠಾನಪಡೆಯುತ್ತಾನೆ. ಹೀಗೆ ನೆಲೆಯೂರಿ ನಿಲ್ಲುವದು ಕೇವಲ ದಿಕ್ಕಾಲಾತೀತ ನಾದ ಪರಬ್ರಹ್ಮನಲ್ಲಿ ಅಷ್ಟೇ ಅಲ್ಲ, ಆದರೆ ಈ ದೇಹದಲ್ಲಿ, ಈ ಪ್ರಾಣದಲ್ಲಿ, ಹಾಗು ಈ ಐಹಿಕ ಭೌತ ಜಗತ್ತಿನಲ್ಲಿ ಕೂಡ. ಸತ್-ಚಿತ್-ಆನಂದಗಳು ಸಂಪೂರ್ಣವಾಗಿ ಅರಳಿಕೊಂಡು ಈ ಜೀವನವನ್ನು ದೇದೀಪ್ಯಮಾನವಾಗಿ ತೊಳಗಿಸುವವು. ಈ ಪ್ರಯತ್ನವೆ ನನ್ನ ಯೋಗಪದ್ಧತಿಯು ಸಾರಸರ್ವಸ್ವವಾಗಿದೆ.

'ಇದು ಸರ್ವಥಾ ಅಷ್ಟೊಂದು ಸುಲಭ ಸಂಗತಿಯಲ್ಲ. ಈ ಹದಿನೈದು ವರ್ಷಗಳ ಕಷ್ಟಕರ ಪರಿಶ್ರಮದ ತರುವಾಯವೂ ನಾನು ಅತಿಮಾನಸದ ಮೂರು ಹಂತಗಳಲ್ಲಿ ತೀರ ಕೆಳಗಿನದನ್ನು ಮಾತ್ರ ಮುಟ್ಟಿದ್ದೇನೆ ಹಾಗೂ ಅದರಲ್ಲಿ ನನ್ನೊಳ-ಗಿನ ನಿಮ್ನಪ್ರವೃತ್ತಿಗಳನೆಲ್ಲ ಸೆಳೆದು ತರಲು ಅತ್ಯಂತ ಪ್ರಯಾಸಪೂರ್ವಕವಾಗಿ ಪ್ರಯತ್ನಿಸುತಿದ್ದೇನೆ. ಆದರೆ ಈ ಉದ್ಯಮವು ಒಮ್ಮೆ ಸಿದ್ಧಿಸಿಬಿಟ್ಟದಾದರೆ, ಪರಮೇಶ್ವರನು ನನ್ನ ಮುಖಾಂತರವಾಗಿ ಇನ್ನುಳಿದವರಿಗೆ, ಈ ಅತಿಮಾನಸವನ್ನು ತಲುಪುವಲ್ಲಿ, ಅವರ ಅಲ್ಪ ಪ್ರಯತ್ನಕ್ಕೆ ಗೆಲವನ್ನು ದಯಪಾಲಿಸುವನು. ನನ್ನ ಮನಸ್ಸಿನಲ್ಲಿ ಆ ಬಗೆಗೆ ಲವಲೇಶವೂ ಸಂಶಯವಿಲ್ಲ. ಆಗ ಮಾತ್ರ ನನ್ನ ನಿಜವಾದ ಕಾರ್ಯವು ಪ್ರಾರಂಭವಾಗುವದು. ನನ್ನ ಕಾರ್ಯಸಿದ್ಧಿಯು ಬಗೆಗಾಗಲಿ ಅದನ್ನು ಪೂರೈಸಿ ಮುಗಿಸುವ ಬಗೆಗಾಗಲಿ ನಾನು ತವಕಪಡುವದಿಲ್ಲ. ಬ್ರಹ್ಮಸಂಕಲ್ಪದಲ್ಲಿ ಇದ್ದುದು ನಿರ್ದಿಷ್ಟ ಕಾಲಕ್ಕೆ ಭಗವಂತನ ಮುಖಾಂತರವೆ ಘಟಿಸುವದು. ನಾನು ನಾನೆಂಬ ಬಡ ಅಹಂಭಾವವನ್ನು ತುಂಬಿಕೊಂಡ ಓರ್ವ ತಲೆತಿರುಕನಂತೆ ನಾನೇನು ಕರ್ಮಭೂಮಿಯಲ್ಲಿ ಅವಸರವಸರದಿಂದ ಧುಮ್ಮಿಕ್ಕುವ ಸಂಭವವಿಲ್ಲ. ನನ್ನ ಈ ಪ್ರಯತ್ನಗಳಿಗೆ ಗೆಲವಿನ ಕಳಸ ಕಟ್ಟದೆ ಹೋದರೂ ನಾನೇನು ಎದೆಗೆಡುವದಿಲ್ಲ; ಈ ಕೆಲಸವು ಸಹಸಾ ನನ್ನದಲ್ಲ; ಅದು ಭಗವಂತನದಾಗಿದೆ. ನಾನು ಇನ್ನಾವ ಬೇರೆ ಕರೆಗೂ ಕಿವಿಗೊಡತಕ್ಕವನಲ್ಲ. ಭಗವಂತನು ನನ್ನನ್ನು ಕರ್ಮರಂಗಕ್ಕೆ ಕಳಿಸಿ ಕೊಟ್ಟಾಗ ನಾನು ಖಂಡಿತ ಹೋಗುವೆ.

'ಬಂಗಾಲವು ಇನ್ನೂ ಪೂರ್ಣ ಪರಿಪಕ್ವ ಸ್ಥಿತಿಗೆ ಮುಟ್ಟಿಲ್ಲವೆಂಬುದನ್ನು ನಾನು ಬಲ್ಲೆ. ಇಂದು ಕಂಡುಬರುವ ಆಧ್ಯಾತ್ಮಿಕ ಪ್ರವಾಹದ ಮಹಾಪೂರವು ಬಹುಶಃ ಹಳೆಯದೆ ಹೊಸ ರೂಪದಲ್ಲಿ ಮೈದಾಳಿದಂತಿದೆ. ಅದು ನಿಜವಾದ ರೂಪಾಂತರ ವಾಗಿರುವದಿಲ್ಲ. ಇದರ ಆವಶ್ಯಕತೆಯೂ ನಿಃಸಂದೇಹವಾಗಿ ಇದ್ದೇ ಇತ್ತು.

ಬಂಗಾಲವು ಹಳೆಯ ಯೋಗಗಳನ್ನೆಲ್ಲ ಪುನರುಜ್ಜೀವನಗೊಳಿಸುತಿದೆಯಲ್ಲದೆ ಅವುಗಳ ಗತಿ ಲಕ್ಷಣಗಳನೆಲ್ಲ ಆತ್ಮಸಾತ್ ಮಾಡಿಕೊಳ್ಳುತಿದೆ. ಸಾರವನ್ನು ಹೀರಿ ತೆಗೆಯಲು ಹಾಗೂ ನೆಲದ ಹುಲುಸನ್ನು ಬೆಳೆಯಿಸಲು ಅದು ಪ್ರಯತ್ನಿಸುತಿದೆ. ಮೊದಲು ವೇದಾಂತ, ಅದ್ವೈತ, ಸಂನ್ಯಾಸ, ಶಂಕರರ ಮಾಯಾವಾದ ಇವೇ ಮೊದಲಾದವುಗಳ ಸರತಿ ಬಂತು. ಈಗ ಪ್ರಚಲಿತವಿರುವದು ವೈಷ್ಣವಪಂಥದ ಹಾಗೂ ಅದರ ಲೀಲೆಯ, ಪ್ರೇಮದ ಮತ್ತು ಭಾವಪ್ರವಣ ಭಕ್ತಿಯ ಸ್ವರ್ಗೀಯ ಆನಂದವೆಂದು ತೋರುತಿದೆ. ಇದೆಲ್ಲ ಬಹು ಬಹು ಪ್ರಾಚೀನವಾದುದು. ಇದು ಹೊಸ ಯುಗಕ್ಕೆ ಉಪಯುಕ್ತವಾದುದಲ್ಲ. ಇದು ಬಹುಕಾಲ ಬಾಳತಕ್ಕುದಲ್ಲ. ಈ ಬಗೆಯು ಬಾಳಲು ಯೋಗ್ಯವಾದುದೂ ಅಲ್ಲ. ಒಂದು ಮಾತು ಮಾತ್ರ ಖಂಡಿತ, ವೈಷ್ಣವ ಪಂಥದಲ್ಲಿ ಒಂದು ಸದ್ಗುಣವುಂಟು; ಅದೆಂದರೆ, ಭಗವಂತ ಮತ್ತು ಈ ಜಗತ್ತು ಇವುಗಳ ನಡುವಿರುವ ಸಂಬಂಧವನ್ನು ಅದು ಉಳಿಸಿಕೊಂಡಿದೆ. ಅದು ಜೀವನಕ್ಕೆ ಅರ್ಥವನ್ನು ತುಂಬುತ್ತದೆ. ಆದರೆ ಇದು ಆಂಶಿಕ ಭಾವವಾದುದರಿಂದ ಸರ್ವತೋಮುಖ ಸಂಬಂಧವು ಅಥವಾ ಸಂಪೂರ್ಣ ವೈಶಿಷ್ಟ್ಯವು ಅದರಿಂದ ಬೆಳೆದು ಬರುವದಿಲ್ಲ. ನೀನು ಗಮನಿಸಿರುವ ಜಾತೀಯತೆಯ ಭಾವವು ಈಗಿದ್ದ ಪರಿಸ್ಥಿತಿಯಲ್ಲಿ ಅನಿವಾರ್ಯವಾಗಿದೆ. ಒಂದು ಅಂಶವನ್ನಷ್ಟೆ ತೆಗೆದುಕೊಂಡು ಅದಕ್ಕೆಯೆ ಸಮಗ್ರವೆಂದು ಕರೆಯುವದು, ಹಾಗೂ ಇನ್ನುಳಿದ ಅಂಶಗಳನ್ನೆಲ್ಲ ಬಿಟ್ಟುಕೊಡುವದು, ಇದೆಲ್ಲ ಮನಸ್ಸಿನ ಸ್ವಭಾವಗತ ಗುಣವೆ ಆಗಿಬಿಟ್ಟಿದೆ. ಒಂದು ವಿಶಿಷ್ಟವಾದ ಪಂಥವನ್ನು ಬೋಧಿಸುವ ಸಿದ್ಧರು ಸಮಗ್ರತೆಯು ತಮಗೆ ತೋರಿದ ಒಂದು ದಿವ್ಯ ದರ್ಶನದ ಕೆಲವೊಂದು ಭಾಗವನ್ನು ಹಿಡಿದಿರಿಸಬಲ್ಲರೇನೊ ನಿಜ; ಆದರೂ ಅವರು ಅದಕ್ಕೊಂದು ಮೂರ್ತಸ್ವರೂಪವನ್ನು ಕೊಡಲಿಕ್ಕೆ ಸಾಕಷ್ಟು ಸಮರ್ಥರಾಗಿರುವದಿಲ್ಲ. ಅವರ ಶಿಷ್ಯರಲ್ಲಂತೂ ಆ ದಿವ್ಯ ದರ್ಶನದ ಲವಲೇಶವೂ ಇರುವದಿಲ್ಲ; ಏಕೆಂದರೆ ಸ್ವತಃ ಗುರುವಿನಲ್ಲಿಯೆ ಅದು ಸ್ಪಷ್ಟ ಮೂರ್ತಸ್ವರೂಪದಲ್ಲಿ ಪೂರ್ಣವಾಗಿ ಬೆಳೆದು ಬಂದಿರುವದಿಲ್ಲ. ತೊಡಕುಗಳು ಉಂಟಾಗಲೊಲ್ಲವೇಕೆ; ಅದರಲ್ಲೇನು ಮಹಾ? ದೇಶದಲ್ಲಿ ಭಗವಂತನು ತನ್ನ ಪೂರ್ಣ ಸ್ವರೂಪದಲ್ಲಿ ಕಾಣಿಸಿಕೊಂಡಾಗಲೆ ಆ ತೊಡಕುಗಳೊಂದೂ ನಿಲ್ಲಲಾರವು. ಇದೆಲ್ಲವೂ ಅಪೂರ್ಣತೆಯ, ಅಪರಿಪಕ್ವತೆಯ ಲಕ್ಷಣವಾಗಿದೆ. ನಾನು ಅದಾವುದರಿಂದಲೂ ಗೊಂದಲಗೆಡುವದಿಲ್ಲ. ನಾಡಿನಲ್ಲಿ ಆಧ್ಯಾತ್ಮಿಕತೆಯ ಲೀಲೆಗೆ ಮುಕ್ತಾವಕಾಶವು ದೊರಕಿಬಿಡಲಿ; ಅದೆಷ್ಟೆ ರೂಪಗಳಲ್ಲಿ ಅದೆಷ್ಟೆ ಗುಂಪುಗಳಲ್ಲಿ ಆಗಲೊಲ್ಲದೇಕೆ. ಆ ಮೇಲೆ ಅವುಗಳ ಪರಾಮರ್ಶೆ ಮಾಡಬಂದೀತಂತೆ. ನವಮನ್ವಂತರದ ಶೈಶವಾಸ್ಥೆಯು ಇದು; ಅಥವಾ ಇದಕ್ಕೆ ಗರ್ಭಾವಸ್ಥೆಯೆಂದೂ ಲಕ್ಷಣ ಹೇಳಬಹುದು. ಈ ಅವಸ್ಥೆಯು ನವಮನ್ವಂತರದ ಇಂಗಿತ ಮಾತ್ರವಾಗಿದೆಯಲ್ಲದೆ, ಇದಕ್ಕಿನ್ನೂ ಉಪಕ್ರಮವೆಂದು ಕೂಡ ಹೇಳಬರು

ವಂತಿಲ್ಲ ..........

' ಈ ಯೋಗದ ವೈಶಿಷ್ಟ್ಯಗಳಲ್ಲಿ ಒಂದೆಂದರೆ, ಅದು ಕೆಲಮಟ್ಟಿಗಾದರೂ ಪ್ರಗತಿ ಹೊಂದದೆ, ಅದರ ಅಸ್ತಿವಾರವು ಸಹ ಭದ್ರವಾಗಲಾರದು. ನನ್ನ ಯೋಗವನ್ನು ಅನುಸರಿಸುತ್ತ ಸಾಧನ ಮಾಡುತ್ತಿರುವವರಲ್ಲಿ ಎಷ್ಟೊ ಹಳೆಯ ಸಂಸ್ಕಾರಗಳಿದ್ದವು. ಕೆಲವು ಕಳಚಿ ಹೋಗಿರುವವೇನೊ ನಿಜ, ಆದರೆ ಕೆಲವು ಇನ್ನೂ ಉಳಿದುಕೊಂಡಿವೆ. ನಿಮ್ಮೊಳಗೆಲ್ಲ ಸಂನ್ಯಾಸದ ಸಂಸ್ಕಾರವಿತ್ತು ; ಹಾಗೂ ನೀವೆಲ್ಲ ಕೂಡಿ ಅರವಿಂದಮಠವೊಂದನ್ನು ನೆಲೆಗೊಳಿಸಬೇಕೆಂದಿದ್ದಿರಿ. ಸಂನ್ಯಾಸವು ಅಗತ್ಯವಾದ ವಿಷಯವಲ್ಲವೆಂದು ಈಗ ನೀವು ಸಿದ್ಧಾಂತಕ್ಕೆ ಬಂದಿದ್ದೀರಿ. ಆದರೆ ಹಳೆಯ ಸಂಸ್ಕಾರವು ಇನ್ನೂ ನಿಮ್ಮ ಪ್ರಾಣಮಯ ಪುರುಷನನ್ನು ಬಿಟ್ಟಿಲ್ಲ. ಅಂತೆಯೆ ತ್ಯಾಗದಿಂದೊಡಗೂಡಿದ ಪ್ರಾಪಂಚಿಕ ಜೀವನದ ಪಡಿಯಚ್ಚಿನಲ್ಲಿಯೆ ನೀನು ಮಾತನಾಡುತ್ತಿರುವಿ. ಕಾಮನೆಗಳನ್ನು ತ್ಯಾಗಮಾಡತಕ್ಕುದೆಂಬುದನ್ನು ನೀನು ಕಂಡುಕೊಂಡಿರುವೆ ; ಆದರೂ ತ್ಯಾಗಭೋಗಗಳ ನಡುವಿನ ಸಮನ್ವಯವನ್ನು ನೀನಿನ್ನೂ ಚೆನ್ನಾಗಿ ಗ್ರಹಿಸಿಲ್ಲ ಹಾಗು ಕಂಡುಕೊಂಡಿಲ್ಲ. ನೀನು ನನ್ನ ಯೋಗದೀಕ್ಷೆಯನ್ನೇನೊ ಒಳ್ಳೆ ಚನ್ನಾಗಿಯೆ ಸ್ವೀಕರಿಸಿದ್ದೆ ನಿಜ ; ಆದರೆ ಅದು, ಬಂಗಾಲಿಗಳು ಸಾಮಾನ್ಯತಃ ಕೈಕೊಳ್ಳುವ ರೀತಿಯಲ್ಲಿ ಮಾತ್ರ. ಅಂದರೆ, ಚೆನ್ನಾಗಿ ಬಿಂಬಿಸಿಕೊಂಡೂ ತಿಳಿದುಕೊಂಡೂ ಅಲ್ಲ ; ಆದರೆ ಭಕ್ತಿ-ಕರ್ಮಮಾರ್ಗಗಳ ಝೋಕಿನಲ್ಲಿ. ಜ್ಞಾನದ ಗುರುತುಗಳೇನೊ ಕಾಣಿಸಿಕೊಳ್ಳತೊಡಗಿವೆ. ಆದರೆ ಇನ್ನೂ ಅರಿತುಕೊಳ್ಳುವದು ಬಹಳವುಂಟು ; ಇದಲ್ಲದೆ, ಭಾವಪ್ರವಣತೆಯ ಕವಚವಿನ್ನೂ ಕರಗಿರುವದಿಲ್ಲ, ಅದಿನ್ನೂ ನಿರ್ನಾಮವಾಗಿರುವದಿಲ್ಲ. ಸದಾಚಾರದ ಅಭಿಮಾನವನ್ನು ನೀನಿನ್ನೂ ಗೆದ್ದಿರುವದಿಲ್ಲ, ಅಹಂಕಾರವು ಇನ್ನೂ ತಳ ಕಿತ್ತಿಲ್ಲ ; ಆದರೂ ಈ ನಿಟ್ಟಿನಲ್ಲಿ ಹೆಚ್ಚಿನ ಬೆಳವಣಿಗೆಯಿಲ್ಲವೆಂದು ಹೇಳುವಾಗ ನನಗೆ ಸಮಾಧಾನವೆನಿಸುತ್ತದೆ. ನಾನು ಸಹ ಅವಸರಪಡುವದಿಲ್ಲ. ನಿನ್ನ ಸ್ವಭಾವಕ್ಕೆ ಅನುಗುಣವಾಗಿಯೆ ನಾನು ನಿನ್ನನ್ನು ಬೆಳೆಯಗೊಡುವೆ. ಕಟ್ಟಿನ ನಿಯಮನವಾಗಲಿ ನಿರ್ಜೀವ ಏಕರೂಪತೆಯಾಗಲಿ ನನಗೆ ಬೇಕಾಗಿಲ್ಲ. ಮೂಲಭೂತವಾದ ವಸ್ತುವು ಎಲ್ಲರಲ್ಲಿ ಒಂದೆ ಆಗಿದ್ದರೂ ಅದು ತನ್ನನ್ನು ತಾನು ಬಗೆಬಗೆಯಾಗಿ, ಬಹು ರೂಪಗಳಲ್ಲಿ ವ್ಯಕ್ತಗೊಳಿಸಿಕೊಳ್ಳುವದು. ಎಲ್ಲರೂ ಒಳಗಿನಿಂದಲೆ ಬೆಳೆದು ಬರುತ್ತಾರೆ, ರೂಪಿಸಲ್ಪಡುತ್ತಾರೆ. ಹೊರಗಿನಿಂದ ರೂಪಿಸಲು ನಾನು ಬಯಸುವದಿಲ್ಲ. ನಿನಗೆ ಸಾರವು ಸಿಕ್ಕಿದೆ, ಇನ್ನುಳಿದುದೆಲ್ಲ ಮುಂದೆ ತಾನೆ ಬರುವದು. ಭೇದಗಳ ಆಧಾರದ ಮೇಲೆ ನಾನು ಯಾವ ಸಮಾಜವನ್ನೂ ಕಟ್ಟಬಯಸುವದಿಲ್ಲ. ನನಗೆ ಬೇಕಾದುದು ಆತ್ಮಪ್ರತಿಷ್ಠಿತವಾದ ಸಂಘ, ಅಥವಾ ಆತ್ಮಿಕ ಏಕತ್ವದ ಪ್ರತ್ಯಕ್ಷ ಸ್ವರೂಪಪ್ರಾಯವಾಗಿರುವ ಸಂಘ. ಈ ಕಲ್ಪನೆಯ ಸಲುವಾಗಿಯೆ ' ದೇವಸಂಘ ' ವೆಂಬ ನಾಮವು ಪ್ರಯೋಗಿಸಲ್ಪಟ್ಟಿದೆ.

'ದೈವೀ ಜೀವನ'ವನ್ನು ಬಾಳಬೇಕೆಂದು ಹಂಬಲಿಸುವ ಜನಸಮೂಹಕ್ಕೆಯೆ 'ದೇವ-ಸಂಘ' ವೆಂದು ಕರೆಯಲಾಗಿದೆ. ಇಂತಹ ಒಂದು ಸಂಘವು ಮೊದಲು ಒಂದು ಮಟ್ಟಿನಲ್ಲಿ ನೆಲೆಗೊಳಿಸಲ್ಪಡಬೇಕು, ಆ ಮೇಲೆ ಅದು ಉಳಿದ ಕಡೆ ನಾಡಿನಲ್ಲೆಲ್ಲ ಹರಹಿಕೊಳ್ಳಬೇಕು. ಈ ಎಲ್ಲ ಪ್ರಯತ್ನಗಳ ನಂತರವೂ ಒಂದು ವೇಳೆ, ಅಹಂಕಾರವು ತಾನೆತಾನಾಗಿ ತಲೆಯೆತ್ತಿ ತಳ ಕೀಳದೆ ನಿಂತಿತಾದರೆ, ಆ ಸಂಘವು ತಾನೂ ಒಂದು ಮತಶಾಖೆಯಾಗಿ ಮಾರ್ಪಟ್ಟು ಕೆಟ್ಟುಹೋಗುವದು. ಈ ಬಗೆಯ ಸಂಘವೆ ದೈವೀ ಜೀವನವನ್ನು ಸಾಗಿಸುವ ಜನಗಳ ಅಂತಿಮ ಶುದ್ಧ ಸಂಘವಾಗುವದೆಂಬುದನ್ನು ಸುಲಭವಾಗಿ ಊಹಿಸಬಹುದಾಗಿದೆ. ಇದು ಕೇಂದ್ರಬಿಂದುವಾಗಿದ್ದು ಇನ್ನುಳಿದುದೆಲ್ಲ ಅದರ ಸುತ್ತಲಿನ ವಲಯವಾಗಿದೆ. ಈ ಕಲ್ಪನೆಗೆ ಹೊಂದಿಕೊಂಡು ಇರದ್ದರಿಂದ ಕೆಲವರು ಈ ಮಂಡಲದ ಹೊರಗಿರಬಹುದು. ಅಥವಾ ಅವರ ಮತ್ತು ನಮ್ಮ ಹೊಂದಿಕೆಯಾಗದ್ದರಿಂದ ಅವರು ಈ ಮಂಡಲದಲ್ಲಿದ್ದರೂ ದಾರಿತಪ್ಪಿದವರೆಂದು ಹೇಳಬಹುದು.

'ಈ ಸಂಘವೆಂಬುದಾದರೂ ಅದೇತಕ್ಕೆ ಬೇಕೆಂದು ನೀನು ಒಂದುವೇಳೆ ಕೇಳಬಹುದು. ನಾನೋರ್ವ ಮುಕ್ತಾತ್ಮನಾಗಿ ಎಲ್ಲರೊಳಗೂ ಇದ್ದು ಎಲ್ಲರೊಡನೆಯೂ ಒಂದಾಗಿ ಆ ಪ್ರಚಂಡ ಏಕತ್ವದಿಂದಲೂ ಸಮಧರ್ಮೀಯತೆಯಿಂದಲೂ, ಘಟಿಸಬೇಕಾಗಿರುವ ವಿಕಾಸಕ್ರಮಕ್ಕೆ ಆಸ್ಪದಮಾಡಿಕೊಡಬೇಕೆಂದು ನೀನು ಸೂಚಿಸಬಹುದು. ಈ ಸೂಚನೆ ಏನೊ ತನ್ನ ಮಟ್ಟಿಗೆ ತಾನು ಸರಿಯಾಗಿಯೆ ಉಂಟು. ಆದರೆ ಸತ್ಯವು ಕಾರ್ಯಪರವಾಗುವ ಒಂದು ಮಾರ್ಗ ಮಾತ್ರ ಅದಾಗಿದೆ. ನಾನು ಕೇವಲ ನಿರಾಕಾರವಾದ ಆತ್ಮನ ವಿಷಯಕ್ಕಷ್ಟೆ ತಲೆಕೆಡಿಸಿಕೊಳ್ಳುತಿರುವದಿಲ್ಲ. ಪ್ರಾಣತತ್ತ್ವಕ್ಕೂ ಸರಿಯಾದ ಮಾರ್ಗದರ್ಶನವಾಗುವಂತೆ ನಾನು ನೋಡಿಕೊಳ್ಳಬೇಕಾಗಿದೆ. ಒಂದಿಲ್ಲೊಂದು ಬಗೆಯ ಆಕಾರವಿಲ್ಲದೆ ಜೀವನದ ಕಾರ್ಯವೂ ಚಲನವಲನವೂ ಪರಿಣಾಮಕಾರಿಯಾಗಲಾರವೆಂದು ತೋರುತ್ತದೆ. ನಿರಾಕಾರವು ಆಕಾರವನ್ನು ಹೊಂದಿದೆ. ನಾಮರೂಪಗಳಲ್ಲಿ ಅದು ತನ್ನನ್ನು ತಾನು ಪ್ರಕಟಿಸಿಕೊಂಡಿದೆ. ಈ ವಸ್ತುಸ್ಥಿತಿಯು ಕೇವಲ ಮಾಯೆಯಲ್ಲ ಅಥವಾ ಭ್ರಾಂತಚಿತ್ತದ ಚಪಲ ಲಹ-ರಿಯೂ ಅಲ್ಲ. ನಿರಾಕಾರವಾದ ಆತ್ಮತತ್ತ್ವವು ಸಾಕಾರವಾಗಿ ಪ್ರಕಟಗೊಳ್ಳಬೇಕಾದರೆ ಅದರಲ್ಲಿ ಏನೊ ಒಂದು ಗೂಢವಾದ ಉದ್ದೇಶವು ಅಡಕವಾಗಿದೆ. ನಾನು ಜೀವನದ ಯಾವ ಕ್ರಿಯಾಕರ್ಮಗಳನ್ನೂ ತೊರೆಯಲು ಇಲ್ಲವೆ ಅಲ್ಲಗಳೆಯಲು ಬಯಸುವದಿಲ್ಲ. ಉದಾಹರಣಾರ್ಥವಾಗಿ, ರಾಜಕಾರಣ, ವಾಣಿಜ್ಯ, ಸಮಾಜ, ಕಾವ್ಯ, ಶಿಲ್ಪಕಲೆ, ವಾಸ್ತುಶಿಲ್ಪ, ಸ್ಥಾಪತ್ಯ, ಸಾಹಿತ್ಯ ಇತ್ಯಾದಿ. ಇವೆಲ್ಲ ಬೇಕೇಬೇಕು. ಆದರೆ ಇವುಗಳಲ್ಲೆಲ್ಲ ಮತ್ತೆ ಚೈತನ್ಯವನ್ನು ತುಂಬಿ, ನವೋನವ ರೂಪಗಳನ್ನು ಇವಕ್ಕೆ ಕೊಡಬೇಕಾಗಿದೆ.

'ಹಾಗಾದರೆ ಸದ್ಯಕ್ಕೆ ನಾನೇಕೆ ರಾಜಕಾರಣದಿಂದ ದೂರಿದ್ದುಕೊಂಡಿದ್ದೇನೆ? ಏಕೆಂದರೆ, ಅದು ಸಹಸಾ ಭಾರತದ ನಿಜವಾದ ಜೀವನವೂ ಅಲ್ಲ, ಆತ್ಮವೃತ್ತಿಯೂ ಅಲ್ಲ. ಮತ್ತೇಕೆಂದರೆ, ಭಾರತದಲ್ಲಿ ಆಂಗ್ಲರಾಜ್ಯಭಾರವಿದ್ದು, ಅದು ಕೇವಲ ಆಂಗ್ಲರ ಜೀವನಕ್ರಮದ ಅನುಕರಣವಾಗಿದೆ. ಇದರ ಆವಶ್ಯಕತೆಯೂ ಇತ್ತು, ನಿಜ. ನಾನು ಕೂಡ ಆಂಗ್ಲಮುದ್ರೆಯ ರಾಜಕಾರಣದಲ್ಲಿ ಮನಸೋಕ್ತ ವರ್ತಿಸಿದ್ದೇನೆ. ಹಾಗೆ ಮಾಡದೆ ಹೋಗಿದ್ದರೆ, ದೇಶಜಾಗ್ರತಿಯೆ ಆಗುತಿರಲಿಲ್ಲ. ನಮಗೆ ಅನುಭವಲಾಭದ ಸುಸಂಧಿಯೆ ಲಭಿಸುತಿರಲಿಲ್ಲ, ಹಾಗೂ ನಮ್ಮ ಬೆಳವಣಿಗೆಯೂ ಅಪೂರ್ಣವಾಗಿ ಉಳಿದುಬಿಡುತಿತ್ತು. ಈಗಲಾದರೂ ಅದರ ಆವಶ್ಯಕತೆಯುಂಟು; ಅದರಲ್ಲಿಯೂ ಬಂಗಾಲಕ್ಕಿಂತ ಇನ್ನುಳಿದ ಪ್ರಾಂತಗಳಿಗೆ ಅದರ ಆವಶ್ಯಕತೆಯು ಇನ್ನೂ ಹೆಚ್ಚಾಗಿದೆ. ಆದರೆ ನೆರಳಿನ ಬೆಂಬತ್ತಿ ಸಾಗುವದರ ಬದಲು ನಾವು ತಿರುಳಿಗೆ ಕೈಯಿಕ್ಕಬೇಕಾದ ಕಾಲವೀಗ ಬಂದಿರುವದೆಂದು ನನಗೆ ತೋರುತ್ತದೆ. ಭಾರತದ ನಿಜವಾದ ಆತ್ಮಜಾಗ್ರತಿಯನ್ನು ಮಾಡಬೇಕಲ್ಲದೆ, ಎಲ್ಲ ಕಾರ್ಯಗಳನ್ನೂ ಚಲನವಲನಗಳನ್ನೂ ಈ ದೇಶದ ಸ್ವಭಾವಗತ ಸತ್ತ್ವಕ್ಕೆ ಅನುರೂಪವಾಗಿ ನಡೆಯಿಸಲಿಕ್ಕೆಬೇಕು.

'ಇತ್ತೀಚೆಗೆ ಜನರು ರಾಜಕಾರಣದಲ್ಲಿ ಆಧ್ಯಾತ್ಮಿಕತೆಯನ್ನು ತುಂಬಲು ಇಚ್ಛಿಸುತ್ತಾರೆ. . . . . ಒಂದಿಲ್ಲೊಂದು ಪರಿಣಾಮವೂ ಕಂಡುಬರಬಹುದು. . . . . ಚಿರಸ್ಥಾಯಿಯಾದ ಪರಿಣಾಮಗಳೆ ಒಂದು ವೇಳೆ ತಲೆದೋರಿದುದಾದರೆ, ಒಂದು ಬಗೆಯ ಭಾರತೀಯ ದೀಕ್ಷೆಹೊಂದಿದ 'ಜೋಲ್ತೈವಿಝ್ಮಂ' ಬರಬಹುದಾಗಿದೆ. ಈ ಬಗೆಯ ಕೆಲಸವನ್ನು ಕೈಕೊಳ್ಳುವವರ ವಿಷಯಕ್ಕೆ ಸಹ ನನ್ನದೇನು ಆಕ್ಷೇಪವಿಲ್ಲ. ಪ್ರತಿಯೊಬ್ಬನೂ ತನ್ನ ತನ್ನ ಅಂತಃಸ್ಫೂರ್ತಿಗೆ ಅನುಗುಣವಾಗಿಯೆ ವರ್ತಿಸಬೇಕು. ಆದರೆ ಇದುವೆ ನಿಜವಾದ ತಿರುಳಲ್ಲವೆಂಬುದನ್ನು ಮಾತ್ರ ನಾನು ಸಾರಿ ಹೇಳಲಿಕ್ಕೆ ಬೇಕು. ಅಶುದ್ಧ ಪಾತ್ರಗಳಲ್ಲಿ ಆಧ್ಯಾತ್ಮಿಕಶಕ್ತಿಯನ್ನು ತುಂಬಲು ಪ್ರಯತ್ನಿಸುವದೆಂದರೆ, ಸರಿಯಾಗಿ ಸುಟ್ಟಿರದ ಮಣ್ಣಿನ ಮಡಿಕೆಯಲ್ಲಿ ನೀರು ತುಂಬುವಂತೆಯೆ ಸರಿ. ಅದರ ಪರಿಣಾಮವೆಂದರೆ, ಮಡಿಕೆ ಒಡೆದು ನೀರೆಲ್ಲ ಸುತ್ತೂ ಸೂರೆಯಾಗುವದು, ಅಥವಾ ಆಧ್ಯಾತ್ಮಿಕ ಶಕ್ತಿಯು ಉಗಿಯಾಗಿ ಹಾರಿಹೋಗಿ ಅಶುದ್ಧ ಅಪೂರ್ಣ ಪಾತ್ರವೆ ತಾನು ಮೊದಲಿನಂತೆ ಉಳಿದುಬಿಡುವದು. ಎಲ್ಲ ಕ್ಷೇತ್ರಗಳಲ್ಲಿಯೂ ಇದೇ ಹಾಡು.

'ನಾನೇನೊ ಎಲ್ಲ ಬಗೆಯ ಜನಗಳಲ್ಲಿಯೂ ಬೆರೆತುಕೊಂಡಿರಬಲ್ಲೆನು; ಆದರೆ ಹಾಗೆ ಇರುವದು ಎಲ್ಲರನ್ನೂ ಸರಿಯಾದ ದಾರಿಗೆ ತರುವದರ ಸಲುವಾಗಿ; ಅದು ಕೂಡ ನನ್ನ ಧ್ಯೇಯಾರ್ಥಕ್ಕೆ ಸ್ವಲ್ಪಸಹ ವ್ಯತ್ಯಯ ಬಾರದಂತೆ ಈ ಎಚ್ಚರಿಕೆಯನ್ನು ನಾನು ವಹಿಸದೆ ಹೋದೆನಾದರೆ, ನಾನು ನನ್ನ ಅಡಿಯ ಬುಡದ ಆಧಾರವನ್ನೆ ಕಳೆದುಕೊಳ್ಳುವೆನಲ್ಲದೆ, ನಿಜವಾದ ಕಾರ್ಯವೂ ಸಿದ್ಧಿಸುವದಿಲ್ಲ. ಎಲ್ಲರೊಡನೆ ನಾನು ತಾದಾತ್ಮ್ಯವನ್ನು ಹೊಂದುವದರಿಂದ, ವೈಯಕ್ತಿಕವಾಗಿ ಕೂಡ ಕೆಲಮಟ್ಟಿಗೆ ಗುರಿ-

ಯನ್ನು ಸಾಧಿಸಲು ನನಗೆ ಶಕ್ಯವಾಗುವದು ; ಇದರಲ್ಲಿ ಸಂದೇಹವೆ ಇಲ್ಲ. ಆದರೆ ಇದನ್ನೆ ಒಂದು ಸಂಘದ ಮುಖಾಂತರವಾಗಿ ಮಾಡಿದುದಾದರೆ ನೂರ್ಮಡಿ ಫಲವು ದೊರೆಯುವದು. ಆದರೆ ಅದಕ್ಕೆಲ್ಲ ಇನ್ನೂ ಸಮಯ ಒದಗಿ ಬಂದಿಲ್ಲ. ಆ ರೂಪರಚನೆಯ ಕ್ರಮವನ್ನು ನಾನು ತ್ವರೆಗೊಳಿಸಲು ಪ್ರಯತ್ನಿಸಿದುದಾದರೆ ಏನು ಸಂಭವಿಸಬೇಕೆಂದು ನಾನು ಸಂಕಲ್ಪಿಸಿರುವೆನೊ ಅದು ಸಂಭವಿಸದೆ ಹೋಗುವದು. ಮೊದಮೊದಲಿಗೆ, ಸಂಘಕ್ಕೆಯೆ ಒಂದು ಪ್ರಕಾರದ ರೂಪವನ್ನು ಕೊಡಲಾಗುವದು. ಧ್ಯೇಯಸಿದ್ಧಿಯನ್ನು ಹೊಂದಿದವರೆಲ್ಲ ಏಕತಾನತೆಯಿಂದ ಅನೇಕ ಸ್ಥಳಗಳಲ್ಲಿ ಕಾರ್ಯಕರ್ತರಾಗುವರು. ಆ ಮೇಲೆ ಆ ಸಂಘವು ಬರಬರುತ್ತ ಒಂದು ಆಧ್ಯಾತ್ಮಿಕ ವಸತಿಯ ಸ್ವರೂಪವನ್ನೆ ಧಾರಣಮಾಡಿ, ಉದ್ದೇಶಕ್ಕೂ ಕಾಲಮಾನಕ್ಕೂ ತಕ್ಕಂತೆ ಸರ್ವಕಾರ್ಯಗಳಿಗೂ ಆಕಾರರೂಪಗಳನ್ನು ಕೊಡಲು ಪ್ರಯತ್ನಿಸಬಲ್ಲದು. ಅದೊಂದು ಒತ್ತಾಯದಿಂದ ತಂದ ಗಡುಸಾದ ರುಕ್ಷವಾದ ರೂಪರಚನೆಯಾಗಿರುವದಿಲ್ಲ. ಅದು ಬೇಕುಬೇಕಾದಂತೆ ಹಿಗ್ಗಿ ಮಾರ್ಪಟ್ಟು ಹೊಂದಿಕೊಳ್ಳಬಲ್ಲದು. ಅದು ಸಂಪೂರ್ಣ ಸ್ವಾತಂತ್ರ್ಯದಿಂದ ಕೂಡಿದುದಾಗಿ ಮಹಾಸಾಗರದ ನೀರಿನಂತೆ ವ್ಯಾಪಿಸಿಕೊಳ್ಳಬಲ್ಲದು. ಎಲ್ಲೆಲ್ಲಿಯೂ ಪ್ರವೇಶಿಸಬಲ್ಲ, ಎಲ್ಲವನ್ನೂ ಸುತ್ತುವರಿಯಬಲ್ಲ ಮತ್ತು ಎಲ್ಲವನ್ನೂ ಬದಲಿಸಿಬಿಡಬಲ್ಲ ಸಾಮರ್ಥ್ಯವು ಅದಕ್ಕುಂಟು. ಈ ಕ್ರಮವು ಆಧ್ಯಾತ್ಮಿಕ ಸಮಾಜವನ್ನು ನಿರ್ಮಾಣಗೊಳಿಸಲು ಮಾರ್ಗಮಾಡಿಕೊಡುವದು. ಇದುವೆ ಸದ್ಯಕ್ಕೆ ನನ್ನ ಕಲ್ಪನೆಯಾಗಿದೆ. ಆದರೆ ಅದಿನ್ನೂ ಸಂಪೂರ್ಣವಾಗಿ ಪರಿಪುಷ್ಟವಾಗಿಲ್ಲ. ಎಲ್ಲವೂ ಭಗವಂತನ ಕೈಗಳಲ್ಲಿಯೆ ಇದೆ. ಅವನೆ ತನಗೆ ಸರಿದೋರಿದಂತೆ ಎಲ್ಲವನ್ನು ಮಾಡಿಸಿಕೊಳ್ಳಲಿ.

'ಇನ್ನು, ನಿನ್ನ ಪತ್ರದಲ್ಲಿದ್ದ ಕೆಲವೊಂದು ವಿಶೇಷ ಅಂಶಗಳನ್ನು ಕುರಿತು ವಿವೇಚಿಸುವೆನು. ನನ್ನ ಯೋಗದ ಸಂಬಂಧದಲ್ಲಿ ನೀನು ಎತ್ತಿದ ಸಂಗತಿಗಳ ವಿಷಯಕ್ಕೆ ನಾನು ಬಹಳ ಬರೆಯಲು ಬಯಸುವದಿಲ್ಲ. ಅವನ್ನೆಲ್ಲ ನಾವು ಸಮಕ್ಷ ಭೆಟ್ಟಿಯಾದಾಗ ಚರ್ಚಿಸುವದೆ ಒಳ್ಳೆಯದು. ನಿರ್ವಾಣವನ್ನು ಅಥವಾ ಸರ್ವಸ್ವತ್ಯಾಗವನ್ನು ಬೋಧಿಸುವ ಸಂನ್ಯಾಸಮಾರ್ಗವು, ಶರೀರವನ್ನು ಶವಪ್ರಾಯವಾಗಿ ಕಾಣಬೇಕೆಂಬುದಾಗಿ ಅತ್ಯಂತ ಬಲವಾಗಿ ಒತ್ತಿ ಹೇಳುತ್ತದೆ. ಶರೀರದ ಬಗೆಗೆ ಈ ಬಗೆಯ ಭಾವನೆಯನ್ನಿಟ್ಟುಕೊಂಡು ಸಾಗಿದರೆ, ಯಾವ ಲೌಕಿಕ ವ್ಯವಹಾರಗಳಾದರೂ ನಡೆದಾವೆಂದು ನನಗೆ ಅನಿಸುವದಿಲ್ಲ. ಸಾಧಕನು ಪ್ರತಿಯೊಂದರಲ್ಲಿಯೂ ಆನಂದವನ್ನು ಕಾಣಲಿಕ್ಕೆ ಬೇಕು—ಆತ್ಮದಂತೆ ಶರೀರದಲ್ಲಿಯೂ. ಶರೀರವು ಸಹ ಚೇತನದಿಂದ ತುಂಬಿ ತುಳುಕುತಿದೆ, ಅದೂ ಒಂದು ದೇವರ ಅಭಿವ್ಯಕ್ತಿಯೆ ಆಗಿದೆ. ಜಗತ್ತಿನಲ್ಲಿರುವ ಪ್ರತಿ ಪದಾರ್ಥದಲ್ಲಿಯೂ ಸಾಧಕನು ಭಗವಂತನನ್ನು ಕಾಣಬಲ್ಲನಾದರೆ, 'ಎಲ್ಲವೂ ಬ್ರಹ್ಮಮಯ, ಪ್ರತಿ ಪದಾರ್ಥವೂ ವಾಸುದೇವಸ್ವರೂಪ'

ಎಂಬುದನ್ನು ಸಾಕ್ಷಾತ್ಕರಿಸಿಕೊಂಡುದಾದರೆ, ಅವನು ಭೂಮಾನಂದವನ್ನೆ ಅನುಭವಿ-ಸುತ್ತಾನೆ. ಸಾಧಕನು ಯಾವಾಗ ಈ ಸ್ಥಿತಿಗೆ ಮುಟ್ಟುವನೊ ಆಗ ಅವನು, ಆಧ್ಯಾತ್ಮಿಕ ಭಾವದಿಂದಲೆ ಎಲ್ಲ ಬಗೆಯ ಲೌಕಿಕ ವ್ಯಾಪಾರಗಳನ್ನೂ ಸಾಗಿಸಬಲ್ಲನು; ಮದುವೆಯಾಗಿ ತನ್ನೆಲ್ಲ ಕರ್ತವ್ಯಕರ್ಮಗಳನ್ನೂ ನಿರ್ವಹಿಸಬಲ್ಲನು. ಆಗ ಸಾಧಕನು ಎಲ್ಲ ಕರ್ಮಗಳಲ್ಲಿಯೂ ಭಗವಂತನ ಆನಂದಮಯ ಪ್ರಕಟನೆಯನ್ನೆ ಪ್ರತ್ಯಕ್ಷ ಕಾಣತೊಡಗುವನು. ಬಹುದಿನಗಳಿಂದ, ನನ್ನ ಎಲ್ಲ ಅನುಭವಗಳನ್ನೂ ಎಲ್ಲ ಇಂದ್ರಿಯಗೋಚರ ಹಾಗೂ ಮನೋಗೋಚರ ವಸ್ತುಗಳನ್ನೂ ಆನಂದರೂಪದಲ್ಲಿ ಪರಿವರ್ತನಗೊಳಿಸಲು ನಾನು ಪ್ರಯತ್ನಿಸುತ್ತಿದ್ದೇನೆ. ಆ ಸತ್ತ್ವವೆಲ್ಲವೂ ಈಗ ಅತಿಮಾನಸ ಆನಂದರೂಪವನ್ನು ಹೊಂದತೊಡಗಿದೆ. ಚೇತನದ ಈ ಅವಸ್ಥೆಯಲ್ಲಿಯೆ ಮಾನವನಿಗೆ, ಸತ್-ಚಿತ್-ಆನಂದದ ಸಂಪೂರ್ಣ ದರ್ಶನವೂ ಅನುಭವವೂ ಲಭಿ-ಸುವದುಂಟು.

'ದೇವಸಂಘದ ವಿಷಯಕ್ಕೆ ಬರೆಯುತ್ತ ನೀನು ಅಂದಿರುವೆ: 'ನಾನೇನು ದೇವತೆಯಲ್ಲ. ಆದರೆ ಹಣಿತದಿಂದ ಮಣಿದು ಮೆರಗುಗೊಂಡು ಹದನವಾದ ಕಬ್ಬಿಣದ ತುಂಡು ನಾನಾಗಿದ್ದೇನೆ' ಎಂದು. . . . . . . ಮಾನವರಲ್ಲಿ ಯಾವನೂ ದೇವತೆಯಾಗಿರುವದಿಲ್ಲ. ಆದರೆ ಪ್ರತಿಯೊಬ್ಬನಲ್ಲಿಯೂ ದೇವರುಂಟು. ದೈವೀ ಜೀವನದ ಧ್ಯೇಯವೂ ಪ್ರಯತ್ನವೂ ಆ ದೇವರನ್ನು ಮಾನವನಲ್ಲಿ ಪ್ರಕಟಗೊಳಿಸುವದೆ ಆಗಿರುತ್ತದೆ. ಇದು ಎಲ್ಲರ ಅಳವಿನಲ್ಲಿಯೂ ಉಂಟು. ಈ ಸಿದ್ಧಾಂತಕ್ಕೆ ಪ್ರತ್ಯಕ್ಷ ಪ್ರಮಾಣದ ಪುಷ್ಟಿಯುಂಟು. ನೀನು ನಿನ್ನ ವಿಷಯಕ್ಕೆ ಬರೆದುಕೊಂಡುದೆಲ್ಲ ತೀರ ಸರಿಯಾದುದೆಂದು ನಾನೇನು ತಿಳಿಯುವದಿಲ್ಲ. ಅದಾವುದೆ ಪ್ರಕಾರದ ಪುಷ್ಟೀಕರಣವಿರಲಿ ಅಥವಾ ಇರದಿರಲಿ,—ಭಗವಂತನ ಸ್ಪರ್ಶವು ಒಂದೇ ಒಂದು ಸಲ ಆಗಿಬಿಟ್ಟರೆ, ಆತ್ಮವು ಒಮ್ಮೆ ಜಾಗ್ರತವಾಗಿಬಿಟ್ಟರೆ, ಸಣ್ಣದು ದೊಡ್ಡದೆಂಬುದರ ಭೇದವೇನು ಅಷ್ಟೊಂದು ಪರಿಣಾಮಕಾರಿಯಾಗದು. ಒಮ್ಮೊಮ್ಮೆ ಎಡರುತೊಡರುಗಳು ಬಹಳ ಬರಬಹುದು, ಕೆಲವು ಸಂದರ್ಭಗಳಲ್ಲಿ ಬಹಳಷ್ಟು ವೇಳೆ ಹಿಡಿಯಬಹುದು, ಸಿದ್ಧಿಯಲ್ಲಿ ಪ್ರಭೇದಗಳು ಕಂಡುಬರಬಹುದು, ಆದರೆ ಅದಾವದೂ ಅಷ್ಟೊಂದು ಮಹತ್ವದ್ದಲ್ಲ. ಅಂತಸ್ಥ ಪರಮಾತ್ಮನು, ಕುಂದುಕೊರತೆಗಳನ್ನು ಲೆಕ್ಕಿಸದೆ ಎಲ್ಲ ಎಡರುತೊಡರುಗಳನ್ನೂ ಗೆದ್ದು ಸಾಧಕನನ್ನು ಮೇಲಕ್ಕೆತ್ತುವನು. ನನ್ನಲ್ಲಿ ಕುಂದುಕೊರತೆಗಳು ಇರಲಿಲ್ಲವೆ? ಮನದಲ್ಲಿ, ಚಿತ್ತದಲ್ಲಿ, ಪ್ರಾಣದಲ್ಲಿ, ಮತ್ತು ಈ ಶರೀರದಲ್ಲಿ ಉದ್ಭವಿಸಿಬಂದ ಎಡರು ತೊಡರುಗಳು ನನಗೇನು ಇರಲಿಲ್ಲವೆ? ನನಗೂ ಸಾಕಷ್ಟು ಸಮಯ ಬೇಕಾಗಲಿಲ್ಲವೆ? ನನ್ನನ್ನು ನಿಷ್ಠುರವಾಗಿ ಹಣಿಯುವಾಗ ಭಗವಂತನು ಕರುಣೆಯನ್ನು ತೋರಿಸಿದ್ದಾನೆಂದು ತಿಳಿದೆಯಾ? ದಿನದಿನವೂ ಅದೇಕೆ ಕ್ಷಣಕ್ಷಣವೂ ನಾನು ದೇವರಾಗುತ್ತಿದ್ದೇನೆ, ಅಥವಾ ನಾನು ಏನಾಗುತ್ತಿದ್ದೇ

ನೆಂಬುದೆ ನನಗೆ ಗೊತ್ತಿಲ್ಲವೆನ್ನು! ಆದರೆ ಒಂದು ಮಾತು ಮಾತ್ರ ಖಂಡಿತ; ಅದೆಂದರೆ ಮೊದಲು ನಾನು ಏನಿರಲಿಲ್ಲವೊ ಅಂಥದೊಂದೇನೊ ನಾನು ಆಗಿದ್ದೇನೆ; ಅಥವಾ ಆಗುವ ಉಪಕ್ರಮದಲ್ಲಿ ನಾನೀಗ ಇದ್ದೇನೆ. ಭಗವಂತನು ನನ್ನನ್ನು ರೂಪಿಸಬೇಕೆನ್ನುವನು, ಇದಿಷ್ಟೆ ನನಗೆ ಸಾಕು. ಇನ್ನುಳಿದವರ ವಿಷಯದಲ್ಲಿಯೂ ಇದೇ ಬಗೆಯುಂಟು. . . .ಈ ಯೋಗಕ್ಕೆ ಯಶ ತರಲು ಹೆಣಗುತಿರುವ ಶಕ್ತಿಯು ನಮ್ಮದಲ್ಲ, ಆದರೆ ಅದು ಭಗವಂತನ ಶಕ್ತಿಯಾಗಿದೆ.

‘ ಕಳೆದ ಅನೇಕ ವರ್ಷಗಳಿಂದ ನಾನು ನಿರೀಕ್ಷಿಸುತ್ತ ಬಂದಿರುವ ಕೆಲವೊಂದು ಸಂಗತಿಗಳ ವಿಷಯಕ್ಕೆ ನಾನು ಒಂದೆರಡು ಮಾತುಗಳನ್ನು ಸಂಕ್ಷೇಪವಾಗಿ ಹೇಳಬಯಸುವೆ. ನನ್ನ ಅಭಿಪ್ರಾಯದ ಮೇರೆಗೆ, ಭಾರತದ ದೌರ್ಬಲ್ಯದ ಮುಖ್ಯ ಕಾರಣವು. ದಾಸ್ಯವಲ್ಲ, ದಾರಿದ್ರ್ಯವಲ್ಲ, ಧರ್ಮದ ಅಥವಾ ಆಧ್ಯಾತ್ಮಿಕತೆಯ ಕೊರತೆಯೂ ಅಲ್ಲ; ಆದರೆ, ವಿಚಾರಶಕ್ತಿ ಮತ್ತು ಏಕಾಗ್ರತೆಯ ಶಕ್ತಿ ಇವುಗಳಲ್ಲುಂಟಾದ ಹ್ರಾಸ. ಅದರ ಪರಿಣಾಮವಾಗಿ, ಈ ಜ್ಞಾನಭೂಮಿಯಲ್ಲಿ ಇಂದು ಅಜ್ಞಾನದ ರಾಜ್ಯವೆ ಹಬ್ಬಿಕೊಂಡಿದೆ. ಎಲ್ಲೆಡೆಗೂ ನಾನು, ವಿಚಾರವಿಮುಖತೆಯನ್ನೂ ವಿಚಾರ ಹೀನತೆಯನ್ನೂ ಕಾಣುತ್ತೇನೆ. ಇದಕ್ಕೆ ‘ ವಿಚಾರಾಂಧತೆ ’ಯೆಂದು ಹೇಳಿದರೂ ನಡೆಯುಬಹುದು. ಮಧ್ಯಯುಗದಲ್ಲಿ ಅದಾವದೆ ಕಾರಣ ಇರಲೊಲ್ಲದೇಕೆ, ಇಂದಿನ ನಮ್ಮ ಅಧಃಪಾತಕ್ಕೆ ಮಾತ್ರ ಇದುವೆ ಕಾರಣನಾಗಿದೆ. ಆಗಿನ ಕಾಲದಲ್ಲಿ ಕತ್ತಲು ಮುಸುಕಿದ ಶತಮಾನಗಳೆ ತುಂಬಿದ್ದವು; ಆ ದಿನಗಳು ಅಜ್ಞಾನದ ವಿಜಯದ ದಿನಗಳು. ಆಧುನಿಕ ಯುಗವು ಜ್ಞಾನವಿಜಯದ ಯುಗ. ಯಾವನು ಹೆಚ್ಚು ಹೆಚ್ಚು ವಿಚಾರಿಸುತ್ತ, ನೈಸರ್ಗಿಕ ರಹಸ್ಯಗಳಲ್ಲಿ ಆಳವಾಗಿ ಮುಳುಗಿ ಅವನ್ನು ಎಷ್ಟರಮಟ್ಟಿಗೆ ತನ್ನವನ್ನಾಗಿ ಮಾಡಿಕೊಳ್ಳುತ್ತಾನೊ ಆಯಾ ಪ್ರಮಾಣದಲ್ಲಿ ಅವನು ತನ್ನ ಶಕ್ತಿಗೆ ಪುಷ್ಟಿಯನ್ನು ಒದಗಿಸುತ್ತಾನೆ. ನೀನು ಯುರೋಪದತ್ತ ಲಕ್ಷ್ಯಪೂರ್ವಕ ನೋದಿದೆಯಾದರೆ, ನಿನಗೆ ಎರಡು ಸಂಗತಿಗಳು ಚೆನ್ನಾಗಿ ಒಡೆದು ಕಾಣಿಸುವವು. ವಿಚಾರದ ವಿಶಾಲವಾದ ಮಹಾಸಾಗರ ಮತ್ತು ನಿಗ್ರಹಿಸಿಟ್ಟ ಪ್ರಚಂಡ ಶಕ್ತಿಪ್ರವಾಹದ ಅದ್ಭುತ ಲೀಲೆ. ಯುರೋಪದ ಸಮಸ್ತ ಶಕ್ತಿಸಂಚಯವೆಲ್ಲ ಇದರಲ್ಲಿಯೆ ಉಂಟು. ಈ ಸಾಮರ್ಥ್ಯಮೂಲಕವಾಗಿಯೆ ಯುರೋಪಖಂಡವು ಜಗವನ್ನೆಲ್ಲ ಜಯಿಸುತ್ತಿರುವದು. ಇಂದಿನ ಐರೋಪ್ಯರು ಹಿಂದಿನಕಾಲದ ನಮ್ಮ ತಪಸ್ವಿಗಳ ಹಾಗೆ ಇರುತ್ತಾರೆ; ಅವರ ತಪೋಬಲವು ದೇವತೆಗಳನ್ನು ಸಹ ಭಯದಿಂದ ನಡುಗಿಸಿ ಅವರಿಂದ ಸೇವೆತೆಗೆದುಕೊಳ್ಳುವಂತೆ ಮಾಡಿತು. ಯುರೋಪವು ವಿನಾಶದತ್ತ ಧಾವಿಸುತ್ತಿರುವದೆಂದು ಜನರು ಆಡಿಕೊಳ್ಳುತ್ತಾರೆ. ನಾನು ಆ ಅಭಿಪ್ರಾಯವನ್ನು ಸರ್ವಥಾ ಸಮರ್ಥಿಸುವದಿಲ್ಲ. ಈಗ ಪ್ರಾರಂಭವಾಗಿರುವ ಕ್ರಾಂತಿಯೂ ಈಗ ನಡೆದಿರುವ ಮೂಲಭೂತ ಬದಲಾವಣೆಗಳೂ ಬರಲಿರುವ ಒಂದು ನೂತನ ಸೃಷ್ಟಿಯ ಪೂರ್ವ

ಲಕ್ಷಣಗಳಾಗಿವೆ.

‘ಇನ್ನು ಈಗ ಭಾರತದ ಕಡೆಗಷ್ಟು ಕಣ್ಣಾಡಿಸಿ ನೋಡು. ಅಲ್ಲೊಬ್ಬರು ಇಲ್ಲೊಬ್ಬರಂತೆ ತೋರಿ ಬರುವ ಕೆಲವೆ ಪ್ರತಿಭಾಸಂಪನ್ನ ಜನರನ್ನು ಬಿಟ್ಟುಬಿಟ್ಟರೆ ...... ಎಲ್ಲೆಲ್ಲಿಯೂ ತೀರ ಸಾಮಾನ್ಯ ಮಟ್ಟದ ಮನುಷ್ಯನೆ ನಿನ್ನ ಕಣ್ಣಿಗೆ ಬೀಳುತ್ತಾನೆ; ಅವನಿಗೆ ವಿಚಾರವೆಂಬುದೆ ಬೇಡ, ಅವನಿಗೆ ವಿಚಾರಿಸುವ ಶಕ್ತಿ ಕೂಡ ಇರುವದಿಲ್ಲ; ಅಣುಪ್ರಾಯವಾದ ತಾತ್ಕಾಲಿಕ ಉತ್ಸಾಹಕಣವು ಅವನಲ್ಲಿ ಮಿಣು ಕಿದರೆ ಅದುವೆ ದೊಡ್ಡದು. ಭಾರತವು ಕೇವಲ ಸರಳ ವಿಚಾರಗಳಿಂದ, ಸರಳ ವಿಷಯಗಳಿಂದ ತೃಪ್ತವಾಗಿರುವಂತೆ ತೋರುತ್ತದೆ. ಯುರೋಪಕ್ಕೆ ಗಂಭೀರ ವಿಚಾರಗಳು ಬೇಕು, ಗಭೀರ ವಿಷಯುಗಳು ಬೇಕು. ಅಲ್ಲಿ ಓರ್ವ ಸರ್ವಸಾಮಾನ್ಯ ಕೂಲಿಯ ಆಳು ಕೂಡ ವಿಚಾರಮಾಡುತ್ತಾನೆ, ಪ್ರತಿಯೊಂದನ್ನೂ ತಿಳಿದುಕೊಳ್ಳಲು ಇಚ್ಛಿಸುತ್ತಾನೆ. ಅವನಿಗೆ ಕೇವಲ ವಿಪುಲ-ವಿಶಾಲ ವರ್ತಮಾನಸಂಗ್ರಹದಿಂದಷ್ಟೆ ಸಮಾಧಾನವೆನಿಸದು. ಅವನು ಆಳವಾಗಿ ಮತ್ತಷ್ಟು ಹೆಚ್ಚಿಗೆ ತಿಳಿದುಕೊಳ್ಳಲು ಬಯಸುವನು. ಆದರೆ ಅಂತರವಿಷ್ಟೆ, ಐರೋಪ್ಯರ ವಿಚಾರಕ್ಕೆ ಮಿತಿ-ಮೇರೆಯಿದ್ದು ಆ ಮುಂದೆ ಅದರ ನಾಡಿಯೆ ನಿಂತುಹೋಗುವದು. ಆಧ್ಯಾತ್ಮಿಕ ಕ್ಷೇತ್ರದಲ್ಲಿಯಂತೂ ಅವರ ವಿಚಾರಶಕ್ತಿಯು ತೀರ ಕೃಶವಾದದ್ದೆಂವೆ ಹೇಳಬೇಕು. ಈ ಕ್ಷೇತ್ರದಲ್ಲಿ ಅವರ ಕಣ್ಣಿಗೆ ಕಾಣುವದು ಬರಿ ಕಂಗೆಟ್ಟ ಗೊಂದಲವೆ ಗೊಂದಲ; ಇದಕ್ಕೆ ಅವರು ಅಸ್ಪಷ್ಟ, ಮಂಜು ಮುಸುಕಿದ ಆತ್ಮವಿದ್ಯೆಯೆಂದೂ ಯೌಗಿಕ ಹಳವಂಡವೆಂದೂ ಹೆಸರಿಡುತ್ತಾರೆ. ಅವರು ಕೈಕಾಲುಗೆಟ್ಟು ಕಣ್ಣು ಹೊಸೆದು ನೋಡುತ್ತಾರೆ. ಏನೂ ಸ್ಪಷ್ಟವಾಗಿ ಕಾಣಿಸುವದಿಲ್ಲ. ಹೀಗಾಗಿ ಅವರು ಸ್ಥಿರ ನಿರ್ಧಾರಕ್ಕೆಯೆ ಬರಲಾರರು. ಹೀಗಿದ್ದರೂ ಈ ಕ್ಷೇತ್ರದಲ್ಲಿ ಕೂಡ, ಮಿತಿಮೇರೆಗಳನೆಲ್ಲ ಮಿಕ್ಕಿ ಮೀರುವಷ್ಟು ಅಮೋಘ ಪ್ರಯತ್ನವು ಯುರೋಪದಲ್ಲಿ ಆಗಿದ್ದುಂಟು. ನಾವು ಅಧ್ಯಾತ್ಮವಿದ್ಯೆ ಯನ್ನು ಉಳಿಸಿಕೊಂಡಿರುವದು ನಮ್ಮ ಪ್ರಾಚೀನರ ಹಿರಿಮೆಯ ಮೂಲಕವಾಗಿ. ನಮ್ಮಲ್ಲಿ ಈ ವಿದ್ಯೆಯ ಗುಟ್ಟು ಗೊತ್ತಿದ್ದವರು ಮನಸ್ಸು ಮಾಡಿದರೆ ಯುರೋಪದ ಸಮಸ್ತ ಶಕ್ತಿಯನ್ನೂ ನುಚ್ಚು ನೂರಾಗಿಸಿ ಹಾರಿಸಿ ಬಿಡಬಲ್ಲಷ್ಟು ಜ್ಞಾನ-ಶಕ್ತಿಗಳನ್ನು ಪಡೆದಿದ್ದಾರೆ. ಆದರೆ ಶಕ್ತಿಸಂಚಯಕ್ಕೋಸ್ಕರ ಮುಖ್ಯವಾಗಿ ಬೇಕಾದುದು ಶಕ್ತಿಯ ಉಪಾಸನೆ. ಆದರೆ ನಾವು ಶಕ್ತಿಪೂಜಕರಾಗಿರದೆ, ಸುಲಭವಾದ ಸಮುಚಿತತೆಯ ಭಕ್ತರಾಗಿದ್ದೇವೆ. ಇದರಿಂದ ಶಕ್ತಿಸಂಪಾದನೆಯಾಗಲಾರದು. ನಮ್ಮ ಪೂರ್ವಜರು ಪ್ರಚಂಡ ವಿಚಾರಸಾಗರವನ್ನು ಈಸಿದರು, ಅದರಲ್ಲಿ ಮುಳುಮುಳುಗಿ ಅಪಾರ ಜ್ಞಾನವನ್ನು ಹಸ್ತಗತಮಾಡಿಕೊಂಡರು; ತತ್ಪರಿಣಾಮವಾಗಿ, ಅಮೋಘ ಸಭ್ಯತೆಯ ಚಿರಸ್ಮರಣೀಯ ಸೌಧವನ್ನು ರಚಿಸಿದರು. ಈ ಬಗೆಯಾಗಿ ಅವರು ಮುನ್ನಡೆಯು- ತಿರಲು, ಬಹುಶಃ ಅವರಿಗೆ ಕ್ಲಾಂತಿಯು ಆವರಿಸಿ ನಿತ್ರಾಣವೆನಿಸಿರಬೇಕು. ಅದರ

ಫಲವಾಗಿ, ವಿಚಾರದ ಗತಿಕ್ರಮಣವು ಮಂದಮಂದವಾಗಿ, ಅದರ ಜೊತೆಜೊತೆಗೆ ಶಕ್ತಿಯೂ ಕುಗ್ಗುತ್ತ ನಡೆಯಿತು. ನಮ್ಮ ಸಂಸ್ಕೃತಿಯು ಗತಿಶೂನ್ಯವಾಗಿ ಕೂತಿದೆ, ನಾವು ಇಂದು ಧರ್ಮದ ಬಾಹ್ಯ ಸ್ವರೂಪವನ್ನೆ ಆರಾಧಿಸತೊಡಗಿದ್ದೇವೆ; ನಮ್ಮ ಆಧ್ಯಾತ್ಮಿಕತೆಯು ಒಂದು ದುರ್ಬಲ ಧ್ಯೇಯವಾಗಿ ಅಥವಾ ಒಂದು ಕ್ಷಣಿಕ ಉತ್ಸಾಹದ ಬುದ್ಬುದವಾಗಿ ಕರಗಿ ಹೋಗಿದೆ. ಈ ಸ್ಥಿತಿಯೆ ಬೇರೂರಿರುವ ವರೆಗೆ, ಚಿರ ಕಾಲ ಬಾಳುವಂತಹ ತಳಹದಿಯ ಮೇಲೆ, ಈ ಭಾರತವು ನಿಶ್ಚಲವಾಗಿ ತಲೆಯೆತ್ತಿ ನಿಲ್ಲುವದು ಕಠಿಣವೆ ಸರಿ.

'ಸ್ವತಃ ಬಂಗಾಲವೆ ಈ ವಿಷಯದಲ್ಲಿ ತೀರ ಕೆಳತುದಿಯನ್ನು ಮುಟ್ಟಿದೆ. ಬಂಗಾಲಿಯು ಬಹು ಬೇಗ ಗ್ರಹಿಸಬಲ್ಲನು, ಅವನಿಗೆ ಭಾವಾವೇಗದ ಬಲವಿದೆ, ಅವನಿಗೆ ಅಂತಃಪ್ರೇರಣೆಯಿದೆ. ಈ ಗುಣಗಳೆ ಅವನಿಗೆ ಭಾರತದಲ್ಲಿ ಒಂದು ಗಣ್ಯಸ್ಥಾನವನ್ನು ತಂದುಕೊಟ್ಟಿದುಂಟು. ಈ ಎಲ್ಲ ಪಾತ್ರತೆಗಳ ಆಗತ್ಯವಿನೆಯಾದರೂ ಇವಿಷ್ಟೆ ಸಾಲವು. ಇವುಗಳ ಜೊತೆಜೊತೆಗೆ, ಗಂಭೀರ ವಿಚಾರದ ಅರ್ಹತೆಯೂ ಧೀರ ಶಕ್ತಿಯೂ ವೀರೋಚಿತ ಸಾಹಸವೃತ್ತಿಯೂ ಕಷ್ಟಸಹಿಷ್ಣುತೆಯಲ್ಲಿಯೆ ಆನಂದ ಹೊಂದುವ ಸಾಮರ್ಥ್ಯವೂ ಇದ್ದಪಕ್ಷದಲ್ಲಿ, ಕೇವಲ ಭಾರತವನ್ನಷ್ಟೆ ಏಕೆ, ಅಖಂಡ ಜಗತ್ತನ್ನೆ ಕೈಹಿಡಿದು ಕರೆದೊಯ್ಯಬಲ್ಲ ಬಲವು ಅವನಿಗೆ ಪ್ರಾಪ್ತವಾಗುವದು. ಆದರೆ ಬಂಗಾಲಿಗೆ ಈ ಹವ್ಯಾಸವೆ ಇರುವಂತೆ ಕಾಣಲಿಲ್ಲ. ಅವನಿಗೆ ಎಲ್ಲವೂ ಸಹಜವಾಗಿ ದೊರೆಯಬೇಕು, ವಿಚಾರಮಾಡದೆಯೆ ಜ್ಞಾನೋದಯವಾಗಬೇಕು, ಉದ್ಯಮವಿಲ್ಲದೆ ಫಲಪ್ರಾಪ್ತಿಯಾಗಬೇಕು, ಹೆಚ್ಚಿನ ಸಾಧನೆಯಿಲ್ಲದೆ ಸಿದ್ಧಿಯಾಗಬೇಕು. ಇದು ಭಾವನಾಪ್ರಧಾನತೆಯಲ್ಲಿ ಮುಗಿತಾಯ ಹೊಂದುವದು. ಜ್ಞಾನಶೂನ್ಯವಾದ, ಅಳತೆಗೆಟ್ಟ ಭಾವೋನ್ಮಾದವೆ ಈ ರೋಗದ ಮುಖ್ಯ ಲಕ್ಷಣವಾಗಿದೆ. ಇದರ ಪರಿಣಾಮವೆಂದರೆ ಆಯಾಸ, ತನೋವ್ಯಾಪ್ತಿ. ಕ್ರಮೇಣ ಜನಾಂಗದ ಅವನತಿಯಾಗಿ ಜನತೆಯ ಕಸುವು ಕುಗ್ಗುತ್ತ ನಡೆಯಿತು; ಅಲ್ಲದೆ ತನ್ನ ಪ್ರಾಂತದಲ್ಲಿಯೆ ಬಂಗಾಲಿಯ ಪರಿಸ್ಥಿತಿಯು ಏನಾಗಿದೆ ಗೊತ್ತೆ? ತಿನ್ನಲು ಸಾಕಷ್ಟು ಅನ್ನವಿಲ್ಲ, ತೊಡಲು ಬಟ್ಟೆಯಿಲ್ಲ, ಎಲ್ಲಿ ನೋಡಿದಲ್ಲಿ ದಿಗ್ಭ್ರಾಂತ ಹಾಹಾಕಾರವೆ. ಸಮಸ್ತ ಸಂಪತ್ತು, ವಾಣಿಜ್ಯ ಮತ್ತು ಉದ್ಯೋಗ, ಭೂಮಿ, ಸೊತ್ತು, ಒಕ್ಕಲತನದಿಂದ ಬಂದ ದವಸ ಧಾನ್ಯಗಳು ಸಹ ಹೆರವರ ಕೈಗೆ ಸಾಗಿಹೋಗುತಿವೆ. ಶಕ್ತಿಯ ಸಂಚಯವನ್ನೂ ಸಂಪಾದನೆಯನ್ನೂ ನಾವು ಬಿಟ್ಟುಕೊಟ್ಟಿದ್ದೇವೆ, ಶಕ್ತಿಯೂ ನಮ್ಮನ್ನು ಬಿಟ್ಟುಕೊಟ್ಟಿದ್ದಾಳೆ. ನಾವು ಪ್ರೇಮುಲೋಲ ಸಾಧನೆಯಲ್ಲಿ ನಿರತರಾಗಿದ್ದೇವೆ, ಆದರೆ ಜ್ಞಾನಶಕ್ತಿಗಳ ಅಭಾವದಿಂದ, ಪ್ರೇಮವು ಸಹ ಸಹಸಾ ಬದುಕಿರಲಾರದು. ಸಂಕುಚಿತ ವೃತ್ತಿಯೂ ಅಲ್ಪತ್ವವೂ ಬೆಳೆಬೆಳೆದು ನಮ್ಮ ಮನಗಳಲ್ಲಿ ಅವು ಮನೆಮಾಡಿಕೊಳ್ಳುತ್ತವೆ. ಸಂಕೀರ್ಣವೂ ಕ್ಷುದ್ರವೂ ಆದ ಮನಸ್ಸು-ಪ್ರಾಣ-ಹೃದಯ-

ಗಳಲ್ಲಿ, ಪ್ರೇಮವು ಕ್ಷಣ ಸಹ ಬದುಕಿರಲಾರದು. ಬಂಗಾಲದಲ್ಲಿ ಪ್ರೇಮವೆಲ್ಲಿದೆ? ಬಂಗಾಲದಲ್ಲಿ ಇರುವಷ್ಟು ಸಂಘರ್ಷ, ಮನೋಮಾಲಿನ್ಯ, ಅಸೂಯೆ, ಉಪೇಕ್ಷೆ, ದ್ವೇಷ,ಪಕ್ಷಪಂಗಡ ಇವೇ ಮೊದಲಾದುವನ್ನು, ಭಾರತದ ಬೇರಾವ ಭಾಗಗಳಲ್ಲಿಯೂ ಅವೆಷ್ಟೆ ಭೇದ-ಪ್ರಭೇದಗಳಿಂದ ವಿದೀರ್ಣವಾಗಿ ಹೋಗಿದ್ದರೂ ನಾವು ಕಾಣೆವು.

'ಆರ್ಯರ ರಾಮಾಯಣ ಮಹಾಭಾರತಗಳಂಥ ಮಹಾಕಾವ್ಯಗಳ ಕಾಲದಲ್ಲಿ ಎಂದೆಂದೂ ಇಷ್ಟೊಂದು ಕ್ಷೋಭೆ-ಕೋಲಾಹಲಗಳಿರಲಿಲ್ಲ. ಅಂದಿನ ಜನರು ಅದಾವ ಕೆಲಸವನ್ನೆ ಕೈಕೊಂಡು ಪ್ರಾರಂಭಿಸಿಬಿಟ್ಟರೆ ಅದು ಶತಕಾನುಶತಕ ಬಾಳುತಿತ್ತು. ಇಂದಿನ ಬಂಗಾಲಿಗಳ ಪ್ರಯತ್ನಗಳಾದರೊ ಕೇವಲ ಕೆಲವೆ ದಿನ ಮಾತ್ರ ಬಾಳುತ್ತವೆ.

'ನೀನೆನ್ನುವಿ, ಉದ್ದೀಪಿತ ಭಾವನೆಗಳಿಂದ ದೇಶವನ್ನು ತುಂಬಿಬಿಡುವದೂ ಕೆಲವೊಂದು ಸಂಗತಿಗಳ ವಿಷಯದಲ್ಲಿ ದೇಶಕ್ಕೆ ಹುಚ್ಚು ಹಿಡಿಸುವದೂ ಅತ್ಯಗತ್ಯವೆಂದು. ರಾಜಕೀಯ ರಂಗದಲ್ಲಿ ನಾನು ಇದನೆಲ್ಲ ಮಾಡಿದೆನು. ಸ್ವದೇಶಿಯ ಆಂದೋಲನದ ದಿನಗಳಲ್ಲಿ ಮಾಡಿದುದೆಲ್ಲ ಹುಡಿಗೂಡಿಹೋಗಿದೆ. ಆಧ್ಯಾತ್ಮಿಕ ಕ್ಷೇತ್ರದಲ್ಲಿ ಇದರ ಪರಿಣಾಮವು ಅದಕ್ಕಿಂತ ಒಳ್ಳೆಯದಾದೀತೆಂದು ನಿನ್ನ ಕಲ್ಪನೆಯುಂಟೆ? ಸರ್ವಥಾ ಯಾವ ಬಗೆಯ ಪರಿಣಾಮವೂ ಆಗಿಲ್ಲವೆಂದೇನು ನನ್ನ ಅಭಿಪ್ರಾಯವಲ್ಲ. ಕೆಲ-ಮಟ್ಟಿಗೆ ಪರಿಣಾಮವಾಗಿದೆ, ಪ್ರತಿಯೊಂದು ಆಂದೋಲನವೂ ತಕ್ಕಷ್ಟು ಪರಿಣಾಮ-ವನ್ನು ಉಂಟುಮಾಡಿಯೆ ಮಾಡುತ್ತದೆ. ಆದರೆ ಕಾರ್ಯಸಿದ್ಧಿಗೆ ಅದು ಕೇವಲ ಪೂರಕ ಪ್ರಾಯವಾಗಿ ಮಾತ್ರ ಇರುತ್ತದೆ. ಧ್ಯೇಯವನ್ನು ಪ್ರತ್ಯಕ್ಷ ಕೈಗೂಡಿಸಿಕೊಳ್ಳುವ ಸರಿಯಾದ ಪದ್ಧತಿಯು ಇದಲ್ಲ. ಈ ಕಾರಣಕ್ಕೋಸ್ಕರವೆ ನಾನು ಭಾವೋ-ದ್ರೇಕದ ಆಧಾರದ ಮೇಲೆ ಏನನ್ನೂ ಪ್ರತಿಪಾದಿಸಲು ಬಯುಸುವದಿಲ್ಲ; ಅಥವಾ ಉನ್ಮಾದದಲ್ಲಿ ಮನಸ್ಸು ಏನಾದರೊಂದನ್ನು ಗ್ರಹಿಸಿ ಬಿಡಬೇಕೆಂಬ ಇಚ್ಛೆಯೂ ನನಗಿರುವದಿಲ್ಲ. ನನ್ನ ಯೋಗವನ್ನು ಭದ್ರವಾಗಿ ಸ್ಥಾಪಿಸುವದಕ್ಕಾಗಿ ಅಪಾರವೂ ಪರಾಕ್ರಮಶಾಲಿಯೂ ಆದ ಸಮಚಿತ್ತತೆಯನ್ನು ಸ್ವಾಧೀನಪಡಿಸಿಕೊಳ್ಳಲು ಹವಣಿ-ಸುತ್ತೇನೆ; ಈ ಸಮಚಿತ್ತತೆಯ ಮೇಲೆ ಚೇತನವು ನೆಲೆಗೊಂಡಿತೆಂದರೆ, ಸಮೃದ್ಧ-ವಾದ, ದೃಢವಾದ, ಅವಿಚಲವಾದ ಶಕ್ತಿಯನ್ನು ಸಂಚಯಿಸಿಕೊಳ್ಳಲು ಎಳಸುತ್ತೇನೆ; ಆ ಶಕ್ತಿಸಾಗರದಲ್ಲಿ ಜ್ಞಾನಸೂರ್ಯನ ಕಿರಣಗಳ ಪ್ರಸರಣವನ್ನು ನಾನು ಬಯುಸು-ತ್ತೇನೆ; ಆ ಅಪಾರ ಪ್ರಕಾಶದಲ್ಲಿ, ಅನಂತ ಪ್ರೇಮ, ಅನಂತ ಆನಂದ, ಅದ್ವೈತಾನು ಭೂತಿಯ ಸ್ವರ್ಗೀಯ ಹರ್ಷನಿರ್ಭರತೆ, ಇವು ಇರತಕ್ಕುವೆ. ನಾನು ಲಕ್ಷಾವಧಿ ಶಿಷ್ಯರನ್ನು ದೊರಕಿಸಿಕೊಳ್ಳಲು ಇಚ್ಛಿಸುವದಿಲ್ಲ. ಕ್ಷುದ್ರ ಅಹಂಭಾವವನ್ನು ತೊರೆದು ದೋಷರಹಿತರಾಗಿ ಪರಿಪೂರ್ಣ ಮನುಷ್ಯರೆನಿಸಿಕೊಳ್ಳಬಲ್ಲಂಥ ಹಾಗು ಭಗವಂತನ ಉಪಕರಣಗಳು ತಾವೆಂದು ಕಾರ್ಯಮಾಡಲು ಒಪ್ಪಿ ಸಿದ್ಧರಿರುವಂಥ ಕೇವಲ ಒಂದು ನೂರು ಜನರು ನನಗೆ ದೊರೆತರೂ ನನಗೆ ತೃಪ್ತಿಯಿದೆ. ಆಧುನಿಕ ಕಾಲದ 'ಗುರು

ಸಂಘ' ದಲ್ಲಿ ನನಗೆ ಎಳ್ಳಷ್ಟೂ ನಂಬಿಗೆಯಿಲ್ಲ. ನಾನು ಸ್ವತಃ ಒಬ್ಬ ಗುರುವಾಗ ಬೇಕೆಂದೂ ನನ್ನಿಚ್ಛೆಯಿಲ್ಲ. ತನ್ನೊಳಗಿದ್ದ ಸುಪ್ತ ದಿವ್ಯಶಕ್ತಿಯನ್ನು ಜಾಗ್ರತ ಗೊಳಿಸಿಕೊಳ್ಳಲು ಸಾಧಕನಿಗೆ ಸಾಧ್ಯವಾಗಿ ಬಿಟ್ಟರೆ ಸಾಕು; ಭಗವಂತನ ನಿಜ ಭಕ್ತ ನಾಗಿ ಜೀವನವನ್ನು ಅವನು ಆರಂಭಿಸಿದರೆ ಸಾಕು; ಅದರಿಂದ ನನಗೆ ತೃಪ್ತಿಯಿದೆ. ಅವನು ನನ್ನ ಸ್ಪರ್ಶದಿಂದಾಗಲಿ ಇನ್ನಾರದೊ ಸ್ಪರ್ಶದಿಂದಾಗಲಿ ಜಾಗ್ರತನಾದರೆ ಸಾಕು. ಕೇವಲ ಈ ಬಗೆಯ ಜನರೆ ಈ ದೇಶವನ್ನು ಮೇಲಕ್ಕೆತ್ತಬಲ್ಲರು.

'ಇಲ್ಲಿ ನಾನು ಕೊಟ್ಟಿರುವ 'ವ್ಯಾಖ್ಯಾನ' ದಿಂದ, ಬಂಗಾಲದ ಭವಿತವ್ಯದ ಬಗೆಗೆ ನನ್ನಲ್ಲಿ ನಿರಾಶೆಯುಂಟೆಂದು ನೀನು ಊಹಿಸಬೇಕಾದುದಿಲ್ಲ. ಬಂಗಾಲದಲ್ಲಿ ಈ ಸಲ ಒಂದು 'ಮಹಾಜ್ಯೋತಿ'ಯು ದೇದೀಪ್ಯಮಾನವಾಗಿ ಹೊರಹೊಮ್ಮುವ ದೆಂದು ನಂಬಿಕೊಂಡ ಜನಗಳಿದ್ದಾರೆ. ನಾನು ಕೂಡ ಅದಕ್ಕಾಗಿ ಹಾತೊರೆದಿದ್ದೇನೆ. ಆದರೆ ನಾನು ನಾಣ್ಯದ ಇನ್ನೊಂದು ಮಗ್ಗಲನ್ನೂ ನೋಡಲು ಹವಣಿಸಿದ್ದೇನೆ; ಅಂದರೆ, ಲೋಪದೋಷಗಳನ್ನೂ ದೌರ್ಬಲ್ಯಗಳನ್ನೂ ಕಂಡಿದ್ದೇನೆ. ಇವೇ ನೆಲೆ ಯಾಗಿ ನಿಂತುಬಿಟ್ಟರೆ, ಬಂಗಾಲದಲ್ಲಿ ಪ್ರಜ್ವಲಿಸಬೇಕೆಂದು ನಾವು ಬಯಸುತಿರುವ ಆ 'ಮಹಾಜ್ಯೋತಿ' ಯು ಸರ್ವಶ್ರೇಷ್ಠವೂ ಆಗಲಾರದು, ಸ್ಥಿರವಾಗಿಯೂ ಇರ ಲಾರದು.

'ಈ ಅಸಾಮಾನ್ಯ ದೀರ್ಘ ಪತ್ರದ ಸಾರಾಂಶವೆಂದರೆ, ನಾನೂ ಬಗೆಬಗೆಯ ಸರಕುಗಳಿಂದ ತುಂಬಿದ ನನ್ನ ಜೋಳಿಗೆಯೊಂದಿಗೆ ಸಿದ್ಧನಾಗುತಿದ್ದೇನೆ. ಸಂತ ಪೀಟರನ ಜೋಳಿಗೆಯ ಹಾಗೆ ನನ್ನ ಜೋಳಿಗೆಯೂ ನಾನು ಬೆಂಬತ್ತಿ ಬೇಟೆಯಾಡಿ ಕೂಡಿಟ್ಟುಕೊಂಡ ವಸ್ತುವಿಶೇಷಗಳಿಂದ ಕಿಕ್ಕಿರಿದಿದೆ. ಈಗಲೆ ನಾನು ಆ ಜೋಳಿಗೆ-ಯನ್ನು ಬಿಚ್ಚುತ್ತಿಲ್ಲ. ಸಮಯೋಚಿತವಲ್ಲದ ಕಾಲದಲ್ಲಿ ಅದನ್ನು ಬಿಚ್ಚುವದರಿಂದ ಆಟವೆ ಕೆಟ್ಟು ಹೋದೀತು. ಈಗಲೆ ನಾನು ನನ್ನ ದೇಶಕ್ಕೆ ಮರಳುವದಿಲ್ಲ; ದೇಶ-ವಿನ್ನೂ ಸಿದ್ಧವಾಗಿಲ್ಲವೆಂಬ ಕಾರಣದಿಂದಲ್ಲ, ಆದರೆ ನಾನೇ ಇನ್ನೂ ಸಿದ್ಧನಲ್ಲ ಎಂಬ ಕಾರಣದಿಂದ. ಅಪೂರ್ಣ ಮಾನವರ ಮಧ್ಯದಲ್ಲಿ, ಓರ್ವ ಅಪೂರ್ಣ ಮಾನವ ನೇನು ಮಾಡಬಲ್ಲ ?

ನಿನ್ನ . . . . . .'

ಬಾರೀಂದ್ರರಿಗೆ ಬರೆದ ಈ ಉತ್ತರವು ಅನೇಕ ಮಾತುಗಳಿಂದ ಕೂಡಿದುದಾಗಿದೆ. ಎಪ್ರಿಲ ೧೯೨೦ರ ಕಾಲದ ಶ್ರೀ ಅರವಿಂದರ ಮನವನ್ನು ಅದು ಒಳ್ಳೆ ಸ್ಪಷ್ಟವಾಗಿ ಪ್ರತಿಬಿಂಬಿಸುತ್ತದೆ. ಅವರು ತಮ್ಮ ಸ್ವಂತದ ಸಾಧನೆಯ ಬಗೆಗೆ ವ್ಯಕ್ತಪಡಿಸಿದ ಅಭಿಪ್ರಾಯಗಳು, ವಿಶೇಷತಃ ಅತಿಮಾನಸದ ವಿಷಯಕ್ಕೆ ವ್ಯಕ್ತಪಡಿಸಿದ ಅಭಿ-ಪ್ರಾಯಗಳು ಅತ್ಯಂತ ಅರ್ಥಪೂರ್ಣವಾಗಿವೆ. ಅವು ಅವರ ಸಾಧನೆಯ ಆ ನಿಟ್ಟಿನಲ್ಲಿ ತುಂಬ ಬೆಳಕನ್ನು ಬೀರುವವು. ಬಾರೀಂದ್ರರು ಮುಂದೆ ಪಾಂಡಿಚೇರಿಗೆ

ಹೋದರು, ಆಗಾಗ ಅಲ್ಲಿಯೆ ಇರುತಿದ್ದರು, ಅವರಿಂದ ಮುಂದಿನ ಕಾರ್ಯಕ್ಕಾಗಿ ಸಲಹೆ ಸೂಚನೆಗಳನ್ನು ಪಡೆಯುತಿದ್ದರು.

ಶ್ರೀ ಅರವಿಂದರು ಸಾಮೂಹಿಕ ಧ್ಯಾನದಲ್ಲಿ ಎಂದೂ ಅಷ್ಟೊಂದು ಆಸಕ್ತಿಯನ್ನು ತೋರಿಸುತಿರಲಿಲ್ಲ; ಆದರೆ ಸಂಜೆಯು ನಾಲ್ಕೂವರೆ ಗಂಟೆಯ ಮಾತುಕತೆಯ ಕಾಲಕ್ಕೆ ಸಂದರ್ಶಕರ ಮಧ್ಯದಲ್ಲಿ ಕುಳಿತಾಗ, ಅದು ಹೇಗೊ ಬೆಳೆದು ಬಂತು. ಇದು ೧೯೨೧ ರ ಮಾತು. ಹಲವೊಂದು ಸಲ ಈ ಬಗೆಯ ಧ್ಯಾನವು ನಿಂತು ಹೋದುದುಂಟು. ಆ ಮೇಲೆ ಮತ್ತೆ ಆರಂಭವಾದುದೂ ಉಂಟು. ಈ ಬಗೆಯ ಧ್ಯಾನಕ್ಕೆ ತಕ್ಕ ವಾತಾವರಣವು ಅತ್ಯಗತ್ಯವೆಂದು ಅವರ ಮತವಿತ್ತು. ಅಂಥ ವಾತಾವರಣವನ್ನು ಉಂಟುಮಾಡಬಲ್ಲ ಪ್ರಭಾವಶಾಲಿ ವ್ಯಕ್ತಿಯ ಸಾಂನಿಧ್ಯವಿದ್ದರೆ ಮಾತ್ರ ಇದು ಸಾಧ್ಯ. ಕೃತ್ರಿಮ ಉಪಾಯಗಳಿಂದ ಇದು ಸಹಸಾ ಸಾಧ್ಯವಲ್ಲ.

ಊಹೆಗೆ ನಿಲುಕುವ ಪ್ರತಿಯೊಂದು ಬಗೆಯ ವಿಷಯವೂ ಸರತಿಯಂತೆ ಸಂಭಾಷಣೆಯ ಕಾಲಕ್ಕೆ, ಅಥವಾ ಸಂಜೆಯ ಚರ್ಚೆಯ ಕಾಲಕ್ಕೆ ತಲೆದೋರುತಿತ್ತು. ೧೫ ನೆಯ ಅಗಸ್ಟ ೧೯೨೩ ರ ಜನ್ಮದಿನವು ವಾಡಿಕೆಯಂತೆ ಆಚರಿಸಲ್ಪಟ್ಟಿತು. ಅಂದು ಶ್ರೀ ಅರವಿಂದರು ಅತಿಮಾನಸದ ವಿಷಯಕ್ಕೆ ಮಾತನಾಡಿದರು.

ಈ ಸಮಯದಲ್ಲಿ ಶ್ರೀ ಅರವಿಂದರು, ಅತಿಮಾನಸದ ಸಾಧನೆಯಲ್ಲಿ ತುಂಬ ನಿರತರಾಗಿದ್ದರೆಂಬ ಸಂಗತಿಯು ತೀರ ಸ್ಪಷ್ಟವಿದೆ. ೨೪ ನೆಯ ನವೆಂಬರ ೧೯೨೬ ರ ದಿನಾಂಕ, ಅತಿಮಾನಸ ಸತ್ಯದ ಬಗೆಗೂ ಅದರ ಅವತರಣದ ನಿಶ್ಚಿತತೆಯ ಬಗೆಗೂ ಅವರಿಗೆ ಆಶ್ವಾಸನವು ದೊರಕಿತು. ಆದುದರಿಂದ, ಅತಿಮಾನಸದ ವಿಷಯಕ್ಕೆ ೧೯೨೩—೨೬ ರ ನಡುವಿನ ಕಾಲದಲ್ಲಿ ಅವರು ಏನೇನು ನುಡಿದರೊ ಹಾಗೂ ಏನೇನು ಆಲೋಚಿಸಿದರೊ ಅದೆಲ್ಲಕ್ಕೂ ಅತಿ ದೊಡ್ಡ ಮಹತ್ವವುಂಟು. ಈ ವಿಷಯವನ್ನು ಕುರಿತು ಆ ಸಮಯದಲ್ಲಿ ಸಿಕ್ಕುವ ಸಾಮಗ್ರಿಯನ್ನು ಸಾರಾಂಶರೂಪದಲ್ಲಿ ಕೊಟ್ಟುಬಿಟ್ಟರೆ, ನಮ್ಮ ಉದ್ದೇಶವು ಚೆನ್ನಾಗಿಯೆ ನೆರವೇರುವದು.

ಜನೇವರಿ ೧೯೨೪ ರಿಂದ ಮುಂದೆ, ಶ್ರೀ ಅರವಿಂದರು ತಾವು ಧ್ಯಾನಾರೂಢ-ರಾಗಿದ್ದ ಸ್ತರದಿಂದ ಕೆಳಗಿಳಿದು ಬರಲು, ಆದೆಷ್ಟೆ ಅವಶ್ಯವಿದ್ದರೂ ಮನಸ್ಸನ್ನೆ ಮಾಡಲಿಲ್ಲ. ೨೬ನೆಯ ಮಾರ್ಚ ೧೯೨೪ ರ ದಿನಾಂಕ ಅವರು ಅಂದಿದ್ದಾರೆ: “ ಈ ಅತಿಮಾನಸ ಪದ್ಧತಿಗಳಿಗನುಸರಿಸಿ ಈ ಮೊದಲು ಸಾಧನೆಯು ಕೈಕೊಳ್ಳಲ್ಪಟ್ಟಿಲ್ಲ; ಹಾಗೆ ಯಾರೇ ಕೈಕೊಂಡಿದ್ದರೂ ಅದು ಹೆಚ್ಚಾಗಿ ಪೂರ್ವಸಿದ್ಧತೆಯ ಸ್ವರೂಪ-ದ್ದಾಗಿತ್ತು. ಹಿಂದಕ್ಕೆ ಯಾರಾದರೂ ಒಂದುವೇಳೆ ಪ್ರಯತ್ನಿಸಿದ್ದರೆಂದು ಇಟ್ಟು-ಕೊಂಡಿದ್ದರೂ ಆ ಬಗೆಗೆ ಪರಂಪರೆಗಳ ಸುಳಿವೆ ಸಿಕ್ಕುವದಿಲ್ಲ. ಕಾಲವು ಅದರ ಗುರುತನ್ನೆಲ್ಲ ಅಳಿಸಿಬಿಟ್ಟಿದೆ. ” ( ಪು. ೧೦೭, “ ದಕ್ಷಿಣಾ ” ).

ಇದಕ್ಕೆ ಒಬ್ಬರು ಪ್ರತಿಯಾಗಿ ಹೀಗೆ ಕೇಳಿದರು : 'ಹಿಂದಕ್ಕೆ ಅತಿಮಾನಸ-ಶಕ್ತಿಯು ಕೆಳಗಿಳಿದು ಬಂದು ಮತ್ತೆ ಮೇಲಕ್ಕೇರಿ ತನ್ನ ಮೂಲಸ್ಥಾನವನ್ನು ಅದು ಸೇರಿರಲಾರದೆ ?' ಇದಕ್ಕೆ ಉತ್ತರಕೊಡುತ್ತ ಶ್ರೀ ಅರವಿಂದರು ಹೀಗೆ ಹೇಳಿದರು : 'ಒಂದುವೇಳೆ ಆ ಅವತರಣವಾಗಿತ್ತೆಂದು ಇಟ್ಟುಕೊಂಡರೂ ಭಾವೀ ಮನುಕುಲದ ಪರಿಪೂರ್ಣತೆಯ ಬಗೆಗೆ, ಅದರ ಸ್ವರೂಪವು ಹೆಚ್ಚಾಗಿ ಆಶ್ವಾಸನಪರ ಅಥವಾ ಆಶಾಸೂಚಕ ಮಾತ್ರವಾಗಿತ್ತು. ಆದರೆ ಉಚ್ಚತಮ ಸತ್ಯವು ಸ್ಥೂಲ ಜಡತತ್ತ್ವದಲ್ಲಿ ಎಂದೂ ಕಾಣಿಸಿಕೊಂಡಿರುವದಿಲ್ಲ. ಬಹಳವೆಂದರೆ, ಅದನ್ನು ಕೆಳಗೆ ತರುವ ಪ್ರಯತ್ನಗಳಾಗಿವೆ ಎಂದಿಷ್ಟೆ ಹೇಳಬಹುದು. ಆದರೆ, ಈ ಪೃಥ್ವಿಯ ಮೇಲೆ ಅದೊಂದು ಪ್ರಭಾವಶಾಲಿ ಶಕ್ತಿಯಾಗಿ ಎಂದೂ ಕೆಲಸ ಮಾಡಿಲ್ಲ. ಜಡಕ್ಕಿಂತ ಮೇಲಿನ ಭೂಮಿಕೆಗಳಲ್ಲಿ ಆ ದಿವ್ಯಜ್ಯೋತಿಯನ್ನೂ ಆ ಧ್ರುವಸತ್ಯವನ್ನೂ ತರುವದು ಅಷ್ಟೊಂದು ಕಷ್ಟದ ಕೆಲಸವಲ್ಲ. ಆದರೆ ಆ ಸತ್ಯವನ್ನು ಈ ಸ್ಥೂಲ ನಿಶ್ಚೇತನದ ಸ್ತರಕ್ಕೆ ಇಳಿಸುವದು ಬಹಳ ಕಠಿಣ. ಇದು ಸಾಧ್ಯವಾಗಬೇಕಾದರೆ, ಈಗಿದ್ದ ಪ್ರಕೃತಿಯ ನಿಯಮಗಳನ್ನೆ ಪಲ್ಲಟಗೊಳಿಸಬೇಕಾಗುವದು. ಈ ಕ್ರಾಂತಿಕಾರಕ ಪಲ್ಲಟವು ಕಾರ್ಯಗತವಾಗಬೇಕಾದರೆ ಪ್ರಥಮತಃ ಈ ಪೃಥ್ವಿಯನ್ನು ಸುತ್ತುಗಟ್ಟಿದ ವಾತಾವರಣವೆ ಪಲ್ಲಟಗೊಳ್ಳಬೇಕು. ಜ್ಞಾನವನ್ನಾಗಲಿ ಶಕ್ತಿಯನ್ನಾಗಲಿ ದೊರಕಿಸಿ-ಕೊಳ್ಳುವ ಪ್ರಶ್ನೆ ಮಾತ್ರವಿದಾಗಿರದೆ, ಈ ಸ್ಥೂಲ ಜಡದಲ್ಲಿ ಆ ಧ್ರುವಸತ್ಯವನ್ನು ಪ್ರತ್ಯಕ್ಷವಾಗಿ ಇಳಿಸುವ ಉದ್ಯಮವಿದಾಗಿದೆ.'' (ಪುಟ ೧೦೭, ''ದಕ್ಷಿಣಾ'')

ಆ ಅತಿಮಾನಸ ಸತ್ಯವನ್ನು, ಬೇಗ ಇಷ್ಟರಲ್ಲಿಯೆ ಕೆಳಗೆ ತರುವದು ಸಾಧ್ಯವೆ ಎಂದು ಕೇಳಿದ್ದಕ್ಕೆ, ತೀರ ಸಾಧ್ಯ—ಆದರೆ ಅದು ಎಂದು ಘಟಿಸೀತೆಂಬುದನ್ನು ಖಚಿತವಾಗಿ ತಾವು ಹೇಳಲಾರೆವೆಂದೂ ಅದು ಈ ವರೆಗೂ ಘಟಿಸಿಲ್ಲವೆಂಬ ಸಂಗತಿಯು ಮಾತ್ರ ನಿಜವೆಂದೂ ಅವರು ನುಡಿದರು.

೧೫ ನೆಯ ಆಗಸ್ಟ ೧೯೨೬ ರ ದಿನಾಂಕ, ಅಂದರೆ ಅವರ ಐವತ್ತುನಾಲ್ಕನೆಯ ಜಯಂತಿಯ ದಿವಸ, ಶ್ರೀ ಅರವಿಂದರು ಒಂದು ಚಿಕ್ಕ ಭಾಷಣ ಮಾಡಿದರು. ಅದು ಬಹಳ ಮಹತ್ವದ್ದಾಗಿದೆ.

ಅದೇ ವರ್ಷದ ೨೪ನೆಯ ನವೆಂಬರ ದಿನಾಂಕವು, ಶ್ರೀ ಅರವಿಂದರ ಪ್ರಕಾರ, ವಿಜಯದ ದಿನವಾಗಿದ್ದು ಅಂದು ಅತಿಮಾನಸ ಶಕ್ತಿಯು ಈ ಪೃಥ್ವಿಗೆ ಇಳಿದುಬರುವ ವಿಷಯಕ್ಕೆ ಅವರಿಗೆ ಆಶ್ವಾಸನವು ದೊರಕಿತು. ಈ ಕಾರಣದಿಂದಲೆ ಅವರ ೧೫ ನೆಯ ಆಗಸ್ಟದ ಆ ಭಾಷಣವು ಬಹು ಸಂಕೇತಪೂರ್ಣವಾದುದಾಗಿದೆ.

ಪಾಂಡಿಚೇರಿಯ ಆಶ್ರಮದಲ್ಲಿ ಅವರು ಮಾಡಿದ ಆ ಭಾಷಣದ ಅವತರಣಿಕೆ-ಯನ್ನು ಕೆಳಗೆ ಕೊಡಲಾಗಿದೆ. (ಪುಟ ೩, 'ಮದರ ಇಂಡಿಯಾ', ಫೆಬ್ರುವರಿ ೧೯೫೨):

'ನಮ್ಮ ಯೋಗದ ಮುಖ್ಯೋದ್ದೇಶವೆಂದರೆ, ಒಂದು ಹೊಸ ಚೇತನವನ್ನು,

ಒಂದು ಹೊಸ ಶಕ್ತಿಯನ್ನು, ಒಂದು ಹೊಸ ಜ್ಯೋತಿಯನ್ನು, ಒಂದು ಹೊಸ ಸದ್ವಸ್ತುವನ್ನು ಈ ಪೃಥ್ವಿಗೆ ಕೆಳಗಿಳಿಸಿ ತರುವದಾಗಿದೆ. ಈ ಪೃಥ್ವಿಯ ಮೇಲಿನ ಸಾಮಾನ್ಯ ಜೀವನವನ್ನು ತಣಿಸಬಲ್ಲ ಚೇತನಕ್ಕಿಂತ ಬೇರೆ ಬಗೆಯಾದ ಚೇತನವದು. ಆ ಚೇತನವು, ಆ ಸತ್ಯದ ಶಕ್ತಿಯು-ಜ್ಯೋತಿಯು, ಆ ದಿವ್ಯ ಸದ್ವಸ್ತುವು, ಈ ಪಾರ್ಥಿವ ಚೇತನವನ್ನು ಜಾಗ್ರತಗೊಳಿಸುತ್ತ ಇಹದಲ್ಲಿರುವದೆಲ್ಲವನ್ನೂ ಪರಿವರ್ತನ-ಗೊಳಿಸಬೇಕೆಂದೆ ಈಶ್ವರಸಂಕಲ್ಪವಿದೆ.

‘ ಇನ್ನುಳಿದ ಯೋಗಗಳ ಅಂತಿಮ ಧ್ಯೇಯಗಳು ನಮಗೆ ಕೇವಲ ಪ್ರಾಥಮಿಕ ಅವಸ್ಥೆಗಳೆಂದೂ ಅಥವಾ ತೀರ ಪ್ರಾಥಮಿಕ ಉಪಾಧಿಗಳೆಂದೂ ಚೆನ್ನಾಗಿ ನೆನಪಿ-ನಲ್ಲಿಡಿರಿ. ಯೋಗದ ಹಳೆಯ ದಿನಗಳಲ್ಲಿ, ಬ್ರಹ್ಮಚೇತನದ ಅಥವಾ ವಿಶ್ವಚೇತನದ ಅನುಭವವನ್ನು ಪಡೆದುಬಿಟ್ಟರೆ ಅಥವಾ ಒಂದು ಬಗೆಯ ಜ್ಯೋತಿ-ಶಕ್ತಿಗಳ ಅವ-ತರಣವನ್ನಾಗಲಿ ಅನಂತತೆಯ ಇಂಗಿತವನ್ನಾಗಲಿ ಕಂಡುಬಿಟ್ಟರೆ, ಅಷ್ಟಕ್ಕೆಯೆ ಜನರು ಸಂತೃಪ್ತರಾಗಿ ಬಿಡುತಿದ್ದರು. ಮನಸ್ಸು ಕೆಲವೊಂದು ಆಧ್ಯಾತ್ಮಿಕ ಅನು-ಭವಗಳನ್ನು ಹೊಂದಿಬಿಟ್ಟರೆ ಮತ್ತು ಪ್ರಾಣಮಯ ಪುರುಷನು ಮನೋಮಯ ಪುರುಷನ ಸಂಪರ್ಕದಲ್ಲಿ ಇದ್ದುಬಿಟ್ಟರೆ ಅಷ್ಟೆ ಸಾಕು ಎಂದು ಎಣಿಸುತಿದ್ದರು. ನಿಷ್ಪಂದ ಸಮಾಧಿಸ್ಥಿತಿಯನ್ನೆ ಅವರು ಅರಸುತಿದ್ದು, ಅದುವೆ ಅಂತಿಮ ಧ್ಯೇಯವೆಂದೂ ಮೋಕ್ಷವೆ ಅಂತಿಮ ಲಕ್ಷ್ಯವೆಂದೂ ಅವರು ಗಣಿಸುತಿದ್ದರು.

‘ ಇದು ಸಿದ್ಧಿಸಬೇಕಾದರೆ, ಅನಂತವಾದ ವಿಶ್ವಶಕ್ತಿಗೆ ಹೃದಯವನ್ನು ತೆರೆದು ಕೊಂಡು ಇರುವುದೆ, ಆ ವಿಶ್ವಶಕ್ತಿಯ ಪೂರ್ವಸೂಚನೆಗಳನ್ನು ಸ್ವೀಕರಿಸುವುದೆ, ಅನುಭವಗಳನ್ನು ಪಡೆಯುವುದೆ, ಅಹಂಕಾರವನ್ನು ಪೂರ್ಣವಾಗಿ ಮೀರುವುದೆ, ವಿಶ್ವಮಯ ಮನವನ್ನೂ ವಿಶ್ವಮಯ ಆತ್ಮವನ್ನೂ ವಿಶ್ವಮಯ ಪರಮಾತ್ಮನನ್ನೂ ಅರಿಯುವುದೆ — ಇದು ಮಾತ್ರವೆ ಮೊಟ್ಟಮೊದಲಿನ ಉಪಾಧಿಯಾಗಿದೆ.

‘ ಈ ಬೃಹತ್ತರ ಚೇತನವನ್ನು ನಾವು ಕೆಳಗೆ ಕರೆದು ಅದನ್ನು ನೇರವಾಗಿ ಪ್ರಾಣ-ಮಯ ಕೋಶದಲ್ಲಿಯೂ ಅನ್ನಮಯ ಕೋಶದಲ್ಲಿಯೂ ತುಂಬಬೇಕು, ಎಂದಾಗಲೆ ಆ ಪರಮ ನೀರವತೆಯೂ ವಿಶ್ವಮಯತೆಯೂ ಆಮೂಲಾಗ್ರ ಪೂರ್ಣ ಸ್ವರೂಪದಲ್ಲಿ ನೆಲೆಗೊಳ್ಳಬಲ್ಲದು. ಇದು ಸಾಧಿಸದೆ ಹೋದರೆ, ಪರಿವರ್ತನೆಯ ಮೊಟ್ಟ ಮೊದಲ ಉಪಾಧಿಯು ಪೂರೈಸುವದಿಲ್ಲ.

‘ ಪ್ರಾಣಮಯ ಕೋಶವು ಪರಿವರ್ತಿತವಾಗದೆ ಮನೋಮಯ ಕೋಶವು ಪರಿವರ್ತಿತವಾಗಲಾರದು. ಪ್ರಾಣಮಯ ಕೋಶದ ಪರಿವರ್ತನವಿಲ್ಲದೆ ಅದಾವುದೂ ಸಿದ್ಧಿಸದು. ಏಕೆಂದರೆ ಸಾಕ್ಷಾತ್ಕಾರ ಹೊಂದುವವನು ಪ್ರಾಣಮಯ ಪುರುಷನೆ ಆಗಿದ್ದಾನೆ.

‘ ಅನ್ನಮಯ ಕೋಶವು ಕೂಡ ತೆರೆದುದಾಗಿರಬೇಕು, ಪರಿವರ್ತನ ಹೊಂದ

ಬೇಕು. ಇದಾಗದೆಯೆ ಪ್ರಾಣಮಯ ಪುರುಷನ ಪೂರ್ಣ ಪರಿವರ್ತನವು ಪರಿಣಮಿಸಲಾರದು; ಏಕೆಂದರೆ, ಅಯೋಗ್ಯ ಪಾತ್ರಪರಿಕರಗಳಲ್ಲಿ ಜೀವನಯಾಪನ ಮಾಡುವ ಪ್ರಾಣಪುರುಷನು ದಿವ್ಯನಾಗಿದ್ದರೂ ಸಿದ್ಧಿಸಾಕ್ಷಾತ್ಕಾರಗಳನ್ನು ಹೊಂದಲಾರನು.

'ಮತ್ತೊಂದು ಮಾತೆಂದರೆ ಬಾಹ್ಯ ಅಸ್ತಿತ್ವವು, ಬಾಹ್ಯ ಪುರುಷನು ಪರಿವರ್ತನ ಹೊಂದದೆ, ಅಂತರಿಕ ಅನ್ನಮಯ ಪುರುಷನು ಪರಿವರ್ತನ ಹೊಂದುವದು ಶಕ್ಯವಿಲ್ಲ. ಯೋಗಸಾಧನೆಯ ಕ್ರಮದಲ್ಲಿ ಒಂದು ಸರ್ವಸಮಗ್ರತೆಯಿದ್ದು, ಪ್ರತಿ ಅಂಗವೂ ಇನ್ನೊಂದನ್ನು ಅವಲಂಬಿಸಿಕೊಂಡಿರುವದು. ಆದ್ದರಿಂದ, ನಡುವೆಯೆ ನಿಲ್ಲುವದೆಂದರೆ ಇನ್ನೊಂದು ಜನ್ಮದ ಸಿದ್ಧತೆಯಲ್ಲಿದ್ದುಕೊಂಡಂತೆಯೆ ಸರಿ; ಇದು ಸರ್ವಥಾ ಗೆಲವಲ್ಲ.

'ಯಾವುದನ್ನಾದರೂ ಶಾಶ್ವತವಾಗಿ ಪರಿವರ್ತಿಸುವದು ಸಾಧ್ಯವಾಗಬೇಕಾದರೆ, ಆ ಮೊದಲು ಸರ್ವವೂ ಪರಿವರ್ತನ ಹೊಂದಲಿಕ್ಕೆಬೇಕು.'

೧೯೨೦ ರಲ್ಲಿ ಶ್ರೀ ಅರವಿಂದರು ಬಾರೀಂದ್ರರಿಗೆ ಬರೆದ ಉತ್ತರದಲ್ಲಿ ಅತಿಮಾನಸ ಸಿದ್ಧಿಗಾಗಿ ತಾವು ಕೈಕೊಂಡ ಸ್ವಂತದ ಸಾಧನೆಯ ವಿಷಯಕ್ಕೆ ಹೇಳಿದ ಕೆಲವೊಂದು ಮಾತುಗಳನ್ನು ತಿಳಿದುಕೊಳ್ಳಲು ಈ ಅವತರಣಿಕೆಯು ಸಹಾಯಕವಾಗುವದು. ೧೯೨೬ರ ಹೊತ್ತಿಗೆ ಅವರು ಈ ಮಾರ್ಗದಲ್ಲಿ ತುಂಬ ಪ್ರಗತಿಯನ್ನು ಹೊಂದಿದ್ದರು. ಶ್ರೀ ತಾಯಿಯವರು ಇದ್ದುದರಿಂದ, ಮತ್ತು ಅನೇಕ ಸಂಗತಿಗಳಲ್ಲಿ ದೊರೆತ ಅವರ ನೆರವಿನಿಂದ, ಶ್ರೀ ಅರವಿಂದರ ಹೊಣೆ ಅದೆಷ್ಟೋ ಹಗುರಾಗಿ ಹೋಗಿತ್ತು. ಸಾಧಕರ ಮಾರ್ಗದರ್ಶನ ವಿಷಯದಲ್ಲಿ ಕೂಡ ತಾಯಿಯವರಿಗೆ ಹೆಚ್ಚು ಹೆಚ್ಚಿನ ಹೊಣೆ ಹೊರಿಸಲಾಗಿತ್ತು. ಇದನ್ನು ಕ್ರಮಕ್ರಮವಾಗಿ ಮಾಡಿದ ಮೂಲಕ ಈ ಬಗೆಯು ತೀರ ಸ್ವಾಭಾವಿಕವಾಗಿಯೆ ತೋರಿತು. ಅಗಸ್ಟ ೧೫ನೆಯ ದಿನಾಂಕದಿಂದ ನವೆಂಬರದ ವರೆಗೆ ಶ್ರೀ ಅರವಿಂದರ ಮಾತುಗಳು ಸದಾ ಅತಿಮಾನಸವನ್ನೂ ಅದರ ಅವತರಣವನ್ನೂ ಕುರಿತೆ ಇರುತ್ತಿದ್ದವು. ಇದರಿಂದ ಆ ಅವತರಣವು ಬಹು ಸನಿಹದಲ್ಲಿಯೆ ಇದೆಯೆಂಬುದಾಗಿಯೂ ಶ್ರೀ ಅರವಿಂದರು ಅನೇಕ ಸಂಕಷ್ಟಗಳನ್ನು ಎದುರಿಸಿಯೂ ಪ್ರಗತಿಹೊಂದುತ್ತಿದ್ದರೆಂಬುದಾಗಿಯೂ ಭಾವನೆಯುಂಟಾಗಿತ್ತು. ಸಾಧಕರು ತಮ್ಮ ಸ್ವಂತ ವೈಯಕ್ತಿಕ ಸಾಧನೆಯಲ್ಲಿ ಒಂದು ಪ್ರಕಾರದ ಗಂಭೀರತೆಯ ಅನುಭವವನ್ನು ಪಡೆದರಲ್ಲದೆ, ಅತಿಮಾನಸ ಸಿದ್ಧಿಯು ಎಂದಿಗಿಂತ ಹತ್ತಿರ ಹತ್ತಿರ ಉಂಟೆಂದು ಅವರಿಗೆ ಅನಿಸುತ್ತಿತ್ತು. ಬರಬರುತ್ತ ಶ್ರೀ ಅರವಿಂದರು ಸಂಜೆಯ ಸಭೆಗಳಿಗೆ ಕಡಿಮೆ ಕಡಿಮೆ ಹೋಗತೊಡಗಿದರು. ಅವರು ತಮ್ಮ ಸಾಧನೆಯಲ್ಲಿಯೆ ತುಂಬ ತನ್ಮಯರಾಗಿದ್ದರೆಂಬುದು ಸ್ವಯಂ ಸ್ಪಷ್ಟವಿತ್ತು. ಶ್ರೀ ಅರವಿಂದರು ಇಷ್ಟೊಂದು ಎತ್ತರದ ಹಂತವನ್ನು ತಲುಪಿದಾಗ ಸಹ ತಮ್ಮ ಸಾಧನೆಯಲ್ಲಿ ಎಷ್ಟೊಂದು ಏಕಾಗ್ರತೆ-ಶ್ರದ್ಧೆ-ತತ್ಪರತೆಗಳನ್ನು ವಹಿಸುತ್ತಿದ್ದರೆಂಬುದರ ಕಲ್ಪನೆಯು ಕೂಡ ಬಹುಜನ

ರಿಗೆ ಬರಲಾರದು. ಯಾವುದೊ ಒಂದು ಗಹನವಾದ ಪ್ರಮೇಯದಲ್ಲಿ ಮಗ್ನನಾದ ಓರ್ವ ಭೌತವಿಜ್ಞಾನಿಯ ಶ್ರದ್ಧೆ-ನಿರ್ಧಾರಗಳಿಂದಲೂ ಪರಿಪೂರ್ಣತೆಯನ್ನೆ ಗುರಿಯಾಗಿ ಇಟ್ಟುಕೊಂಡ ಓರ್ವ ದೊಡ್ಡ ಕಲಾವಿದನ ಸತತೋದ್ಯೋಗ-ಸಹಿಷ್ಣುತೆಗಳಿಂದಲೂ ಶ್ರೀ ಅರವಿಂದರು ತಮ್ಮ ದಿವ್ಯದರ್ಶನವನ್ನು ಬೆಂಬತ್ತಿದ್ದರು; ಆ ದಿವ್ಯದರ್ಶನವು ಮೂರ್ತಸ್ವರೂಪಕ್ಕೆ ಬರುತ್ತಲೆ ಮಾನವಕುಲವು ಧನ್ಯವಾದೀತು.

ಕೊನೆಗೊಮ್ಮೆ ಆ ಶುಭದಿನವು ಉದಯಿಸಿತು. ಒಮ್ಮಿಂದೊಮ್ಮೆ ನಸುಕಿನ ೫ ಗಂಟೆಗೆ ತಾಯಿಯವರು, ಆಶ್ರಮದ ಸಾಧಕರೆಲ್ಲ ಒಂದೆಡೆ ಒಟ್ಟುಗೂಡಬೇಕೆಂದು ಅವಸರದಿಂದ ಹೇಳಿಕಳಿಸಿದರು. ಬೆಳಗಿನ ೬-೩೦ ರ ಹೊತ್ತಿಗೆ ಎಲ್ಲರೂ ನೆರೆದರು. ಶ್ರೀ ಅರವಿಂದರು ಒಂದು ಪೀಠದಲ್ಲಿ ವಿರಾಜಿಸುವವರಿದ್ದರು. ಆ ಪೀಠದ ಹಿಂದೆ: ಬಂಗಾರದಿಂದ ಕಸೂತಿ ಹಾಕಿದ, ಚೀನ ದೇಶದ ನಖಪಂಖುಗಳುಳ್ಳ ಮೂರು ಉರಗಗಳ ಚಿತ್ರವಿದ್ದ ಒಂದು ಕರಿಯ ಬಣ್ಣದ ತೆರೆಯಿತ್ತು. ಆಶ್ರಮವಾಸಿಗಳು ನೆರೆನೆರೆದಂತೆ, ಒಂದು ಗಭೀರ ಶಾಂತತೆಯು ವ್ಯಾಪಿಸಿ, ಎಲ್ಲರಿಗೂ ವಾತಾವರಣದಲ್ಲಿ ಒಂದು ಪ್ರಕಾರದ ವಿದ್ಯುತ್ ಸ್ಪಂದನದ ಅನುಭವವಾಯ್ತು. ಗೊತ್ತುಮಾಡಿದ ಹೊತ್ತಿಗೆ ತಾಯಿಯವರೂ ಶ್ರೀ ಅರವಿಂದರೂ ಆಗಮಿಸಿದರು. ಶ್ರೀ ಅರವಿಂದರು ತಮ್ಮ ವಾಡಿಕೆಯ ಪೀಠದಲ್ಲಿ ಮಂಡಿಸಿದರು, ತಾಯಿಯವರು ಅವರ ಬದಿಗೆ ಬಂದು ಸಣ್ಣ ಚೌಕಿಯ ಮೇಲೆ ಕುಳಿತರು. ನಿಷ್ಪಂದ ನೀರವತೆ ನೆಲೆಸಿತ್ತು. ಆ ಬಗೆಯ ಗಭೀರ ವಾತಾವರಣದಲ್ಲಿ ನಾಲ್ವತ್ತೈದು ನಿಮಿಷಗಳವರೆಗೆ ಧ್ಯಾನವು ಸಾಗಿತು. ಆ ಮೇಲೆ ಶ್ರೀ ಅರವಿಂದರು ಪ್ರತಿಯೊಬ್ಬ ಸಾಧಕನನ್ನೂ ಆಶೀರ್ವದಿಸಿದರು. ಪ್ರತಿಯೊಬ್ಬನಿಗೂ ಅನಿಸಿತು, ಉರ್ಧ್ವತರ ಶಕ್ತಿಯೊಂದು ಭೂಮಿಗೆ ಇಳಿದುಬಂದಿದೆ ಎಂದು. ಮಿಸ್ ಹಡ್ಸನ್ ದತ್ ಎಂಬವರು ಸ್ಫೂರ್ತಸ್ವರದಲ್ಲಿ ಉದ್ಗರಿಸಿದರು. 'ಇಂದು ಪರಮೇಶ್ವರನು ಪೃಥ್ವಿಗಿಳಿದು ಬಂದಿದ್ದಾನೆ'. ಶ್ರೀ ಅರವಿಂದರ ಸಾಧನೆಯ ವಿಜಯದ ದಿನವು ಅದಾಗಿತ್ತು; ಏಕೆಂದರೆ, ಅಧಿಮಾನಸದ (Overmind) ಅವತರಣದಿಂದ ಅತಿಮಾನಸದ ಅವತರಣವು ದೃಢೀಕರಿಸಲ್ಪಟ್ಟಿತು. ಈ ಮುಂದೆ, ಈ ದಿನವು ದರ್ಶನದಿನಗಳಲ್ಲಿ ಒಂದಾಗಿ ಎಣಿಸಲ್ಪಟ್ಟಿತು. ಶ್ರೀ ಅರವಿಂದರು ಜನರ ಸಂದರ್ಶನವನ್ನು ನಿಲ್ಲಿಸಿಬಿಟ್ಟರು. ತಾಯಿಯವರ ಮುಖಾಂತರವೆ ಅವರೊಡನೆ ಸಂಪರ್ಕವು ಸಾಧ್ಯವಿತ್ತು. ಆಶ್ರಮವೆಲ್ಲ ಅಂದಿನಿಂದ ಸ್ವತಃ ತಾಯಿಯವರಿಂದ, ನೇರವಾಗಿ ನಡೆಯತೊಡಗಿತು.

ನವೆಂಬರ ೧೯೨೬ರ ನಂತರ ಕೆಲಸವು ಸ್ವಾಭಾವಿಕವಾಗಿ ಬೆಳೆಯತೊಡಗಿತು. ಆಶ್ರಮವಾಸಿಗಳ ಸಂಖ್ಯೆಯು ಬರಬರುತ್ತ ೮೦೦ ರ ವರೆಗೆ ಮುಟ್ಟಿತು. ಆಶ್ರಮ-ವಾಸಿಗಳ ಮಕ್ಕಳಿಗೆ ೧೯೪೦ರ ತರುವಾಯದಿಂದ ಪ್ರವೇಶವು ದೊರಕತೊಡಗಿತು. ಅತಿಮಾನಸ ಶಕ್ತಿಯನ್ನು ಕೆಳಗಿಳಿಸಿಕೊಳ್ಳುವ ಅವಿಚ್ಛಿನ್ನವಾದ ಪ್ರಯತ್ನ, ಸಾಧಕ

ರಿಗೆ ತೋರುವ ಮಾರ್ಗದರ್ಶನ, ಆಶ್ರಮವನ್ನು ನಡೆಯಿಸುವದು, ಪುಸ್ತಕಗಳನ್ನು ಪ್ರಕಟಗೊಳಿಸುವದು, ('ದೈವೀ ಜೀವನವು' ೧೯೩೯ ರಲ್ಲಿ ಕೊನೆಯ ಬಾರಿ ಪರಿಶೋಧಿಸಲ್ಪಟ್ಟಿತು) 'ಸಾವಿತ್ರಿ'ಯ ರಚನೆ-ಪರಿಶೋಧನೆಗಳು ಇವೇ ಮೊದಲಾದವು ಶ್ರೀ ಅರವಿಂದರ ಮುಖ್ಯ ಕಾರ್ಯಗಳಾಗಿದ್ದವು. ಈ ಹೊಣೆಗಾರಿಕೆಗಳಿಗೆ ಇತ್ತೀಚೆಗೆ ಜೋಡಿಸಲ್ಪಟ್ಟ ಮತ್ತೊಂದು ಹೊಸ ಕೆಲಸವೆಂದರೆ, ಚಿಕ್ಕಮಕ್ಕಳ ಸಲುವಾಗಿ ಸರ್ವಾಂಗೀಣವಾದ ಶಿಕ್ಷಣದ ಎತ್ತುಗಡೆಯ ಕಾರ್ಯ. ಈ ಕಾರ್ಯವ್ಯೂಹದ ಮಧ್ಯದಲ್ಲಿದ್ದಾಗಲೆ ಶ್ರೀ ಅರವಿಂದರ ಮಹಾಪ್ರಸ್ಥಾನದ ಕಾಲವೊದಗಿತು. ಸುದೈವದಿಂದ ಅಷ್ಟರಲ್ಲಿ ಗ್ರಂಥಪ್ರಕಟನೆಯ ಕೆಲಸ ಎಷ್ಟೊ ಮುಂದುವರಿದಿತ್ತು. ಕಾರ್ಯವ್ಯಾಪದಲ್ಲಿ ಸಂಪೂರ್ಣವಾಗಿ ಹೀಗೆ ಸಿಲುಕಿಕೊಂಡಾಗಲೆ ಶ್ರೀ ಅರವಿಂದರು ತಮ್ಮ ಪಾರ್ಥಿವ ದೇಹವನ್ನು ತೊರೆದರು. ಅಸ್ತಿತ್ವದ ಸಾಧ್ಯವಿದ್ದ ಸಮಸ್ತ ಭೂಮಿಕೆಗಳ ಮೇಲೆಯೂ ಅವಿರತ ಕರ್ಮಪ್ರವರ್ತನೆಯನ್ನೆ ಪ್ರತಿಪಾದಿಸಿದ ಅವರ ಪರಿಪಂಥಕ್ಕೆ ತಕ್ಕುದಾದ ಮಹಾಪ್ರಸ್ಥಾನವೆ ಅವರದು.

ದಿಲೀಪಕುಮಾರರಿಗೆ ಬರೆದ ಒಂದು ಪತ್ರದಲ್ಲಿ ಮಹತ್ವದ ಈ ವಿಷಯದ ಬಗೆಗೆ ಅವರು ನಿಚ್ಚಳವಾಗಿ ಹೀಗೆ ಒಕ್ಕಣಿಸಿದ್ದಾರೆ:— '. . . . ನಾನು ಭಾರತ ದೇಶಕ್ಕೆ ಬಂದಂದಿನಿಂದ, ನನ್ನ ಜೀವನವೂ ನನ್ನ ಯೋಗವೂ ಯಾವಾಗಲೂ ಐಹಿಕ ಮತ್ತು ಪಾರಲೌಕಿಕ ಹೀಗೆ ಎರಡಕ್ಕೂ ಸಂಬಂಧಿಸಿದ್ದು, ಇವುಗಳಲ್ಲಿ ಯಾವುದೊ ಒಂದಕ್ಕೆ ಮಾತ್ರ ಪ್ರಾಶಸ್ತ್ಯವೆಂಬ ಮಾತೇ ಇಲ್ಲ. ಮಾನವೀಯ ಹಿತಸಂಬಂಧಗಳೆಲ್ಲ ನನ್ನ ತಿಳಿವಳಿಕೆಯ ಮೇರೆಗೆ, ಐಹಿಕವಾಗಿವೆ; ಅಲ್ಲದೆ ಅವುಗಳಲ್ಲಿ ಹಲವು ನನ್ನ ಮನೋಭೂಮಿಕೆಯಲ್ಲಿ ಪ್ರವೇಶ ಪಡೆದಿದ್ದು, ಇನ್ನು ಕೆಲವು ರಾಜಕಾರಣದಂತೆ ನನ್ನ ಜೀವನದಲ್ಲಿಯೂ ಬಂದುಬಿಟ್ಟಿವೆ. ಆದರೆ, ಹೀಗಿದ್ದರೂ ಮುಂಬಯಿಯ ಅಪೊಲೊ ಬಂದರದಲ್ಲಿ ಮೊಟ್ಟ ಮೊದಲಿಗೆ ಭಾರತದ ಭೂಸ್ಪರ್ಶವಾಗುತ್ತಲೆ, ನನಗೆ ಆಧ್ಯಾತ್ಮಿಕ ಅನುಭವಗಳು ಬರತೊಡಗಿದವು. ಆದರೆ ಅವೇನು ಇಹಲೋಕದ ಸಂಪರ್ಕದಿಂದ ದೂರಾದವುಗಳಲ್ಲ; ಇಷ್ಟೇ ಅಲ್ಲ, ಅವು ಇಹಲೋಕದ ಆಂತರಿಕವೂ ಅನಂತವೂ ಆದ ಪ್ರಭಾವದಿಂದ ಕೂಡಿವೆ. ಉದಾಹರಣೆಗಾಗಿ ಈ ಭೌತಿಕ ಆಕಾಶವನ್ನೆಲ್ಲ ಅನಂತತೆಯು ವ್ಯಾಪಿಸಿಕೊಂಡಿದೆ ಎಂಬ ಅನಿಸಿಕೆ, ಮತ್ತು ಅಂತಃಸ್ಥ ಸತ್ತ್ವವೊಂದು ಸ್ಥೂಲ ಭೌತಪದಾರ್ಥಗಳಲ್ಲಿಯೂ ದೇಹಗಳಲ್ಲಿಯೂ ಓತಪ್ರೋತವಾಗಿ ತುಂಬಿಕೊಂಡಿರುವದೆಂಬ ಅನಿಸಿಕೆ. ಅದೇ ಕಾಲಕ್ಕೆ ನನಗೆ ಇನ್ನೂ ಒಂದು ಅನುಭವವಾಯಿತು. ಅತಿಭೌತಿಕ (supraphysical) ಲೋಕಗಳಲ್ಲಿಯೂ ಸ್ತರಗಳಲ್ಲಿಯೂ ನಾನು ಕಾಲಿಕ್ಕುತ್ತಿರುವದನ್ನು ಕಂಡುಕೊಂಡೆ; ಅದರಂತೆಯೆ ಆ ಲೋಕಗಳ ಪ್ರಭಾವ-ಪರಿಣಾಮಗಳಿಂದ ಒಡಗೂಡಿದವನಾಗಿ ನಾನು ಈ ಭೌತಭೂಮಿಗೆ ಬರುತ್ತಿರುವದನ್ನೂ ಕಂಡೆ. ಆದುದರಿಂದ, ಅಸ್ತಿತ್ವದ ಎರಡು ಧ್ರುವಗಳೆಂದು

ನಾನು ಕರೆದ, ಮತ್ತು ಇವೆರಡರ ಮಧ್ಯದಲ್ಲಿ ಇದ್ದುಕೊಂಡಿರುವದೆಲ್ಲವನ್ನೂ ಒಳಗೊಂಡ, ಈ ಇಹಪರಗಳಲ್ಲಿ ತೀಕ್ಷ್ಣ ಭೇದವನ್ನು ಮಾಡುವದೆ ನನಗೆ ಶಕ್ಯವಾಗಲಿಲ್ಲ; ಅಥವಾ ಅವೆರಡು ಎಂದೂ ಹೊಂದಿಕೆಯಾಗದಷ್ಟು ಪರಸ್ಪರ ವಿರೋಧಿಯಾದವುಗಳೆಂದೂ ನನಗೆ ಸರ್ವಥಾ ಕಾಣಲಿಲ್ಲ. ಎಲ್ಲವೂ ನನಗೆ ಬ್ರಹ್ಮಸ್ವರೂಪವಾಗಿದ್ದು ನಾನು ಎಲ್ಲೆಲ್ಲಿಯೂ ಪರಮೇಶ್ವರನನ್ನೆ ಕಾಣುತ್ತೇನೆ. ಐಹಿಕತೆಯನ್ನು ಬಿಸುಟಬಿಟ್ಟು ಕೇವಲ ಪಾರಲೌಕಿಕತೆಯನ್ನೆ ಆಯ್ದುಕೊಳ್ಳುವ ಅಧಿಕಾರವು ಪ್ರತಿಯೊಬ್ಬನಿಗೂ ಉಂಟು. ಈ ಆಯ್ಕೆಯಲ್ಲಿ ಅವನಿಗೆ ಶಾಂತಿಯು ದೊರೆತು-ದಾದರೆ ಅವನು ಅನುಗೃಹೀತನೆ ಸರಿ. ಶಾಂತಿಪ್ರಾಪ್ತಿಗಾಗಿ ಇದನ್ನೆ ಅನುಸರಿಸುವದು ಅಗತ್ಯವೆಂದು ವೈಯಕ್ತಿಕವಾಗಿ ನನಗೆ ಎಂದೂ ಅನಿಸಿರುವದಿಲ್ಲ. ನನ್ನ ಯೋಗದಲ್ಲಿ ಕೂಡ, ಆಧ್ಯಾತ್ಮಿಕ ಮತ್ತು ಆಧಿಭೌತಿಕ ಇವೆರಡೂ ಲೋಕಗಳನ್ನು ನನ್ನ ದೃಕ್‌ಪಥದಲ್ಲಿ ಸಮಾವೇಶಗೊಳಿಸಬೇಕೆಂಬ ಪ್ರೇರಣೆಯನ್ನೆ ನಾನು ಪಡೆಯುತ್ತ ಬಂದಿರುವೆ; ಅಲ್ಲದೆ ದೈವೀ ಚೇತನವನ್ನೂ ದೈವೀ ಶಕ್ತಿಯನ್ನೂ ಮಾನವರ ಹೃದಯದಲ್ಲಿಯೂ ಈ ಪಾರ್ಥಿವ ಜೀವನದಲ್ಲಿಯೂ ನೆಲೆಗೊಳಿಸಲು ಹವಣಿಸಬೇಕೆಂದೂ ನನಗೆ ಪ್ರೇರಣೆಯಾಗಿದೆ. ಇದು ಕೇವಲ ವೈಯಕ್ತಿಕ ವಿಮೋಚನೆಗಾಗಿಯಷ್ಟೆ ಆಗಿರದೆ, ಇಹದಲ್ಲಿಯ ದೈವೀ ಜೀವನದ ಸಲುವಾಗಿಯೂ ಇದು ಇರುತ್ತದೆ. ಇನ್ನು ಬೇರೆ ಆಧ್ಯಾತ್ಮಿಕ ಮಾರ್ಗಗಳ ಧ್ಯೇಯದಷ್ಟೆ ನನ್ನ ಧ್ಯೇಯವಾದರೂ ಆಧ್ಯಾತ್ಮಿಕವಾಗಿರುವದೆಂದೆ ನನಗೆ ತೋರುತ್ತದೆ. ನನ್ನ ಯೋಗವು ತನ್ನ ಕಾರ್ಯಕಕ್ಷೆಯಲ್ಲಿ ಐಹಿಕ ಅನ್ವೇಷಣಗಳನ್ನೂ ಐಹಿಕ ಸಂಗತಿಗಳನ್ನೂ ಸಮಾವೇಶ ಮಾಡಿಕೊಂಡಾಕ್ಷಣಕ್ಕೆ, ಅದರ ಆಧ್ಯಾತ್ಮಿಕ ಪಾವಿತ್ರ್ಯವಾಗಲಿ, ಅದರ ಭಾರತೀಯ ವೈಶಿಷ್ಟ್ಯವಾಗಲಿ ಮಾಸಿ ಮುಡಿಗೆಟ್ಟು ಹೋಗಲಾರದೆಂದೆ ನಾನು ನೆರೆ ನಂಬಿದ್ದೇನೆ. ನನ್ನ ಮಟ್ಟಿಗಂತೂ ಎಂದೆಂದಿಗೂ ಇದುವೆ ಸತ್ಯದ, ಜಗತ್ತಿನ, ವಸ್ತುಮಾತ್ರಗಳ ಹಾಗೂ ಪರಮಾತ್ಮನ ವಿಷಯಕವಾದ ನನ್ನ ಗ್ರಹಿಕೆಯೂ ಅನುಭವವೂ ಆಗಿದೆ. ನನ್ನ ಯೋಗವು ಇವೆಲ್ಲವುಗಳ ಸಮಗ್ರ ಸತ್ಯಕ್ಕೆ ಶಕ್ಯವಿದ್ದಷ್ಟು ಹತ್ತಿರ ಹತ್ತಿರವಾದುದೆಂದು ನನಗೆ ತೋರಿತು. ಆದುದರಿಂದಲೆ ನಾನು ಈ ಸತ್ಯಾನುಸಂಧಾನಕ್ಕೆ 'ಪೂರ್ಣಯೋಗ'ವೆಂದು ಹೇಳಿದುದುಂಟು. ಈ ಬಗೆಯ ಸಮಗ್ರತೆಯನ್ನು ನಂಬದೆ ಅದನ್ನು ನಿರಾಕರಿಸಿಬಿಡುವ, ಅಥವಾ ಅಧ್ಯಾತ್ಮಕ್ಕಾಗಿ ಕೇವಲ ಪಾರಲೌಕಿಕತೆಯನ್ನೆ ಅವಲಂಬಿಸುವ ಅವಶ್ಯಕತೆಯುಂಟೆಂದು ನಂಬಿಕೊಂಡಿರುವ ಸ್ವಾತಂತ್ರ್ಯವು ಅರ್ಥಾತ್ ಪ್ರತಿಯೊಬ್ಬನಿಗೂ ಉಂಟೆ ಉಂಟು; ಆದರೆ ಅದರಿಂದ ನನ್ನ ಯೋಗವನ್ನು ಅನುಸರಿಸುವದು ಮಾತ್ರ ಅಶಕ್ಯವಾಗಿ ಬಿಡುವದು.'

ಜಗತ್ತಿನೊಳಗಿನ ಎಲ್ಲ ಅನುಭಾವಿಗಳೂ ಒಂದೆ ಬಗೆಯ ಭಾಷೆಯಲ್ಲಿ ಮಾತನಾಡುವದುಂಟೆಂಬ ಹೇಳಿಕೆಯು ಯಥಾಯೋಗ್ಯವಾಗಿದೆ. ಆಧ್ಯಾತ್ಮಿಕತೆಯ ಗುರಿ

ಯಾದರೂ ಒಂದೆ ಆಗಿರುವದುಂಟೆಂಬ ಹೇಳಿಕೆಯಲ್ಲಿಯೂ ಅಷ್ಟೆ ಸತ್ಯವಡಗಿದೆ; ಆ ಗುರಿಯೆಂದರೆ, ವೈಯಕ್ತಿಕ ಮತ್ತು ಸಾಮೂಹಿಕ ಜೀವನವನ್ನೂ ಮಾನವಚೇತನ ವನ್ನೂ ದಿವ್ಯಗೊಳಿಸುವದು. ಆದರೆ ಇವೆರಡೂ ಸಂದರ್ಭಗಳಲ್ಲಿ, ಬೌದ್ಧಿಕ ಮಂಡ-ನೆಯೂ ಅನುಭವದ ವಿವರಣೆಯೂ ಅದರಂತೆ ಕೊನೆಯ ಗುರಿಯನ್ನು ಮುಟ್ಟಲು ಹೂಡಿದ ಉಪಾಯಗಳೂ ವಿಧಿವಿಧಾನಗಳೂ ಕಾಲಕಾಲಕ್ಕೆ ದೇಶದೇಶಕ್ಕೆ ಬೇರೆಬೇರೆ ಯಾಗಿರುವದುಂಟು. ಅಷ್ಟೆ ಏಕೆ, ಒಂದೆ ವ್ಯಕ್ತಿಯ ಜೀವಮಾನದ ಬೇರೆಬೇರೆ ಕಾಲಗಳಲ್ಲಿ ಅವು ಬಗೆಬಗೆಯಾಗಿ ಇರುವದೇನು ವಿರಳವಲ್ಲ. ಆದರೆ ಈ ಎಲ್ಲ ಸಂದರ್ಭ ಗಳಲ್ಲಿಯೂ ಸಾರಭೂತವಾಗಿರುವ ಸಂಗತಿಯೆಂದರೆ, ವ್ಯಕ್ತಿಯ ಸಮಗ್ರ ರಸಪುರುಷ ನಲ್ಲಿ ಮೈಗೂಡಿಬರುವ, ಎಂದೂ ಮಾಜದ, ಆಂತರಿಕ ಅನುಭೂತಿ. ಇನ್ನುಳಿದ ಮಾತೆಲ್ಲ ಗೌಣ. ಸಾಧನೆಯ ವಿಷಯಕ್ಕೂ ಇದೇ ಮಾತು ಅನ್ವಯಿಸುವದು. ಜೀವಾತ್ಮನನ್ನು ಈಗಿದ್ದ ಸ್ಥಿತಿಯಿಂದ ಪರಿಪೂರ್ಣತೆಯ ಸ್ಥಿತಿಗೆ ಒಯ್ದು ಮುಟ್ಟಿಸುವದೆ ಸಾಧನೆಯ ಗುರಿಯಷ್ಟೆ? ಪ್ರಗತಿಯ ದಿಶೆಯು ಸದಾ ಆ ಧ್ಯೇಯಕ್ಕೆ ಉನ್ಮುಖವಾಗಿದ್ದರಾಯ್ತು. ಸಾಧನೆಯ ಪ್ರಾರಂಭಕಾಲದಲ್ಲಿದ್ದ ಸ್ಥಿತಿ ಗಿಂತ ಕೆಳಮಟ್ಟಕ್ಕೆ ಸಾಧಕನನ್ನು ತಂದಿಳಿಸುವದಾದರೆ, ಅದಕ್ಕೆ ಸಾಧನೆಯೆಂಬ ಹೆಸರೆ ಸಲ್ಲದು. 'ಸಾಧನಾನಾಮ್ ಅನೇಕತಾ'-ಸಾಧನೆಯ ಬಹುಬಗೆಯ ವಿಧಾನ ಗಳನ್ನು ಎಲ್ಲ ಆಧ್ಯಾತ್ಮಿಕ ದಾರ್ಶನಿಕರೂ ಒಪ್ಪಿಯೆ ಒಪ್ಪುತ್ತಾರೆ. ಆದರೆ ಯಾವುದೆ ಒಂದು ಪಂಥವನ್ನು ಅನುಸರಿಸುವ ಸಾಧಕರು, ಇನ್ನುಳಿದವರ ಸಾಧನೆಗಿಂತ ತಮ್ಮ ಸಾಧನೆಯೆ ಶ್ರೇಷ್ಠವೆಂದೂ ಅದೇ ಏಕಮಾತ್ರ ಸಾಧನೆಯೆಂದೂ ಅಥವಾ ಇನ್ನುಳಿ ದವರದು ಹೀನವಾದುದೆಂದೂ ಹೇಳಿಕೊಳ್ಳತೊಡಗಿದರೆ, ಅದು ವಿಘಾತಕವಾದ ಭ್ರಾಂತ ಮತಾಂಧತೆಯೆ ಆಗಿಬಿಟ್ಟೀತು. ಬಹುವಿಧ ಸಾಧನೆಯ ಅನುಭವ ಪಡೆದವ ರೆಂಬ ಅಗ್ಗಳಿಕೆಯುಳ್ಳ, ಶ್ರೀ ರಾಮಕೃಷ್ಣ ಪರಮಹಂಸರು, ಈ ವಿಷಯವನ್ನು ಕೆಲವೆ ಸಾರವತ್ ಶಬ್ದಗಳಲ್ಲಿ ಹೀಗೆ ಹೇಳಿದ್ದಾರೆ: 'ಜತೊ ಮತ, ತತೊ ಪಥ' ಅಂದರೆ ಎಷ್ಟು ಮತಗಳೊ ಅಷ್ಟು ಪಥಗಳು. ಇದೇ ಬಗೆಯಾಗಿ, 'ಮಹಿಮ್ನ ಸ್ತೋತ್ರ'ವು ಸಹ, 'ರುಚೀನಾಂ ವೈಚಿತ್ರ್ಯಾತ್'—ರುಚಿವೈಚಿತ್ರ್ಯಮೂಲಕವಾಗಿ ಉಂಟಾದ ಬಹುವಿಧ ಸಾಧನಮಾರ್ಗಗಳ ಉಲ್ಲೇಖ ಮಾಡುತ್ತದೆ. ಒಂದು ಸಂದರ್ಭ ದಲ್ಲಿ ಶ್ರೀ ಅರವಿಂದರು, ಹಠಯೋಗದಿಂದ ಅಥವಾ ತಪಸ್ಯೆಯಿಂದ ಸಹ ಧ್ಯೇಯ-ಸಿದ್ಧಿಯಾಗಬಲ್ಲದೆಂದೂ ಆದರೆ ಯಾವುದಕ್ಕೆ ಆಗಲಿ ಈಶ್ವರಾನುಗ್ರಹವು ಅವಶ್ಯ ವೆಂದೂ ಹೇಳಿದ್ದುಂಟು. ಶ್ರೀ ಅರವಿಂದರು ಸುಲಭತರ, ತೀವ್ರತರ ಅಥವಾ ಯುಕ್ತತರ ಮಾರ್ಗಗಳ ದೃಷ್ಟಿಯಿಂದ, ಸಾಧನೆಯ ಬಗೆಗೆ ಸಮಾಲೋಚಿಸುವರೆ ವಿನಾ, ಏಕಮೇವ ಅಥವಾ ಉಚ್ಚ ನೀಚ ಸಾಧನಮಾರ್ಗಗಳೆಂಬ ಪಂಗಡನೆಯ ದೃಷ್ಟಿಯಿಂದ ಅವರೆಂದೂ ಮಾತನಾಡಿಲ್ಲ. ಆದ್ದರಿಂದ, ಧ್ಯೇಯದ ಏಕತ್ವದ ವಿಷ.

ಯಕ್ಕಾಗಲಿ, ಸಾಧನಮಾರ್ಗಗಳ ವೈವಿಧ್ಯದ ವಿಷಯಕ್ಕಾಗಲಿ, ಯಾರೂ ದಿಗಿಲು ಗೊಳ್ಳುವ ಕಾರಣವಿಲ್ಲ.

ಪೂರ್ಣಯೋಗವನ್ನು ಸಾಧನೆಗೈಯಬೇಕೆಂಬ ಸಾಧಕನ ಆಂತರಿಕ ಸನ್ನದ್ಧತೆಯ ಚಿತ್ರಣವನ್ನು ಸಾಕಷ್ಟು ನಿಚ್ಚಳವಾಗಿಯೆ ಇಲ್ಲಿ ರೇಖಿಸಲಾಗಿದೆಯೆಂದು ನಾನು ತಿಳಿದಿದ್ದೇನೆ. ಇನ್ನು ಈ ವಿಷಯಕ್ಕೆ ಆಶ್ರಮದಲ್ಲಿ ಯಾವ ಬಗೆಯ ಮನೋವೃತ್ತಿಯನ್ನು ತಳೆಯಲಾಗಿದೆ, ಹಾಗೂ ಅದು ಹೇಗೆ ನಡೆಯಿಸಲ್ಪಡುತ್ತದೆ ಎಂಬುದನ್ನಷ್ಟು ಈಗ ಕಂಡುಕೊಳ್ಳುವಾ. ಅಲ್ಲಿ ಪ್ರತ್ಯಕ್ಷವಾಗಿ ಸಾಧಕನ ಜೀವನಕ್ರಮವು ಇಂದು ಹೇಗೆ ಸಾಗಿರುತ್ತದೆಂಬುದರ ಸ್ಪಷ್ಟ ಕಲ್ಪನೆಯನ್ನು ಇದು ಕೊಡುವದು.

ಶ್ರೀ ಅರವಿಂದರು, ಕಾಮಪ್ರವೃತ್ತಿಯ ವಿಷಯಕ್ಕೆ ಅದೆಷ್ಟೇ ಕಟ್ಟುನಿಟ್ಟಾಗಿದ್ದರೂ ಆಹಾರ ಮತ್ತು ಇನ್ನುಳಿದ ದೈಹಿಕ ಸುಖಸೌಕರ್ಯಗಳ ಬಗೆಗೆ ಅದೆಷ್ಟೇ ನಿಯಮನಿಷ್ಠ ಮಿತವಾದಿಗಳಾಗಿದ್ದರೂ ಸಾಮಾನ್ಯಾರ್ಥದಲ್ಲಿ ಅವರಿಗೆ ತಾಪಸಿ ಎಂದು ಸಹಸಾ ಕರೆಯಲು ಬಾರದು. ಕಠಿಣ ವ್ರತೋಪವಾಸಗಳಲ್ಲಾಗಲಿ, ಕರ್ಕಶ ಸಾಧನೆಗಳಲ್ಲಾಗಲಿ, ಮನಸ್ಸಿಲ್ಲದೆ ಒತ್ತಾಯಕ್ಕಾಗಿ ಕೈಕೊಂಡ ಯಾಂತ್ರಿಕ ನಿಬಂಧನೆಗಳಲ್ಲಾಗಲಿ ಅವರಿಗೆ ಸರ್ವಥಾ ನಂಬಿಗೆ ಇರಲಿಲ್ಲ. ಶ್ರೀ ಅರವಿಂದರ ವಸ್ತುವರ್ಗೀಕರಣದ ವಿಧಾನದಲ್ಲಿ, ಜಡಪದಾರ್ಥವು ಕೂಡ ಪರಮೇಶ್ವರನ ಅಭಿವ್ಯಕ್ತಿಯ ಪ್ರತೀಕ ಸ್ವರೂಪವೆ ಆಗಿದ್ದು, ಬೇರೆ ಇನ್ನಾವುದೆ ವಸ್ತುವಿನಂತೆ ಜಡವೂ ಪ್ರೇಮಾದರಗಳಿಗೆ ಪಾತ್ರವಾದ ಪದಾರ್ಥವಾಗಿದೆ. ಅವರು ಎಂದೂ ಜೀವನವನ್ನು ಅಲ್ಲಗಳೆಯಲಿಲ್ಲ; ಕೃತ್ರಿಮ ತ್ಯಾಗವನ್ನಾಗಲಿ, ಎಲ್ಲವನ್ನೂ ತೊರೆದು ಅಡವಿಯಲ್ಲಿ ಅಡಗಿ ಕೂಡುವದನ್ನಾಗಲಿ ಪುರಸ್ಕರಿಸಲಿಲ್ಲ. ವಾಸ್ತವಿಕವಾಗಿ ಅವರು ಪಾರಲೌಕಿಕತೆಯನ್ನೂ ಪಾರಾದರೆ ಸಾಕೆಂಬ ಕರ್ತವ್ಯವಿಮುಖ ಮನೋವೃತ್ತಿಯನ್ನೂ ಬಲವಾಗಿ ವಿರೋಧಿಸಿದ್ದಾರೆ. ಅವರಿಗೆ ಇಷ್ಟವಾದುದು ಪುಷ್ಟರಕ್ತದ ಜೀವನ, ಜೊತೆಜೊತೆಗೆ ಯೋಗಿಯ ಜೀವನ; ಎಲ್ಲರೂ ಹೊಂದಲೆಬೇಕಾದ ದಿವ್ಯಧ್ಯೇಯದತ್ತ ತನ್ನ ಆತ್ಮವನ್ನು ಮುಂದುಮುಂದಕ್ಕೆ ನೂಗಿಕೊಂಡು ಹೋಗುವ ಹಾಗೆ ದುಡಿಯಬಲ್ಲ ಯೋಗ್ಯತೆಯುಳ್ಳವನ ಜೀವನ. ಅವರು ಸಂನ್ಯಾಸದ ಬೆನ್ನು ಕಟ್ಟಿದವರಲ್ಲ. ಅವರು ಸ್ವತಃ ಎಂದೂ ಕಾಷಾಯವಸ್ತ್ರ ಧರಿಸಿದವರಲ್ಲ, ಅಥವಾ ಹೆರರಿಗೆ ಧರಿಸಹೇಳಿದವರೂ ಅಲ್ಲ. ಅವರ ವ್ಯಕ್ತಿಗತ ಸಾಧನೆಯೇನೊ ಸ್ವಾಭಾವಿಕವಾಗಿ ಬಹಳ ಕಟ್ಟುನಿಟ್ಟಿನದಾಗಿತ್ತಲ್ಲದೆ, ಅದಕ್ಕಾಗಿ ಅವರು ತಮ್ಮ ಮಾನಸಿಕ, ನೈತಿಕ ಮತ್ತು ಆತ್ಮಿಕ ಶಕ್ತಿಗಳನ್ನು ಅಸಾಧಾರಣವಾಗಿಯೆ ವಿನಿಯೋಗಿಸಬೇಕಾಯ್ತು. ಆದರೆ ಅವರ ಶಿಷ್ಯರ ಮತ್ತು ಆಶ್ರಮವಾಸಿಗಳ ಸಾಧನೆಯು, ಯೋಗದ ಮೂಲಭೂತ ತತ್ತ್ವಗಳಿಗೆ ವ್ಯತ್ಯಯ ಬಾರದಂತೆಯೆ ಇತ್ತು ಹಾಗೂ ಈಗಲಾದರೂ ಇರುತ್ತದೆ. ಅಲ್ಲದೆ ಅದು ವೈಯಕ್ತಿಕ ಒಲವನ್ನೂ ಬಲವನ್ನೂ ತಾತ್ಕಾಲಿಕ ಪ್ರಯೋಜನವನ್ನೂ

ಪೂರ್ಣವಾಗಿ ಅನುಸರಿಸಿ ಇರುವದುಂಟು. ಆಶ್ರಮ ಜೀವನದ ಸಂಕ್ಷಿಪ್ತ ವರ್ಣನೆಯು ಇಲ್ಲಿ ಕಾಲೋಚಿತವಾಗಿದ್ದು ಶ್ರೀ ಅರವಿಂದರು ತಮ್ಮ ಅನುಯಾಯಿಗಳಿಗೋಸ್ಕರ ಜೀವನಕ್ರಮವನ್ನು ಹೇಗೆ ಯೋಜಿಸಿದ್ದರು ಎಂಬುದರ ಕಲ್ಪನೆಯನ್ನು ಅದು ಓದುಗರಿಗೆ ಮಾಡಿಕೊಡುವದು.

ಪಾಂಡಿಚೇರಿಯ ಶ್ರೀ ಅರವಿಂದಾಶ್ರಮವು ಸಾಗಿದ ರೀತಿಯೂ ಅಲ್ಲಿ ನೂರಾರು ಸಾಧಕರು ತಮ್ಮ ಜೀವನವನ್ನು ರೂಪಗೊಳಿಸುತ್ತಿರುವ ವಿಧಾನವೂ ಏನನ್ನು ತೋರಿಸಿ ಕೊಡುವದು? 'ಆಶ್ರಮ' 'ಸಂನ್ಯಾಸ' ಎಂದಾಕ್ಷಣಕ್ಕೆ ಪ್ರಪಂಚದ ಪೂರ್ಣ ತ್ಯಾಗದ ಚಿತ್ರವೆ ನಮ್ಮ ಕಣ್ಣಮುಂದೆ ಕಟ್ಟುವದು. ಮನಸ್ಸಿನ ಈ ವಾಡಿಕೆಯ ಸಂಸ್ಕಾರ ವನ್ನು ಇಲ್ಲಿಯ ಸಾಧನಜೀವನವು ಅಸಂದಿಗ್ಧವಾಗಿ ನಿರಾಕರಿಸಿಬಿಡುತ್ತದೆ. ಆಶ್ರಮ ವಾಸಿಗಳು ಕಾಷಾಯವಸ್ತ್ರವನ್ನಾಗಲಿ ಇನ್ನಾವುದೆ ವಿಶಿಷ್ಟ ಸಮವಸ್ತ್ರವನ್ನಾಗಲಿ ಧರಿಸುವದಿಲ್ಲ, ಅಥವಾ ವೈರಾಗ್ಯವನ್ನು ಆಚರಿಸುವದಿಲ್ಲ; ಹೀಗಿದ್ದರೂ ಅಲ್ಲಿಯ ಜೀವನವು ಆಧ್ಯಾತ್ಮಿಕ ಕಟ್ಟುನಿಟ್ಟಿನ ತಳಹದಿಯಮೇಲೆಯೆ ನಿಂತಿದೆ. ವಿಚಾರ, ಆಚಾರ ಉಚ್ಚಾರಗಳ ಮುಖಾಂತರವಾಗಿ ಅತ್ಯಂತ ಉತ್ಕಟವಾಗಿ ಅರಸುವ ಒಂದೇ ಒಂದು ಅಂತಿಮ ಧ್ಯೇಯವೆಂದರೆ, ಈ ಭೌತಜೀವನವನ್ನು ಸಾಗಿಸುತ್ತಿರುವಾಗಲೆ 'ದೈವೀ ಜೀವನ' ವನ್ನು ಕೈಗೂಡಿಸಿಕೊಳ್ಳುವದಾಗಿದೆ. ಇದನ್ನೆ ಇನ್ನಷ್ಟು ಸುಲಭ ಶಬ್ದ ಗಳಲ್ಲಿ ಹೇಳುವದಾದರೆ, ಉಚ್ಚತರ ಜೀವನವೆ ಅರ್ಥಾತ್ ನಾವೆಲ್ಲ ಬಹುಶಃ ಇಂದು ಸಿಲುಕಿಕೊಂಡಿರುವ ಅನ್ನಮಯ ಪ್ರಾಣಮಯ ಮನೋಮಯ ಜೀವನಕ್ಕಿಂತಲೂ ಉಚ್ಚತರವಾದ ಜೀವನವೆ ಕೊನೆಯ ಗುರಿಯಾಗಿದೆ. ಜಾತಿ-ಮತ-ಪಂಥಗಳಾಗಲಿ, ಲಿಂಗ-ವಯೋಭೇದಗಳಾಗಲಿ, ದೇಶ-ಭಾಷೆ-ಪ್ರಾಂತ-ಪ್ರದೇಶಗಳಾಗಲಿ, ಆಶ್ರಮದಲ್ಲಿ ಪ್ರವೇಶಪಡೆಯಲು ಅರ್ಹತೆಯನ್ನೂ ತರವು, ಅನರ್ಹತೆಯನ್ನೂ ತರವು. ಮುಖ್ಯ ವಾಗಿ ಬೇಕಾದುದು, 'ದೈವೀ ಜೀವನ' ವು ಸಾಧ್ಯವೆಂಬ ಬಗೆಗೂ 'ಪೂರ್ಣ ಯೋಗ' ದಿಂದ ಅದನ್ನು ಸಿದ್ಧಿಸಿಕೊಳ್ಳುವ ಬಗೆಗೂ ಕಾರ್ಯೋನ್ಮುಖವಾದ ಶ್ರದ್ಧೆ. ಯಾವುದೆ ಬಗೆಯ ಮತಾಂತರದ ಧರ್ಮಾಂತರದ ಅವಶ್ಯಕತೆಯಿಲ್ಲ. ಏಕೆಂದರೆ, ಅಂತರಿಕ ಆತ್ಮಪ್ರಗತಿಯನ್ನು ಹೊಂದುವದೆ ಸಾಧನದ ಏಕಮೇವ ಧ್ಯೇಯವಾಗಿದೆ. ಈ ಆತ್ಮಪ್ರಗತಿಯೆ ಮುಂದೆ ಬರಬರುತ್ತ, ಏಕಮೇವಾದ್ವಿತೀಯವಾದ ವಿಶ್ವಮಯ ಆತ್ಮಶೋಧದತ್ತಲೂ ಉಚ್ಚತರ ಚೇತನದ ಶೋಧದತ್ತಲೂ ಕರೆದೊಯ್ಯುವದು; ಇದುವೆ ಅತಿಮಾನಸಶಕ್ತಿಯ ವೈಶಿಷ್ಟ್ಯವಾಗಿದೆ. ಇದು ವ್ಯಕ್ತಿಯನ್ನೂ ಅವನ ಜೀವನವನ್ನೂ ಪರಿವರ್ತನಗೊಳಿಸುವದು; ಇದರಿಂದ ಕಟ್ಟಕಡೆಗೆ ಮನುಕುಲವೆ ಪರಿವರ್ತಿತವಾಗುವದು. ಪ್ರತಿಯೊಬ್ಬ ಆಶ್ರಮವಾಸಿಯೂ ಯೋಗದಲ್ಲಿ ಬರುವ ಸರ್ವಸಾಮಾನ್ಯವಾದ ಶಾರೀರಿಕ, ಮಾನಸಿಕ ಮತ್ತು ನೈತಿಕ ಅನುಷ್ಠಾನಗಳನ್ನು ಕೈಕೊಳ್ಳುವನಲ್ಲದೆ, ಜೊತೆಜೊತೆಗೆ ತನ್ನ ಆವಶ್ಯಕತೆಗೆ ಅನುಗುಣವಾಗಿ ಏಕಾಗ್ರತೆ-

ಧ್ಯಾನಗಳನ್ನೂ ಸಾಧಿಸುತ್ತಾನೆ. ಇದರ ಗುರಿಯು, ವೈಯಕ್ತಿಕ ಮುಕ್ತಿಯಾಗಲಿ ಜೀವನಸಮಸ್ಯೆಯಿಂದ ಪಾರಾಗುವದಾಗಲಿ ಆಗಿಲ್ಲ; ಆದರೆ ಸಾಧಕನ ಅದರಂತೆ ಮಾನವಕುಲದ ದೇಹ-ಪ್ರಾಣ-ಮನಗಳನ್ನು ದಿವ್ಯಗೊಳಿಸಲು ದೈವೀ ಶಕ್ತಿಯನ್ನು ಪಡೆದು ಅದನ್ನು ಆವಾಹಿಸುವದೆ ಆಗಿದೆ.

ಹೀಗೆ ಶ್ರೀ ಅರವಿಂದರಿಂದ ಪುರಸ್ಕೃತವಾದ ಸಾಧನಕ್ರಮಕ್ಕೆ 'ಪೂರ್ಣಯೋಗ' ವೆಂಬ ನಾಮವು ಯಥಾಯೋಗ್ಯವಾಗಿದೆ. ಅದು ಸಮಗ್ರವೂ ಸರ್ವಸಂಗ್ರಾಹ-ಕವೂ ಆಗಿರುವ ಮಾತ್ರಕ್ಕೆ ಪೂರ್ಣಯೋಗವೆಂದು ಕರೆದಿಲ್ಲ; ಆದರೆ ಅದರಲ್ಲಿ ಯೋಗದ ಸತ್ತ್ವಶಾಲಿಯಾದ ಚಿರಸ್ಥಾಯಿಯಾದ ವಿವಿಧ ಮುಖಗಳನ್ನೂ ಅದರಂತೆ ಸಾಧನೆಯ ಬೇರೆ ಬೇರೆ ಪದ್ಧತಿಗಳನ್ನೂ ಅನ್ಯೋನ್ಯಸಂಬಂಧಪೂರ್ವಕವಾಗಿ ಸಮ-ನ್ವಯಗೊಳಿಸಿದೆಯಾದ್ದರಿಂದ ಅದು 'ಪೂರ್ಣಯೋಗ'. ಹೀಗೆ ಸಮನ್ವಯಗೊಳಿ ಸುವದಕ್ಕಿಂತ ಮೊದಲು ಆಯಾ ಮುಖಗಳ ಮತ್ತು ಪದ್ಧತಿಗಳ ಸತ್ತ್ವಪ್ರಯೋಜನ ಗಳನ್ನು ಶಾಸ್ತ್ರಶುದ್ಧವಾಗಿ ಪರೀಕ್ಷಿಸಲಾಗಿದೆ. ಅತೀಂದ್ರಿಯ ಗುಪ್ತಶಕ್ತಿಯ ವಿಷಯ (Occultism) ವನ್ನೂ ಇನ್ನುಳಿದ ಮುಖಗಳನ್ನೂ ಕಡೆಗಣಿಸಿ, ಪ್ರಾಮುಖ್ಯ ವಾಗಿ ಆಧ್ಯಾತ್ಮಿಕತೆಗೆ ಪ್ರಾಶಸ್ತ್ಯ ಕೊಡಲಾಗಿದೆ. ಜನರಿಗೆ ಸುಲಭವಾಗಿ ತಿಳಿಯ ಲೆಂದು ಅದನ್ನು ಆಧುನಿಕ ಶಬ್ದಗಳಲ್ಲಿ ವಿವರಿಸಿ ಹೇಳಲಾಗಿದೆ. ಅದಕ್ಕೆ ಒಂದು ಶಾಸ್ತ್ರಸ್ವರೂಪವನ್ನು ಕೊಡಲಾಗಿದ್ದರೂ ಅದರ ತಂತ್ರನಿರೂಪಣವು ಕುಶಲಕಲೆಯ ಮಟ್ಟಕ್ಕೆ ಮುಟ್ಟಿದೆ. ಎಲ್ಲಕ್ಕಿಂತ ಹೆಚ್ಚಿನ ಸಂಗತಿಯೆಂದರೆ, ಅದರ ಉದ್ದೇಶವು ಸಾಮಾಜಿಕ ಪ್ರಗತಿಯ ಉಪಕರಣವಾಗಿರಬೇಕೆಂದಿದೆ. ಇದು ಸಂಕುಚಿತಾರ್ಥದಲ್ಲಿ ಯಲ್ಲ; ಆದರೆ ಅಖಂಡ ಮಾನವಸಮಾಜವನ್ನೆ ದಿವ್ಯವಾಗಿಸಬೇಕೆಂಬ ಪ್ರಯತ್ನವೆ ಅವರದಾಗಿದೆ; ಜೊತೆಜೊತೆಗೆ ಸಾಧಕನಾದ ವ್ಯಕ್ತಿಯನ್ನೂ ದೈವೀ ಜೀವನಕ್ಕೆ ಅಣಿ-ಗೊಳಿಸುವದೂ ಅವರ ಹವಣಿಕೆಯಾಗಿದೆ.

ಇನ್ನು ನಾವೀಗ ಶ್ರೀ ಅರವಿಂದರ ಸಿದ್ಧಿ, ಅದರ ಸ್ವರೂಪ, ಅದರ ಅರ್ಥ ಹಾಗೂ ಮನುಕುಲಕ್ಕೆ ಅದರ ವೈಶಿಷ್ಟ್ಯ ಇವುಗಳತ್ತ ಸಾಗುವಾ.

## ೧೧ ಸಿದ್ಧಿ

ಸಿದ್ಧಿಯೆಂದರೆ ಕಟ್ಟಕಡೆಯ ಸಾಫಲ್ಯ, ಪರಿಪೂರ್ಣತೆಯ ತುಟ್ಟತುದಿಗೆ ಮುಟ್ಟುವದು, ಹೊಂದುವದನ್ನೆಲ್ಲ ಹೊಂದುವದು. ಅಧ್ಯಾತ್ಮಜೀವನದ ಸಿದ್ಧಿ ಯೆಂದರೆ ವಾಡಿಕೆಯಾಗಿ ಜೀವಾತ್ಮವು ಮೋಕ್ಷವನ್ನು, ಅಥವಾ ಮುಕ್ತಿಯನ್ನು

ಹೊಂದುವದಾಗಿದೆ; ಬದುಕಿದಾಗಲೂ ಜೀವಾತ್ಮವು ಜೀವನ್ಮುಕ್ತ ಸ್ಥಿತಿಯಲ್ಲಿ ಇರಬಲ್ಲದು. ಭಾರತೀಯ ಜೀವನವಿಧಾನದ ಗುರಿಯಾಗಿದ್ದ ಧರ್ಮಾರ್ಥಕಾಮಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳಲ್ಲಿ ಕೊನೆಯದಾದ ಮೋಕ್ಷವೆಂಬುದು ಬಹು ಮಹತ್ವದ್ದು. ಜೀವಾತ್ಮವು ವಿಷಯಾಸಕ್ತವಾಗಿ ಇಂದ್ರಿಯಗಳ ಜಾಳಿಗೆಯಲ್ಲಿ ಸಿಲುಕಿರುತ್ತದೆ; ಅಹಂಕಾರದಿಂದ ಆಬದ್ಧವಾಗಿರುತ್ತದೆ. ಅಂತೆಯೆ ಅದು ಸದಾ ದುಃಖಾಕುಲವಾಗಿ ತೊಳಲುತ್ತ, ತಾನು ಬದ್ಧನು ಅಲ್ಪನು ಎಂಬ ಭಾವದಿಂದ ಶಾಪಹೊಂದಿ ಬಿದ್ದುಕೊಂಡಿರುತ್ತದೆ. ಅಧ್ಯಾತ್ಮದ ಸಾಧನೆಯು, ಜೀವಾತ್ಮನನ್ನು ಈ ಎಲ್ಲ ತೊಡಕುಗಳಿಂದ ಬಿಡಿಸುತ್ತದೆ. ಅದು ಹೇಗೆ? ಆತ್ಮನ ನಿಜಸ್ವರೂಪವನ್ನು ಕಂಡುಹಿಡಿದು ಇಂದ್ರಿಯಜಾಲದಿಂದ ಆತನನ್ನು ಮುಕ್ತಗೊಳಿಸುವ ಮೂಲಕವಾಗಿ; ಹೀಗೆ ಅಧ್ಯಾತ್ಮಸಾಧನೆಯು ಸಚ್ಚಿದಾನಂದಸ್ವರೂಪನೆಂದು ಬಣ್ಣಿಸಲಾದ ಬ್ರಹ್ಮಸ್ವರೂಪದಲ್ಲಿ ಆತ್ಮನನ್ನು ಲೀನಗೊಳಿಸುವದಕ್ಕೆ ದಾರಿಯನ್ನು ಸರಿಪಡಿಸಿಕೊಡುವದು. ಜೀವಾತ್ಮಕ್ಕೆ ಒಮ್ಮೆ ಪರಮಾತ್ಮವಿಷಯಕವಾದ ನಿಜವಾದ ಜ್ಞಾನವಾಗಿಬಿಟ್ಟಿತೆಂದರೆ ಅದು ಕ್ರಮೇಣ ವಾಸನಾತೀತವಾಗಿ, ವಿಷಯಬಂಧನದಿಂದ ತನ್ನನ್ನು ತಾನು ಬಿಡಿಸಿಕೊಳ್ಳತೊಡಗುವದು. ಈ ವಿಷಯವಾಸನೆಯೆ ಜೀವಾತ್ಮನ ಸಮಸ್ತ ದುಃಖಸಂಕುಲಕ್ಕೂ ದಾಸ್ಯಸ್ಥಿತಿಗೂ ಕಾರಣವೆಂದು ಬೇರೆ ಹೇಳಬೇಕೆ? ಸಿದ್ಧಿಯನ್ನು ಹೊಂದಿದವನು, ತನ್ನ ದೈನಂದಿನ ಜೀವನವನ್ನೂ ನಿತ್ಯ ಕರ್ತವ್ಯಗಳನ್ನೂ ಸಾಗಿಸುತಿರುವನೇನೊ ನಿಜ; ಆದರೆ ಅವನು ಅವುಗಳಲ್ಲಿ ಆಸಕ್ತನಾಗಿರುವದಿಲ್ಲ. ಸಿದ್ಧಿಯನಂತರ, ವ್ಯಕ್ತಿಗತ ಅಹಂಕಾರವು ಎಂದೂ ಕಾರ್ಯರತವಾಗಿರದೆ, ಪ್ರತ್ಯಕ್ಷ ಆತ್ಮನೆ ಆ ವ್ಯಕ್ತಿಮೂಲಕವಾಗಿ ಕರ್ಮಪ್ರವೃತ್ತನಾಗುತ್ತಾನೆ. ಹೀಗಾಗಿ ಜೀವಾತ್ಮನು ಮುಕ್ತನಾಗಿ, ತನ್ನ ಸುತ್ತ ನಡೆದುದೆಲ್ಲವನ್ನೂ ಕೇವಲ ಸಾಕ್ಷೀಸ್ವರೂಪನಾಗಿ ನೋಡುತ್ತಾನೆ ಮಾತ್ರ. ತನ್ನ ಜನ್ಮಸಿದ್ಧ ಅಧಿಕಾರವಾಗಿದ್ದ ಬ್ರಹ್ಮೈಕ್ಯವನ್ನು ಜೀವಾತ್ಮನು ಅನುಭವಿಸುತ್ತಾನೆ. ವೇದಾಂತದ ಮೇರೆಗೆ ಇದುವೆ ಸಿದ್ಧಿಯು.

ಸಿದ್ಧಿಯೆಂಬುದು ಚಿರಸ್ಥಾಯಿಯಾಗಿ ನಿಲ್ಲುವಂತಹದಲ್ಲ. ಅದನ್ನು ಒಮ್ಮೆ ಸ್ವಾಯತ್ತಗೊಳಿಸಿಕೊಂಡ ಮೇಲೆಯೂ ಸತತವಾದ ಸಾಧನೆಯಿಂದ ಅದನ್ನು ಸದಾ ಸ್ವಾಧೀನದಲ್ಲಿ ಇರಿಸಿಕೊಂಡಿರಬೇಕಾಗುತ್ತದೆ. ಆತ್ಮಸಾಕ್ಷಾತ್ಕಾರದ ವಿಷಯದಲ್ಲಿಯೂ ಇದೇ ಮಾತನ್ನು ಅನ್ವಯಿಸಿ ಹೇಳಬಹುದು. ವಸ್ತುತಃ ಸಿದ್ಧಿಯೆಂಬುದು ಆತ್ಮಸಾಕ್ಷಾತ್ಕಾರದ ಫಲವೆ ಸರಿ. ದೀರ್ಘಸಾಧನಾನಂತರ ಅಥವಾ ಅನುಗ್ರಹಾನಂತರ ಅಥವಾ ಇವೆರಡರ ಮುಖಾಂತರವೂ ಜಿಜ್ಞಾಸುವಾದ ಸಾಧಕನು ಆತ್ಮಸಾಕ್ಷಾತ್ಕಾರದ ವಿದ್ಯುತ್‌ಪ್ರಕಾಶವನ್ನು ಕಾಣಬಹುದು. ಈ ಮೊದಲ ಮಿಂಚು ಎಲ್ಲ ಸಂದೇಹಗಳನ್ನೂ ನಿರ್ನಾಮ ಮಾಡಿ, ಶ್ರದ್ಧೆಯನ್ನು ದೃಢಪಡಿಸಿ ಸಾಧನೆಯ ಜಯದ ಬಗೆಗೆ ಆಶ್ವಾಸನವೀಯುತ್ತದೆ. ಆದರೆ ಈ ಸಾಕ್ಷಾತ್ಕಾರವು ಸಂಪೂರ್ಣ

ಫಲಪ್ರದವಾಗುವ ಪೂರ್ವದಲ್ಲಿ ಸ್ವಾಯುತ್ತವಾಗಿರಲು ಬೇಕು. ಚೇತನದ ಹಾಗೂ ಸತ್ತ್ವದ ಅಂಗೋಪಾಂಗವಾಗಿರಲು ಬೇಕು. ಒಮ್ಮೆ ಸಿದ್ಧಿಯು ಚಿರಸ್ಥಾಯಿಯಾಗಿ ಬಿಟ್ಟಿತಾದರೆ, ಅವಿಚ್ಛಿನ್ನವಾಗಿಬಿಟ್ಟಿತಾದರೆ, ಸಾಧಕನಲ್ಲಿ ಒಂದು ಪ್ರಕಾರದ ದ್ವಿಮುಖ ಪ್ರಜ್ಞೆಯು ನೆಲೆಗೊಳ್ಳುವದು. ಆಧ್ಯಾತ್ಮಿಕ ಪೂರ್ಣತೆಯನ್ನು ಐದಿದ ಸಿದ್ಧ ಪುರುಷನಿಗೆ, ತಾನು ಬ್ರಹ್ಮೈಕ್ಯಭಾವವನ್ನು ಅನುಭವಿಸುತ್ತಿರುವೆನೆಂಬ ಅರಿವು ಸದಾ ಇರುತ್ತಿರುವದುಂಟು; ಈ ಬಗೆಯ ಸ್ಥಿತಿಯಲ್ಲಿದ್ದಾಗ ಈ ಶಾರೀರಿಕ, ಮಾನಸಿಕ, ಮತ್ತು ಇತರ ಬಹಿರ್ಮುಖ ವ್ಯಾಪಾರಗಳನ್ನು ಆತನು ಅನಾಸಕ್ತಭಾವದಿಂದ ನಿರೀಕ್ಷಿಸುವನು. ಈ ನಿಲುಮೆಗೆ ಆತ್ಮಸಾಕ್ಷಿಸ್ಥಿತಿಯೆಂದು ಹೇಳುವದುಂಟು. ಸಿದ್ಧನು, ತನ್ನಲ್ಲಿಯೆ ತಾನು ಲೀನವಾಗಿರುವದನ್ನೆ ಮೆಚ್ಚಿ ಬಾಹ್ಯ ವ್ಯಾಪಾರಗಳಲ್ಲಿ ತೊಡಗಿಕೊಂಡಿರಲು ಹಿಂದೆಗೆಯುವ ಸಂಭವವೂ ಉಂಟು. ಹೀಗಿದ್ದಲ್ಲಿ, ದ್ವಿಮುಖ ಪ್ರಜ್ಞೆಯು ಅವಶ್ಯಕತೆಯಿಲ್ಲ. ಆದರೆ, ಆತ್ಮಲೀನನಾಗಿರುವ ಅಥವಾ ಕರ್ಮರತನಾಗಿರುವ ಸ್ವಾತಂತ್ರ್ಯವು ಸಿದ್ಧಪುರುಷನಿಗೆ ಇದ್ದಕಾರಣ, ದ್ವಿಮುಖ ಪ್ರಜ್ಞೆಯು ಶಕ್ತಿಯಾದರೂ ಸದಾ ಅವನಲ್ಲಿ ಇದ್ದೆ ಇರುವದು. ಮುಂಡಕದಂಥ ಕೆಲವು ಉಪನಿಷತ್ತುಗಳೂ ಗೀತೆಯೂ ಪರೋಪಕಾರರತನಾದ ಸಿದ್ಧನಿಗೇ ಹೆಚ್ಚಿನ ಪ್ರಾಶಸ್ತ್ಯ ಕೊಡುತ್ತವೆ. ಭಗವದುಪಕರಣ ತಾನೆಂಬ ಭಾವದಿಂದ ನಿರ್ಲಿಪ್ತತೆಯಿಂದ ಕರ್ಮಗಳನ್ನು ನೆರವೇರಿಸುವ ಸಿದ್ಧನೆ ಇನ್ನುಳಿದವರಿಗಿಂತ ಶ್ರೇಷ್ಠನೆಂದು ಗೀತೆಯು ಹೇಳುತ್ತದೆ. ಉಳಿದ ಯೋಗಗಳಿಗಿಂತ ಕರ್ಮಯೋಗವೆ ಶ್ರೇಷ್ಠವಾದುದೆಂದು ಗೀತೆಯು ಮತ್ತೆ ಮತ್ತೆ ಸಾರುತ್ತದೆ. ಸಿದ್ಧಪುರುಷನ ನಿಲುಮೆಯೆಂದರೆ ಯಾವಾಗಲೂ ನಿಷ್ಕ್ರಿಯವೂ ನಿಷ್ಪಂದವೂ ಆದ ಜೀವಿಯ ನಿಲುಮೆಯೆಂದು ತಿಳಿಯಕೂಡದು. ಅದೂ ಒಂದು ಸಂಭವನೀಯ ನಿಲುಮೆಯಾಗಿರಬಹುದಾದರೂ ಅದೇ ಏಕಮಾತ್ರವಾದ, ಉತ್ತಮೋತ್ತಮವಾದ ಅಥವಾ ಉನ್ನತೋನ್ನತವಾದ ನಿಲುಮೆಯಾಗಿರಲಾರದು. ಈ ಪ್ರಶ್ನೆಯು ತಲೆದೋರಿದಾಗಲೆಲ್ಲ, ಈಶಾವಾಸ್ಯ ಮುಂಡಕಗಳಂಥ ಉಪನಿಷತ್ತುಗಳೂ ಗೀತೆಯೂ ಸಾರುವದೇನು ಗೊತ್ತೆ ? ಕ್ರಿಯಾಶೀಲನಾಗಿದ್ದೂ ನಿರ್ಲಿಪ್ತನಾಗಿರುವ, ಅಬಾಧಿತನಾಗಿರುವ ಹಾಗೂ ಸರ್ವಥಾ ಕರ್ಮಬಂಧನದಿಂದ ನಿರ್ಮುಕ್ತನಾಗಿರುವ ನಿಲುಮೆಯೆ ಶ್ರೇಷ್ಠ ನಿಲುಮೆಯೆಂದು ಅವು ಸಾರುವವು. ವಸ್ತುತಃ ಸ್ವತಃ ಬ್ರಹ್ಮನ ನಿಲುಮೆಯು ಇದಾಗಿರುವದು. ಅವನು ಕರ್ತಾರನೂ ಹೌದು, ಅಕರ್ತಾರನೂ ಹೌದು ; ಏಕೆಂದರೆ ತನ್ನ ಕರ್ಮದಿಂದ ಅವನು ಬದ್ಧನಲ್ಲ. ಅವನು ಅಖಂಡ ನಿತ್ಯಮುಕ್ತನಾಗಿದ್ದಾನೆ. ಬರ್ಗಸನ್ ಎಂಬವನ ತತ್ತ್ವಪ್ರಣಾಲಿಯ ಮೇರೆಗೆ ಈ ಬಗೆಯ ಕರ್ಮವು ಪರ್ವತಪ್ರವಾಹದ ಸಹಜಗತಿಯಂತೆ, ಸಜಲ ಮೇಘದ ಸಿಂಚನದಂತೆ ಅಥವಾ ಸ್ಫೂರ್ತಿಗೊಂಡ ಕವಿಯ ಕಾವ್ಯದಂತೆ, ' ಸ್ವಚ್ಛಂದ ಕರ್ಮ ' ವಾಗಿದೆ.

ಆತ್ಮತತ್ತ್ವದ ಇಲ್ಲವೆ ಬ್ರಹ್ಮತತ್ತ್ವದ ತುರೀಯ ಸಾಕ್ಷಾತ್ಕಾರದ ತರುವಾಯವೆ ಸಿದ್ಧಿಪ್ರಾಪ್ತಿಯೆಂದೂ ಸಮಾಧಿಯನ್ನು ಹೊಂದಬಲ್ಲವನೆ ಅದನ್ನು ಪಡೆಯಬಲ್ಲನೆಂದೂ ವಾಡಿಕೆಯ ಗ್ರಹಿಕೆಯಾಗಿದೆ. ಪತಂಜಲಿಯ ಅಷ್ಟವಿಧ ಯೋಗದಲ್ಲಿ ಸಮಾಧಿಯೆಂಬುದು ಅಂತಿಮಸ್ಥಿತಿಯಾಗಿದೆ. ಒಂದು ಬಗೆಯ ವ್ಯಾಮರೆವಿಗೆ, ಇಲ್ಲವೆ ಆನಂದೋನ್ಮಾದದ ಸಂಮೋಹನ ಸ್ಥಿತಿಗೆ, ಅಥವಾ ನಿದ್ರಾವಸ್ಥೆಗೆ ಸಮಾಧಿಯೆಂದು ಭ್ರಮಿಸಕೂಡದು. ಈ ಬಗೆಯ ಸ್ಥಿತಿಗಳಲ್ಲಿ ಯಾವುದೂ ಧ್ಯಾನಲೀನ ಸಾಧಕನನ್ನು ಆವರಿಸುವ ಸಂಭವವುಂಟು. ನಮ್ಮ ಚೇತನವು ಎಚ್ಚರದಪ್ಪಿದ ಸ್ಥಿತಿಯೆ ನಿದ್ರೆಯಾಗಿದ್ದರೆ ಸಮಾಧಿಯೆಂಬುದು ಕೇವಲ ಎಚ್ಚರಿಕೆಯಾಗಿದೆ. ಇದೇ ಬಗೆಯಾಗಿ, ವ್ಯಾಮರೆವೂ ಆನಂದೋನ್ಮಾದವೂ ತಾತ್ಪೂರ್ತಿಕ ಸ್ವರೂಪದ ಅನುಭವಗಳಾಗಿವೆ. ಹೀಗಿದ್ದರೂ ಇವುಗಳ ಅನುಭವಕಾಲದಲ್ಲಿ ಪರಮಾನಂದದ ಅನುಭೂತಿಯೂ ಉಂಟಾಗುವ ಸಂಭವವಿದೆ. ಸಾಮಾನ್ಯತಃ ಅವುಗಳ ಅನುಭೂತಿಯಲ್ಲಿ ಆಧ್ಯಾತ್ಮಿಕ ಸಂಕೇತವೇನೂ ಇರುವದಿಲ್ಲ. ಅಲ್ಲದೆ, ಅವು ಸಾಧಕನ ಇಚ್ಛೆಯ ನಿಯಂತ್ರಣಕ್ಕೆ ಸರ್ವದಾ ಒಳಪಟ್ಟಿರುವದೂ ಇಲ್ಲ. ಸಮಾಧಿಯು ಮುಖ್ಯತಃ ಒಂದು ಆಧ್ಯಾತ್ಮಿಕ ಅವಸ್ಥೆಯಾಗಿದ್ದು, ಪ್ರಯಾಸಪೂರ್ವಕ ಸಾಧನೆಯ ಫಲವಾಗಿ ಅದು ವಶವಾಗುತ್ತದೆ. ಉಚ್ಚಮಟ್ಟಕ್ಕೆ ಮುಟ್ಟಿದ ಯೋಗಿಯು ತನಗೆ ಬೇಕಾದಾಗ ಸಮಾಧಿಯನ್ನು ಹಚ್ಚಬಲ್ಲ ಶಕ್ತಿಯನ್ನು ಪಡೆದಿರುತ್ತಾನೆ.

ಸಮಾಧಿಯಲ್ಲಿ ಅನೇಕ ಪ್ರಕಾರಗಳಿದ್ದು, ಜೀವಾತ್ಮನು ಆತ್ಮತತ್ತ್ವದೊಡನೆ ಇಲ್ಲವೆ ಬ್ರಹ್ಮತತ್ತ್ವದೊಡನೆ ಒಂದಾಗಿ ಹೊಂದಿದ ಆ ಅನುಭವವೆ ಮುಖ್ಯ ಲಕ್ಷಣವಾಗಿದೆ. ಜೀವಾತ್ಮನು ತನ್ನ ಕವಚವನ್ನು ಕಳಚಿ, ಸೀಮಿತ ನಿರ್ಬಂಧಗಳನೆಲ್ಲ ಮಿಕ್ಕಿ ನಿಲ್ಲುವನು; ಆಗ ಆತನ ಸಮಸ್ತ ಸತ್ತ್ವವು ಆತ್ಮಸಾಮರಸ್ಯದ ಅನುಭವವನ್ನು ಪಡೆಯುತ್ತದೆ. ಅನಿರ್ವಚನೀಯವಾದ ಅತ್ಯಂತ ಆನಂದತುಂದಿಲ ಸ್ಥಿತಿಯು ಇದಾಗಿರುವದು, ಪರಮೋಚ್ಚವಾದ ಆಧ್ಯಾತ್ಮಿಕ ಅನುಭವವು ಇದಾಗಿರುವದು. ಈ ಸ್ಥಿತಿಯಲ್ಲಿ ಶುದ್ಧಚೇತನಕ್ಕೆ ತನ್ನ ಎಚ್ಚರ ತನಗಲ್ಲದೆ ಆಗ ಇನ್ನಾವುದರ ಅರಿವೂ ಅದಕ್ಕೆ ಇರುವದಿಲ್ಲ. ಸವಿಕಲ್ಪ ನಿರ್ವಿಕಲ್ಪ ಎಂಬುದಾಗಿ ಸಮಾಧಿಯಲ್ಲಿ ಎರಡು ಬಗೆಗಳುಂಟು. ಸವಿಕಲ್ಪ ಸಮಾಧಿಯಲ್ಲಿ ಸಾಧಕನು ಯಾವುದೊ ಒಂದು ನಿರ್ದಿಷ್ಟ ಇಷ್ಟದೇವತೆಯಲ್ಲಿ ತಾದಾತ್ಮ್ಯವನ್ನು ಅನುಭವಿಸುತ್ತಾನೆ. ನಿರ್ವಿಕಲ್ಪ ಸಮಾಧಿಯಲ್ಲಿ ಸಾಧಕನಿಗೆ ಯಾವುದೆ ಬಗೆಯ ಭಾವನೆಯಿರದು; ದೇವಭಾವವು ಸಹ ಅಳಿದು ಅವನು ಭಾವಾತೀತನಾಗಿರುತ್ತಾನೆ. ಶ್ರೀ ರಾಮಕೃಷ್ಣ ಪರಮಹಂಸರ ಸಾಧನೆಯಲ್ಲಿ ಇವೆರಡೂ ಬಗೆಯ ಸ್ಥಿತಿಗಳ ಉತ್ತಮ ಉದಾಹರಣೆಯನ್ನು ನಾವು ಕಾಣಬಹುದು. ಅವರು ಸವಿಕಲ್ಪ ಸಮಾಧಿಯಲ್ಲಿ ಸಹಜವಾಗಿ ಹೊಕ್ಕು ಕಾಲೀಮಾತೆಯೊಡನೆ ತಾದಾತ್ಮ್ಯದ ಆನಂದವನ್ನು ಅನುಭವಿಸುತಿದ್ದರು; ಆಕೆಯೆ ಅವರಿಗೆ ಆಗ

ತುರೀಯ ಸತ್ಯದ ಮೂರ್ತಿಮಂತ ಪ್ರತೀಕವಾಗಿ ಗೋಚರಿಸುತ್ತಿದ್ದಳು. ಈ ಸ್ಥಿತಿಯನ್ನು ಮೀರುವದು ಅವರಿಗೆ ತುಂಬ ದುಸ್ತರವೆನಿಸುತಿತ್ತು. ಆ ಕಾಲಕ್ಕೆ, ಅವರ ಅದ್ವೈತದ ಗುರುವಾದ ತೋತಾಪುರಿ ಎಂಬವರು, ಶ್ರೀ ರಾಮಕೃಷ್ಣರು ಧ್ಯಾನಲೀನರಾದಾಗ, ಅವರ ಭ್ರೂಮಧ್ಯದಲ್ಲಿ ಒಂದು ಚೂಪಾದ ಕಾಜಿನ ಚೂರು ಚುಚ್ಚಿದರು ; ಆಗ ಸ್ವಲ್ಪ ಬಲಪ್ರಯೋಗವನ್ನೆ ಬಳಿಸಿ ಒಂದಿಷ್ಟು ರಕ್ತವನ್ನೂ ಹೊರತೆಗೆದರು. ಈ ಪ್ರಯೋಗವು ಆ ಅದ್ವಿತೀಯ ಶಿಷ್ಯನಲ್ಲಿ ತತ್ ಕ್ಷಣ ಫಲಿಸಿಬಿಟ್ಟು, ಆತನ ನಿರ್ವಿಕಲ್ಪ ಸಮಾಧಿಗೆ ಅಡ್ಡಿಯಾಗಿ ನಿಂತಿದ್ದ ಕಾಲೀಮಾತೆಯ ಭಾವಮೂರ್ತಿಯನ್ನು ನಿರ್ನಾಮಗೊಳಿಸಿಬಿಟ್ಟಿತು. ಇದಾದನಂತರ, ಅವರು ಸಮಾಧಿಯನ್ನು ಹಚ್ಚಬಲ್ಲವರಾದುದಲ್ಲದೆ ಆ ಬಗೆಯ ಸ್ಥಿತಿಯಲ್ಲಿ ಸತತವಾಗಿ ಮೂರು ದಿನಗಳ ವರೆಗೂ ಇದ್ದುಕೊಂಡಿರಲು ಸಮರ್ಥರಾದರು. ಈ ವಿಧವಾದ ಸಮಾಧಿಯಲ್ಲಿಯೆ ಸದಾ ಲೀನರಾಗಿರಲು ಅವರಿಗೆ ಲೋಭವುಂಟಾಗುತ್ತಿತ್ತು. ಆದರೆ ಈ ಜಗದಲ್ಲಿ ಭಕ್ತಿ ಜೀವನವನ್ನೆ ಸಾಗಿಸತಕ್ಕುದೆಂದು (ಭಾವಮುಖೇ ಥಾಕ) ಮೇಲಿನಿಂದ ಬಂದ ಒಂದು ಕಟ್ಟಪ್ಪಣೆಯ ಮೇರೆಗೆ, ಅವರು ಐಹಿಕ ಜೀವನವನ್ನು ಸಾಗಿಸಬೇಕಾಗಿ ಬಂತು. ಈ ಬಗೆಯ ಸಮಾಧಿಗೆ 'ನಿರ್ಬೀಜ' ಸಮಾಧಿಯೆಂದೂ ಕರೆಯಲಾಗುತ್ತದೆ. ಏಕೆಂದರೆ, ಇದು ಸರ್ವಕರ್ಮಗಳ ಮತ್ತು ಮುಂದಿನ ಜನನ ಮರಣಗಳ 'ಬೀಜ'ವನ್ನೆ ಹುರಿದುಬಿಡುವದು.

ಬೊಟ್ಟಿಟ್ಟುತೋರಿಸಬೇಕಾದ ಮತ್ತೊಂದು ಸಮಾಧಿಯೆಂದರೆ ಸಹಜ ಸಮಾಧಿ, ಸ್ವಾಭಾವಿಕ ಸಮಾಧಿ. ಸವಿಕಲ್ಪವಾದ ಅಥವಾ ನಿರ್ವಿಕಲ್ಪವಾದ ಸಮಾಧಿಯಲ್ಲಿದ್ದುಕೊಂಡಿರುವದೆ ರೂಢಿಯಾಗಿಹೋದಂತಹ ಸಿದ್ಧರಿಗೆ, ಈ ಸಹಜ ಸಮಾಧಿಯ ಸ್ಥಿತಿಯು ಬಹುತರವಾಗಿ ಸ್ವಾಭಾವಿಕವಾಗಿಯೆ ಬಂದುಬಿಡುತ್ತದೆ. ಸಮಾಧಿಯನ್ನು ಹಚ್ಚಲು ಅವರಿಗೆ ಹೆಚ್ಚೇನು ಪ್ರಯಾಸಪಡುವ ಕಾರಣವೆ ಇಲ್ಲ. ಸಾಮಾನ್ಯ ಮನುಷ್ಯರಿಗೆ ಎಚ್ಚರದ ಸ್ಥಿತಿಯು ಅದೆಷ್ಟು ಸಹಜ ಸ್ವಾಭಾವಿಕವೊ ಅಷ್ಟು ಅವರಿಗೆ ಸಮಾಧಿಯ ಸ್ಥಿತಿಯೆ ಸಹಜ ಸ್ವಾಭಾವಿಕವಾಗಿ ಹೋಗುತ್ತದೆ. ಅಂತೆಯೆ ಸಂಸ್ಕೃತದಲ್ಲಿ ಅದಕ್ಕೆ 'ಸಹಜ' ಅಂದರೆ ಸಂಗಡಲೆ ಹುಟ್ಟಬಂದ, ಸ್ವಾಭಾವಿಕ ಎಂದು ಹೇಳುತ್ತಾರೆ. ಈ ಬಗೆಯ ಸಿದ್ಧನ ಚಿರಸ್ಥಾಯಿಯೂ ಅವಿಚ್ಛಿನ್ನವೂ ಆದ ಈ ಅವಸ್ಥೆಯಲ್ಲಿ ಅವನು, ಆತ್ಮನಲ್ಲಿ ಸದಾ ಏಕರೂಪನಾಗಿ, ತನ್ನ ತನು ಮನಗಳು ಮಾಡುತ್ತಿರುವ ಚಲನವಲನಗಳನ್ನೆಲ್ಲ ಸುಮ್ಮನೆ ಸಾಕ್ಷೀಭೂತನಾಗಿ ನೋಡುತಿರುವನು ಮಾತ್ರ. ಅವನ ಈ ನಿರ್ಲಿಪ್ತತೆಯು ಯಾವ ಮಟ್ಟಕ್ಕೆ ಮುಟ್ಟಿರುವದೆಂದು ಕೇಳುವಿರಾ ? ಈ ನಿಲುಮೆಯಲ್ಲಿದ್ದಾಗ ಸ್ವತಃ ಅವನ ಕ್ರಿಯಾಕರ್ಮಗಳೆ ಅವನಿಗೆ ಮಗುದೊಬ್ಬರ ತನು ಮನಗಳ ವ್ಯಾಪಾರವೆಂದು ತೋರುವವು ! ಅವನ ಆತ್ಮವು ಪರಮ ಆತ್ಮನೊಡನೆ ಸಂಗಡಿಸಿಕೊಂಡಿರುವದಲ್ಲದೆ ತನ್ನ ತನುವಿನೊಡನಲ್ಲ. ಇಂತಹ

ಪುರುಷನ ಕಣ್ಣುಗಳನ್ನು ಕಣ್ಣಿಟ್ಟು ನೋಡಿದುದಾದರೆ, ತಮ್ಮ ಸುತ್ತುಮುತ್ತಲಿನ ವ್ಯಾಪಾರಗಳತ್ತ ಅವುಗಳ ಗಮನವೆ ಇಲ್ಲವೆಂಬುದು ಸ್ಪಷ್ಟವಾಗಿ ಕಂಡುಬರುವದು. ಅಂಥವರ ಲಕ್ಷ್ಯವನ್ನು ಯಾವೊಂದು ವಿಷಯದತ್ತ ಪ್ರಯತ್ನಪೂರ್ವಕವಾಗಿಯೆ ಎಳೆದು ತರಬೇಕಾಗುವದು. ಅವನಾದರೊ ನಿದ್ದೆಯಿಂದ ಇಲ್ಲವೆ ಕನಸಿನಿಂದ ಎಚ್ಚತ್ತವನಂತೆ, ಕ್ರಮೇಣ ಎಚ್ಚತ್ತು ವಿಷಯಗ್ರಹಣ ಮಾಡಬೇಕಾಗುವದು. ಅರುಣಾಚಲದ ಶ್ರೀ ರಮಣಮಹರ್ಷಿಗಳು, ಸಾಮಾನ್ಯವಾಗಿ ಈ ಬಗೆಯ ಸಮಾಧಿಯಲ್ಲಿಯೆ ಇರುತ್ತಿದ್ದರೆಂದು ತಿಳಿದುಬರುತ್ತದೆ.

ಶ್ರೀರಾಮಕೃಷ್ಣರ ಸಂಬಂಧದಲ್ಲಿ 'ಭಾವಸಮಾಧಿ' ಎಂಬ ಇನ್ನೊಂದು ಪ್ರಕಾರದ ಸಮಾಧಿಯನ್ನು ಮತ್ತೆ ಮತ್ತೆ ನಿರ್ದೇಶಿಸುವದುಂಟು. ಇದು ಭಾವಾವೇಗ ಮೂಲಕವಾಗಿ ಉಂಟಾಗುವ ಸಮಾಧಿಯು. ಇದರಲ್ಲಿ ಒಂದು ವಿಶಿಷ್ಟವಾದ ಭಾವ ಸಾಮರಸ್ಯವೆ ಪ್ರಧಾನವಾಗಿರುವದು. ಅರ್ಥಾತ್ ಶ್ರೀರಾಮಕೃಷ್ಣರಲ್ಲಿ, ಮಾತೃ ಪ್ರೇಮವೆ ಭಕ್ತಿಯ ಭಾವವೆ ಪ್ರಧಾನವಾಗಿತ್ತು. ಮಾತೃಸಂಬಂಧವಾದ ಹಾಗೂ ಆ ಜಗನ್ಮಾತೆಯೊಡನೆ ತಾದಾತ್ಮ್ಯವಿಷಯಕವಾದ ಅನುಭವವೆ ಯಾವಾಗಲೂ ಪ್ರಧಾನ ಸಂಗತಿಯಾದುದರಿಂದ, ಅದಕ್ಕೆ ಭಾವಸಮಾಧಿಯೆನ್ನುವದೆ ಯುಕ್ತವಾಗಿದೆ. ಆಧ್ಯಾತ್ಮಿಕ ಸತ್ಯದ ಮಾತೆತ್ತಿದರೆ ಸಾಕು, ಸಮಾಧಿಯೆ ಹತ್ತಿಬಿಡುವಷ್ಟರ ಮಟ್ಟಿಗೆ ಅವರ ಚೇತನವು ಕೋಮಲವಾಗಿತ್ತು, ಸೂಕ್ಷ್ಮಗ್ರಾಹಿಯಾಗಿತ್ತು.

ಗೀತೆಯಲ್ಲಿ ಉಲ್ಲೇಖಿಸಲ್ಪಟ್ಟ ಕರ್ಮಸಮಾಧಿಯ * ಬಗೆಗೆ ಒಂದಿಷ್ಟು ಹೇಳುವದು ಅಪ್ರಸ್ತುತವಾಗಲಾರದು. ಎಲ್ಲವೂ ಬ್ರಹ್ಮಸ್ವರೂಪವೆಂದು ಶ್ರೀಕೃಷ್ಣನು ಉಸುರುತ್ತಾನೆ. ಈ ಪರಮ ಸತ್ಯವನ್ನು ಸಾಕ್ಷಾತ್ಕರಿಸಿಕೊಂಡು, ಆ ಪ್ರಜ್ಞಾಪೂರ್ಣ ಸ್ಥಿತಿಯಲ್ಲಿಯೆ ಕರ್ಮಮಾಡಿದುದಾದರೆ, ಹೀಗೆ ಮಾಡಿದ ಕರ್ಮವೆಲ್ಲವೂ ಬ್ರಹ್ಮಾರ್ಪಣವಾಗಿ ಬಿಡುತ್ತದೆ. ಆಗ ಸಮಗ್ರ ಜೀವನವೆ ಯಜ್ಞವಾಗಿ ಪರಿಣಮಿಸುವದು. ಅಲ್ಲಿ ಕರ್ತೃವೂ ಬ್ರಹ್ಮ, ಹೋಮದ್ರವ್ಯವೂ ಬ್ರಹ್ಮ, ಹೋಮಾಗ್ನಿಯೂ ಬ್ರಹ್ಮ, ಹೋಮವೂ ಬ್ರಹ್ಮ, ಎಲ್ಲವೂ ಬ್ರಹ್ಮಮಯ. ಸಮಾಧಿಮೂಲಕವಾಗಿ ಬ್ರಹ್ಮ-ಪ್ರಾಪ್ತಿಯು ಖಂಡಿತವೆಂಬಲ್ಲಿ ಸಂದೇಹವಿಲ್ಲ. ಈ ಸಂದರ್ಭದಲ್ಲಿಯಾದರೊ ಬ್ರಹ್ಮನಿ-ಗೋಸ್ಕರವಾಗಿ ಮಾಡಿದ ಕರ್ಮರೂಪ ಸಮಾಧಿಯದು. ಇಲ್ಲಿ ಕರ್ಮವು ಕೂಡ ಒಂದು ಪ್ರಕಾರದ ಸಮಾಧಿಯಾಗಬಲ್ಲುದೆಂದೆ ನಿರ್ದೇಶಿಸಲ್ಪಟ್ಟಿದೆ. (ಕರ್ಮಸಮಾಧಿ) ಅದರ ಸ್ಪಷ್ಟಾರ್ಥ ಹೀಗೆ: ಸಮಾಧಿಯು ಎಂದರೆ ಬ್ರಹ್ಮಾನಂದತಲ್ಲೀನತೆಯು,

---

* ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।
ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥

ಅ. ೪, ಶ್ಲೋ. ೨೪

ಕೇವಲ ಬ್ರಹ್ಮಾರ್ಪಣ ಚಿಂತನದಿಂದ, ಭಾವಮಗ್ನತೆಯಿಂದ, ಅಥವಾ ಅವಯವಗಳೆಲ್ಲ ವಿರಾಮಹೊಂದಿ ನಿಷ್ಪಂದ ಸ್ಥಿತಿಯಲ್ಲಿ ಇರುವದರಿಂದ ಮಾತ್ರ ಸಾಧ್ಯವೆಂದು ವಿಧಿಸುವ ಕಾರಣವಿಲ್ಲ. ಬ್ರಹ್ಮಾರ್ಪಣ ಬುದ್ಧಿಯಿಂದ ಶರೀರವು ಕರ್ಮಪ್ರವೃತ್ತವಾಗಿದ್ದಾಗಲೂ ಆ ಅನುಭವವು ಸಾಧ್ಯವಿದೆ. ಸಮಾಧಿಯ ಸಾರಸರ್ವಸ್ವವೆಂದರೆ, ಆತ್ಮೈಕ್ಯಭಾವದ ಭೂಮಾನಂದದ ಅನುಭೂತಿಯು. ಇದೊಂದು ಇದ್ದುದಾದರೆ ಹಾಗೂ ಇದಿರುವ ವರೆಗೆ ಇನ್ನುಳಿದುದಾವುದಕ್ಕೂ ಗಮನಿಸಬೇಕಾಗಿಲ್ಲ.

ಸಿದ್ಧಿಗೆ ಅಥವಾ ಆಧ್ಯಾತ್ಮಿಕ ಪರಿಪೂರ್ಣತೆಗೆ ಬೌದ್ಧ, ಜೈನ ಹಾಗೂ ಪ್ರಪಂಚದ ಮತ್ತೆ ಬೇರೆ ಬೇರೆ ವಿಚಾರಪ್ರಣಾಲಿಯಲ್ಲಿ, ಬೇರೆ ಬೇರೆ ಅರ್ಥಗಳುಂಟು. ಆ ಅರ್ಥವು ಆಯಾ ಪ್ರಣಾಲಿಗಳು ಇಟ್ಟುಕೊಂಡ ಆಧ್ಯಾತ್ಮಿಕ ಪರಿಪೂರ್ಣತೆಯ ಆದರ್ಶಕ್ಕೆ ಅನುಗುಣವಾಗಿರುವದು. ಹಾಗಿರುವದು ಕ್ರಮಪ್ರಾಪ್ತವೆ ಸರಿ. ಆ ಸಿದ್ಧಿಯೆಂಬುದು ಸರ್ವೋಚ್ಚ ಸುಖದ ಸ್ಥಿತಿಯೆಂದಾಗಲಿ ಆಧ್ಯಾತ್ಮಿಕ ಪ್ರಗತಿಯ ಮತ್ತು ಪರಿಪೂರ್ಣತೆಯ ತುಟ್ಟತುದಿಯೆಂದಾಗಲಿ ಎಲ್ಲರೂ ಒಪ್ಪುತ್ತಾರೇನೊ ನಿಜ. ಆದರೆ, ಒಂದೊಂದು ವಿಚಾರಪ್ರಣಾಲಿಯವರೂ ಒಂದೊಂದು ಬಗೆಯಾಗಿ, ಸಿದ್ಧಿಯ ತುರೀಯಾವಸ್ಥೆಯನ್ನು ಅರ್ಥೈಸುತ್ತಾರೆ. ಶ್ರೀ ಅರವಿಂದರ ಆದರ್ಶವಾಗಿದ್ದ ಸಿದ್ಧಿಯು ವೇದಾಂತದ ಪರಂಪರೆಗಳಿಗೆ ಅನುಗುಣವಾಗಿ ಇದ್ದ ಕಾರಣ, ಇನ್ನುಳಿದ ಹಲವಾರು ಭಿನ್ನ ಪಂಥಗಳ ಪ್ರಣಾಲಿಯ ಬಗೆಗೆ ಹೆಚ್ಚಿನ ವಿವರಗಳು ಅಗತ್ಯವಿಲ್ಲ.

ಶ್ರೀ ಅರವಿಂದರ ಸಿದ್ಧಿಯ ಸ್ವರೂಪವನ್ನೂ ಅದೇ ಬಗೆಯ ಇನ್ನುಳಿದ ಸಂಗತಿಗಳನ್ನೂ ಕುರಿತು ಸಮಾಲೋಚಿಸುವ ಪೂರ್ವದಲ್ಲಿ ಸಿದ್ಧನ ಸಿದ್ಧಿಯ ನಂತರದ ನಿಲುಮೆ ಮತ್ತು ಅವಸ್ಥೆ ಇವುಗಳ ವಿಷಯಕ್ಕೆ ಚರ್ಚೆ ಮಾಡುವದು ಉಪಯುಕ್ತವಾಗಿದೆ. ಆಧ್ಯಾತ್ಮಿಕವಲ್ಲದೆ ಸಿದ್ಧನಲ್ಲಿರಬೇಕಾದ ಮತ್ತುಳಿದ ಗುಣಲಕ್ಷಣಗಳಾವವು ಎಂಬುದನ್ನೂ ನೋಡುವಾ. ಪರಿಪೂರ್ಣತೆಗೆ ಮುಟ್ಟಿ ಸಿದ್ಧಿಯನ್ನು ಹೊಂದಿದವನೆ ಸಿದ್ಧನೆಂಬುದನ್ನು ನಾವಾಗಲೆ ತಿಳಿದಿದ್ದೇವೆ. ಅವನನ್ನು ಸಿದ್ಧಾರೂಢನೆಂದೂ ಯೋಗಾರೂಢನೆಂದೂ ಸಂಬೋಧಿಸಬಹುದು. ಅವೆರಡೂ ಪದಗಳು, ಪೂರ್ಣತ್ವದಲ್ಲಿ ಅಥವಾ ಯೋಗದಲ್ಲಿ ಪ್ರತಿಷ್ಠಾನ ಪಡೆದಂಥವನು ಎಂದೆ ಅರ್ಥ ಕೊಡುತ್ತವೆ. ಈ ಸಂಬಂಧದಲ್ಲಿ ಮತ್ತೆ ಮೂರು ಪದಗಳು ಬಳಿಕೆಯಲ್ಲಿವೆ : ಮುಕ್ತ, ಜೀವನ್ಮುಕ್ತ ಮತ್ತು ವಿದೇಹಮುಕ್ತ ಎಂಬವು. 'ಮುಕ್ತ' ಎಂಬ ಮಾತಿನ ಅರ್ಥವು ಸ್ಪಷ್ಟವೆ ಇದೆ. ಸಿದ್ಧನಾದವನು ಇಂದ್ರಿಯಸಂವೇದನೆಗಳ ಬಂಧನಜಾಲದಿಂದ ಮುಕ್ತನಾಗಿದ್ದ ಕಾರಣ, ಆವನು ಕರ್ಮವಿಪಾಕದ ನಿಯಮದಿಂದಲೂ ನಿರ್ಮುಕ್ತನಾಗಿರುತ್ತಾನೆ. ಅವನು, ತನ್ನ ಒಳಗಿನ ಇಲ್ಲವೆ ಹೊರಗಿನ ಯಾವುದೆ ಬಗೆಯ ಶಕ್ತಿಸಾಮರ್ಥ್ಯಗಳ ಅಂಕಿತಕ್ಕೆ ಒಳಪಟ್ಟಿರದೆ ಅವುಗಳಿಂದ ಅತೀತವಾಗಿದ್ದ ಒಂದು ವಿಧದ ಆತ್ಮಾನಂದದ ಸ್ಥಿತಿಯನ್ನು ಅನುಭವಿಸುತ್ತಾನೆ; ಆತ್ಮನ ಸ್ವಾತಂತ್ರ್ಯದಲ್ಲಿ ತಾನೂ ಭಾಗಿ

ಯಾಗಿರುತ್ತಾನೆ. 'ಜೀವನ್ಮುಕ್ತ'ನೆಂದರೆ, ಇನ್ನೂ ಜೀವಂತನಿದ್ದಾಗಲೆ ಆತ್ಮ-ಮೋಕ್ಷವನ್ನು ಹೊಂದಿದಂಥವನು. ಸ್ವಾಭಾವಿಕವಾದ ಅವಸಾನದ ವರೆಗೂ ಅವನ ದೇಹವು ಎಂದಿನಂತೆ ಬದುಕಿಕೊಂಡು ಬರುತ್ತದೆ. ಅವನ ಗತಕರ್ಮವು ಅಂದರೆ ಸಂಚಿತವು, ನಿರ್ಮೂಲನ ಹೊಂದುತ್ತದೆ. ಜೀವನ್ಮುಕ್ತಿಯನ್ನು ಹೊಂದಿದ ನಂತರದ ಅವನ ಕರ್ಮವು ಅವನಿಗೆ ಬಂಧಕವಾಗಲಾರದು. ಆದರೆ ಅವನ ಜನ್ಮಕ್ಕೆ ಕಾರಣ ವಾಗಿದ್ದ ಕರ್ಮವು ಅಂದರೆ ಪ್ರಾರಬ್ಧವು, ಅವನ ಶಾರೀರಿಕ ಮರಣವು ಘಟಿಸುತ್ತಲೆ ನಿಃಶೇಷವಾಗುವದು. 'ವಿದೇಹ ಮುಕ್ತ'ನು, ವಿ – ದೇಹಿಯಾದೊಡನೆ ಅಂದರೆ ಅವನ ಆತ್ಮವು ತನುವಿನ ಬಂಧನದಿಂದ ಒಮ್ಮೆ ಬಿಡುಗಡೆ ಹೊಂದಿದಮೇಲೆ ಪುನರ್ಜ-ನ್ಮವನ್ನು ತಾಳುವದಿಲ್ಲ; ಆದರೆ ಅದು ಆ ಮುಂದೆ ಶಾಶ್ವತವಾಗಿ ಮುಕ್ತಾತ್ಮ ಸ್ಥಿತಿಯನ್ನು ಅನುಭವಿಸುವದು. ಹೀಗೆ ಮುಕ್ತನೆಂಬ ಪದವು ವ್ಯಾಪಕಾರ್ಥದಲ್ಲಿ ಪ್ರಯೋಗಿಸಲ್ಪಡುವದು. ಜೀವಂತನಿದ್ದಾಗ ಅವನಿಗೆ ಜೀವನ್ಮುಕ್ತನೆಂದೂ ತನು ವನ್ನು ತೊರೆದ ಮೇಲೆ ಅವನಿಗೆ ವಿದೇಹಮುಕ್ತನೆಂದೂ ಹೇಳುವದುಂಟು.

ನಾವು ಧಾಮಗಳೇನೆ ಇದ್ದುಕೊಂಡಿರಲಿ, ನಾವೀಗ ಬಣ್ಣಿಸಬೇಕಾದುದು ಸಿದ್ಧಿಯ ನಂತರದ ಸಿದ್ಧನ ನಿಲುಮೆಯನ್ನು. ಈಗಾಗಲೆ ಈ ಬಗೆಗೆ ತಕ್ಕಷ್ಟು ತಿಳಿ-ದಿದ್ದೇವೆ; ಕೆಲವು ಉಪನಿಷತ್ತುಗಳೂ ವಿಶೇಷವಾಗಿ ಗೀತೆಯೂ ಲೋಕಕಲ್ಯಾಣ ದೃಷ್ಟಿಯಿಂದ ಸದಾ ಕರ್ಮಪ್ರವರ್ತನೆಯಲ್ಲಿ ರತನಾದ ಸಿದ್ಧನನ್ನೆ ಹೆಚ್ಚಾಗಿ ಮೆಚ್ಚುವ ವೆಂದು ಮೇಲ್ಕಾಣಿಸಿದೆಯಷ್ಟೆ? ಆದರೆ ಈಗಿರುವ ಪ್ರಶ್ನೆಯಿದು: ಈ ಬಗೆಯಾದ ಪರಿಪೂರ್ಣ ಆಧ್ಯಾತ್ಮಿಕ ಸಿದ್ಧಿಯ ಸ್ಥಿತಿಯಲ್ಲಿದ್ದಾಗ, ಈ ನಿಲುಮೆಯ ಕರ್ಮಪರ ಅಥವಾ ನಿಷ್ಕರ್ಮಪರ ಪ್ರವೃತ್ತಿಯ ಪರಿಣಾಮಗಳೇನು? ಶಕ್ಯಾಶಕ್ಯತೆಗಳೇನು? ಸಿದ್ಧನ ವ್ಯಕ್ತಿಗತ ಆತ್ಮದ ಮಟ್ಟಿಗೆ ಹೇಳುವದಾದರೆ, ಅವನು ತನ್ನ ವೈಯಕ್ತಿಕ ಮಹದಾಕಾಂಕ್ಷೆಯನೆಲ್ಲ ಒಂದೊಂದಾಗಿ ಹೊಂದಿಯೆ ಬಿಟ್ಟಿರುತ್ತಾನೆ. ತತ್ಪರಿಣಾಮ ವಾಗಿ ಅವನು ಅವಿರತ ಧನ್ಯಭಾವವನ್ನೆ ಅನುಭವಿಸುತ್ತಾನೆ. ಅವನು ಕೃತಾರ್ಥನು. ಅಂಥವನ ಮುಂದಿನ ಹೆಜ್ಜೆಯು ಹೇಗಿರಬೇಕು? ಅವನೆದುರಿಗೆ ಎರಡು ದಾರಿ ಗಳುಂಟು. ಅಂದಿನಿಂದ ಮುಂದೆ ಅವನು ಒಂದು ಪಳ ಸಹ ವಿರಾಮಗೊಳ್ಳದೆ, ಎಡೆಬಿಡದೆ ಬ್ರಹ್ಮಚಿಂತನದಲ್ಲಿ ಮುಳುಗಿರಲು ಹವಣಿಸಬಹುದು. ಅಧ್ಯಾತ್ಮಗ್ರಂಥ ಗಳಲ್ಲಿ ಇದನ್ನು ಜಡವತ್ ಜೀವನವೆಂದು ಬಣ್ಣಿಸಲಾಗಿದೆ. ಅಥವಾ ಬಾಲಭಾವ ದಿಂದ ಬ್ರಹ್ಮಚೈತನ್ಯದಲ್ಲಿ ಅಥವಾ ಬ್ರಾಹ್ಮಪ್ರಜ್ಞೆಯಲ್ಲಿ ಇದ್ದುಕೊಳ್ಳಲು ಬಯಸ ಬಹುದು; ಇದನ್ನು ಬಾಲವತ್ ಎಂದು ಗುರುತಿಸಲಾಗಿದೆ. ಇನ್ನೊಂದು ಬಗೆಯೂ ಉಂಟು. ಭಗವಂತನ ಬಗೆಗೆ, ಮೇರೆ ಮೀರಿದ ಆವೇಶ-ಆವೇಗಗಳಿಂದ, ದೇವ ಮಿಲನದಿಂದುಂಟಾದ ಆನಂದೋನ್ಮಾದದಿಂದ, ಹಾಡಿ, ಕುಣಿದು, ನಕ್ಕು ನಲಿದಾಡು ವದು. ಈ ವಿಧದ ದೇವೋನ್ಮಾದಭರಿತ ಜೀವನವನ್ನು ಹುಚ್ಚನ ಜೀವನಕ್ಕೆ

ಹೋಲಿಸಿ, ಉನ್ಮತ್ತವತ್ ಎಂದು ಬಣ್ಣಿಸಲಾಗಿದೆ. ಮಗುದೊಂದು ಬಗೆಯೂ ಇದ್ದು, ಅದೇ ಉತ್ತಮೋತ್ತಮವಾದುದೆಂದು ಪರಿಗಣಿತವಾಗಿದೆ. ಅದು ಜನಕ-ರಾಜನ ರೀತಿಯು. ಸಿದ್ಧನಾಗಿದ್ದರೂ ಅವನು ತನ್ನ ರಾಜಕರ್ಮಗಳನ್ನೆಲ್ಲ ಬೇಸರಿಯದೆ, ನಿಷ್ಠೆಯಿಂದ ಆದರೂ ನಿರ್ಲಿಪ್ತಭಾವದಿಂದ ನಿರ್ವಹಿಸುತ್ತಿದ್ದನು. ಯೋಗಿಗಳ ಯೋಗಿಯೆನಿಸಿಕೊಂಡು ಸಿದ್ಧರಲ್ಲಿ ಶ್ರೇಷ್ಠನೆನಿಸಿದ ಸ್ವತಃ ಶ್ರೀಕೃಷ್ಣನೆ ಜನಕನಂತೆ ಲೋಕಕಲ್ಯಾಣ ದೃಷ್ಟಿಯಿಂದ ಕರ್ತವ್ಯಕರ್ಮವನ್ನು ನಿರ್ವಹಿಸಬೇಕೆಂದು ಅರ್ಜುನನಿಗೆ ಆಗ್ರಹಪೂರ್ವಕವಾಗಿ ಹೇಳಿದುದುಂಟು. ಸ್ವತಃ ತನ್ನ ನಿಲುಮೆಯು ಆದಾವಬಗೆಯದಾಗಿದೆ ಎಂಬುದನ್ನು ತಿಳಿಸಿಕೊಡುತ್ತ ಶ್ರೀಕೃಷ್ಣನು, ತಾನು ಯಾವುದೆ ಕರ್ಮ ಮಾಡುವದರಿಂದಾಗಲಿ, ಬಿಡುವದರಿಂದಾಗಲಿ ತನಗಾವ ಲಾಭವೂ ಉಂಟಾಗುವದಿಲ್ಲವೆಂದು ಹೇಳುತ್ತಾನೆ. ಆದರೆ, ಜನತೆಗೆ ಮಾದರಿಯಾಗಿರಲೆಂದೂ ಜಗಚ್ಚಕ್ರಗಳು ತಿರುಗುತ್ತಿರಲೆಂದೂ ಏನೆಲ್ಲವನ್ನೂ ತಾನು ಮಾಡುತ್ತಿರುವುದಾಗಿ ಅವನು ಹೇಳುತ್ತಾನೆ. 'ನಾನು ಕರ್ಮ ಮಾಡುವದನ್ನು ನಿಲ್ಲಿಸಿಬಿಟ್ಟೆನಾದರೆ ಈ ಲೋಕಗಳೆಲ್ಲ ಹಾಳಾಗಿಹೋಗುವವು' ಎಂದು ಸಾರಿದ್ದಾನೆ ಶ್ರೀಕೃಷ್ಣನು.

ಸಿದ್ಧನಾದ ಪುರುಷನಿಗೆ ಹೊರಗಿನವರು ಆದೇಶನಿರ್ದೇಶಗಳನ್ನೊ ಸೂಚನೆ ಸಂಕೇತಗಳನ್ನೊ ಕೊಡುವದೆ ಬಿಡುವದೆ? ಅವನು ಸಾಮಾಜಿಕ ರೂಢಿ ಋಣಾನುಬಂಧಗಳಿಗೆ ಒಳಪಟ್ಟಿರುವನೊ ಇಲ್ಲವೊ? ಅಥವಾ ಅವನಿಗೋಸ್ಕರ ಪ್ರತ್ಯೇಕ ವಿಧಾನವ್ಯವಸ್ಥೆಯೇನಾದರೂ ಇರಬೇಕೆ ಬೇಡವೆ? ಇವೇ ಮೊದಲಾದ ಪ್ರಶ್ನೆಗಳು ತಲೆದೋರುವವು. ಇವೆಲ್ಲಕ್ಕೂ ನಿಷೇಧಪರವಾದ, 'ಇಲ್ಲ' ವೆಂಬ ಒಂದೆ ಒಂದು ಉತ್ತರ. ಅನಂತತೆಯೊಡನೆ ಸಾಮರಸ್ಯ ಸಾಧಿಸಿದವನಿಗೆ, ಅವನಂತರಾತ್ಮನಲ್ಲದೆ ಬೇರೆ ಇನ್ನಾರು ದಾರಿ ತೋರಬಲ್ಲರು? ಅನಂತತೆಯು ಸಮಾಜವನ್ನೂ ಮನುಕುಲವನ್ನೂ ಗ್ರಹಿಸಬಲ್ಲುದಿಷ್ಟೆ ಅಲ್ಲ ಸಮಗ್ರ ಅಸ್ತಿತ್ವವನ್ನೆ ಅದು ಆಕಲನ ಮಾಡಿಕೊಳ್ಳಬಲ್ಲದು. ಈ ಬಗೆಯ ಮುಕ್ತಾತ್ಮನಿಗೆ, ಪ್ರಾಜ್ಞನಿಗೆ ನಿರ್ದೇಶಿಸಲು ಹವಣಿಸುವದೆಂದರೆ ಅದು ನಮ್ಮ ಶುದ್ಧ ಹುಂಬತನವೆ ಸರಿ. ಮಾನವಸಮಾಜದ ಹಿತಚಿಂತನದ ಹಂಬಲದಲ್ಲಿ, ಹಾಗೂ ಅದಕ್ಕಾಗಿ ಓರ್ವ ಸಿದ್ಧನ ಸೇವೆಯನ್ನು ದೊರಕಿಸುವ ನಮ್ಮ ಕುತೂಹಲದಲ್ಲಿ, ನಾವು ಅವನಿಂದ ಸಾಮಾಜಿಕ ಸೇವೆಯನ್ನು ನಿರೀ-ಕ್ಷಿಸುವ ಸಂಭವವೆ ಬಹಳ! ಆದರೆ ಈ ವಿಷಯದಲ್ಲಿ ಏನು ಮಾಡುವದು, ಏನು ಬಿಡುವದು ಎಂಬ ಸಂಗತಿಯನ್ನು ಆ ಸಿದ್ಧಾತ್ಮನಿಗೆ ಸಂಪೂರ್ಣವಾಗಿ ಬಿಟ್ಟುಕೊಡುವದು ಯುಕ್ತವೆಂದು ಬೇರೆ ಹೇಳಬೇಕಾಗಿಲ್ಲ. ಈ ಬಗೆಯ ಮುಕ್ತಾತ್ಮವೊಂದು ನಮ್ಮ ಮಧ್ಯದಲ್ಲಿ ಇದ್ದುಕೊಂಡಿರುವದೆ ಒಂದು ದೊಡ್ಡ ಉಪಕಾರವೆನಬೇಕು. ಘನಘೋರ ಸಾಧನೆಯ ಮುಖಾಂತರವಾಗಿ, ತನ್ನನ್ನು ಸುತ್ತುವರಿದ ತೊಡಕು ತೊಂದರೆಗಳನ್ನೆಲ್ಲ ತರಿದು ಆ ಮುಕ್ತಾತ್ಮವು ಸಿದ್ಧಿ ಜಯಗಳನ್ನು ಸಂಪಾದಿಸಿ

ಕೊಂಡುದೆ ಒಂದು ಸಾಕಷ್ಟು ದೊಡ್ಡ ಸೇವೆಯಾಗಿದೆ. ಇಂತಹ ಸಿದ್ಧರು ತಾವಾಗಿಯೆ ಭಗವಾನ್ ಬುದ್ಧದೇವನ ದಾರಿಯನ್ನು ಹಿಡಿದರೆ ಆ ಮಾತು ಬೇರೆ. ಬುದ್ಧದೇವನ ಸಂಬೋಧಿಯ ನಂತರ ಒಬ್ಬ ಶಿಷ್ಯನು ಒಂದು ಪ್ರಶ್ನೆಯನ್ನು ಆತನಿಗೆ ಕೇಳಿದನು : 'ನಿಮಗೆ ಈಗ ಆಧ್ಯಾತ್ಮಿಕ ಗುರಿಯು ಕೈಗೂಡಿಹೋಗಿದೆ; ಎಂದ ಮೇಲೆ ನಿರ್ವಾಣದಲ್ಲಿ ಹೊಕ್ಕರಾಗದೆ?' ಇದಕ್ಕೆ ಬಂದ ಉತ್ತರ ಇದು :

'ಪ್ರೀತ್ಯಾಸ್ಪದನೆ, ಈ ಜಗತ್ತಿನಲ್ಲಿ ಒಂದೆ ಒಂದು ನರಪ್ರಾಣಿಯು ಸಹ ದುಃಖಲೇಶದ ಸೋಂಕಿನಿಂದ ಕೂಡಿರುವ ವರೆಗೂ ನಾನದನ್ನು ತೊಲಗಿಸಲು ಹವಣಿಸತಕ್ಕವ. ಆ ವರೆಗೆ ನನ್ನ ನಿರ್ವಾಣವು ನನಗಾಗಿ ಕಾದಿರಬೇಕಾಗುವದು.'

ಸಿದ್ಧಿಯ ತರುವಾಯವೂ ಸಾಧನವು ಸಾಗಿರಬೇಕೆ ಎಂಬುದೂ ಇನ್ನೊಂದು ಸಂಭವನೀಯ ಪ್ರಶ್ನೆಯಾಗಿದೆ. ಇದಕ್ಕೆ ಹೌದು ಎಂದೆ ಖಂಡಿತವಾದ ಉತ್ತರ. ಶ್ರೀ ರಾಮಕೃಷ್ಣರು ಈ ವಿಷಯವನ್ನು ತುಂಬ ಒತ್ತಿ ಒತ್ತಿ ಹೇಳುತಿದ್ದರು. ಗೀತೆಯು ಈ ಬಗೆಯ ಪ್ರಶ್ನೆಯನ್ನು ಮೊದಲೆ ಊಹಿಸಿ ಗ್ರಹಿಸಿಕೊಂಡಿದೆ. ಅದು ಹೇಳುತ್ತದೆ: ಕರ್ಮಯೋಗದಲ್ಲಿ, ಅನಾಸಕ್ತವಾದ ಕರ್ಮವೆ, ಸಿದ್ಧಿಯಾಗುವ ವರೆಗೂ ಸಿದ್ಧಿಯ ಸಾಧನವಾಗಿದೆ ; ಆದರೆ ಆ ತರುವಾಯ, ಸಿದ್ಧಿಯ ಫಲವಾಗಿ ಸ್ವೈಗೂಡಿದ ಶಾಂತಿಯೆ ಕರ್ಮದ ಕಾರಣವಾಗುತ್ತದೆ. 'ಶಮಃ ಕಾರಣಮುಚ್ಯತೇ' ಇದಲ್ಲದೆ ಇನ್ನೂ ಒಂದು ಪ್ರಕಾರದ ಸಂದರ್ಭವು ಸಂಭವನೀಯವಾಗಿದೆ. ಸಿದ್ಧಿಯ ನಂತರವೂ ಸಿದ್ಧನು, ಇನ್ನೂ ಬಗೆಬಗೆಯ ಆಧ್ಯಾತ್ಮಿಕ ಗುರಿನಿರಿಗಳನ್ನು ಕೈಗೂಡಿಸಿಕೊಳ್ಳಲು ತನ್ನ ಸಾಧನೆಯನ್ನು ಮುಂದುವರಿಸಲೂ ಬಹುದಾಗಿದೆ. ಹಾಗಿದ್ದಲ್ಲಿ, ತಾನು ಹೊಂದಬೇಕೆನ್ನುವ ಆಧ್ಯಾತ್ಮಿಕ ನವ ಆದರ್ಶಗಳಿಗೆ ಅನುಗುಣವಾಗಿ ಸಿದ್ಧನು ಸಹ ಕೂಡಲೆ ಸಾಧಕನಾಗಿ ಬಿಡುತ್ತಾನೆ. ಶ್ರೀ ಅರವಿಂದರ ವಿಷಯದಲ್ಲಿ ಘಟಿಸಿದುದಾದರೂ ಇದೇ. ಅಂತೆಯೆ ಅವರು ಆತ್ಮಸಿದ್ಧಿಯ ನಂತರವೂ ತಮ್ಮ ಸಾಧನೆಯನ್ನು ಮುಂದೆ ಮುಂದೆ ಸಾಗಿಸಿದರು. ಅದು ಬೇರೆ ಬೇರೆ ದಿಸೆಗಳಲ್ಲಿರಬಹುದು; ಆ ಮಾತು ಬೇರೆ. ನಮಗೆಲ್ಲ ಗೊತ್ತಿದ್ದಂತೆ ಈ ಅವರ ಸಾಧನೆಯು ಕೊನೆತನಕವೂ ಸಾಗಿತ್ತು.

ಎಲ್ಲರಲ್ಲಿಯೂ ಸಾಮಾನ್ಯತಃ ಇನ್ನೊಂದು ಗ್ರಹಿಕೆಯುಂಟು. ಅದೆಂದರೆ, ಆಧ್ಯಾತ್ಮಿಕ ದೃಷ್ಟಿಯಿಂದ ಸಿದ್ಧನಾದ ಪುರುಷನು ಇನ್ನುಳಿದ ಸಂಗತಿಗಳಲ್ಲಿಯೂ ಪರಿಪೂರ್ಣನೂ ಗಭೀರನೂ ಆಗಿರುತ್ತಾನೆ ಎಂದು ಮುಂತಾಗಿ. ಉದಾಹರಣಾರ್ಥ, ಅವನು ಪಂಡಿತನೂ ಕವಿಯೂ ಯೋಧನೂ ಎಲ್ಲವೂ ಆಗಿರಬೇಕಲ್ಲದೆ ಸಾಲದುದಕ್ಕೆ ಎಲ್ಲದರಲ್ಲಿಯೂ ಆತನು ಪೂರ್ಣವಾಗಿ ನಿಷ್ಣಾತನೂ ಆಗಿರತಕ್ಕುದೆಂದು ನಿರೀಕ್ಷಿಸಲಾಗುತ್ತದೆ. ಸಮಗ್ರ ಜೀವನವೂ ಅದರಂತೆ ಅಖಂಡ ಮಾನವಕುಲವೂ ದಿವ್ಯತ್ವವನ್ನು ತಾಳುವ ಉಪಾಯವನ್ನೆ ಹುಡುಕುವಲ್ಲಿ ಶ್ರೀ ಅರವಿಂದರು ನಿರತರಾಗಿದ್ದರೆಂಬುದು ನಿಜವೆ ಸರಿ. ಯೋಗಾಭ್ಯಾಸವು ಸಾಧಕನಿಗೆ ಅಷ್ಟಸಿದ್ಧಿಗಳನ್ನು

ಕೈಗೂಡಿಸಿ ಕೊಡುವದೆಂಬ ಸಂಗತಿಯೂ ಅಷ್ಟೇ ನಿಜವಾಗಿದೆ. ಆ ಅಷ್ಟಸಿದ್ಧಿಗಳು ಇವು: ೧. ಅಣಿಮಾ. ಅಣುವಿನಷ್ಟು ಸಣ್ಣಗಾಗುವದು. ೨. ಮಹಿಮಾ. ಪೃಥ್ವಿ-ಯಲ್ಲಿರುವ ಎಲ್ಲಕ್ಕಿಂತ ದೊಡ್ಡ ವಸ್ತುವಿಗಿಂತಲೂ ದೊಡ್ಡದಾಗುವದು. ೩. ಗರಿಮಾ. ಬೇಕುಬೇಕಾದಷ್ಟು ಭಾರವಾಗುವದು. ೪. ಲಘಿಮಾ. ಬೇಕುಬೇಕಾದಷ್ಟು ಹಗುರಾಗುವದು. ೫. ಪ್ರಾಪ್ತಿ. ಬೇಕಾದಷ್ಟು ದೂರವಿದ್ದ ಪದಾರ್ಥವನ್ನೂ ಮುಟ್ಟುವದು. ೬. ಪ್ರಾಕಾಮ್ಯ. ಬಯಸಿದ್ದೆಲ್ಲ ದೊರಕುವದು. ೭. ಈಶಿತ್ವ. ಎಲ್ಲದರಮೇಲೆಯೂ ಪ್ರಭುತ್ವ. ೮. ವಶಿತ್ವ. ಎಲ್ಲವನ್ನೂ ನಿಗ್ರಹಿಸುವದು. ಆದರೆ ಈ ಬಗೆಯ ಗುಪ್ತ-ಶಕ್ತಿಗಳನ್ನು ಅಥವಾ ಅತಿಭೌತಿಕ ಶಕ್ತಿಗಳನ್ನು, ಆಧ್ಯಾತ್ಮಿಕ ಸಿದ್ಧಿಯೆಂದಾಗಲಿ ಅಥವಾ ಇನ್ನುಳಿದ ವಿಷಯಗಳ ಪರಿಪೂರ್ಣತೆಯೆಂದಾಗಲಿ ತಿಳಿದು ಭ್ರಮಿಸ ಕೂಡದು. ವಸ್ತುಸ್ಥಿತಿಯೆಂದರೆ, ಈ 'ಅಷ್ಟಸಿದ್ಧಿ'ಗಳು ನಿಜವಾದ ಸಾಧಕನ ದಾರಿಯಲ್ಲಿ ಅಡ್ಡ ಬರುವ ಪ್ರಲೋಭನಗಳೆಂದು ಪರಿಗಣಿತವಾಗಿವೆ. ಆಧ್ಯಾತ್ಮಿಕ ಅನುಭವದ ಹೊರಗಿದ್ದ ಇನ್ನುಳಿದ ಸಂಗತಿಗಳ ಬಗೆಗೆ, ಸಿದ್ಧನಾದವನಿಗೂ ಮಿತಿ ಮೇರೆಗಳುಂಟೆಂಬ ಮಾತನ್ನು ಅರಿತಿರುವದು ಅವಶ್ಯವಾಗಿದೆ. ಅವನಲ್ಲಿ ಇನ್ನು ಬೇರೆ ಶಕ್ತಿಗಳು ಬೇಗಬೇಗ ಕುದುರಬಹುದು, ನಿಜ; ಅಲ್ಲದೆ ಸುಪ್ತವಾಗಿದ್ದ ಶಕ್ತಿಗಳೆಲ್ಲ ಈಗ ಪ್ರಕಟಗೊಳ್ಳಲೂ ಬಹುದು, ಅದೂ ನಿಜವೆ. ಅದರೆ ಮುಖ್ಯತಃ, ಅವನದು ಆಧ್ಯಾತ್ಮಿಕ ಸಿದ್ಧಿಯಲ್ಲದೆ ಬೇರಾವುದೂ ಅಲ್ಲ. ಈ ಬಗೆಗೆ ಒಂದು ಪ್ರಸಂಗ ನಿರೂಪಣೆಯು ಈ ಮಾತನ್ನು ಸ್ಪಷ್ಟಪಡಿಸಬಹುದಾಗಿದೆ. ಒಮ್ಮೆ ಶ್ರೀ ಅರವಿಂದರು ೧೯೨೨ ರಲ್ಲಿ, ಭಾವನಗರದ ನರಂದಾಸ ಸಂಗಾನಿ ಎಂಬವರನ್ನು ಕಾಣಲು ಒಪ್ಪಲಿಲ್ಲ. ತುಂಬ ಸಿಡಿಮಿಡಿಗೊಂಡು ನರಂದಾಸರು, ತಿರುವನ್ನಾಮಲೈಕ್ಕೆ ಶ್ರೀರಮಣಮಹರ್ಷಿಗಳ ಕಡೆಗೆ ಹೋಗಿ, ಸಿದ್ಧನಾದವನು ಮಾಂಸಭಕ್ಷಣ ಮಾಡಬಹುದೆ ಎಂದು ಪ್ರಶ್ನಿಸಿದರು. ಮಹರ್ಷಿಗಳು ಅಪರೂಪವಾಗಿಯೆ ಉತ್ತರಕೊಡುವ ಪರಿಪಾಠ. ಆದರೆ ಈ ಸಂದರ್ಭದಲ್ಲಿ ಅವರು ಕೂಡಲೆ ಉತ್ತರಿಸುತ್ತ, 'ಅದು ರೂಢಿಬಲದ ಮಾತು' ಎಂದು ನುಡಿದುಬಿಟ್ಟರು. ಶ್ರೀ ಅರವಿಂದರಲ್ಲಿ ದೋಷವನ್ನು ಹುಡುಕ ಹೊರಟ ನರಂದಾಸರಿಗೆ ಇದರಿಂದ ತುಂಬ ನಿರಾಶೆಯಾಯಿತು. ಶ್ರೀ ಅರವಿಂದರಿಗೆ ಒಂದಾನೊಂದು ಕಾಲಕ್ಕೆ ಚಹಾಪಾನದ ಮತ್ತು ತಂಬಾಕದ ಅಭ್ಯಾಸವಿತ್ತು; ಆದರೆ ೧೯೨೬ ರಲ್ಲಿ ಅವೆರಡನ್ನೂ ಅವರು ಬಿಟ್ಟುಕೊಟ್ಟರು.

ಸರ್ವಾಂಗೀಣವಾದ ಪರಿಪೂರ್ಣತೆಯೆ ತಮ್ಮ ಯೋಗದ ಗುರಿಯಾಗಿದ್ದರೂ ಆ ಆದರ್ಶವನ್ನು ಇನ್ನುಳಿದ ಆಧ್ಯಾತ್ಮಿಕ ಸಾಧನೆಗಳ ಮೇಲೆ ಒತ್ತಾಯದಿಂದ ತಾವು ಹೇರಬಯಸುವದಿಲ್ಲವೆಂದು ಶ್ರೀ ಅರವಿಂದರು ದಿಲೀಪಕುಮಾರರಿಗೆ ಬರೆದ ತಮ್ಮ ಒಂದು ಪತ್ರದಲ್ಲಿ ಹೇಳಿದ್ದಾರೆ. ಅವರು ಬರೆಯುತ್ತಾರೆ: '.........ಯೋಗಿಯು ತನ್ನ ಜೀವನದಲ್ಲಿ ಒಂದು ಬಗೆಯ ಕವಲೊಡೆಯುವ ಸ್ಥಾನಕ್ಕೆ ಬಂದು ತಲುಪುತ್ತಾನೆ;

ಅಲ್ಲಿ ಸ್ಥಿರನೂ ಶಾಂತನೂ ಆದ ಅಂತಃಸ್ಥ ಪುರುಷನು ತನ್ನೊಳಗಿನ ತಿಳಿಗೇಡಿ ಬಾಲಕನ ರಾಗಾವೇಗದತ್ತ ನಿರೀಕ್ಷಿಸುತ್ತಾನೆ; ಈ ಬಗೆಯು ಒಮ್ಮೆ ಬೇರೂರಿ ನಿಂತಿತೆಂದರೆ, ಆ ಅಂತಃಸ್ಥ ಪುರುಷನು ಆ ಮೇಲೆ ತನ್ನ ಸತ್ತ್ವದ ಬಹಿಃಪುರುಷನನ್ನು ಸಹ ದಮಿಸಲು ಮುಂಬರಿಯುತ್ತಾನೆ. ಆದರೆ ಈ ಬಹಿಃಪುರುಷನನ್ನು ಸಂಪೂರ್ಣವಾಗಿ ಅಂಕಿತದಲ್ಲಿ ತರಬೇಕಾದರೆ, ದೀರ್ಘವೂ ಉಗ್ರವೂ ಆದ ತಪಶ್ಚರಣವೆ ಅಗತ್ಯ. ಆದರೆ, ಸಿದ್ಧಯೋಗಿಯ ವಿಷಯದಲ್ಲಿ ಸಹ, ಸಮ್ಯಕ್ಪರಿಪೂರ್ಣತೆಯನ್ನು ನೀನು ಸದಾ ಅಪೇಕ್ಷಿಸಲಾರಿ. ತಮ್ಮ ಬಾಹ್ಯ ಪ್ರಕೃತಿಯ ಪರಿಪೂರ್ಣತೆಯನ್ನು ಲೆಕ್ಕಿಸದಂಥವರು ಸಹ ಅದೆಷ್ಟೊ ಜನಗಳಿದ್ದಾರೆ. ಹೀಗೆಂದಾಕ್ಷಣಕ್ಕೆ ಅವರ ಸಾಕ್ಷಾತ್ಕಾರವಾಗಲಿ ಅನುಭೂತಿಯಾಗಲಿ ನಿರಸನವಾಗಿ ಬಿಡಲಾರದು. ಹಾಗೆ ನೀನು ಒಂದು ವೇಳೆ ತಿಳಿದೆಯಾದರೆ, ಹಿಂದಿನ ಬಹುಸಂಖ್ಯಾಕ ಯೋಗಿಗಳನ್ನೂ ಪ್ರಾಚೀನ ಕಾಲದ ಋಷಿಗಳನ್ನೂ ರಂಗಸ್ಥಳದಿಂದ ಹೊರದೂಡಬೇಕಾಗಿ ಬರುವದು. ನನ್ನ ಯೋಗದ ಆದರ್ಶವು ಬೇರೆ ಬಗೆಯದೆಂಬುದನ್ನು ನಾನು ಒಪ್ಪುತ್ತೇನೆ. ಆದರೆ ನಾನು, ಇನ್ನುಳಿದ ಅಧ್ಯಾತ್ಮಿಕ ಜನಗಳನ್ನೂ ಅವರ ಸಿದ್ಧಿ-ಸಾಫಲ್ಯಗಳನ್ನೂ ವಿಧಿನಿಯಮಗಳನ್ನೂ ನನ್ನ ಆದರ್ಶದಿಂದ ಜಿಗಿದುಬಿಡಲಾರೆ. ನನ್ನ ಸ್ವಂತದ ಆದರ್ಶವಾದರೊ ಬಾಹ್ಯಪ್ರಕೃತಿಯನ್ನು ಪರಿವರ್ತನಗೊಳಿಸುವದಾಗಿದೆ; ಪರಿಪೂರ್ಣತೆಯೆಂಬುದು ಎಷ್ಟು ಪರಿಪೂರ್ಣವಾಗಲು ಸಾಧ್ಯವೊ ಅದಷ್ಟನ್ನೂ ಸಾಧಿಸುವದಾಗಿದೆ. ಆದರೆ ಅದನ್ನು ಕೈಗೂಡಿಸಿಕೊಂಡಿರದವರು ಅಥವಾ ಅದನ್ನು ಕೈಗೂಡಿಸಿಕೊಳ್ಳಲು ಲೆಕ್ಕಿಸದವರು, ಆಧ್ಯಾತ್ಮಿಕತೆಯನ್ನೆ ಹೊಂದಿರಲಿಲ್ಲವೆಂದು ನೀನು ಸಹಸಾ ಹೇಳಲಾರಿ. ಸುಂದರವಾದ ನಡೆವಳಿಯು—ನಯವಲ್ಲ, ನಯವು ಅದೆಷ್ಟೆ ಅಮೌಲ್ಯವಾಗಿದ್ದರೂ ಅದು ತೀರ ಮೇಗರೆಯದಾಗಿದೆ— ಖಂಡಿತವಾಗಿಯೂ ಪರಿಪೂರ್ಣ ಸಾಮರಸ್ಯದ ಅಂಗವಾಗಿದೆ. ಆದರೆ ಆ ಸೌಂದರ್ಯವು ಆಧ್ಯಾತ್ಮಿಕ ಐಕ್ಯಾನುಭವ - ಸಾಮರಸ್ಯಗಳಮೇಲೆ ಪ್ರತಿಷ್ಠಾನ ಪಡೆದು ಜೀವನದಲ್ಲಿ ಚಾಚಿ ಹಾಸುಹೊಕ್ಕಾಗಿ ಹರಿದಾಡಬೇಕು.'

ಶ್ರೀ ಅರವಿಂದರು ಯಾವಾಗ ಸಿದ್ಧಿಯನ್ನು ಹೊಂದಿದರೆಂಬುದನ್ನೂ ಅದರ ಸ್ವರೂಪವು ಯಾವ ಬಗೆಯದಾಗಿತ್ತೆಂಬುದನ್ನೂ ನಾವೀಗ ನೋಡುವಾ. ಆ ಮೇಲೆ ಸಿದ್ಧಿಯ ನಂತರದ ಅವರ ಸಾಧನೆಯ ಬಗೆಗೂ ಅದರ ತಾರ್ಕಿಕ ಉಪಪತ್ತಿಯ ಬಗೆಗೂ ಅಲ್ಲದೆ ಅದರ ವಿಶಿಷ್ಟ ಲಕ್ಷಣಗಳ ಬಗೆಗೂ ಆಲೋಚಿಸುವಾ.

ಶ್ರೀ ಅರವಿಂದರು ತಮ್ಮ ಸಾಧನೆಯನ್ನು ಯಾವ ಉದ್ದೇಶಗಳಿಗಾಗಿ ಪ್ರಾರಂಭಿಸಿದರು ಎಂಬ ಸಂಗತಿಯತ್ತ ನಾವು ಹೊರಳಿ ನೋಡಿ, ತರುವಾಯ ಏನೇನು ಮಾರ್ಪಾಟುಗಳು ಉಂಟಾದವು ಎಂಬುದನ್ನು ಗಮನಿಸಿದಾಗ ನಮ್ಮಲ್ಲಿ ಯಾವ ಭಾವನೆಯುಂಟಾಗುವದು? ಆಗ ನಮಗೆ ಎನಿಸುವದು, ಪ್ರಚಂಡ ಬೃಹದಾಕಾರ

ವನ್ನು ತಳೆದ ನೀರಧಾರೆಯೊಂದನ್ನು ನಾವು ನೋಡುತ್ತಿರುವೆವೆಂದು! ಹಿಗ್ಗುತ್ತ ಹೀಚುತ್ತ, ತನ್ನ ಖರಸ್ರೋತದ ದಾರಿಯಲ್ಲಿ ಬಂದ ಹೊಳೆ-ಹಳ್ಳ-ಕೊಳ್ಳಗಳನೆಲ್ಲ ಹೊಟ್ಟೆಯಲ್ಲಿಟ್ಟುಕೊಂಡು ನೆರೆಯೇರಿ, ತಡಿಮೀರಿ ಕಡಲತ್ತ ನುಗ್ಗುತ್ತ ಸಾಗಿದ ಮಹಾ ಪ್ರವಾಹವೊಂದನ್ನು ನೋಡಿದಂತೆ ನಮಗೆ ಭಾಸವಾಗುತ್ತದೆ. ಅದೇ ರೀತಿ ಯಾಗಿ ಶ್ರೀ ಅರವಿಂದರ ಸಾಧನಾಕ್ರಮವು ಕ್ರಮಕ್ರಮವಾಗಿ ಬೃಹದಾಕಾರದಲ್ಲಿ ಬೆಳೆದು ನಿಂತಿದೆ. ಎಲ್ಲ ಯೋಗಗಳೂ ಗೀತೆಯು ಪರಿಪೂರ್ಣತೆಗೆ ಮುಟ್ಟಿಸಿದ ಸಾಧನಾ ಪ್ರಯೋಗಗಳೂ ತಾಂತ್ರಿಕರ ಮಾರ್ಗವೂ ಅಲ್ಲದೆ, ಉನ್ನತೋನ್ನತ ಸ್ಥಿತಿಗೆ ಒಯ್ದು ಮುಟ್ಟಿಸಲೆಂದು ಏರ್ಪಟ್ಟ ಇನ್ನುಳಿದ ಎಲ್ಲ ಪಂಥಗಳೂ ಶ್ರೀ ಅರವಿಂದರ ಸಾಧನಾಕ್ರಮವನ್ನು ಪರಿಪುಷ್ಟಗೊಳಿಸಿವೆ. ಆದರೆ ಒಂದು ಸಂಗತಿ ಯನ್ನು ಸರ್ವಥಾ ಮರೆಯಲಾಗದು. ಅದೆಂದರೆ, ಶ್ರೀ ಅರವಿಂದರ ಸಾಧನೆಯು ಬೆಳೆದು ರೂಪಗೊಂಡ ರೀತಿಯು ಜೀವಂತವಾದುದು. ಕಟ್ಟಕಡೆಗೆ ಅದು 'ಪೂರ್ಣ ಯೋಗ'ದ ರೂಪ ತಾಳಿತು. ಜ್ಞಾನ, ಭಕ್ತಿ, ಕರ್ಮ ಇವು ಮೂರು 'ಪೂರ್ಣ ಯೋಗ'ದ ತ್ರಿವೇಣಿಗಳಾಗಿವೆ. ನಿತ್ಯಸತ್ಯವನ್ನು ಸಮಗ್ರವಾಗಿ ಸ್ವಾಧೀನಪಡಿಸಿ ಕೊಳ್ಳಲು ಎಸಗಿದ, ಪ್ರಗತಿಮಾರ್ಗದಲ್ಲಿ ಸಾಗಿದ, ಉತ್ಕಟ ಆತ್ಮಪಿಪಾಸೆಯುಳ್ಳ, ಓರ್ವ ಮನುಪುತ್ರನ ಯಾತ್ರೆಯೆಂದೆ ಅದಕ್ಕೆ ಹೇಳಬೇಕು. ಅವರ ಸಾಧನೆಯ ಕಾರ್ಯವು ಮಾರ್ಮಿಕವಾದುದು, ಅದರ ವ್ಯಾಪ್ತಿಯು ಸರ್ವಗ್ರಾಹಿಯಾದುದು, ಅದರ ಹೇತುವು ಆತ್ಯಂತಿಕವಾದುದು. ಅದೇ ಪ್ರಕಾರವಾಗಿ, ಅವರ ಸಾಧನೋ-ದ್ದೇಶಗಳ ಪರಿಧಿಯು ದಿನಕ್ಕೊಂದು ಅಂದದಲ್ಲಿ ಹರವಾಗುತ್ತ ಆಗುತ್ತ, ಬ್ರಹ್ಮ ತೇಜಸ್ಸನ್ನು ಮೈಗೂಡಿಸಿಕೊಳ್ಳುವದರಿಂದ ಮೊದಲುಮಾಡಿ, ಸಮಗ್ರ ಮಾನವಕುಲ ವನ್ನೆ ಅತಿಮಾನಸ ಸ್ತರಕ್ಕೇರಿಸಲು ಪರಾತ್ಪರ ಶಕ್ತಿಯನ್ನು ಪೃಥ್ವಿಗಿಳಿಸಿ ತರುವ ವರೆಗೂ ಹಬ್ಬಿಕೊಂಡಿತು. ಮೊಟ್ಟಮೊದಲು ಅವರು ವ್ಯಕ್ತಿಯನ್ನಷ್ಟೆ ಆಧ್ಯಾತ್ಮೀ-ಕರಿಸುವ ಉದ್ದೇಶದಿಂದ ಮೊದಲುಮಾಡಿದರು. ಅರ್ಥಾತ್ ಅದು ಸಹ ವಾಡಿಕೆಯ ಉದ್ದೇಶಕ್ಕಿಂತ ಹೆಚ್ಚಿನ ಉಚ್ಚ ಉದ್ದೇಶವೆ ಆಗಿತ್ತು. ಕಟ್ಟಕಡೆಗೆ, ಅವರು ಮಾನವಹೃದಯದಷ್ಟೆ ಗಭೀರವಾದ ಈ ಜಗದ್‌ಗೋಲಕದ ಜನಗಳಷ್ಟೆ ವಿಸ್ತೀರ್ಣ ವಾದ ಅಪರಂಪಾರವಾದ ಆದರ್ಶವೊಂದನ್ನು ಮುಂದಿರಿಸಿ ಮುಗಿಸಿದರು. ಅವರ ಸಿದ್ಧಿಯಾದರೂ ಸ್ವಾಭಾವಿಕವಾಗಿಯೆ ಅವರ ವಿಶಾಲ ಆದರ್ಶಗಳಿಗೂ ಸಾಧನೆಗೂ ಅನುಗುಣವಾಗಿಯೆ ಇದ್ದಿತು.

ಸಿದ್ಧಿಯ ವಾಡಿಕೆಯ ಅರ್ಥವೇನೆಂಬುದನ್ನು ನಾನಾಗಲೆ ದೀರ್ಘವಾಗಿ ಚರ್ಚಿ-ಸಿದ್ದೇನೆ. ಶ್ರೀ ಅರವಿಂದರು ಆ ಸಿದ್ಧಿಯನ್ನು ಯಾವಾಗ ಪಡೆದರು? ೨೪ನೆಯ ನವೆಂಬರ ೧೯೨೬ ರ ದಿನಾಂಕವೆ ಆ ಸಿದ್ಧಿಯ ದಿನವೆಂದು ಶ್ರೀ ಅರವಿಂದರು ಪರಿಗಣಿ-ಸಿದ್ದಾರೆ. ಆದರೆ ಅದು ಅತಿಮಾನಸಶಕ್ತಿಯ ಸಾಕ್ಷಾತ್ಕಾರಕ್ಕೆ ಸಂಬಂಧಿಸಿದೆ. ಲೋಕ-

ರೂಢಿಯ ಆತ್ಮಸಿದ್ಧಿಯ ಬಗೆಗೆ ಹೇಳುವದಾದರೆ, ಸೆರೆಮನೆಯಲ್ಲಿದ್ದಾಗಲೆ ಅವರಿಗೆ ಅದು ಒದಗಿತೆಂದು ಧಾರಾಳವಾಗಿ ಹೇಳಬಹುದು. ಅದಕ್ಕೂ ಮೊದಲು ಅವರಿಗೆ ಎಷ್ಟೊ ಆಧ್ಯಾತ್ಮಿಕ ಅನುಭವಗಳು ಬಂದುಹೋಗಿದ್ದವು. ಅದರಲ್ಲಿ ಕೆಲವು ಪ್ರಾಣಾಯಾಮ ಮಾಡುವವರಿಗೆಲ್ಲ ಚಿರಪರಿಚಿತವಾಗಿರುವ ಅನುಭವಗಳಾಗಿದ್ದರೆ, ಇನ್ನು ಕೆಲವು ಸ್ವತಃ ಅವರಿಗಷ್ಟೆ ಬಂದ ವಿಶಿಷ್ಟ ಅನುಭವಗಳಾಗಿದ್ದವು. ಈ ಎಲ್ಲ ಅನುಭವಗಳಲ್ಲಿ ಹೆಚ್ಚು ಅರ್ಥಪೂರ್ಣವಾದ ಅನುಭವವೆಂದರೆ, ೧೯೦೮ ರ ಜನೆವರಿಯಲ್ಲಿ ಅವರು ಬಡೋದೆಯಲ್ಲಿದ್ದಾಗ ಬಂದುದು. ಆಗ ಅವರ ಜೊತೆಗೆ ಲೇಲೆಯವರು ಇದ್ದರು. ತತ್ಪರಿಣಾಮವಾಗಿ, ಶ್ರೀ ಅರವಿಂದರ ಮನದಲ್ಲಿ ಅನಂತ ಶಾಂತತೆಯು ನೆಲೆಗೊಂಡಿತು. ಅಂದಿನಿಂದ ಮೊದಲ್ಗೊಂಡು ಕೊನೆತನಕವೂ ಅವರ ಸಾಧನೆಗೆ ಅವರ ಹೃದಯಸ್ಥನಾದ ಆತ್ಮಪುರುಷನೆ ಸಂಪೂರ್ಣವಾಗಿ ಮಾರ್ಗ-ದರ್ಶಕನಾಗಿದ್ದುಕೊಂಡಿದ್ದನು. ಅವರು ಸೆರೆಮನೆಯಲ್ಲಿದ್ದಾಗ ಘಟಿಸಿದ ಶ್ರೀಕೃಷ್ಣ ದರ್ಶನವು ರೋಮಾಂಚಿತವಾದುದಾಗಿತ್ತು ; ಅದುವೆ ಅವರ ಜೀವನದ ಪೂರ್ವಾರ್ಧದ ಪ್ರಯತ್ನಗಳಿಗೆಲ್ಲ ಅನುಜ್ಞಾಮುದ್ರೆಯನೊತ್ತಿತು. ಬಳಿಕ ಅವರು ಸೆರೆಮನೆಯಿಂದ ಬಿಡುಗಡೆಪಡೆದ ಮೇಲೆ, ಪರಮೇಶ್ವರನ ಕೃಪಾವರ್ಷಣಕ್ಕೆ ಪಾತ್ರನಾಗಿ ಅನುಗೃಹೀತನಾದ ಭಕ್ತನಂತೆ ಮಾತನಾಡಿದರು. ಅಂದಿನಿಂದ ಮುಂದೆ ಅವರು ಬಗೆದ ವಿಚಾರಗಳು, ಅವರು ಆಡಿದ ವಚನಗಳು, ಮಾಡಿದ ಗೈಮೆಗಳು ಇವೆಲ್ಲಕ್ಕೂ ಈ ಸಿದ್ಧಿಯ ಭದ್ರವಾದ ತಳಹದಿಯಿತ್ತು.

ಶ್ರೀ ಅರವಿಂದರ ವೈಯಕ್ತಿಕ ಆಧ್ಯಾತ್ಮಿಕ ಜೀವನವು ಇಲ್ಲಿ ತುರೀಯಾವಸ್ಥೆಯನ್ನೆ ತಲುಪಿತು. ಆದರೆ ಅವರು ಈ ಕೃತಾರ್ಥತೆಯಿಂದ ತೃಪ್ತರಾಗಲಿಲ್ಲ ವಾಡಿಕೆಯ ಸರ್ವಸಾಮಾನ್ಯ ಸಾಧಕವರ್ಗಕ್ಕೆ ಸೇರಿದವರಾಗಿದ್ದರೆ, ತಮ್ಮ ಶೇಷಾಯುಷ್ಯವನ್ನೆಲ್ಲ ಅವರು ಸ್ವಂತದ ಅನುಭವನಿರೂಪಣೆಯಲ್ಲಾಗಲಿ, ನೆರವು ಕೋರಿ ತಮ್ಮ ಬಳಿ ಸಾರಿದವರಿಗೆ ಬೆಳಕಿತ್ತು ದಾರಿ ತೋರುವದರಲ್ಲಾಗಲಿ ಕಳೆಯಬಹುದಾಗಿತ್ತು. ಆದರೆ ಸುದೈವದಿಂದ ಭಾರತಕ್ಕೋಸ್ಕರವಾಗಿಯೂ ಮಾನವಕುಲಕ್ಕೋಸ್ಕರವಾಗಿಯೂ ಅವರು ತಮ್ಮ ಸಲುವಾಗಿ ಅಮೋಘವಾದ ಯೋಜನೆಯೊಂದನ್ನು ರೂಪಿಸಿಕೊಂಡರು. ತನ್ಮೂಲಕ ತಮ್ಮ ವೈಯುಕ್ತಿಕ ಮೋಕ್ಷವನ್ನಷ್ಟೆ ಅಲ್ಲದೆ, ಇನ್ನು ಬೇರೆ ಆಧ್ಯಾತ್ಮಿಕ ಸತ್ಯಗಳನ್ನೂ ಮಾನವವಿಕಾಸಕ್ರಮದ ನಿಗೂಢ ರಹಸ್ಯಗಳನ್ನೂ ಹುಡುಕಿ ಹೊರತೆಗೆಯಬೇಕೆಂದು ಆಳದಾಳದಲ್ಲಿ ಮುಳುಗಲು ಉದ್ಯುಕ್ತರಾದರು.

ಎಲ್ಲ ಸಿದ್ಧರಲ್ಲಿರುವಂತೆ ಶ್ರೀ ಅರವಿಂದರಲ್ಲಿಯೂ ಆಧ್ಯಾತ್ಮಿಕ ಸಿದ್ಧಿಯ ಸಾರ-ಭೂತ ಆವಶ್ಯಕ ಲಕ್ಷಣಗಳೆಲ್ಲ ಒಡೆದು ಕಾಣುತಿದ್ದವು. ಆದರೆ ನಾವಿಲ್ಲಿ ಕೇವಲ ಅವರಿಗೆ ಮಾತ್ರ ಅನ್ವಯಿಸುವ ಕೆಲವೊಂದು ಹೆಚ್ಚಿನ ವಿಶಿಷ್ಟ ಲಕ್ಷಣಗಳನ್ನು ಕುರಿತು ವಿಚಾರಿಸುವಾ.

ಸಿದ್ಧಿಪ್ರಾಪ್ತಿಯ ಅನಂತರ ಶ್ರೀ ಅರವಿಂದರು ಕೇವಲ ಸಮರ್ಪಿತಜೀವನವನ್ನಷ್ಟೆ ಬಾಳಲಿಲ್ಲ; ಆದರೆ ತಮ್ಮ ಹೃತ್ಪೀಠದಲ್ಲಿ ಅಧಿಷ್ಠಿತನಾದ ಆ ಅಧಿದೇವನ ಆಜ್ಞಾನುವರ್ತಿಯಾಗಿ ಇದ್ದುಕೊಂಡಿದ್ದರು. ಭಾರತವೆಂದರೆ ಪ್ರತ್ಯಕ್ಷ ಮಾತೃಸ್ವರೂಪವೆಂದೆ ಗ್ರಹಿಸಿ ಗೌರವಿಸುತ್ತ ಬಂದಿದ್ದರೂ ಅವರ ಇಷ್ಟದೇವತೆಯು ಕೆಲವು ವರ್ಷಗಳ ವರೆಗೆ ಶ್ರೀಕೃಷ್ಣನಾಗಿದ್ದನು. 'ನನ್ನ ಸಂದೇಹ ನಿರಸನವಾಗಿ ಸಿದ್ಧನಾಗಿದ್ದೇನೆ; ನಿನ್ನ ಮಾತಿನಂತೆಯೆ ನಡೆಯುತ್ತೇನೆ' * ಎಂಬ ಗೀತೆಯಲ್ಲಿಯ ಅರ್ಜುನನ ವಚನಗಳು, ಅಲಿಪುರದ ಸೆರೆಮನೆಯಲ್ಲಿ ಸರ್ವೇಶ್ವರನಾದ ವಾಸುದೇವನ ದರ್ಶನಾನಂತರ ಶ್ರೀ ಅರವಿಂದರ ಬಾಯಲ್ಲಿ ಬಹಳ ಚೆನ್ನಾಗಿ ಒಪ್ಪುತ್ತವೆ.

ಯೋಗಾಭ್ಯಾಸದ ಸಹಜ ಫಲಗಳಾಗಿರುವ ಅತೀಂದ್ರಿಯ ಗುಪ್ತ ಶಕ್ತಿಗಳನ್ನು ಬಳಿಸುವ ವಿಷಯದಲ್ಲಿ ಅವರು ಅಷ್ಟೊಂದು ವಿಮುಖರಾಗಿರಲಿಲ್ಲ. ಅವನ್ನು ಅವರು ಬೇಕಾಗಿ ಬಳಿಸಹೋಗಿಲ್ಲವಾದರೂ ಸ್ವಾರ್ಥ ಅಥವಾ ಅಹಂಭಾವವಿಲ್ಲದ ಸಂದರ್ಭಗಳಲ್ಲಿ, ಕಲ್ಯಾಣದ ಉಪಾಯವೆಂದು ಯೋಗಿಯು ಅಂಥ ತನ್ನ ಯೌಗಿಕ ಶಕ್ತಿಯನ್ನು ಉಪಯೋಗಿಸುವದು ಯುಕ್ತವೆಂದೆ ಅವರ ಅಭಿಮತವಾಗಿತ್ತು. ತಮ್ಮ ಜೀವನದುದ್ದಕ್ಕೂ ಶಾರೀರಿಕ ನೋವುನಲಿವುಗಳ ಸಂವೇದನೆಯ ವಿಷಯದಲ್ಲಿ ಅವರು ಅಷ್ಟೊಂದು ಸೂಕ್ಷ್ಮರಾಗಿರಲಿಲ್ಲ. ಆದರೂ ಸೆರೆಮನೆಯಲ್ಲಿದ್ದಾಗ ಒಂದು ಕೆಟ್ಟ ಇರುವೆ ಕಡಿದು ಬಹಳ ಬಳಲಿದರು. ಅವರ ಸಿದ್ಧಿಯು ನೋವನ್ನು ತಾಳುವ ಅದ್ಭುತ ಶಕ್ತಿಯನ್ನು ಅವರಿಗೆ ತಂದು ಕೊಟ್ಟಿತ್ತು. ಅದೇಕೆ? ನೋವನ್ನೂ ಆನಂದದಿಂದ ಅವರು ಅನುಭವಿಸುತಿದ್ದರು. ದುಃಖವನ್ನೂ ಸುಖವಾಗಿ ಪಲ್ಲಟಿಸಬಲ್ಲ ಆತ್ಮಸತ್ತ್ವವು ಅದೆಷ್ಟು ಬಲವತ್ತರವಾಗಿರಬೇಡ! ಬೌದ್ಧಿಕ ಶಕ್ತಿಗಳನ್ನೂ ಕಾವ್ಯಸ್ಫೂರ್ತಿಯನ್ನೂ ಕುರಿತು ಅವರ ಮತವು ಇಂತಿದೆ: ಇವೆರಡೂ ದಿಸೆಗಳಲ್ಲಿ, ಯೋಗಸಾಧನೆ ಪ್ರಾಣಾಯಾಮಗಳ ಫಲವಾಗಿ ಆತ್ಮಸಿದ್ಧಿಯ ಪೂರ್ವದಲ್ಲಿಯೆ ತಾವು ತುಂಬ ಪ್ರಯೋಜನ ಪಡೆದೆವೆಂದು ಅವರು ಹೇಳಿದ್ದಾರೆ. ಸಿದ್ಧಿಯ ತರುವಾಯವಂತೂ ಅರ್ಥಾತ್, ಈ ಶಕ್ತಿಗಳು ಹೆಚ್ಚುಹೆಚ್ಚಾಗಿ ಪ್ರಕಟಗೊಂಡವು. 'ಆರ್ಯ'ಕ್ಕಾಗಿ ತಾವು ವಾಡಿಕೆಯ ರೀತಿಯಲ್ಲಿ ಬರೆಯಲಿಲ್ಲವೆಂದು ಅವರೆನ್ನುತ್ತಾರೆ. ಲೆಕ್ಕಣಿಕೆಯನ್ನೆತ್ತಿ ಹಾಳಿಗೆ ಹಚ್ಚಿ ಬಿಟ್ಟರಾಯ್ತು; ಬುದ್ಧಿಪುರಸ್ಸರವಾದ ತಮ್ಮ ಯಾವ ಪ್ರಯತ್ನವೂ ಇಲ್ಲದೆ, ಲೇಖನವು ತಾನಾಗಿ ಬರೆದು ಸಿದ್ಧವಾಗಿರುತಿತ್ತು. ವಿಚಾರ ಮಾಡುವ ಅವಶ್ಯಕತೆಯೆ ತಮಗೆ ಬೀಳುತಿರಲಿಲ್ಲವೆಂದೂ ವಿಚಾರವಿಲ್ಲದೆಯೆ

---

* ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್‌ಪ್ರಸಾದಾನ್ಮಯಾಚ್ಯುತ ।
ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥

ಅ. ೧೮, ಶ್ಲೋ. ೭೩

ವಿಷಯುಗಳು ತಮಗೆ ಗೋಚರಿಸುತಿದ್ದವಲ್ಲದೆ ಅನುಭವಕ್ಕೂ ಬರುತಿದ್ದವೆಂದೂ ಒಂದೆಡೆ ಅವರು ಉಲ್ಲೇಖಿಸಿದ್ದಾರೆ. 'ಆರ್ಯ' ದಲ್ಲಿಯ ಅವರ ಬರವಣಿಗೆ ಗಳಿಗೂ ಅದೇ ಬಗೆಯ ಅವರ ಇನ್ನಿತರ ಕ್ರಿಯೆಗಳಿಗೂ ಬಂಧನಹೀನ ಕರ್ಮ ವೆಂಬರ್ಥದಲ್ಲಿ 'ಮುಕ್ತಕರ್ಮ' ವೆಂದು ಹೇಳಿದರೆ ಅದು ಯಥಾರ್ಥವೆ ಸರಿ. ಅವರ ನೀತಿಮತ್ತೆಯ ವಿಷಯಕ್ಕಂತೂ ಹೆಚ್ಚಿಗೆ ಹೇಳುವದೆ ಬೇಡ. ಈ ವಿಧದ ಸಿದ್ಧ ಪುರುಷನು, ಬೇರೆ ಜನಗಳ ನೀತಿ ಶೀಲಗಳ ವಿಷಯದಲ್ಲಿ ಆದರ್ಶಪ್ರಾಯನಾಗಿರು ವನು. ಸಾಮಾನ್ಯತಃ ರಾಜಕೀಯ ರಂಗದಲ್ಲಿ ಈ ನೀತಿ ಶೀಲಗಳ ಉಲ್ಲಂಘನ ವನ್ನು ಜನರು ತಾಳಿಕೊಳ್ಳುತ್ತಾರೆ. ಅದೊಂದು ಮುತ್ಸದ್ದಿತನದ ಲಕ್ಷಣವೆಂದೆ ಗಣಿಸುತ್ತಾರೆ. ಇಂತಹ ರಾಜಕೀಯ ರಂಗದಲ್ಲಿ ಸಹ ಶ್ರೀ ಅರವಿಂದರ ನೈತಿಕ ನಿಲುವು ನಡೆವಳಿಗಳು ಎಂದೆಂದಿಗೂ ಸಾರ್ವಜನಿಕ ಸಚ್ಚಾರಿತ್ರ್ಯದ ಸರ್ವ ಶ್ರೇಷ್ಠ ಮಾದರಿಗಳಾಗಿ ಮೆರೆಯುವವು. ಅವರ ಆಧ್ಯಾತ್ಮಿಕ ಸಿದ್ಧಿಯ ವಿಶಿಷ್ಟ ಲಕ್ಷಣಗಳನ್ನು ನಾವಾಗಲೆ ಅರಿತುಕೊಂಡಿದ್ದೇವೆ. ಅವರ ದೃಷ್ಟಿಯಲ್ಲಿ ಸ್ಥೂಲಕ್ಕಿಂತ ಸ್ಥೂಲವಾದ ಜಡತತ್ತ್ವವನ್ನೊಳಗೊಂಡು ಎಲ್ಲವೂ ಆತ್ಮತತ್ತ್ವವೆ ಆಗಿತ್ತು. ತನ್ನ ದೊಂದು ಸ್ವಂತದ ಕರ್ಮಗತಿ ಪ್ರಾರಬ್ಧಗಳಿಂದ ವ್ಯಕ್ತಿಯು ಕೂಡಿಕೊಂಡಿದ್ದಾ- ಕ್ಷಣಕ್ಕೆ ಆತನ ಜೀವಾತ್ಮವು ತನ್ನ ಮೂಲ ಉಗಮಸ್ಥಾನದ ಸಂಬಂಧ ತಪ್ಪಿದ ಒಂದು ಪ್ರತ್ಯೇಕ ಜೀವಾತ್ಮವಾಗಿರಲಾರದು. ಏಕೆಂದರೆ ಅದೂ ಒಂದು ಪರಮಾತ್ಮನ ಆವಿಷ್ಕಾರವೆ ಆಗಿಲ್ಲವೆ? ಆ ಪರಮಾತ್ಮನ ಸತ್ತ್ವವನ್ನೆ ಹೀರಿಕೊಂಡು, ಆತನ ಈ ವಿಶ್ವತಾಂಡವದಲ್ಲಿ ತಾನೂ ತನ್ನ ಸಣ್ಣ ಪಾತ್ರವನ್ನು ಆಡಿತೋರಿಸುವದಿಲ್ಲವೆ? ಆದುದರಿಂದ, ವಿಕಾಸಕ್ರಮದಲ್ಲಿ ಪರಮಾತ್ಮ-ಜೀವಾತ್ಮರ ತಾದಾತ್ಮ್ಯವು ಅನಿವಾರ್ಯವೆ ಆಗಿತ್ತು. ಅದನ್ನು ತ್ವರೆಗೊಳಿಸುವದೆ ಯೋಗದ ಕಾರ್ಯವಾಗಿದೆ. ಅವರ ಆತ್ಮವು ನಿತ್ಯವೂ ಪುರುಷೋತ್ತಮನೊಡನೆ ಚ್ಯುತಿಯಿಲ್ಲದ ತಾದಾತ್ಮ್ಯವನ್ನು ಪಡೆದಿರುತಿತ್ತು; ಈ ಬಗೆಯ ನಿಲುವು ಶ್ರೀ ಅರವಿಂದರದು. ಆ ಪುರುಷೋತ್ತಮನಾದರೊ ಸರ್ವಾಧಾರನು. ಅವನಲ್ಲಿಯೆ ಚೇತನಾಚೇತನಗಳೂ ಸತ್ತ್ವ-ಸಂಭೂತಿಗಳೂ ಹೊಂದುಗೂಡಿಕೊಂಡಿರುವವು. ಗೀತೆಯ ಪ್ರಕಾರ* ಪುರುಷೋತ್ತಮನೆಂಬವನು ನಿಂತು ನೋಡುವ ಉಪದ್ರಷ್ಟಾರನೂ ಒಪ್ಪಿಗೆ ಕೊಡುವ ಅನುಮಂತಾರನೂ ಆಧಾರವೀಯುವ ಭರ್ತಾರನೂ ಅನುಭವಿಸುವ ಭೋಕ್ತಾರನೂ ಎಲ್ಲವನ್ನು ಆಳುವ ಮಹೇಶ್ವರನೂ ಆಗಿರುವನು. ಆಧ್ಯಾತ್ಮಿಕತೆಯ ವಿಷಯಕ್ಕೂ ಆಧ್ಯಾತ್ಮಿಕ ಜೀವನದ

---

* ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।
ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥

ಅ. ೧೩, ಶ್ಲೋ. ೨೨

ವಿಷಯಕ್ಕೂ ಶ್ರೀ ಅರವಿಂದರ ವಿಚಾರಗಳು ಅತ್ಯಂತ ಓಜಸ್ವಿಯಾಗಿವೆ. ಅವರ ಪೂರ್ಣ ವಿಕಸಿತ ಮನುಕುಲದ ಆ ದರ್ಶನವೆ ಅವರನ್ನು ಸಿದ್ಧಿಯ ತರುವಾಯದ ಸಾಧನೆಗೆ ಅಣಿಗೊಳಿಸಿತು; ಅದೇ ಆ ದರ್ಶನಮೂಲಕವಾಗಿಯೆ ಮಾನವಜೀವನವನ್ನು ದಿವ್ಯವಾಗಿಸುವ ಉಪಾಯುಗಳನ್ನು ಶೋಧಿಸುವ ಪ್ರಚಂಡ ಪ್ರಯತ್ನಕ್ಕೆ ಅವರು ಕಟಿಬದ್ಧರಾದರು.

ಸಿದ್ಧಿಯ ತರುವಾಯದಲ್ಲಿ ಸಾಧಕನು ತನಗೆ ಬೇಕಾದ ಒಂದು ನಿಲುವೆಯನ್ನು ಆಯ್ದುಕೊಳ್ಳಬಹುದೆಂಬ ಸಂಗತಿಯನ್ನು ಈ ಮುನ್ನ ನಾನು ನಿರೂಪಿಸಿರುವೆನಷ್ಟೆ? ಆದರೆ ಅವನ ಈ ಆಯ್ಕೆಯು ಯಾವುದಿರಬೇಕೆಂಬ ಬಗೆಗೆ ಹೊರಗಿನವರ ಯಾವುದೆ ಬಗೆಯ ಒತ್ತಾಯ ಸರ್ವಥಾ ನಡೆಯಲಾರದು; ಇದನ್ನೂ ಹೇಳಿರುವೆ. ಅಂತೂ ಶ್ರೀ ಅರವಿಂದರು, ಅನೇಕಾನೇಕ ಕಾರಣಗಳಿಂದಾಗಿ ತಾವಾಗಿಯೆ ಅಷ್ಟೊಂದು ಪ್ರಯಾಸಕರವಾದ ಮಾರ್ಗದಲ್ಲಿ ಕಾಲಿಕ್ಕಿದರು. ಅವರು ಈ ಬಗೆಯ ದಾರಿಯನ್ನೆ ಏಕೆ ಆಯ್ದುಕೊಂಡರೆಂಬುದಕ್ಕೆ ಕಾರಣ ಕೊಡುವ ಉದ್ದೇಶವೇನೂ ನನ್ನದಿಲ್ಲ; ನಡೆದ ಸಂಗತಿಯನ್ನು ಸ್ಪಷ್ಟೀಕರಿಸುವದಕ್ಕಾಗಿ ಮಾತ್ರ ಈ ಮಾತನ್ನು ಜೊಟ್ಟೆಟ್ಟು ತೋರಿಸಿರುವೆನು. ಇದೇ ಉಸುರಿನಲ್ಲಿ, ವಿರೋಧಾಭಾಸವೆನಿಸುವ ಇನ್ನೊಂದು ಮಾತನ್ನೂ ಹೇಳಲೆ? ಶ್ರೀ ಅರವಿಂದರ ಆ ಆಯ್ಕೆಯು ಅವರದಾಗಿರಲಿಲ್ಲ; ಆದರೆ, ಇದುವರೆಗೆ ಅವರಿಗೆ ದಾರಿದೋರಿದ ಪ್ರಭುವಾದ ಅದೇ ಆ ಅಂತರ್ಯಾಮಿಯು ಅವರಿಗಾಗಿ ಆ ಆಯ್ಕೆಯನ್ನು ಮಾಡಿಕೊಟ್ಟನು. 'ಅತಿಮಾನಸದ ಆವಾಹನವೆ ನಿಮ್ಮ ನಿಜವಾದ ಕಾರ್ಯವಾಗಿರುವದೇ?' ಎಂದು ಕೇಳಿದ ಒಂದು ನೇರವಾದ ಪ್ರಶ್ನೆಗೆ ('Among the Great' by *Dilip Kumar Roy*), 'ಹೌದು ಅದಕ್ಕಾಗಿಯೇ ನಾನು ಬಂದಿದ್ದೇನೆ' ಎಂಬುದಾಗಿ ಉತ್ತರ ಹೇಳಲು ಪ್ರೇರಣೆ ಕೊಟ್ಟವನು ಕೂಡ ಆ ಅಂತರ್ಯಾಮಿಯೆ.

ಈ ಜಡಮಯ ಜಗತ್ತು ಕೆಟ್ಟದೆಂದೂ ಅನನುಕೂಲವೆಂದೂ ವಿಘ್ನಮಯವೆಂದೂ ಶ್ರೀ ಅರವಿಂದರು ಅಧ್ಯಾತ್ಮವನ್ನು ಆಶ್ರಯಿಸಿದವರಲ್ಲ; ಈ ಬಗೆಯ ವಿಚಾರವು ಅವರ ಪ್ರಕೃತಿಗೆ ಸರ್ವಥಾ ವಿರುದ್ಧವಾದುದು. ಅಧ್ಯಾತ್ಮಲೋಕವನ್ನಷ್ಟೆ ಗೆಲ್ಲುವದು ಅವರ ಜೀವನದ ತುರೀಯಗಮ್ಯವಾಗಿರಲಿಲ್ಲ; ಅವರ ಅಭಿಪ್ರಾಯದಲ್ಲಿ, ಈ ಜಡ ಜಗತ್ತು ಘನ-ನಿಬಿಡ ಸುಪ್ತಿಯಲ್ಲಿ ನಿಮಗ್ನವಾದ ಚೇತನವೆ ಆಗಿದೆ. ಆದಕಾರಣ, ಮೇಲಿನಿಂದ ಮುಗಿಬಿದ್ದು ಈ ಜಡ ಜಗತ್ತನ್ನು ಆವರಿಸಿ ಅದರ ಸುಪ್ತ ಚೇತನವನ್ನು ಜಾಗ್ರತಗೊಳಿಸುವದೆ ಶ್ರೀ ಅರವಿಂದರ ಆತ್ಯಂತಿಕ ಧ್ಯೇಯವಾಗಿತ್ತು. ಅವರು ಆತ್ಮಲೋಕದ ನಿವಾಸಿಯಾಗಿದ್ದಂತೆ ಈ ಜಡಜಗತ್ತಿನ ನಿವಾಸಿಯೂ ಆಗಿದ್ದರು; ಆದರೆ ಭೇದವಿಷ್ಟೆ: ಆತ್ಮಲೋಕವೆ ಆದಿಯೆಂದೂ ಮೂಲಭೂತವಾದುದೆಂದೂ ಜಡಜಗತ್ತು ತಜ್ಜನ್ಯವಾದುದೆಂದೂ ಅನುಭವ

ಮೂಲಕವಾಗಿ ಅರಿತಿದ್ದರು. ತುಟ್ಟತುದಿಗೆ ಪುರುಷೋತ್ತಮನ ಅಧಿಷ್ಠಾನವಿರಲು ಸದ್ವಸ್ತುವು ಸತ್ತ್ವ-ಸಂಭೂತಿ ಎಂಬ ದ್ವಿಮುಖ ಸ್ವರೂಪವನ್ನು ತಳೆದಿದೆ. ಸಮಗ್ರ ಸದ್ವಸ್ತುವಿನ ಈ ಸಮ್ಯಗ್ದರ್ಶನವೆ ಶ್ರೀ ಅರವಿಂದರಲ್ಲಿ ರಾಜಕಾರಣ, ವಿಜ್ಞಾನ ಹಾಗು ಈ ಜಡಜಗತ್ತು ಇವೇ ಮೊದಲಾದವುಗಳ ವಿಷಯಕ್ಕೆ ಅಧ್ಯಾತ್ಮಿಕತೆಯಷ್ಟೆ ಆಳವಾದ ಅಭಿರುಚಿಯನ್ನು ಉಂಟುಮಾಡಿತು. ಮುಖ್ಯತಃ ರಾಜಕಾರಣದ ಸಲು-ವಾಗಿ ಆಧ್ಯಾತ್ಮಿಕತೆಯ ಭದ್ರತರ ತಳಹದಿಯನ್ನು ಹಾಕಿಕೊಳ್ಳುವದು ಅಗತ್ಯವೆಂದು ತೋರಿದಾಗಲೆ ಅವರು ಪಾಂಡಿಚೇರಿಗೆ ಹೋದರು. ಆದರೆ ಕಾಲಕ್ರಮದಲ್ಲಿ ರಾಜ-ಕಾರಣವನ್ನು ಬಿಟ್ಟುಕೊಟ್ಟು ಮತ್ತಷ್ಟು ಉಚ್ಚತರ ಸಾಧನೆಯನ್ನು ತಾವು ಗೈಯ ತಕ್ಕುದೆಂದು ಅಂತರಾತ್ಮನ ಆದೇಶ ಬಂದಿತು, ಆ ಮಾತು ಬೇರೆ. ಆಗ ಕೂಡ ನಿರ್ಗುಣ ಬ್ರಹ್ಮನಲ್ಲಿ ತಲ್ಲೀನವಾಗಬೇಕೆಂದು ಅವರು ಸಹಸಾ ಪ್ರಯತ್ನಿಸಲಿಲ್ಲ. ಆದರೆ ಅವರು ಪ್ರಯಾಸಪಟ್ಟುದು, ಹಿಮಾಲಯದ ಶಿಖರಪ್ರದೇಶದಿಂದ ಆಧ್ಯಾತ್ಮಿಕ ಶಕ್ತಿಯ ಗಂಗಾಪ್ರವಾಹವನ್ನು ಪೃಥ್ವೀತಲಕ್ಕೆ ತಂದು ಎತ್ತೆತ್ತಲೂ ಹರಿಯಿಸಿ ಈ ನೆಲದ ಹುಲುಸನ್ನು ಹೆಚ್ಚಿಸುವದಕ್ಕಾಗಿ. ಮುಕ್ತಿ ಎಂದರೆ ಆತ್ಮನ ಬಿಡುಗಡೆ ಇದುವೆ ವಿಕಾಸಕ್ರಮದ ಮುಗಿತಾಯವಲ್ಲವೆಂದೂ ಭುಕ್ತಿ ಎಂದರೆ ಈಶ್ವರಲೀಲೆಯ ಸುಖಾ ಸ್ವಾದವೆ ವಿಕಾಸಕ್ರಮದ ಅಂತಿಮ ಫಲವೆಂದೂ ಅವರ ನಿಶ್ಚಿತ ಗ್ರಹಿಕೆಯಾಗಿತ್ತು. ಈ ಭುಕ್ತಿಯ ಪ್ರಾಪ್ತಿಯಾದರೊ ಉನ್ನಯನಕ್ಕೆ ಮುಟ್ಟಿಸಬಲ್ಲ, ಪರಿವರ್ತನಗೊಳಿಸ ಬಲ್ಲ, ಬಲದಾನ ಮಾಡಬಲ್ಲ ತ್ರಿವಿಧ ಕ್ಷಮತೆಯಿಂದ ಕೂಡಿದ ಆಧ್ಯಾತ್ಮಿಕ ಶಕ್ತಿಯನ್ನು ಹಸ್ತಗತ ಮಾಡಿಕೊಳ್ಳುವದರಿಂದಲೆ ಆಗಬೇಕಾದುದು. ವಿಕಾಸಕ್ರಮದ ಅವರ ರೇಖಾಗತಿಯು ಸಗುಣದಿಂದ ಒಮ್ಮೆಲೆ ನೇರವಾಗಿ ನಿರ್ಗುಣಕ್ಕೆ ಏರುವದನ್ನು ಚಿತ್ರಿ ಸುವದಿಲ್ಲ. ನಿರ್ಗುಣದಿಂದ ಸಗುಣಕ್ಕೆ ಕೆಳಗಿಳಿದು, ಮತ್ತೆ ನಿರ್ಗುಣಕ್ಕೇರಿ, ಆ ಮೇಲೆ ಮತ್ತೆ ಕೆಳಗಿಳಿದು ಸಗುಣವನ್ನು ಸೇರಿ, ಕಟ್ಟಕಡೆಗೆ ಮತ್ತೆ ನಿರ್ಗುಣಕ್ಕೆ ಕರೆ-ದೊಯ್ಯುವ ಉದ್ಯಮವದು. ಕುಂಡಲಾಕಾರವಾದ, ಆದರೆ ಅನಂತವಾಗಿ ನಾಗ ಮುರಿಗೆಯ ಹಾಗೆ ಸುಳಿಸುಳಿಯಾಗಿ ಸಾಗಿದ, ನಿವರ್ತನೆ-ವಿವರ್ತನೆಗಳ (Involution-Evolution) ಗತಿಶೀಲ ಲೀಲೆಯ ಚಿತ್ರವಿದಾಗಿದೆ. ಅವಿರತವಾಗಿ ನಡೆದಿರುವ ಈ ವಿವರ್ತನೆಯು ಅಥವಾ ವಿಕಾಸದ ಸೃಜನಕ್ರಿಯೆಗೆ ವಿರಾಮವೆಂಬುದೆ ಇಲ್ಲ; ಅದು ಒಂದು ಅರೆಗಳಿಗೆ ಕೂಡ ಸ್ಥಗಿತವಾಗಿ ನಿಷ್ಕ್ರಿಯವಾಗಲಾರದು. ಹೀಗೆ, ಸೃಜನ ಶೀಲ, ಗತಿಶೀಲ ವಿಕಾಸವು ಸತತ ಸಾಗಿರುವದರಿಂದಲೂ ಅನಂತತೆಯೆ ಅದರ ಸೀಮಾವ್ಯಾಪ್ತಿಯಾಗಿ ಇದ್ದುದರಿಂದಲೂ ನವೋನವ ಸತ್ಯಗಳ ಶೋಧಕ್ಕೆ ಹಾಗು ನವೋನವ ಅನುಭವಪ್ರಾಪ್ತಿಗೆ ಅನಂತಾವಕಾಶವುಂಟು. ಶ್ರೀ ಅರವಿಂದರು ಹಳೆಯದನ್ನು ಬಳಿಸಿಕೊಂಡಿದ್ದಾರೆ; ಸದ್ವಸ್ತುವನ್ನು ಕಣ್ಣಾರೆ ಕಂಡು ತಪ್ಪರಿಯದ ನಿಚ್ಚಳದ ನುಡಿಗಳಲ್ಲಿ ಅದನ್ನು ಬಣ್ಣಿಸಿದ ಋಷಿಗಳ ಬಗೆಗೂ ದ್ರಷ್ಟಾರರ ಬಗೆಗೂ

ಅವರಲ್ಲಿ ಘನವಾದ ಗೌರವಭಾವವಿತ್ತು. ಹೀಗೆಂದಾಕ್ಷಣಕ್ಕೆ ಅನ್ವೇಷಣವೆಲ್ಲ ಅಲ್ಲಿಗೆ ಮುಗಿದುಹೋಯಿತೆಂದು ಅರ್ಥಮಾಡಿಕೊಳ್ಳಬೇಕಾಗಿಲ್ಲ. ತದ್ವಿಪರೀತವಾಗಿ, ಉಜ್ವಲ ವಾದ ಭೂತಕಾಲವು ನಮ್ಮನ್ನು ಅದಕ್ಕೂ ಉಜ್ವಲವಾದ ಭವಿಷ್ಯಕ್ಕೆ ಕರೆದೊಯ್ಯ ತಕ್ಕುದೆಂದು ಅವರು ಒಡನುಡಿದಿದ್ದಾರೆ. ಈ ಬಗೆಯ ಹಿನ್ನೆಲೆಯಲ್ಲಿ ಶ್ರೀ ಅರವಿಂದರು ಹೊಸ ಹೊಸ ಉನ್ನತೋನ್ನತ ಸೀಮೆಗಳನ್ನು ಮುಟ್ಟಿದರು, ನವೋನವ ಸಾಹಸಗಳಿಗೆ ಕೈಯಿಕ್ಕಿದರು; ಜೊತೆಜೊತೆಗೆ, ದಾರಿಗುಂಟ ಮಾನವನ ವಿಕಾಸಲೋಕದಲ್ಲಿ ತಾಂಡವವಾಡುತಿದ್ದ ಸಮಾನಬಲದ ಆಸುರೀಶಕ್ತಿಗಳೊಡನೆ ಅವರು ಘನಘೋರ ವಾಗಿ ಹೋರಾಡಲೂ ಬೇಕಾಯಿತು.

## ೧೨ ಶ್ರೀ ಅರವಿಂದರ ಉಪದೇಶ

ಶ್ರೀ ಅರವಿಂದರ ಉಪದೇಶವು ಅವರ ಸತ್ತ್ವಸಂಭೂತಿಗಳೊಳಗಿಂದಲೂ ಅವರ ಜೀವನದೊಳಗಿಂದಲೂ ಅವರ ಅನುಭೂತಿ-ಕೃತಿಗಳೊಳಗಿಂದಲೂ ಉದಿಸಿ ಬಂದಿದೆ. ಒಂದು ಜ್ಯೋತಿರ್ಮಂಡಲದಿಂದ ಚಿಮ್ಮಿಬರುವ ಪ್ರಕಾಶದಂತೆ ಅದು ಚಿಮ್ಮಿ ಬಂತು; ಸಹಜ ಸ್ಫೂರ್ತಿಯಿಂದಲೆ ಅದು ಹೊಮ್ಮಿ ಬಂತು. ಯಾವ ಕಾರ್ಯ ಗೈಯಲು ಅವರಿಗೆ ದೈವೀ ಪ್ರೇರಣೆಯಾಯಿತೊ ಅಂಥ ಕಾರ್ಯದ ಒಂದು ಅಂಗವೆ ಈ ಉಪದೇಶ. ಭಾರತವು ತನ್ನ ಅಮೃತೋಪದೇಶವನ್ನು ಜಗತ್ತಿಗೆ ನೀಡಲು ಹಲವು ಜನ ಸಮರ್ಥ ವೇದಾಂತಿಗಳಿಗೂ ಭಾಷ್ಯಕಾರರಿಗೂ ಕಳೆದ ಕೆಲವು ಶತಕ ಗಳಲ್ಲಿ ಜನ್ಮವಿತ್ತಿದೆ. ಅಂಥವರಲ್ಲಿ ಶ್ರೀ ಅರವಿಂದರು ಕಾಲಕ್ರಮದಲ್ಲಿ ಕೊನೆಯವ ರಾಗಿ ಮೊನ್ನೆಮೊನ್ನೆಯೆ ಕಣ್ಮರೆಯಾಗಿರುವರು. ಅವರ ಉಪದೇಶವು ಅತ್ಯಂತ ವ್ಯಾಪಕವೂ ಅತ್ಯಂತ ಪ್ರಜ್ವಾಲಿತವೂ ಆಗಿರುವದಲ್ಲದೆ ಸೂಕ್ಷ್ಮ ವಿವರಗಳಿಂದಲೂ ಕೂಡಿದೆ. ಹಳೆಯ ತತ್ತ್ವಗಳ ಹೊಸ ಹೇಳಿಕೆಯೆನ್ನಬೇಕೆ— ಪ್ರಾಚೀನ ಗ್ರಂಥ ಗಳಿಗೆ ಬರೆದ ನೂತನ ಭಾಷ್ಯವೆನ್ನಬೇಕೆ? ಇವೆರಡಕ್ಕಿಂತಲೂ ಅದು ತೀರ ಹೆಚ್ಚಿನ ದೇನೊ ಇದೆ. ಅವರು ಹೆಚ್ಚಾಗಿ ಋಷಿಗಳ ಪರಂಪರೆಗೆ ಸೇರಿದ ದ್ರಷ್ಟಾರರೆ ಹೊರತು ಕೇವಲ ಸ್ಮೃತಿಕಾರರಾಗಲಿ ಭಾಷ್ಯಕಾರರಾಗಲಿ ಅಲ್ಲವೆ ಅಲ್ಲ. ಅವರ ದರ್ಶನವು ವಿಶಾಲವೂ ಗಭೀರವೂ ಆಗಿದ್ದು ಅದರ ಕ್ಷೇತ್ರವು ಮಾನವೀ ಚೇತನದ ಕ್ಷೇತ್ರವೆ ಆಗಿದೆ. ಅವರ ಆರಂಭದ ಶಿಕ್ಷಣವೂ ಜೀವನವೂ ಪಶ್ಚಿಮದಲ್ಲಿಯೆ ನಡೆದುದರಿಂದ ಆಧುನಿಕ ವೈಜ್ಞಾನಿಕ ಮನದ ನೆಲೆಯನ್ನೂ ಅವರು ಕಂಡುಕೊಂಡರು. ಪಶ್ಚಿಮದ ಸಂಸ್ಕೃತಿಯ ನಿಕಟ ಸಂಪರ್ಕವು ಅದರ ಕೇಂದ್ರಸ್ಥಾನದಲ್ಲಿಯೆ ಅವರಿಗೆ ಒದಗಿತು.

ಅವರಲ್ಲಿ ಜನ್ಮತಃ ಸುಪ್ತವಾಗಿದ್ದ ಆಧ್ಯಾತ್ಮಿಕ ಪ್ರವೃತ್ತಿಯು ಭಾರತಕ್ಕೆ ಅವರು ಮರಳಿದೊಡನೆ ಜಾಗ್ರತವಾಗಿ ಅವರನ್ನು ಸಹಜವಾಗಿಯೆ ವೇದಾಂತಯೋಗಗಳಲ್ಲಿ ಮಗ್ನರನ್ನಾಗಿ ಮಾಡಿಬಿಟ್ಟಿತು. ನೀರಿನಲ್ಲಿಯ ಮೀನದಂತೆ ಇವುಗಳಲ್ಲಿ ಅವರು ತನ್ಮಯರಾದರು. ಪೂರ್ವಪಶ್ಚಿಮಗಳಲ್ಲಿಯೂ ಜೀವ-ಜಡಗಳಲ್ಲಿಯೂ ವೇದಾಂತ-ವಿಜ್ಞಾನಗಳಲ್ಲಿಯೂ ಅವರಿಗೆ ಯಾವದೇ ಬಗೆಯ ಸಂಘರ್ಷಣೆಯಾಗಲಿ ವಿಸಂಗತಿಯಾಗಲಿ ತೋರಿಬರಲಿಲ್ಲವಿಷ್ಟೆ ಅಲ್ಲ, ಅವುಗಳಲ್ಲಿರುವ ಸಮನ್ವಯವನ್ನು ಅವರು ಪ್ರಸ್ಥಾಪಿಸಿದರು. ಇದಲ್ಲದೆ ಅವರ ತತ್ತ್ವಜ್ಞಾನವೆಂದರೆ ವೇದಾಂತದ ವಿವಿಧ ಶಾಖೆಗಳ ಸಮನ್ವಯುವೂ ಆಗಿದೆ. ಅವರು ಇಂಗ್ಲಿಷ್ ಭಾಷೆಯನ್ನು ತಮ್ಮ ವಿಚಾರಗಳ ವಾಹನವನ್ನಾಗಿ ಮಾಡಿಕೊಂಡು ಬರೆಯುವದನೆಲ್ಲ ಅದೇ ಭಾಷೆಯಲ್ಲಿ ಬರೆದರು; ಈ ಮಾತಿಗೆ ಅವರಲ್ಲಿರುವ ಉತ್ಕಟ ರಾಷ್ಟ್ರಪ್ರೇಮವಾಗಲಿ ಭಾರತಭೂಮಾತೆಯ ಬಗೆಗಿರುವ ಭಕ್ತಿಯ ಪೂಜ್ಯಭಾವವಾಗಲಿ ಅಡ್ಡಬರಲಿಲ್ಲ. ಭಾರತೀಯ ಭಾವಗಳನ್ನೂ ತತ್ತ್ವಜ್ಞಾನವನ್ನೂ ವ್ಯಕ್ತಗೊಳಿಸಬೇಕಾದರೆ ಸಂಸ್ಕೃತದಲ್ಲಾಗಲಿ ಇತರ ಯಾವದೆ ದೇಶೀಯ ಭಾಷೆಯಲ್ಲಾಗಲಿ ಹೆಚ್ಚು ಸುಲಭವಾಗುವದು ಸಹಜವೇನೊ ಸರಿ. ಆದರೆ ಇಂಥವನ್ನೆ ಇಂಗ್ಲಿಷ್ ಭಾಷೆಯ ಮುಖಾಂತರ ಆಧುನಿಕ ಸುಶಿಕ್ಷಿತ ಮನಕ್ಕೆ ಸುಬೋಧವಾಗುವಂತೆ ತಿಳಿಸಿಹೇಳುವ ಉದ್ದೇಶದಿಂದ ಅಂತರ್-ರಾಷ್ಟ್ರೀಯ ಮಾಧ್ಯಮವಾದ ಆ ಭಾಷೆಯನ್ನೆ ಅವರು ಆರಿಸಿಕೊಂಡು ಅದರ ಪದ-ರಚನೆಯಲ್ಲಿಯೆ ತಕ್ಕ ಪಲ್ಲಟಗಳನ್ನು ಮಾಡಿಕೊಂಡು ಆ ವಿದೇಶೀಯ ಭಾಷೆ-ಯನ್ನೂ ತಮ್ಮ ಹದಕ್ಕೆ ಇಳಿಸಿಕೊಂಡರು. ಅವರ ಎಲ್ಲ ಲೇಖನಗಳಲ್ಲಿಯೂ ಅವರ ದರ್ಶನದ ಹಾಗು ಸಮಗ್ರ ದೃಷ್ಟಿಯ ಮುದ್ರೆಯು ಅತ್ಯಂತ ಸ್ಫುಟವಾಗಿದ್ದು ಅವರ ತೀಕ್ಷ್ಣಶೈಲಿಯು ಎಲ್ಲಿ ಬೇಕಾದಲ್ಲಿ ಎದ್ದುಕಾಣುವದು. ಅವರು ಬರೆದುದು ಅಪಾರವಾಗಿದೆ, ವಿವಿಧ ವಿಷಯಗಳನ್ನು ಕುರಿತೂ ಅವರು ಬರೆದಿದ್ದಾರೆ; ಅತ್ಯಂತ ಪದ್ಧತಿಯುಕ್ತವಾಗಿಯೂ ಸ್ಪಷ್ಟವಾಗಿಯೂ ಬರೆದಿದ್ದಾರೆ. ಆದ್ದರಿಂದ ಅವರು ಬರೆ-ದುದರ ಮೇಲೆ ಯಾವ ಭಾಷ್ಯವೂ ಬೇಕಾಗಿಲ್ಲ. ಅವರ ತತ್ತ್ವಜ್ಞಾನದ ಇಲ್ಲವೆ ಉಪದೇಶದ ವಿವರಗಳನ್ನು ಇಲ್ಲಿ ಕೊಡುವದು ಅವಶ್ಯವೆಂದು ನನಗೆ ತೋರುವದಿಲ್ಲ; ಇಲ್ಲಿ ಕೊಡಬಯಸುವ ಸಾರಾಂಶವು ಸರ್ವಸಂಗ್ರಾಹಕವಾಗಿರದೆ ಕೇವಲ ಸೂಚಕವಾಗಿದ್ದರೆ ಸಾಕು.

ಶ್ರೀ ಅರವಿಂದರು ಭವಿಷ್ಯತ್ತಿಗಾಗಿ ವೇದಾಂತದ ಒಂದು ದರ್ಶನವನ್ನು ಮಾತ್ರ ಇತ್ತಿರದೆ ಪೂರ್ಣವಾದ ಒಂದು ಬೋಧೆಯನ್ನೆ ಕೊಟ್ಟು ಹೋಗಿದ್ದಾರೆ. ಅದೊಂದು ತತ್ತ್ವಪ್ರಣಾಲಿಯಾಗಿರುವದಲ್ಲದೆ ಜೀವನದ ರೀತಿಯೂ ಆಗಿದೆ; ಅವರೆ ಸ್ವಾನುಭವದಿಂದ ಒರೆ ಹಚ್ಚಿ ನೋಡಿದ ಸಾಧನೆಯ ಒಂದು ತಂತ್ರವೂ ಅದಾಗಿದೆ. ಮುಂದಿನವರು ಯಥಾಶಕ್ತಿ ಸಾಹಸಗೈಯುವಂತೆ ಗುರಿಯೊಂದನ್ನೆ ಅವರು ತೋರಿಸಿ

ಹೋಗಿಲ್ಲ; ಗುರಿ ಮುಟ್ಟುವ ದಾರಿಯನ್ನೂ ಅವರೆ ಮಾಡಿಕೊಟ್ಟಿದ್ದು ಆ ದಿಶೆಯಲ್ಲಿ ಸ್ವತಃ ಸಾಧನೆಗೈದು ತೋರಿಸಿದ್ದಾರೆ. ಮೊದಲು ಅವರೆ ಇತ್ತ ಮಾರ್ಗದರ್ಶನದಲ್ಲಿಯೂ ಈಗ ಶ್ರೀತಾಯಿಯವರ ಜಾಗ್ರತಿಯುಕ್ತ ನೇತೃತ್ವದಲ್ಲಿಯೂ ಅವರ ನೂರಾರು ಶಿಷ್ಯರು ಆ ದಾರಿಯಲ್ಲಿ ಸಾಧನೆಗೈದಿರುವದರಿಂದ ಈಗ ಅದು ಹೆಜ್ಜೆ ಬಿದ್ದ ದಾರಿಯಾಗಿದೆ. ತತ್ತ್ವಜ್ಞಾನವೆಂಬುದು ಶ್ರೀ ಅರವಿಂದರಿಗೆ ಕೇವಲ ಬೌದ್ಧಿಕ ವಿಲಾಸವಾಗಿರಲಿಲ್ಲ. ಕುತೂಹಲದ ತೃಪ್ತಿಗಾಗಿ ಇಷ್ಟೊಂದು ಅಸಂಖ್ಯ ಗ್ರಂಥಗಳನ್ನು ಅವರೇನೂ ಬರೆಯಲಿಲ್ಲ. ವಾಡಿಕೆಯಾಗಿ ತತ್ತ್ವಜ್ಞಾನವೆಂದರೆ ಆಯಾ ತತ್ತ್ವವಿದನ ದೃಷ್ಟಿಗೆ ಹೊಳೆದಂತೆ ವಸ್ತುಗಳ ಸತ್ಯವನ್ನೂ ಅಸ್ತಿತ್ವದ ವರ್ಗಗಳಲ್ಲಿಯ ಪರಸ್ಪರ ಸಂಬಂಧವನ್ನೂ ಬುದ್ಧಿಬಲದಿಂದ ಸ್ಥಾಪಿಸುವದೆ ಆಗಿದೆ. ಶ್ರೀ ಅರವಿಂದರಂಥವರಿಗೆ ತತ್ತ್ವಜ್ಞಾನವೆಂಬುದು ಅವರ ಸಮಗ್ರ ಜೀವನಕ್ಕೆಯೆ ಉಂಟಾದ ಸತ್ಯದ ಪ್ರತ್ಯಕ್ಷ ದರ್ಶನದಿಂದಲೂ ಅಂತರಂಗವು ಅನುಭವಿಸಿದ ಆಧ್ಯಾತ್ಮಿಕ ಜೀವನದಿಂದಲೂ ಉದಿಸಿಬಂದಿರುತ್ತದೆ. ವ್ಯಕ್ತಿಯ ಹೃದಯದ ಆಳದಲ್ಲಿ-ಇಂದ್ರಿಯಗಳ ವ್ಯಾಪಾರದ ಬಗೆಗೂ ಸುಖದುಃಖಗಳ ಚಂಚಲಪ್ರವೃತ್ತಿಯ ಬಗೆಗೂ ಈ ಜಗದ್ವ್ಯವಹಾರದಲ್ಲಿ ಕಂಡುಬರುವ ದ್ವಂದ್ವ-ಘರ್ಷಣೆಗಳ ಬಗೆಗೂ ಸರ್ವತ್ರ ವ್ಯಾಪಿಸಿದ ವಿಷಮತೆ ವಿರಸತೆಗಳ ಬಗೆಗೂ ಮಾನವನ ಅಜ್ಞಾನ-ಅಶಕ್ತತೆ-ಅಸಹಾಯತೆಗಳ ಬಗೆಗೂ ಅತೃಪ್ತಿ ಅಸಮಾಧಾನಗಳು ಇದ್ದೇ ಇರುವವು. ಆದುದರಿಂದ ವ್ಯಕ್ತಿಯ ಶರೀರದಲ್ಲಿರುವ ಆತ್ಮನೆಂಬ ಚಿರಂತನ ಯಾತ್ರಿಕನು ತನ್ನೊಳಗಿನ ದೌರ್ಬಲ್ಯವನ್ನು ಜಯಿಸಲೆಂದು ಸತ್ಯವನ್ನು ಶೋಧಿಸುತಿದ್ದಾನೆ, ಪ್ರಕಾಶಕ್ಕಾಗಿ ಪ್ರಾರ್ಥಿಸುತಿದ್ದಾನೆ, ಸಾಮರ್ಥ್ಯವನ್ನು ಹುಡುಕಿ ಸಂಗ್ರಹಿಸುತಿದ್ದಾನೆ. ಸಮರಸತೆಗಾಗಿಯೂ ಶುದ್ಧ ಆನಂದಕ್ಕಾಗಿಯೂ ಅವನು ಅಲ್ಪರಿಯುತಿದ್ದಾನೆ. ಸತ್ಯವನ್ನು ಅರಿತು ಅಳವಡಿಸಿಕೊಂಡು ಜೀವನದಲ್ಲಿ ಅದನ್ನು ಪ್ರಯೋಗಿಸಿ ಆಚರಿಸುತ್ತ ನಿರಂಜನ ಪ್ರಭೆಯಲ್ಲಿ ಪ್ರಗತಿಪಡೆಯಲು ಆತ್ಮನು ಆರ್ತನಾಗಿ ಹಂಬಲಿಸುತಿದ್ದಾನೆ. ಇಂಥದೊಂದು ಪೂರ್ಣ, ಪ್ರಪೂರ್ಣ, ಸಮಗ್ರ ಜೀವನವೆ—ಕೇವಲ ಬೌದ್ಧಿಕ ಶಕ್ತಿಗಳು ಮಾತ್ರವಲ್ಲ ಚೇತನವೆಲ್ಲವೂ ವ್ಯಕ್ತಿತ್ವವೆಲ್ಲವೂ ಒಡಮೂಡಿ ಬಂದ ಒಟ್ಟು ಜೀವನವೆ—ಅಸ್ತಿತ್ವದ ಸತ್ಯದ ನಿಜವಾದ ಶೋಧಕನನ್ನು ಸಮಾಧಾನಗೊಳಿಸಬಲ್ಲದು. ಆತ್ಮನು ಎಲ್ಲಿಯೊ ದೂರದಲ್ಲಾಗಲಿ ನಮ್ಮಿಂದಾಚೆಗಾಗಲಿ ಇಲ್ಲವೆಂದು ಶ್ರೀ ಅರವಿಂದರು ಸಾರಿಹೇಳುತ್ತ ನಮ್ಮನ್ನು ಸ್ಫೂರ್ತಿಗೊಳಿಸುತ್ತಾರೆ. ಆತ್ಮನೇನೂ ನಮಗೆ ಅಪರಿಚಿತನಲ್ಲ. ಆತನ ಮಧ್ಯದಲ್ಲಿಯೆ ನಾವು ಜೀವಿಸುತ್ತೇವೆ. ನಮ್ಮ ಚೇತನವು ಆತನ ತೊಡೆಗಳ ಮೇಲೆಯೆ ಆಡುತ್ತದೆ. ಯಾವ ವ್ಯಕ್ತಿಯು ಆಗಲಿ ತನ್ನಲ್ಲಿ ತಾನೆ ಮುಳುಗಿ ನೋಡಿದಲ್ಲಿ, ಪೃಥ್ವಿಯ ಮೇಲಿನ ಪ್ರತಿಧರ್ಮವೂ ಪುನಃಪುನಃ ಹೇಳುತ್ತಿರುವ 'ಆತ್ಮ'ನೆಂಬ ವಸ್ತುವನ್ನು ಖಂಡಿತವಾಗಿಯೂ ಕಂಡುಕೊಳ್ಳುವನು. 'ಮನನವೆಂಬುದು ಮನನ

ಮಾಡುತ್ತದೆ, ಪ್ರಾಣವೆಂಬುದು ಆರ್ತತೆಯಿಂದ ಅಲ್ಪರಿಯುತ್ತದೆ; ಆದರೆ ಭಗವಂತನನ್ನು ಅನುಭವಿಸಿ ಅರಿತುಕೊಳ್ಳುವದು ಆತ್ಮವೆ.' ಏಕೆಂದರೆ ಪ್ರತಿ ವ್ಯಕ್ತಿಯಲ್ಲಿ ಭಗವಂತನ ತೇಜೋಂಶವುಂಟು. ಈ ಸಂದರ್ಭದಲ್ಲಿ ನಾವು ನೆನೆಯಬೇಕಾದ ಮಾತೆಂದರೆ, ಮತಸಿದ್ಧಾಂತಗಳನ್ನು ಸ್ಥಾಪಿಸಲು ತಲೆ ತುರಿಸಿಕೊಳ್ಳುವ ಮನೋಲೋಕದ ತತ್ತ್ವಜ್ಞರ ಮತ್ತು ದಾರ್ಶನಿಕರ ಗುಂಪಿಗೆ ಮಾತ್ರ ಶ್ರೀ ಅರವಿಂದರು ಸೇರಿರದೆ ಆಧ್ಯಾತ್ಮಿಕ ಲೋಕಗಳಿಂದ ಹೊರಟು ಈ ಜಗತ್ತಿಗೆ ಆಗೀಗ ಅತಿಥಿಗಳಂತೆ ದರ್ಶನವೀಯುತ್ತಿರುವ ಅನುಭಾವಿಗಳ ಹಾಗೂ ಧರ್ಮನಿಷ್ಠ ಸಂತರ ಮಾಲಿಕೆಯಲ್ಲಿಯೆ ಅವರು ಹೆಚ್ಚಾಗಿ ಕಂಗೊಳಿಸುವರು.

ಅವರ ಉಪದೇಶದಲ್ಲಿ ತತ್ತ್ವಜ್ಞಾನ ಮತ್ತು ಯೋಗ ಇವೆರಡೂ ಅಡಕವಾಗಿರುತ್ತವೆ. ಮೊದಲನೆಯದರಲ್ಲಿ ಅದರ ತಾತ್ತ್ವಿಕ ಚಿಂತನೆಯೂ ಎರಡನೆಯದರಲ್ಲಿ ಅದರ ಅನುಷ್ಠಾನವೂ ಬರುವದುಂಟು. ಇವೆರಡನ್ನೂ ಪ್ರತ್ಯೇಕವಾಗಿ ಪರಿಶೀಲಿಸುವದು ಅರ್ಥಗ್ರಹಣದ ಅನುಕೂಲತೆಗಾಗಿ, ಸುಸ್ಪಷ್ಟ ಬೌದ್ಧಿಕ ವಿವೇಚನೆಗಾಗಿ; ಇಷ್ಟೇ ಹೊರತು ಇವು ಒಂದನ್ನು ಬಿಟ್ಟು ಇನ್ನೊಂದು ಇರಲಾರದಷ್ಟು ಒಂದಾಗಿರುವವು. ಇವು ಒಂದರಲ್ಲೊಂದು ಹೆಣೆದು ಹುರಿಗೂಡಿ ಒಟ್ಟಾಗಿ ಹೊಂದಿಕೊಂಡಿರುವದರಿಂದ ಇವುಗಳ ಪರಸ್ಪರ ಸಂಬಂಧವನ್ನು ಅರಿತುಕೊಂಡು ಅಭ್ಯಾಸಮಾಡಿದಾಗ ಮಾತ್ರ ಇವುಗಳ ನಿಜವಾದ ಅರ್ಥವು ಸರಿಯಾಗಿ ಆಗುವದು. ಯಾರೊಬ್ಬರಿಗೆ ಸಮಗ್ರ ವಿಷಯದ ತಾತ್ತ್ವಿಕ ಚಿಂತನೆಯಿಂದಲೆ ಸಮಾಧಾನವಾಗುತಿದ್ದರೆ ಆ ಮಾತು ಬೇರೆ. ಆದರೆ ನಮಗೆ ಜೀವನದ ಹಾಗೂ ವಸ್ತುಗಳ ಸತ್ಯವನ್ನು ಪರಿಶೀಲಿಸಬೇಕಾದಾಗ ಮತ್ತು ಸತ್ಯವನ್ನು ತಲುಪಿ ಅದನ್ನು ಜೀವನದಲ್ಲಿ ಇಂಗಿಸಿಕೊಳ್ಳುವ ಅನುಷ್ಠಾನದ ಪದ್ಧತಿಯನ್ನು ಅರಿಯಬೇಕಾದಾಗ ತಾತ್ತ್ವಿಕ ಚಿಂತನೆಯೊಂದೆ ಸಾಲದು. ಸತ್ಯವನ್ನು ಸ್ವಾನುಭವದಿಂದ ಅರಿಯುವಂಥ ಪ್ರಯೋಗಗಳನ್ನು ಮಾಡಿ ನೋಡುವ ಸಂಕಲ್ಪಶಕ್ತಿಯೂ ಸಾಹಸವೂ ನಮ್ಮಲ್ಲಿ ಬೇಕು. ಇಲ್ಲದಿದ್ದರೆ ಈ ಸಿದ್ಧಾಂತಗಳೆಲ್ಲ ಬರಿ ಗಾಳಿಗೋಪುರದ ಮಾತುಗಳೊ ಸೂತ್ರಗಳೊ ಆಗಿಬಿಟ್ಟು ಪ್ರತ್ಯಕ್ಷ ಆಚರಣೆಯಲ್ಲಿ ಇಳಿಯದೆ ಹೋಗುವವು; ಆಗ ಜೀವನದಲ್ಲಿ ಪರಿಣಾಮಕಾರಕ ಪರಿವರ್ತನೆಯಾಗುವ ಪ್ರಸಂಗವೆ ತಪ್ಪಿಹೋಗುವದು.

ಈಗ ನಾನು ಅವರ ಉಪದೇಶದ ಬಹು ಮಹತ್ವದ ಕೆಲವು ಪಾರ್ಶ್ವಗಳನ್ನು ಪರಿಶೀಲಿಸುತ್ತ ಅವುಗಳಿಂದ ನಾವು ಅರಿಯಬೇಕಾದ ಸಂಕೇತವನ್ನು ಸೂಚಿಸಲು ಇಲ್ಲಿ ಪ್ರಯತ್ನಿಸುತ್ತೇನೆ. ಅವರಿಗಿನ್ನೂ ನಾಲ್ವತ್ತು ವರ್ಷಗಳು ತುಂಬುವದಕ್ಕಿಂತ ಮುಂಚೆಯೆ ಅವರ ತತ್ತ್ವಜ್ಞಾನವೂ ಯೋಗವೂ ಅವರ ಮನದಲ್ಲಿ ರೂಪಗೊಂಡಿದ್ದವು. ಆ ಕಾಲದಲ್ಲಿ ಅವರ ಲೇಖನಿಯು ಸದಾ ಕಾರ್ಯಪ್ರವೃತ್ತವಾಗಿತ್ತು; ಒಂದಿಲ್ಲೊಂದು ರೂಪದಲ್ಲಿ ಅವರ ವಿಚಾರಗಳು ಅಲ್ಲಲ್ಲಿಯ ಲೇಖನಗಳಲ್ಲಿ ವ್ಯಕ್ತ-

ವಾಗುತ್ತಲೆ ಇದ್ದವು. ಅವರ ಉಪದೇಶವೆಂಬ ಸುವರ್ಣದ ಕಣಗಳು ಅವರ ಅನೇಕ ಲೇಖನಗಳಲ್ಲಿ ಅಲ್ಲಿಲ್ಲಿ ಚೆದರಿಹೋಗಿವೆ. ಆ ಸುವರ್ಣ ಕಣಗಳನ್ನು ಅವರ ಯಾವ ಬೇಕಾದ ಗದ್ಯಪದ್ಯ ಕೃತಿಗಳೊಳಗಿಂದ ಆರಿಸಿ ಆಯ್ದುಕೊಳ್ಳಬಹುದು. ಆದರೆ ಅವರ ಗ್ರಂಥರಾಜವಾದ 'ದೈವೀ ಜೀವನ (The Life Divine)' ದಲ್ಲಿ ಅವರ ತತ್ತ್ವಜ್ಞಾನದ ಚಿನ್ನದ ಗಣಿಯೆ ದೊರೆಯುತ್ತದೆ. 'ಯೋಗಸಮನ್ವಯ (Synthesis of Yoga)' ವೆಂಬ ಗ್ರಂಥದಲ್ಲಿ ಪರಮ ಪ್ರಾರ್ಥನೀಯವಾದ ಆ ದೈವೀ ಜೀವನಕ್ಕೆ ಕರೆದೊಯ್ಯುವ ಮಾರ್ಗವನ್ನು ಹೇಳಿಕೊಡಲಾಗಿದೆ. ಅವರ 'ಸಾವಿತ್ರಿ' ಎಂಬ ಗ್ರಂಥವು ಒಂದು ವಿಶಿಷ್ಟಪ್ರಕಾರವೆ ಆಗಿದೆ. ಅದಕ್ಕೆ ಅವರು 'ಸಂಕೇತರೂಪದಲ್ಲಿದ್ದ ಒಂದು ಪುರಾಣಕಥೆ (A Legend and a Symbol)' ಎಂದು ಕರೆದಿದ್ದಾರೆ. ದೈವೀಕೃಪೆಯಿಂದ ಕಲ್ಪನಾವಿಲಾಸವನ್ನು ಪಡೆದ ಕಾವ್ಯ ಪ್ರೇಮಿಗಳಿಗೆ ಈ ಗ್ರಂಥವು ಶಾಶ್ವತ ಆನಂದದ ಬುಗ್ಗೆಯೆ ಸರಿ. ಏಕೆಂದರೆ ಇಲ್ಲಿ ಬುದ್ಧಿಯನ್ನು ಸಂಶೋಧಿಸಿ ಬರೆದ ಕೇವಲ ತಾರ್ಕಿಕ ಭಾಷೆಯಿಲ್ಲ; ಒಂದು ಮಹೋನ್ನತ ಆತ್ಮದ ದರ್ಶನವು ನಮಗಿಲ್ಲಿ ಆಗಿ ಆ ಆತ್ಮವು ತನ್ನ ದಿವ್ಯಾನುಭವಗಳನ್ನೆಲ್ಲ ಮಂತ್ರಮುಗ್ಧ ಪದಗಳಲ್ಲಿ ಮೂಡಿಸುತ್ತ ಅವನ್ನು ಭಾವನಾಲೋಕದ ನಾಣ್ಯಗಳನ್ನಾಗಿ ಮಾಡಿ ತೂರಿ ತೂರಿ ಒಗೆಯುತ್ತದೆ. ಈ ಭಾವನಾಲೋಕದ ಪದಗಳೂ ನಾದಗಳೂ ದೇವಲೋಕದ ಗರುಡಪಕ್ಷಿಯಂತೆ ನಮ್ಮನ್ನು ಎತ್ತರದಲ್ಲಿ ಕರೆದೊಯ್ದು ವಸ್ತುಗಳ ರಹಸ್ಯವನ್ನೆ ತಿಳಿಸಿಕೊಡುತ್ತವೆ. ಆದುದರಿಂದ ವ್ಯಾವಹಾರಿಕವಾಗಿ ಮಾತನಾಡುವದಾದರೆ, ಮೇಲೆ ಉಲ್ಲೇಖಿಸಿದ ಮೂರು ಗ್ರಂಥಗಳಲ್ಲಿಯೆ ಅವರ ಉಪದೇಶವೆಲ್ಲವೂ ಅಡಕವಾಗಿದೆ. ಅವರು ಸಾಧಕರಿಗೆ ಬರೆದ ಪತ್ರಗಳೂ ಅತ್ಯಂತ ಮಹತ್ವದವಾಗಿದ್ದು ಬಹಳ ಆಕರ್ಷಕವಾಗಿವೆ. ಅವರ ಇತರ ಗ್ರಂಥಗಳಲ್ಲಿ ಸಹಜವಾಗಿ ಬಂದಿರಲಾರದ ಕೆಲವು ವಿಶಿಷ್ಟ ವಿಷಯಗಳ ಬಗೆಗೆ ಹೆಚ್ಚಿನ ಪ್ರಕಾಶವನ್ನು ನಾವಿಲ್ಲಿ ಕಾಣುತ್ತೇವೆ. ಈ ಪತ್ರಗಳೆಂದರೆ ಅವರ ಪ್ರಮೇಯಗಳನ್ನು ಸಿದ್ಧಮಾಡಿ ತೋರಿಸುವ ದೃಷ್ಟಾಂತಗಳೆ ಸರಿ. ಏಕೆಂದರೆ ಇವುಗಳಲ್ಲಿ ವೈಯಕ್ತಿಕ ಪ್ರಸಂಗಗಳ ಉಲ್ಲೇಖವಿದ್ದು ಕೆಲವೊಂದು ವಿಶಿಷ್ಟ ಪ್ರಶ್ನೆಗಳಿಗೂ ಸಮಸ್ಯೆಗಳಿಗೂ ಸಮರ್ಪಕ ಉತ್ತರ ಕೊಡಲಾಗಿದೆ; ಆ ಉತ್ತರದಲ್ಲಿಯೆ ವಿಶೇಷ ಪ್ರಕಾಶವಿದೆ. ಈ ಪತ್ರಗಳೆಂದರೆ ಪ್ರಯೋಗಪೂರ್ವಕವಾಗಿ ಕೊಟ್ಟ ಪಾಠಗಳಿದ್ದಂತೆ ಇವೆ. ಆಯಾ ಸಾಧಕರ ವೈಯಕ್ತಿಕ ಪ್ರಶ್ನೆಗಳಿಗೆ ಉತ್ತರಕೊಡುವಾಗ ಅವರು ಅತಿಶಯ ಜಾಗರೂಕತೆ ವಹಿಸಿದ್ದಾರೆ. ಪ್ರತಿ ಪ್ರಸಂಗದಲ್ಲಿಯೂ ಆಯಾ ಸಾಧಕನ ಪರಿಸ್ಥಿತಿಯೂ ಆತನು ಮುಟ್ಟಿದ ಸಾಧನಾವಸ್ಥೆಯೂ ಶ್ರೀ ಅರವಿಂದರಿಗೆ ಚೆನ್ನಾಗಿ ಗೊತ್ತಿರುತಿದ್ದವು. ಎಲ್ಲಕ್ಕೂ ಹೆಚ್ಚಿನ ಮಾತೇನೆಂದರೆ, 'ನಿಷ್ಠಾವಂತ' ಜೀವಗಳಿಗೆ ನಿಶ್ಚಿತ ಗುರಿಯತ್ತ ಸರಿಯಾದ ಮಾರ್ಗ ತೋರಿಸುವಂಥ ಅತಿಸೂಕ್ಷ್ಮ ವಿಷಯದಲ್ಲಿ ತಾವು ವಹಿಸಿದ ಹೊಣೆಗಾರಿಕೆಯನ್ನು

ಅವರು ಅರಿತಿದ್ದರು.

ಈ ಪುಸ್ತಕದಲ್ಲಿ ಇದುವರೆಗೆ ಪ್ರಸ್ತಾಪಿಸಿದ ಆಯಾ ಪ್ರಕರಣಗಳಲ್ಲಿ ಅವರ ತತ್ತ್ವಜ್ಞಾನದ ಬಗೆಗೂ ಯೋಗದ ಬಗೆಗೂ ಕೆಲವೆ ಅಂಶಗಳನ್ನು ವಿವೇಚಿಸುವ ಅಪೂರ್ಣ ವರ್ಣನೆಗಳೂ ಹೇಳಿಕೆಗಳೂ ಅಲ್ಲಲ್ಲಿ ಬಂದಿವೆ. ಹಾಗೆ ಬಂದಿರುವದು ಕ್ರಮಪ್ರಾಪ್ತವೆ ಸರಿ. ಏಕೆಂದರೆ ಅವರ ಉಪದೇಶದ ಈ ಎರಡು ಮುಖಗಳನ್ನು ಉಲ್ಲೇಖಿಸದಿದ್ದರೆ ಶ್ರೀ ಅರವಿಂದರ ಬಗೆಗೆ ಮುಖ್ಯ ಮಾತನ್ನೆ ಹೇಳಿದಂತಾಗು-ವದಿಲ್ಲ. ಅಂತರಂಗದ ಅನುಭವ, ಅವರ ವಿಶಿಷ್ಟ ವಿಚಾರ ಮತ್ತು ಯೋಗ ಇವ-ಕ್ಕಾಗಿಯೆ ಅವರ 'ಅರವಿಂದ' ನಾಮವು ಖ್ಯಾತವಾಗಿ ಅಮರವಾಗಿದೆ. ಅವರೆ ಕೇಂದ್ರಪುರುಷರಾಗಿರುವ ಈ ಗ್ರಂಥದಲ್ಲಿ ಈ ಅಂಶಗಳನ್ನು ಬಿಡುವದಾದರೂ ಹೇಗೆ? ನಾನಿಲ್ಲಿ ಬರೆದುದು ಅವರ ಗ್ರಂಥಗಳ ಪೂರ್ಣ ಸಾರಾಂಶವೂ ಆಗಲಾರದು, ಅವುಗಳಿಗೆ ಪ್ರತಿಯಾಗಿ ಹೇಳಿದ ವಿವರಣೆಯೂ ಆಗಲಾರದು. ಇಲ್ಲಿ ಬರೆದುದನ್ನು ವಾಚಕರು ಓದುವದರಿಂದ ಶ್ರೀ ಅರವಿಂದರು ರಚಿಸಿದ ತತ್ತ್ವಜ್ಞಾನದ ಭವ್ಯ ಮಂದಿರದ ಬಗೆಗೆ ಪ್ರಾಸ್ತಾವಿಕವಾಗಿ ಒಂದು ಸ್ಥೂಲ ಕಲ್ಪನೆಯಾದರೂ ಅವರಿಗೆ ಬಂದರೆ ಸಾಕು. ಆ ಅಗಾಧ ತತ್ತ್ವಜ್ಞಾನದ ಬಗೆಗೆ ವಾಚಕರ ಕುತೂಹಲವು ಕೆರಳಿ ಅದನ್ನು ಹೆಚ್ಚು ಆಳವಾಗಿ ತಿಳಿದುಕೊಳ್ಳಬೇಕೆಂಬ ತೀವ್ರ ಹಂಬಲವು ಅವರಲ್ಲಿ ಹುಟ್ಟಿದರೆ ಸಾಕು. ಅದರ ವಿವರಗಳನ್ನು ತಿಳಿದುಕೊಳ್ಳುವದಕ್ಕಿಂತ ಮುಂಚೆ ಪ್ರಾರಂಭದಲ್ಲಿಯೆ ಒಂದು ಸರ್ವಸಾಧಾರಣ ಕಲ್ಪನೆಯು ಜಿಜ್ಞಾಸುಗಳಲ್ಲಿ ಉಂಟಾ-ದರೆ ಮುಂದಿನ ಅಭ್ಯಾಸಕ್ಕೆ ಸಹಾಯವಾಗುವದು; ಇದಲ್ಲದೆ ಅವರ ತತ್ತ್ವಜ್ಞಾನದ ವಿವಿಧ ಮುಖಗಳ ವೈಶಾಲ್ಯ-ಸಮೃದ್ಧಿ-ಸೌಂದರ್ಯಗಳಿಗೆ ಬೆರಗಾಗಿ ದಾರಿ ತಪ್ಪುವ ಸಂಭವವೂ ಇಲ್ಲದಾಗುವದು. ಅವರ ಯೋಗದ ವಿಷಯವಾದರೂ ಹೀಗೆಯೆ ಇದೆ. ಇವೆರಡನ್ನೂ ನಾನಿಲ್ಲಿ ಬೇರೆಬೇರೆಯಾಗಿ ವಿವೇಚಿಸಲಿರುವೆನು. ಮೊದಲು ತತ್ತ್ವ-ಜ್ಞಾನ; ಆ ಮೇಲೆ ಯೋಗ.

ಅವರ ಉಪದೇಶದ ಅಮೌಲ್ಯ ಅಸ್ತಿವಾರವೆಲ್ಲವೂ ಉಪನಿಷತ್ತುಗಳು ಮತ್ತು ಭಗವದ್ಗೀತೆ ಇವುಗಳ ಮೇಲೆಯೆ ಭದ್ರವಾಗಿ ನಿಂತಿದೆ. ಈ ಗ್ರಂಥಗಳೆ ಅವರಿಗೆ ಮೊದಲು ಪ್ರೇರಣೆಯನ್ನಿತ್ತವು; ವೇದಗಳ ಅಭ್ಯಾಸವನ್ನು ಅವರು ತರುವಾಯ ಕೈಕೊಂಡರು. ಈ ಮೊದಲು ಅವರು ನಿರ್ಣಯಕ್ಕೆ ಬಂದ ಸಿದ್ಧಾಂತಗಳಿಗೆ ವೇದ ಗಳ ಸಮರ್ಥನೆಯೂ ಅವರಿಗೆ ದೊರೆಯಿತು. ಬ್ರಹ್ಮವು ಉಂಟೆಂದು, ಬ್ರಹ್ಮವು ಮಾತ್ರವೆ ಉಂಟೆಂದು ವೇದಾಂತವು ಹೇಳುತ್ತದೆ.* ಉಳಿದುದೆಲ್ಲವೂ ಏಕಮೇವಾ-

* ಬ್ರಹ್ಮನ್ ಮತ್ತು ಆತ್ಮನ್ ಈ ಶಬ್ದಗಳು ಉಪನಿಷತ್ತುಗಳಲ್ಲಿ ಸಮಾನಾರ್ಥಕ ವಾಗಿವೆ.

ದ್ವಿತೀಯವಾಗಿರುವ ಆ ಬ್ರಹ್ಮದ ಸಂಕಲ್ಪಿತ ಆವಿರ್ಭಾವವೆ ಸರಿ. ಸಚ್ಚಿದಾನಂದವೆನಿಸಿರುವ ಆ ಬ್ರಹ್ಮವು ಎಲ್ಲ ಆವಿರ್ಭಾವಗಳಲ್ಲಿ ಅಂತರ್ಯಾಮಿಯಾಗಿದೆ. ಬ್ರಹ್ಮದ ಆಕುಂಚನವೆ ನಿವರ್ತನವು. ನಿವರ್ತನವನ್ನು ಬೆಂಬತ್ತಿ ವಿವರ್ತನವು ಬರುವದು. ಈ ವಿವರ್ತನಕ್ಕೆ ವಿಕಾಸವೆಂದೂ ಕರೆಯುವರು. ಮಾನವನಲ್ಲಿಯ ಚಿತ್ ಇಲ್ಲವೆ ಚೇತನಕ್ಕೆ ಸ್ವಚೇತನದ ಅರಿವು ಇರುವ ಅವಸ್ಥೆಯು ಪ್ರಾಪ್ತವಾಗಿದೆ. ಅಂತೆಯೆ ಅದು ಬ್ರಹ್ಮವನ್ನು ಅರಿತುಕೊಳ್ಳಲು ಸಮರ್ಥವಾಗಿದೆ. ಆದರೆ ಸಾಮಾನ್ಯವಾಗಿ ಅದಕ್ಕೆ ತನ್ನ ವೈಯಕ್ತಿಕ ಅಸ್ತಿತ್ವದ ಮಿತಿಯೂ ಉಂಟು. ಅದಕ್ಕೆ ತನ್ನತನದ ಅರಿವು ಹೆಚ್ಚುಹೆಚ್ಚಾದಂತೆ ತನ್ನ ಮಿತಿಯೂ ಅದಕ್ಕೆ ತಿಳಿದುಬರುತ್ತದೆ. ಈ ಮಿತಿಗೇನೆ ಬಂಧನವೆಂದೂ ದೌರ್ಬಲ್ಯವೆಂದೂ ಕರೆಯುವದುಂಟು. ಮಾನವನ ಚೇತನವು ಬ್ರಹ್ಮಚೈತನ್ಯವನ್ನು ಅರಿಯಲೂ ಅದನ್ನು ಪಡೆಯಲೂ ಅಲ್ಪರಿಯುವದು. ಈ ಬಗೆಯ ಪ್ರಯತ್ನದಿಂದಲೆ ದೌರ್ಬಲ್ಯವು ದೂರವಾಗಿ ಮೂಲಭೂತ ಪೂರ್ಣ ಅವಸ್ಥೆಯ ಆನಂದಾನುಭವವು ಉಂಟಾಗುವದು. ಆದರೆ ಆ ಆತ್ಮಾನಂದದ ಇಲ್ಲವೆ ಬ್ರಹ್ಮಾನಂದದ ಅರಿವು ಅಪರೋಕ್ಷಜ್ಞಾನಬಲದಿಂದಲೆ ಉಂಟಾದೀತಲ್ಲದೆ ಕೇವಲ ಬುದ್ಧಿಬಲದಿಂದಲ್ಲ. ಈ ವಿಷಯದಲ್ಲಿ ಬುದ್ಧಿಯು ಅತಿ ದುರ್ಬಲ ಉಪಕರಣವೆ ಸರಿ. ಕೆಲವೊಂದು ಮರ್ಯಾದಿತ ಉದ್ದೇಶಗಳಿಗಾಗಿ ಅದು ಉಪಯುಕ್ತವಿದೆ. ಈ ಸಂದರ್ಭದಲ್ಲಿಯೆ ಯೋಗವು ಸಹಾಯಕ್ಕೆ ಬರುವದು. 'ಮನವೂ ಬುದ್ಧಿಯೂ ಪಂಚೇಂದ್ರಿಯಗಳೂ ಸ್ತಬ್ಧವಾದಾಗಲೆ ಉಚ್ಚತಮ ಪ್ರತಿಷ್ಠೆಯು ನೆಲೆಗೊಳ್ಳುವದೆಂ'ದು ಉಪನಿಷತ್ತು ಸಾರಿಹೇಳುತ್ತದೆ. ಆಗ ಮಾತ್ರವೆ ಬ್ರಹ್ಮದ ಸತ್ಯದರ್ಶನವಾಗುವದು. ಜೀವಾತ್ಮನು ಪರಮಾತ್ಮನೊಡನೆ ತಾದಾತ್ಮ್ಯ ಹೊಂದಬಲ್ಲನು. ಚಿತ್ತದ ಸಕಲ ವೃತ್ತಿಗಳನ್ನು ನಿರೋಧಿಸಿ ಮನವನ್ನು ಶಮನಗೊಳಿಸುತ್ತ ಅದನ್ನು ಆತ್ಮದ ಯೋಗ್ಯ ವಾಹನವನ್ನಾಗಿ ಮಾಡುವ ತಂತ್ರವೆ ಯೋಗವೆಂದೆನಿಸಿದೆ. ಪರಮಾತ್ಮನಲ್ಲಿ ಶ್ರದ್ಧೆ, ಜೀವಾತ್ಮನು ಪರಮಾತ್ಮನೊಡನೆ ಬೆರೆತು ಸಾಯುಜ್ಯಾನುಭವವನ್ನು ಪಡೆಯುವದು ಸಾಧ್ಯವೂ ಶಕ್ಯವೂ ಇದೆ ಎಂಬ ಮಾತಿನಲ್ಲಿ ಶ್ರದ್ಧೆ, ಅಂಥ ಅನುಭವವನ್ನು ಪಡೆದು ಆಧ್ಯಾತ್ಮಿಕ ಪ್ರತಿಷ್ಠೆಯನ್ನು ಕಾಯ್ದುಕೊಳ್ಳಲು ನಿತ್ಯವೂ ಗೈಯುವ ನಿಷ್ಠಾಯುಕ್ತ ಯೋಗಸಾಧನೆ, ಆಧ್ಯಾತ್ಮಿಕ ಅನುಭವದ ಆಧಾರದ ಮೇಲೆ ಜೀವನವನ್ನೂ ಶೀಲವನ್ನೂ ಉದಾತ್ತಗೊಳಿಸಿ ಉಂಟುಮಾಡುವ ಪರಿವರ್ತನೆ ಇವೇ ಉಪನಿಷತ್ತುಗಳ ಮೂಲಭೂತ ತತ್ತ್ವಗಳಾಗಿವೆ. ಈ ತತ್ತ್ವಗಳ ವಿಸ್ತಾರವಿವರಣೆಗಳು, ಜಡ-ಚೇತನಗಳ ನಡುವಿನ ವಿವಿಧ ಅಂತಸ್ತುಗಳನ್ನು ಸೂಚಿಸುವ ಪಂಚಕೋಶಗಳು, ಯೋಗಸಾಧನೆಯಲ್ಲಿಯ ಮೂರೊ ನಾಲ್ಕೊ ಶಾಖೆಗಳು ಇವಿಷ್ಟನ್ನು ಉಲ್ಲೇಖಿಸಿದರೆ ಪ್ರಾಚೀನ ಭಾರತದ ತತ್ತ್ವವಿಚಾರಗಳ ಸಮಗ್ರ ಚಿತ್ರವೊಂದು ನಮ್ಮ ಕಣ್ಣಮುಂದೆ ಕಟ್ಟಿದಂತಾಗುವದು. ಇವೆಲ್ಲ ತತ್ತ್ವಗಳನ್ನು ಆಧರಿಸಿ, ಅನೇಕಾನೇಕ ಯೋಗಿಗಳ

ಮತ್ತು ಶ್ರೀರಾಮಕೃಷ್ಣ ಪರಮಹಂಸರಂಥ ಸಿದ್ಧಪುರುಷರ ಅನುಭವದ ಹಿನ್ನೆಲೆಯಲ್ಲಿ, ತನ್ನೊಳಗಿನ ಅಂತರ್ಯಾಮಿಯೆಂಬ ಏಕಮಾತ್ರ ಧ್ರುವತಾರೆಯ ಮಾರ್ಗ-ದರ್ಶನದಲ್ಲಿ ಅನಂತವೆಂಬ ಸಾಗರದಲ್ಲಿ ಶ್ರೀ ಅರವಿಂದರು ಕೈಕೊಂಡ ಆಧ್ಯಾತ್ಮಿಕ ಪರ್ಯಟನದ ಸಾಹಸವು ಆಧುನಿಕ ಯುಗದಲ್ಲಿ ಅತ್ಯಂತ ಅದ್ಭುತರಮ್ಯವಾಗಿದೆ. ವಿಜ್ಞಾನಿಗಳಿಗೆ ಸಹಜವಾದ ಉತ್ಸಾಹದಿಂದ ಅನೇಕ ಪ್ರಯೋಗಗಳನ್ನು ಸ್ವತಃ ಮಾಡಿ ನೋಡಿ, ತಾವೆ ಗೈದ ಯೋಗಸಾಧನೆಯಲ್ಲಿ ಬಹುಮುಖವಾದ ಅನುಭವಗಳನ್ನು ಪಡೆದ ಮೇಲೆ ತಮ್ಮದೆ ಆದೊಂದು ತತ್ತ್ವಜ್ಞಾನವನ್ನೂ ಯೋಗವನ್ನೂ ಅವರು ಪ್ರಸ್ಥಾಪಿಸಿದ್ದಾರೆ; ಇಂದು ಅವರ ಈ ಪೂರ್ಣಯೋಗದಲ್ಲಿ ಸಾಧಕರಾಗು-ವವರಿಗೆ ಪ್ರಚಂಡ ಪ್ರಕಾಶವು ಸಹಜವಾಗಿ ಬೆಳಗುವಂತಿದೆ. ಅವರ ಅಂತರಂಗದ ಆಧ್ಯಾತ್ಮಿಕ ಅನುಭವಗಳು ಅವರನ್ನು ಅನುಭಾವಿಯನ್ನಾಗಿ ಮಾಡಿವೆ; ಆದರೂ ತಮ್ಮ ಅನುಭವಗಳನ್ನು ತಿಳಿಸಿಹೇಳುವಾಗ ವಿಕಾಸಕ್ರಮದ ಸದ್ಯದ ಅವಸ್ಥೆಯವರೆಗೂ ಗೊತ್ತಿದ್ದ ಘಟನೆಗಳನೆಲ್ಲ ಕ್ರೋಢೀಕರಿಸಿ ಅವುಗಳ ಆಧಾರದ ಮೇಲೆ ಅವರು ತಮ್ಮ ಮಾತುಗಳನ್ನು ಸಂಪೂರ್ಣ ಯುಕ್ತಿಯುಕ್ತವಾಗಿ ಮಂಡಿಸುವ-ದುಂಟು. ಅವರ ದೃಷ್ಟಿಕೋನವು ಮೂಲಭೂತವಾಗಿ ಭಾರತೀಯವಾಗಿದ್ದು ವೇದಾಂತದ ದರ್ಶನವನ್ನೆ ಅವರು ಸಮರ್ಥಿಸುವರಾದರೂ ಅವರ ಮನಸ್ಸು ಯಾವಾಗಲೂ ತೆರೆದುದೆ ಇರುವದುಂಟು. ಸ್ವದೇಶ ವಿದೇಶಗಳಲ್ಲಿಯ ಸಕಲ ಆಧ್ಯಾತ್ಮಿಕ ದರ್ಶನಗಳೂ ಅನುಷ್ಠಾನಗಳೂ ಅವರಿಗೆ ಅಂಗೈನೆಲ್ಲಿಯಾಗಿವೆ. ಇವೆಲ್ಲವುಗಳ ಆಧಾರದ ಬಲದಿಂದ ತಮ್ಮದೆ ಆದುದೊಂದು ಆದರ್ಶವನ್ನು ಅವರು ಕಂಡುಕೊಂಡು ಅದನ್ನು ಮುಟ್ಟುವ ಪಥವನ್ನೂ ಹುಡುಕಿ ತೆಗೆದಿದ್ದಾರೆ. ಹೀಗೆ ಅಂದಾಕ್ಷಣಕ್ಕೆ ಮೊದಲಿನಿಂದಲೂ ಇದ್ದ ವಿವಿಧ ಪಂಥಗಳ ಕೇವಲ ಸಾರಸಂಗ್ರಹವನ್ನು ಅವರು ಮಾಡಿದ್ದಾರೆಂದರ್ಥವಲ್ಲ. ತಮಗೆ ಲಭ್ಯವಿದ್ದ ಜ್ಞಾನದ ಸಕಲ ಶಾಖೆಗಳಲ್ಲಿ 'ಪ್ರಯೋಗಪರಿಣತಮತಿ'ಗಳಾದ ಅವರು ಅವೆಲ್ಲವುಗಳನ್ನು ಸಮನ್ವಯಿಸಿ ತೋರಿಸುವ ಅಪ್ರತಿಮ ಪ್ರತಿಭಾಶಾಲಿಗಳು. ಇದರ ಪರಿಣಾಮವಾಗಿಯೆ ಅವರಲ್ಲಿ ಕೇವಲ 'ವಿಸ್ತಾರವಾದ ಭದ್ರಾಕೃತಿ'ಯನ್ನಿಷ್ಟೆ ನಾವು ಕಾಣದೆ 'ಸಮಸ್ತ ಸಿದ್ಧಿಪ್ರದಾಯಕ' ಸಮಗ್ರತೆಯನ್ನೂ ನಾವು ಕಾಣುತ್ತೇವೆ. ಅವರ ಪ್ರತಿಪಾದನೆಯಲ್ಲಿ ಕೇವಲ ಅನ್ಯೋನ್ಯ ಸಂಬಂಧವಿವರಣೆಯಾಗಲಿ ಸಾರಸಂಗ್ರಹವಾಗಲಿ ತೋರಿಬರದೆ ಸಮ-ನ್ವಯವೆ ಎದ್ದು ಕಂಡುಬರುವದು. ಇಲ್ಲಿರುವದು ಯಾಂತ್ರಿಕ ಮಿಶ್ರಣವಲ್ಲ, ರಾಸಾಯನಿಕ ಸಮರಸತೆ.

ಅವರೆ ತಮ್ಮ ತತ್ತ್ವಜ್ಞಾನಕ್ಕೆ ಆರಿಸಿ ಇಟ್ಟ 'ದೈವೀ ಜೀವನ (Life Divine)' ವೆಂಬ ಹೆಸರು ಅತ್ಯಂತ ಸಮರ್ಪಕವಾಗಿದ್ದು ಇದಕ್ಕಿಂತ ಹೆಚ್ಚು ಸಮರ್ಪಕವಾದ ಬೇರೊಂದು ಹೆಸರನ್ನು ಕೊಡುವುದೆ ಸಾಧ್ಯವಿಲ್ಲ. ಈ ಎರಡೇ

ಎರಡು ಅರ್ಥಗರ್ಭಿತ ಶಬ್ದಗಳಲ್ಲಿ ಬ್ರಹ್ಮಾಂಡದಷ್ಟು ವ್ಯಾಪಕವಾದ ಅವರ ತತ್ತ್ವ-ಜ್ಞಾನದ ಮೂಲಾರ್ಥವೆಲ್ಲವೂ ಅಡಕವಾಗಿದೆ. ಜಡದಲ್ಲಿಯೂ ಜಡ-ಚೇತನಗಳ ನಡುವೆ ಇರುವ ಅಸ್ತಿತ್ವದ ಸಕಲ ರೂಪಗಳಲ್ಲಿಯೂ ಪ್ರಾಣವು ನಿವರ್ತನೆಗೊಂಡಿದೆ. ಪ್ರಥಮ ಸಸಾರಜನಕ ಅಣು (the first protein molecule) ವಿನಿಂದ ಆರಂಭಿಸಿ ಯುಗಯುಗಗಳ ಪ್ರಯತ್ನದಿಂದ ಏಕಕೋಶಜೀವಿ (unicellular) ಯಿಂದ ಬಹುಕೋಶಜೀವಿ (multicellular) ಯ ವರೆಗೆ ಅದು ವಿಕಾಸಗೊಂಡಿದೆ-ಯೆಂಬುದು ಸ್ಪಷ್ಟವೆ ಇದೆ. ಪ್ರಾಣದ ವಿಕಾಸಕ್ರಮದಲ್ಲಿ ತುಟ್ಟತುದಿಯಲ್ಲಿದ್ದ ಪ್ರಾಣಿಯು ಮಾನವನೆಂದು ಈ ಪೃಥ್ವೀಗ್ರಹದ ಮಟ್ಟಿಗಂತೂ ಹೇಳಬಹುದು. ಬೆಳವಣಿಗೆಯ ಸಹಜಕ್ರಮದಲ್ಲಿ ಪ್ರಾಣಿಗಳಲ್ಲಿ ಚೇತನವು ಹೊಮ್ಮಿ ಬಂದಿದ್ದು ಪ್ರತಿಯೊಂದು ಪ್ರಾಣಿಯಲ್ಲಿರುವ ಜೀವತತ್ತ್ವದ ಅಧಿಷ್ಠಾನದ ಮೂಲಕ ಅದರಲ್ಲಿ ವ್ಯಕ್ತಿತ್ವವು ರೂಪಗೊಳ್ಳತೊಡಗಿದೆ. ಇದರ ಪರಿಣಾಮವಾಗಿ ತನ್ನತನದ ಅರಿವು ಉಂಟಾಗಿ ತಾನಾರು, ತನ್ನ ಮೂಲವೆಲ್ಲಿ, ತನ್ನ ಸ್ಫೂರ್ತಿಕೇಂದ್ರವಾವುದು ಎಂಬುದ-ನೆಲ್ಲ ತಿಳಿದುಕೊಳ್ಳುವ ಶಕ್ತಿಯು ಬೆಳೆಯತೊಡಗಿತು. ತನ್ನತನದ ಈ ಅರಿವು ತನ್ನ ಚರಿತ್ರೆಯ ಹೆಜ್ಜೆಗಳನ್ನು ಗುರುತಿಸತೊಡಗಿತು; ಆಗ ತನ್ನ ಅಸ್ತಿತ್ವದ ಮೂಲ-ವನ್ನೂ ಅದರಂತೆಯೆ ಇತರ ಸತ್ತ್ವಗಳ ಅಸ್ತಿತ್ವದ ಕಾರಣವನ್ನೂ ಹುಡುಕುತ್ತ ಹೊರಟು ಕೊನೆಗೆ ಎಲ್ಲ ಕಾರಣಗಳಿಗೂ ಕಾರಣಪುರುಷನಾಗಿರುವ ಭಗವಂತನಲ್ಲಿಗೆ ಅದು ಬಂದು ತಲುಪುತ್ತದೆ. ಮಾನವನಲ್ಲಿಯ ಚೈತ್ಯ (the psyche) ಕ್ಕೆ ಭಗವಂತನ ಪೂರ್ಣತೆ, ಅಂತಃಸ್ಥಿತೆ, ಪರಾತ್ಪರತೆ, ಅನಂತತೆ ಮತ್ತು ದುಃಖರಹಿತ ಆನಂದ ಇವುಗಳನ್ನು ಸಹಜವಾಗಿ ನೋಡುವದಾಗುವದಿಲ್ಲ, ಕಣ್ಣು ಕುಕ್ಕುವವು. ಭಗವಂತನ ಈ ಗುಣಗಳಿಗೆ ವೈಷಮ್ಯವಾಗಿ ಚೈತ್ಯವು ತನ್ನ ಕ್ಷುದ್ರತೆ, ಶೂನ್ಯತೆ, ದುಃಖಮಯತೆ ಇವುಗಳಿಂದ ಕೂಡಿ ದಿಙ್ಮೂಢವಾಗುತ್ತದೆ. ಇಂಥ ಅವಸ್ಥೆ-ಯಲ್ಲಿಯೆ ಮಾನವನ ಹೃದಯದ ಆಳದೊಳಗಿಂದ ಆರ್ತಸ್ವರವೊಂದು ಉದಿಸಿ ದೈವೀಶಕ್ತಿಯನ್ನು ಕುರಿತು ಇಂತು ಪ್ರಾರ್ಥಿಸುತ್ತದೆ: 'ಅಸತೋ ಮಾ ಸದ್ಗಮಯ (ಅಸತ್ಯದಿಂದ ಸತ್ಯಕ್ಕೆ ನನ್ನನ್ನು ಕರೆದೊಯ್ಯು), ತಮಸೋ ಮಾ ಜ್ಯೋತಿರ್-ಗಮಯ (ಕತ್ತಲೆಯಿಂದ ಬೆಳಕಿಗೆ ನನ್ನನ್ನು ಕರೆದೊಯ್ಯು), ಮೃತ್ಯೋರ್ಮಾ ಅಮೃತಂ ಗಮಯ (ಮೃತ್ಯುವಿನಿಂದ ಅಮೃತತ್ವಕ್ಕೆ ನನ್ನನ್ನು ಕರೆದೊಯ್ಯು)'. ಈ ಬಗೆಯ ಅಂತಃಪ್ರಾರ್ಥನೆಗೆ ಓಗುಡುತ್ತಲೆ ಗೀತೆಯಲ್ಲಿ ಭಗವಂತನು ಇಂತು ಹೇಳುತ್ತಾನೆ: 'ಓ ಜೀವಾತ್ಮನೆ, ಈ ಅಶಾಶ್ವತ ದುಃಖಾಲಯದಲ್ಲಿ ಜನ್ಮಹೊಂದಿದ ನೀನು ಸಂಸಿದ್ಧಿಯನ್ನು ಪಡೆದ ಮಹಾತ್ಮನಾಗಬೇಕಾದರೆ ನನ್ನನ್ನೆ ಆಶ್ರಯಿಸು' *

* ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಂ ।
ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥ —ಅ. ೮, ಶ್ಲೋ. ೧೫

ಒಂದಿಲ್ಲೊಂದು ದಿನ ಅಂಥ ಪೂರ್ಣಸಿದ್ಧಿಯು ದೊರೆಯುವ ಸಂಭವವುಂಟೆಂಬ ಜ್ಞಾನೋದಯವು ಚೈತ್ಯಪುರುಷನಲ್ಲಿ ಆದಾಗಲೆ ಅಂಥ ಸಿದ್ಧಿಗೆ ಒಯ್ಯುವ ಎಟ್ಟಿಸುವ ಸಾಧನಮಾರ್ಗದ ರೀತಿನೀತಿಗಳಾವುವೆಂಬುದರ ಬಗೆಗೆ ಆ ಪುರುಷನು ಆಲೋಚಿಸತೊಡಗುವನು. ಇಂಥ ಆತ್ಮಸಂಶೋಧನೆಯು ಕಾಲಕ್ಕೆಯೆ ಚೈತ್ಯ-ಪುರುಷನಿಗೆ ಯೋಗದ ಆಧಾರವನ್ನು ಅವಲಂಬಿಸಬೇಕಾಗುವದು. ಇಂಥ ವಿಷಯ-ಗಳೂ ಇವುಗಳಲ್ಲಿ ಅಡಕವಾದ ಇತರ ಎಲ್ಲ ಸಂಗತಿಗಳೂ ಇವುಗಳೊಳಗಿನ ಪರಸ್ಪರ ಸಂಬಂಧಗಳೂ 'ದೈವೀ ಜೀವನ' ದಲ್ಲಿ ಪರಿಶೀಲಿಸಲ್ಪಟ್ಟಿವೆ. ಇಂಥ ದೈವೀ-ಜೀವನದ ತತ್ತ್ವಜ್ಞಾನದ ಸತ್ಯಸಂಗತಿಗಳನ್ನೂ ಆಧಾರಪ್ರತಿಜ್ಞೆಗಳನ್ನೂ ಅವಲಂಬಿ-ಸಿದ ಸಾಧನೆಯ ರೀತಿನೀತಿಗಳೆ 'ಯೋಗಸಮನ್ವಯ' ದಲ್ಲಿ ಪರ್ಯಾಲೋಚಿಸ-ಲ್ಪಟ್ಟಿವೆ. ಇಂಥ ಯೋಗಸಮನ್ವಯಕ್ಕೆಯೆ ಸಮಗ್ರಯೋಗ, ಪೂರ್ಣಯೋಗ-ವೆಂದೂ ಕರೆಯಬಹುದು.

ಭಾರತೀಯ ತತ್ತ್ವಜ್ಞಾನದ ವಿರುದ್ಧವಾಗಿ ಒಮ್ಮೊಮ್ಮೆ ಕೆಲವು ಆಪಾದನೆಗಳು ಕೇಳಬರುತ್ತವೆ. ಶುದ್ಧ ತತ್ತ್ವಜ್ಞಾನವೆಂಬುದು ಇದಲ್ಲವೆಂದು ಆ ಆಪಾದನೆಗಳು ಕೂಗಿ ಹೇಳುವವು. ಹೀಗೆ ಆಪಾದಿಸುವವರ ಅರ್ಥವೇನೆಂದರೆ ಶುದ್ಧ ಬೌದ್ಧಿಕ ಶೋಧವಾಗಲಿ ಬೌದ್ಧಿಕ ತತ್ತ್ವವಿಚಾರವಾಗಲಿ ಇದರಲ್ಲಿ ಇಲ್ಲವೆಂದು. ಭಾರತದಲ್ಲಿ ತತ್ತ್ವದರ್ಶಿಗಳೆಂದು ಹೆಸರಾದವರೆಲ್ಲರೂ ತತ್ತ್ವಜ್ಞಾನವನ್ನು ಕೇವಲ ಉಪಜೀವನದ ವೃತ್ತಿಯನ್ನಾಗಿ ಮಾಡಿಕೊಂಡವರಲ್ಲ; ಅವರೆಲ್ಲರು ಯೋಗಿಗಳೂ ಸಿದ್ಧರೂ ಸಂತರೂ ಮಹಾ ಅನುಭಾವಿಗಳೂ ಆಗಿದ್ದರು. ಶ್ರೀ ಅರವಿಂದರಾದರೂ ಇಂಥ ವಿಭೂತಿಗಳ ಮಾಲಿಕೆಯಲ್ಲಿಯೆ ಕಂಗೊಳಿಸುವವರು. ಮಾನವನ ಸಮಗ್ರ ಸತ್ತ್ವದಲ್ಲಿಯೂ ಸ್ಪಂದಿಸುವ ಅನುಭವದ ಆಧಾರವು ತತ್ತ್ವಜ್ಞಾನಕ್ಕೆ ಇರದಿದ್ದರೆ ಅಥವಾ ಪ್ರತ್ಯಕ್ಷ ಜೀವನದಲ್ಲಿ ಅದು ಅಭಿವ್ಯಕ್ತವಾಗದಿದ್ದರೆ ಆ ಬಗೆಯ ತತ್ತ್ವಜ್ಞಾನವು ಭಾರತೀ-ಯರ ದೃಷ್ಟಿಯಲ್ಲಿ ಕಾಪದಾರ್ಥವೆ ಸರಿ. ಏಕೆಂದರೆ ಜೀವನವನ್ನು ಸಮಗ್ರವಾಗಿ ನೋಡುವದು ಭಾರತೀಯ ದೃಷ್ಟಿಯ ವೈಶಿಷ್ಟ್ಯವಾಗಿದೆ. ಶ್ರೀ ಅರವಿಂದರ ತತ್ತ್ವ ಜ್ಞಾನವು ಪೂರ್ವಭಾವಿತ ಕಲ್ಪನೆಗಳನ್ನು ಆಧರಿಸಿದ ಕಾರ್ಯಕಾರಣ ಸಿದ್ಧಾಂತವೇನೂ ಅಲ್ಲ; ಊಹಾಶಕ್ತಿಯಿಂದಾಗಲಿ ಭಾವನಾಶಕ್ತಿಯಿಂದಾಗಲಿ ಅದು ಪ್ರೇರಿತವಾಗಿಲ್ಲ. ಕೇವಲ ವೈಯಕ್ತಿಕ ಅನುಭವ-ಭ್ರಮೆಗಳನ್ನು ಅದು ಅವಲಂಬಿಸಿಲ್ಲ. ಅಥವಾ ಅವರ ಭಾಷೆಯೆಲ್ಲವೂ ಅನುಭಾವಿಗಳ ಸಾಂಕೇತಿಕ ಭಾಷೆಯಾಗಿಲ್ಲ. ಹೀಗೆ ಅಂದಾ-ಕ್ಷಣಕ್ಕೆ ಅನುಭಾವಿಗಳ ಗೂಢ ಅನುಭವಗಳ ರಹಸ್ಯಜ್ಞಾನವನ್ನು ಅದು ಬಿಟ್ಟು-ಕೊಟ್ಟಿದೆಯೆಂದೂ ಅರ್ಥವಲ್ಲ. ಈ ಬಗೆಯ ಅನುಭವಗಳು ಅತ್ಯಂತ ಮಹತ್ವ-ದವುಗಳಾದುದರಿಂದ ಅವನ್ನು ಬಿಡುವದು ಸಾಧ್ಯವೆ ಇಲ್ಲ. ಅನುಭಾವಕ್ಕೆ ಆಧುನಿಕ ತತ್ತ್ವಜ್ಞಾನವು ತಕ್ಕ ಸ್ಥಾನವನ್ನು ಈಗಾಗಲೆ ತನ್ನಲ್ಲಿ ಅಳವಡಿಸಿದೆ. ಅನುಭಾವವೂ

ಜೀವನದ ಒಂದಂಶವಾಗಿದೆಯೆಂದೂ ಅದರಿಂದ ದೊರೆಯುವ ಜ್ಞಾನವು ಅಂಗೀಕೃತ ಸಾಧನಗಳಲ್ಲಿ ಸಮಾವೇಶವಾಗುವದೆಂದೂ ಆಧುನಿಕ ತತ್ತ್ವವಿದರಲ್ಲಿ ಅತ್ಯಂತ ಸನಾತನಿಗಳೆಂದೆನಿಸಿಕೊಳ್ಳುವವರೂ ಒಪ್ಪಿಕೊಂಡಿದ್ದಾರೆ. ಶ್ರೀ ಅರವಿಂದರ ತತ್ತ್ವಜ್ಞಾನಕ್ಕೆ ವಿಕಾಸದ ಸತ್ಯಸಂಗತಿಯೆ ಆಧಾರವಾಗಿದೆಯೆಂಬ ಮಾತು ಅದರೊಳಗಿನ ಬಹು ಮುಖ್ಯ ಅಂಶವಾಗಿದೆ. ಆಧುನಿಕ ವಿಜ್ಞಾನವು ಈ ವಿಷಯದಲ್ಲಿ ಹೇಳುವದನ್ನೆಲ್ಲವನ್ನೂ ಅವರು ಅವಲೋಕಿಸಿದ್ದಾರೆ; ಅದರಲ್ಲಿಯ ಅದ್ಯಯಾವತ್ ಪ್ರವೃತ್ತಿಗಳೆಲ್ಲವನ್ನೂ ಅವರು ಗಮನಿಸಿದ್ದಾರೆ. ವಿಕಾಸದ ಪ್ರವೃತ್ತಿಗಳನ್ನು ಗಮನಿಸಿದ ಆಧುನಿಕ ತತ್ತ್ವಜ್ಞಾನಿಗಳು ಇವರೊಬ್ಬರೆ ಅಲ್ಲ; ಇನ್ನಿತರರೂ ಉಂಟು. ಇವರೆಲ್ಲರೂ ವಿಕಾಸವನ್ನು ಒಪ್ಪಿಕೊಳ್ಳುತ್ತ ಅತಿಮಾನವನ ಬಗೆಗೂ ಮುಂಬರುವ ಜನಾಂಗದ ಬಗೆಗೂ ಮಾತನಾಡಿದ್ದಾರೆ. ಇವರೆಲ್ಲರಲ್ಲಿ 'ಅತಿಮಾನವ' ಎಂಬ ಕಲ್ಪನೆಯ ಬಗ್ಗೆ ಒಂದೇ ಅಭಿಪ್ರಾಯವಿರದಿದ್ದರೂ ಹಲವು ಜನ ಮನೀಷಿಗಳು ಈ 'ಅತಿಮಾನವ'ನ ಬಗೆಗೂ ಅರಸೆಯ ಇಂದ್ರಿಯದ ಬಗೆಗೂ ಬರಲಿರುವ ನವ ಜನಾಂಗದ ಬಗೆಗೂ ತಮ್ಮ ವಿಚಾರಗಳನ್ನು ಬರೆದಿಟ್ಟಿರುವದುಂಟು. ಮಾನವ ಕುಲದ ಅಭಿವೃದ್ಧಿಯ ತಂತ್ರವೆ ಆದ ಯೋಗಶಾಸ್ತ್ರದಲ್ಲಿ ಹೊಸ ಪ್ರಯೋಗಗಳನ್ನು ಮಾಡುತ್ತ ಸ್ವಾನುಭವದ ಬೆಂಬಲದಿಂದ ನವ ಮಾನವಕುಲವನ್ನು ಬೇಗ ಕರೆತರುವ ಮಾರ್ಗವು ಇದುವೆ ಎಂದು ಸಾರಿ ಹೇಳಿರುವದೆ ಶ್ರೀ ಅರವಿಂದರ ವೈಶಿಷ್ಟ್ಯವಾಗಿದೆ. ವಿಕಾಸದ ಕಾರ್ಯಗತಿಯೇನೊ ಈಗಾಗಲೆ ಆರಂಭವಾಗಿದೆ. ಆದರೆ ಈ ಸಂದರ್ಭದಲ್ಲಿ ಮೇಲಕ್ಕೆ ಹೋಗಲು ಪ್ರಯತ್ನಿಸುವದರ ಜೊತೆಗೆ ಆ ಕಾರ್ಯಗತಿಗೆ ನೆರವಾಗುವಂಥ ಉನ್ನತತರ ಶಕ್ತಿಗಳನ್ನು ಮೇಲಿನಿಂದ ಕೆಳಗೆ ತರಲೂ ಪ್ರಯತ್ನಿಸುತ್ತ ಆ ವಿಕಾಸದ ವೇಗವನ್ನು ತ್ವರೆಗೊಳಿಸಲು ಮಾನವನು ಬುದ್ಧಿಪೂರ್ವಕವಾಗಿ ಯತ್ನಗೈಯುವದು ಸಾಧ್ಯವಿದೆಯೆಂಬ ಮಾತನ್ನು ಜಗತ್ತಿನ ನಿದರ್ಶನಕ್ಕೆ ಅವರು ತಂದುಕೊಟ್ಟಿದ್ದಾರೆ. ಇದರಿಂದಲೆ ಅವರ ಉಪದೇಶಕ್ಕೆ ವಾಸ್ತವತೆಯ ಮೆರುಗು ಒದಗಿ ಮೂರ್ತಸ್ವರೂಪವು ಪ್ರಾಪ್ತವಾಗಿದೆ. ಇವರ ತತ್ತ್ವಜ್ಞಾನದಲ್ಲಿದ್ದ ತೀವ್ರತೆಯಾಗಲಿ ಗಾಢತೆಯಾಗಲಿ ಕೇವಲ ಯುಕ್ತಿವಾದದಿಂದ ತಮ್ಮ ಅಭಿಪ್ರಾಯಗಳನ್ನು ಪ್ರತಿಪಾದಿಸುವ ಇತರ ತತ್ತ್ವಜ್ಞಾನಗಳಲ್ಲಿ ಕಂಡುಬರುವದಿಲ್ಲ. ಜೀವನವೆ ಕ್ರಿಯಾತ್ಮಕವಾದ ಗತಿಶೀಲತೆಯಿಂದ ವಿಕಾಸಗೊಳ್ಳುತಿರುವಾಗ, ಜೀವನದ ತತ್ತ್ವಜ್ಞಾನದಲ್ಲಿಯೂ ಅಂಥ ಗತಿಶೀಲತೆಯು ಕಂಡುಬಂದರೆ ಮಾತ್ರ ಅದು ನಿಜವಾದ ತತ್ತ್ವಜ್ಞಾನವಾದೀತು. ಜೀವಾತ್ಮನು ತನ್ನ ಅನಂತಯಾತ್ರೆಯಲ್ಲಿ ಪ್ರಗತಿಹೊಂದುವಂತೆ ಇಹಜೀವನವನ್ನು ಇದ್ದು ತೋರಿಸಲು ನೆರವಾಗಬಲ್ಲ ಆ ಸತ್ಯವನ್ನು ಅರಿಯಬೇಕೆನ್ನುವ ತೀವ್ರ ಸದಿಚ್ಛೆಯನ್ನು ಇಂಥ ತತ್ತ್ವಜ್ಞಾನವೆ ತೃಪ್ತಿಪಡಿಸಬಲ್ಲದು.

ಶತಕಾನುಶತಕಗಳ ವರೆಗೆ ಇಷ್ಟೊಂದು ಶೋಧನೆಗಳೂ ಪ್ರಯೋಗಗಳೂ

ನಡೆದ ಬಳಿಕ, ಇಂದು ಆಧುನಿಕ ವಿಜ್ಞಾನದ ಹೆಸರೆತ್ತಿ ಮಾತಾಡುವವರೆಲ್ಲರೂ ಹೇಳ ಹೊರಟಿರುವ ಮಾತು ಎಲ್ಲಿಗೆ ಬಂದು ನಿಂತಿದೆಯೆಂಬುದು ನೋಡತಕ್ಕಂತಹದಿದೆ. ಇರುವುದೆಲ್ಲವೂ ಒಂದೇ ಶಕ್ತಿ (Energy) ಯಾಗಿದ್ದು ಸ್ಥೂಲರೂಪದ ಜಡ ಸಹಿತವಾಗಿ ಉಳಿದುದೆಲ್ಲವೂ ಆ ಶಕ್ತಿಯ ಮಾರ್ಪಾಟವೆ ಎಂದೂ ಅಥವಾ ಕ್ಷಣ ಕ್ಷಣವೂ ಬದಲಾಗುತ್ತಿರುವ ಆ ಶಕ್ತಿಯು ಕಾಲಕಾಲಕ್ಕೆ ಪಡೆಯುವ ಅವಸ್ಥಾಂತರವೆ ಎಂದೂ ಇಂದಿನ ವಿಜ್ಞಾನವು ಹೇಳತೊಡಗಿದೆ; ಮೂಲಪದಾರ್ಥ ತತ್ತ್ವಗಳು ಅಥವಾ ಮಹಾಭೂತಗಳು (Elements) ಬಹುಸಂಖ್ಯಾಕವಾಗಿವೆಯೆಂದು ಮೊಟ್ಟಮೊದಲು ಹೇಳುತಿದ್ದರು; ಕಾಲಾಂತರದಲ್ಲಿ ಕ್ರಮಕ್ರಮವಾಗಿ ನಡೆದ ಶೋಧಗಳ ಪರಿಣಾಮವಾಗಿ ಜಡ ಮತ್ತು ಶಕ್ತಿ (matter and energy) ಎಂಬಿವು ಎರಡೆ ಮೂಲಪದಾರ್ಥತತ್ತ್ವಗಳೆಂದು ಸಾರತೊಡಗಿದರು. ಜಡವನ್ನೂ ಮತ್ತೆ ಮುಂದೆ ವಿಶ್ಲೇಷಿಸಿ ನೋಡಿದಾಗ ಅದು ಬಾಷ್ಪೀಭೂತವಾಗಿ ಇಂಗಿ ಆರಿಹೋದ ಬಳಿಕ 'ಶಕ್ತಿ' ಯೊಂದೆ ಸಾರ್ವಭೌಮವಾಗಿ ನಿಂತಿತು. ಆದರೆ ಪ್ರಾಣದ ಪ್ರಶ್ನೆ ಹಾಗೆಯೆ ಉಳಿಯಿತು. ಅದೂ 'ಶಕ್ತಿ' ಯೆಂದೆ ತೋರಿತು; ಆದರೆ ಅದರ ಪ್ರಕಾರವು ಬೇರೆ. ಇಂದಿನ ಮಿತಿಗೆ ಪ್ರಾಣ ಮತ್ತು ಶಕ್ತಿ ಇವುಗಳ ಕಲ್ಪನೆಯೊಳಗಿನ ಅಂತರವು ಕಡಿಮೆಯಾಗತೊಡಗಿದ್ದು ಅಂತರವನ್ನು ಸೂಚಿಸುವ ಸೀಮಾರೇಖೆ ತೆಳುವಾಗತೊಡಗಿದೆ. ಪ್ರಾಣಕ್ಕೆ ಈಗ ಚೇತನವೆಂದೆ ಹೆಸರು; ಚೇತನದಲ್ಲಿ ಸಂಕಲ್ಪ-ಬಲ, ಜಿಜ್ಞಾಸಾಸಾಮರ್ಥ್ಯ, ಜ್ಞಾನಸಂಗ್ರಹದ ಯೋಗ್ಯತೆ ಈ ಮುಂತಾದ ಎಲ್ಲ ಅಂಶಗಳೂ ಒಳಗೊಳ್ಳುತ್ತವೆ. ಪ್ರಾಣಕ್ಷೇತ್ರದಲ್ಲಿಯೂ ವಿಕಾಸವು ಸಂತತವಾಗಿ ನಡೆದಿದ್ದು ಐತಿಹಾಸಿಕ ಕ್ರಮದಲ್ಲಿ ಅದು ಮಾನವನ ವರೆಗೆ ಬಂದು ತಲುಪಿದೆ. ಕಾರ್ಯರೂಪಕ್ಕೆ ಬರುವ ಸಾಮರ್ಥ್ಯದ ಅಂಶಗಳು ಜಡದ ಶಕ್ತಿಯಲ್ಲಿ ಆನುವಂಶಿಕವಾಗಿ ಇರುವದರಿಂದಲೆ ಈ ಎಲ್ಲ ವಿಕಾಸವು ನಡೆದಿದೆಯೆಂಬುದಾಗಿ, ನಿಶ್ಚೇತನ ಶಕ್ತಿ (inconscient energy) ಯನ್ನೆ ಪರಮತತ್ತ್ವವನ್ನಾಗಿ ನಂಬುವ ಜಡವಾದಿಯು ಹೇಳುತ್ತಾನೆ. ಶಕ್ತಿಯು ತನ್ನನ್ನು ವಿಶಿಷ್ಟ ರೀತಿಯಲ್ಲಿ ವಿರ್ಪಡಿಸಿಕೊಳ್ಳುತಿದ್ದು ಆ ವಿರ್ಪಾಟದ ಒಂದು ಫಲರೂಪವೆ ಚೇತನವೆಂದು ಈ ಜಡವಾದಿಯು ಹೇಳುವದುಂಟು. ಆದರೆ ಆತ್ಮತತ್ತ್ವವೆ ಅದ್ವ ಸದ್ವಸ್ತುವೆಂದು ನಂಬುವವರು ಇಲ್ಲಿ ಹೀಗೆ ಕೇಳುತ್ತಾರೆ: 'ಚೇತನವೆಂಬುದು ಶಕ್ತಿಯಲ್ಲಾಗುವ ಮಾರ್ಪಾಟಗಳ ಫಲ ಮಾತ್ರವಾಗಿದ್ದರೆ ಈ ಮಾರ್ಪಾಟಕ್ಕೆ ಕಾರಣವೇನು? ಅದರ ತತ್ತ್ವವಾವುದು? ಶಕ್ತಿಯೆಂದಾಕ್ಷಣಕ್ಕೆ ಚೇತನದ ತತ್ತ್ವವನ್ನು ಅದು ಈಗಾಗಲೆ ಒಳಗೊಂಡಿದೆಯೆಂದೆ ಅರ್ಥವಾಗುವದಿಲ್ಲವೆ? ಅದೇನು ಶೂನ್ಯದೊಳಗಿಂದ ಹುಟ್ಟಬಲ್ಲದೆ? ಇದಲ್ಲದೆ, ಚೇತನದ ಒಂದು ಲಕ್ಷಣವಾದ ಸಂಕಲ್ಪದ ಇಲ್ಲವೆ ಇಚ್ಛಾಸ್ವಾತಂತ್ರ್ಯದ ಅಂಶವು ಶಕ್ತಿಯಲ್ಲಿ ಇದ್ದೆ ಇದೆಯೆಂದು ಸೂಚಿತವಾಗುವದಿಲ್ಲವೆ? ಈ ಸಂಕಲ್ಪದ ಬಲ

ದಿಂದಲೆ ಶಕ್ತಿಯು ತನ್ನನ್ನು ವಿವಿಧ ರೀತಿಗಳಲ್ಲಿ ಏರ್ಪಡಿಸಿಕೊಂಡು ಪ್ರಾಣವನ್ನೂ ಸಚೇತನ ಜೀವಕೋಟಿಯನ್ನೂ ಒಳಗೊಂಡ ಅಸಂಖ್ಯಾಕ ಘಟನೆಗಳನ್ನು ಉಂಟು ಮಾಡುವದಿಲ್ಲವೆ ?' ಜಡ-ಶಕ್ತಿ-ಪ್ರಾಣ-ಚೇತನಗಳಲ್ಲೆಲ್ಲ ಆತ್ಮತತ್ತ್ವವು ಅಂತಃಸ್ಥವಾಗಿದೆಯೆಂದು ಆತ್ಮವಾದಿಯು ಪ್ರತಿಪಾದಿಸುತ್ತಾನೆ. ಶಕ್ತಿಯಾಗಲಿ ಜಡವಾಗಲಿ ಮಾರ್ಪಡುತ್ತ ವಿಕಾಸಗೊಳ್ಳುವದಾದರೆ ಎರಡು ಮಾರ್ಗಗಳುಂಟು; ಆ ಮಾರ್ಪಾಟವು ಯಾಂತ್ರಿಕವಾಗಿಯಾದರೂ ಘಟಿಸಬೇಕು, ಇಲ್ಲವೆ ಒಂದು ಬಗೆಯ ಸ್ವಯಂನಿರ್ಣಯದಿಂದಲಾದರೂ ಘಟಿಸಬೇಕು. ಮೊದಲನೆಯ ಮಾರ್ಗದಲ್ಲಿ ಕೇವಲ ನಿಯತಿವಾದವುಂಟು ; ಎರಡನೆಯದರಲ್ಲಿ ಸಂಕಲ್ಪ ಅಥವಾ ಚೇತನದಂತಹದು ಏನೊ ಒಂದುಂಟು. ಇಂದು ನಿಯತಿವಾದ ( determinism ) ವನ್ನು ಯಾರೂ ಒಪ್ಪಿಕೊಳ್ಳುವದಿಲ್ಲ. ಇನ್ನುಳಿಯಿತು ಸ್ವಯಂನಿರ್ಣಯವು ; ಅಂದರೆ ನಿವರ್ತಿತವಾದ ಸಂಕಲ್ಪವೊ ಚೇತನವೊ ಎಂಬುದೊಂದು ಉಂಟೆಂದರ್ಥ. ಕೆಲವರಂತೂ ಜಡದ ಅಸ್ತಿತ್ವವನ್ನೆ ಸರ್ವಥಾ ಒಪ್ಪಿಕೊಳ್ಳುವದಿಲ್ಲ. ಆತ್ಮತತ್ತ್ವದಿಂದ ಜಡವೂ ಶಕ್ತಿಯೂ ಹುಟ್ಟಬಲ್ಲವೆ ಹೊರತು ಜಡ-ಶಕ್ತಿಗಳಿಂದ ಆತ್ಮತತ್ತ್ವವನ್ನು ನಾವು ಪಡೆಯಲಾರೆವು. ಈ ಎಲ್ಲ ಮಾತಿನ ಅರ್ಥವು ನಮಗಾಗಬೇಕಾದರೆ ಇಲ್ಲವೆ ಈ ವಿಷಯದಲ್ಲಿ ಪ್ರಯೋಗಗಳನ್ನು ಮಾಡುವದಾದರೆ, ಭೌತವಿಜ್ಞಾನಿಯ ಪರೀಕ್ಷಾನಲಿಕೆಯಿಂದಾಗಲಿ ಆತನ ಪ್ರಯೋಗಶಾಲೆಯಿಂದಾಗಲಿ ನಮಗೆ ಪ್ರಯೋಜನವಿಲ್ಲ. ಇವನ್ನು ಬಿಟ್ಟುಕೊಟ್ಟು ಮಾನವನ ಚೇತನಕ್ಷೇತ್ರಕ್ಕೆ ನಾವು ಸ್ಥಳಾಂತರ ಮಾಡಬೇಕಾಗುವದು. ಚೇತನವೆಂಬುದು ಮಾನವನಲ್ಲಿಯೆ ಉಚ್ಚತಮ ಮಟ್ಟದ ವರೆಗೆ ವಿಕಾಸಗೊಂಡಿದ್ದು ಆತ್ಮತತ್ತ್ವದ ಆವಿಷ್ಕಾರವು ಪರಮಾವಧಿ ಪ್ರಮಾಣದಲ್ಲಿ ಇಲ್ಲಿಯೆ ನಡೆದಿದೆಯೆಂದು ಹೇಳಬಹುದು. ಅಂತೆಯೆ ಭಾರತದ ಪ್ರಾಚೀನ ಋಷಿಗಳು ತಮ್ಮ ಒಳದಲ್ಲಿಯೆ ಆಳವಾಗಿ ಮುಳುಗಿದರು. ಜಡ ಮತ್ತು ಶಕ್ತಿ ಇವುಗಳ ಅಭ್ಯಾಸದ ವಿಷಯದಲ್ಲಿ ಪರೀಕ್ಷಾನಲಿಕೆಯೆ ಪ್ರಯೋಗದ ಮುಖ್ಯ ಸಾಧನವಾಗಿದ್ದರೆ, ಮಾನವನ ಹೃದಯ-ಬುದ್ಧಿಗಳೆ ಆತ್ಮತತ್ತ್ವದ ಪ್ರಯೋಗಶಾಲೆಯಾಗಿವೆ. ಆದುದರಿಂದಲೆ, ಆಧ್ಯಾತ್ಮಿಕ ವಿಷಯಗಳಲ್ಲಿ ಆಂತರಿಕ ಅನುಭವಗಳೆ ಹೆಚ್ಚು ನಂಬಲರ್ಹವಾದ ಅತಿ ಮಹತ್ವದ ಕೈಪಿಡಿಗಳಾಗಿವೆ. ಈ ಮಾರ್ಗದಿಂದಲೆ ಉಪನಿಷತ್ತುಗಳೂ ಗೀತೆಯೂ ಸತ್ಯವನ್ನು ಶೋಧಿಸಿದವು. ಆತ್ಮವೆ ಆದ್ಯತತ್ತ್ವವಾಗಿದ್ದು ಜಡವು ತಜ್ಜನ್ಯ ವಸ್ತುವಾಗಿದೆ. ಇದು ಹೇಗೆ ಎಂಬುದನ್ನು ನಾವೀಗ ನೋಡುವಾ.

ಆತ್ಮ ಮತ್ತು ಜಡ ಇವು ಒಂದನ್ನೊಂದು ಕಂಡರೆ ಆಗದಂಥ ಪರಸ್ಪರ ವಿರುದ್ಧ ವಸ್ತುಗಳೆಂದು ಮೇಲೆಮೇಲೆ ಕಾಣುತ್ತದೆ. ಆದರೆ, ಅಖಂಡ ಘನವಾಗಿ ತೋರುವ ಜಡವು ನಿಜವಾಗಿ ಹಾಗೆ ಇರದೆ ಸ್ಪರ್ಶಗ್ರಾಹ್ಯವಲ್ಲದ ಶಕ್ತಿಯ ಅದೊಂದು ರೂಪವಾಗಿದೆಯೆಂಬ ಸಿದ್ಧಾಂತಕ್ಕೆ ಆಧುನಿಕ ವಿಜ್ಞಾನವು ಈಗಾಗಲೆ ಬಂದಿದೆ. ಜಡವು

ತೋರಲಿಕ್ಕೆ ಮಾತ್ರ ನಿಶ್ಚೇತನವೂ ಕೇವಲ ಯಾಂತ್ರಿಕವೂ ಆಗಿದ್ದು ಅದರಲ್ಲಿ ಚೇತನದ ಕುರುಹು ಸ್ವಲ್ಪವೂ ಕಂಡುಬರುವದಿಲ್ಲ. ಆದರೆ ನಿಜವಾಗಿಯೂ ಅದು ಹಾಗೆ ಇರುವದೆ? ಜಡದೊಳಗಿಂದ ಕೆಲವೊಂದು ವಿಶಿಷ್ಟ ಪರಿಸ್ಥಿತಿಯಲ್ಲಿ ಚೇತನವು ವಿಕಾಸಗೊಳ್ಳುತ್ತ ಪ್ರಾಣದ ರೂಪವನ್ನು ಪಡೆಯುವದೆಂದಮೇಲೆ ಅದು ಅಲ್ಲಿ ಅತ್ಯಂತ ಸೂಕ್ಷ್ಮವಾದ ಬೀಜರೂಪದಿಂದ ಒಳಗೆ ನಿಗೂಢವಾಗಿ ಇರಲಿಕ್ಕೆಬೇಕು. ಇನ್ನು ಆತ್ಮದ ಸತ್ತ್ವಾಂಶವನ್ನು ನಾವು ಇಂದ್ರಿಯಗಳ ಮೂಲಕ ಗ್ರಹಿಸಲಾರೆವು, ಸಾಮಾನ್ಯ ರೀತಿಯಲ್ಲಿ ವರ್ಣಿಸಲೂ ಆರೆವು. ಅದು ಇಂದ್ರಿಯಾನುಭವಕ್ಕೂ ಭಾವಕ್ಕೂ ಅತೀತವಾಗಿದೆ. ಎಲ್ಲ ದ್ವಂದ್ವಗಳಿಗೂ ಅದು ಅತೀತವಾಗಿದೆ. ಉಪನಿಷತ್ತುಗಳು ಅದನ್ನು ವರ್ಣಿಸಿವೆಯೇನೊ ನಿಜ; ಆದರೆ ವಿಚಾರಕ್ಕೆ ವಸ್ತುವಾದುದನ್ನು ಏನಾದರೊಂದು ರೀತಿಯಲ್ಲಿ ವರ್ಣಿಸಲೆಬೇಕಲ್ಲವೆ, ಲಕ್ಷಣ ಹೇಳಲೆಬೇಕಲ್ಲವೆ? ಆ ರೀತಿಯಲ್ಲಿ ಮಾತ್ರ ಅವರು ವರ್ಣಿಸಿದ್ದಾರೆ. ಆದುದರಿಂದಲೆ ಅದನ್ನು ಅಜ್ಞಾತವೆಂದು ಹೇಳಿರುವರೆ ಹೊರತು ಅಜ್ಞೇಯವೆಂದು ಹೇಳಿಲ್ಲ; ಏಕೆಂದರೆ ಆತ್ಮತತ್ತ್ವದೊಡನೆ ಸಮರಸವಾದಾಗ ಯಾವೊಬ್ಬನು ಅದನ್ನು ಅನುಭವಿಸಿ ಅರಿತುಕೊಳ್ಳಬಹುದು. ಪರಮತತ್ತ್ವವೆ ಆದ ಸಾಕ್ಷಾತ್ ಆ ಆತ್ಮವು ಹೀಗೆ ವರ್ಣನಾತೀತವಾಗಿದ್ದರೂ 'ಸತ್-ಚಿತ್-ಆನಂದ'ವೆಂದು ಅದರ ಸ್ವರೂಪಲಕ್ಷಣಗಳನ್ನು ಹೇಳಬಹುದಾಗಿದೆ. ಇವು ಮೂರೂ ಏಕಮೇವಾದ್ವಿತೀಯವಾಗಿದ್ದು ಪ್ರತ್ಯೇಕವಾಗಿಯೂ ಭಿನ್ನವಾಗಿಯೂ ಇರುವದಿಲ್ಲ. ಆತ್ಮವು ಸ್ವಯಂಭುವಾಗಿದೆ, ಸನಾತನವಾಗಿದೆ. ಅದು ಕಾಲಾತೀತವೂ ಆಗಿದೆ; ಏಕೆಂದರೆ ಅದು ಹಿಂದೆ ಇತ್ತು, ಇಂದು ಇದೆ, ಮುಂದೆ ಅನಂತಕಾಲದವರೆಗೂ ಶಾಶ್ವತವಾಗಿದೆ. ಪ್ರತಿಯೊಂದನ್ನು ಅದು ಸಾಕ್ಷಿರೂಪದಿಂದ ನೋಡುತಿದೆ. ಸೂರ್ಯನಿಗೆ ಪ್ರಕಾಶವಿದ್ದಂತೆ ಶಾಶ್ವತತೆಗೆ ಕಾಲವಿದೆ. ಶಾಶ್ವತ ಅಸ್ತಿತ್ವದ ಪ್ರಕೃತಿಯು ಚೇತನದಿಂದ ಯುಕ್ತವಾಗಿದ್ದು ಅದರಲ್ಲಿ ಜ್ಞಾನ-ಇಚ್ಛೆ-ಕ್ರಿಯೆಗಳ ಐಕ್ಯವಿದೆ. ಮೂರನೆಯ ಲಕ್ಷಣವಾದ ಆನಂದದಲ್ಲಿ ಅನಂತತೆ-ಸೌಂದರ್ಯ-ಲೀಲೆಯ ಶುದ್ಧ ಸಂತೋಷ ಇವುಗಳ ಐಕ್ಯವಿದೆ.

ಆತ್ಮವು ಅಂತರ್ಯಾಮಿಯಾಗಿರುವದಲ್ಲದೆ ಪರಾತ್ಪರವೂ ಆಗಿದೆ. ಇದ್ದ, ಇರುವ ಮತ್ತು ಇರಲಿರುವ ಎಲ್ಲದಕ್ಕೂ ಅದುವೆ ಆಧಾರವಾಗಿದೆ. ಅದು ಸ್ವಯಂಭೂತವೂ ಸ್ವಯಂನಿರ್ಣೀತವೂ ಆಗಿರುವದಲ್ಲದೆ ಸ್ವಾನಂದ-ಲೀಲಾವಿಲೋಲವೂ ಆಗಿದ್ದು ಸಕಲ ಸೃಷ್ಟಿಯನ್ನು ತನ್ನ ಆನಂದ-ಲಕ್ಷಣದೊಳಗಿಂದ ನಿರ್ಮಿಸುತ್ತದೆ. ಈ ಲೀಲೆಯಲ್ಲಿಯೆ, ಈ ಸಂಭೂತಿಯಲ್ಲಿಯೆ ನಿವರ್ತನೆಯ ಮೂಲವಿದೆ. ನಿಃಸೀಮದೊಳಗಿಂದ ಸೀಮಿತವಾದುದೊಂದು ಹೊರಬಂದಾಗಲೆ ಸಂಭೂತಿಯು ಒದಗಿ ಸೃಷ್ಟಿಯೆನಿಸಿಕೊಳ್ಳುವದು. ಉದಾಹರಣೆಗಾಗಿ ಪ್ರತಿಯೊಂದು ಸಾಂತ ವಸ್ತುವು ಅನಂತತೆಯೊಳಗಿನ ಒಂದೊಂದು ಮಿತಿಯನ್ನು ಪಡೆದಿದೆ. ಗಣಿತಶಾಸ್ತ್ರದ ಪ್ರಕಾರ ಮಾತನಾಡುವ-

ದಾದರೆ ಪ್ರತಿ ಸಂಖ್ಯೆಯೂ ಅನಂತತೆಯೊಳಗಿನ ಒಂದೊಂದು ಮಿತಿಯೆ ಆಗಿದ್ದು ಅನಂತತೆಯೊಳಗಿಂದ ಇಡಿ ಅನಂತತೆಯನ್ನೆ ಕಳೆದರೂ ಅದು ಅಬಾಧಿತವಾಗಿಯೆ ಉಳಿಯುವದು. ಅಂತೆಯೆ ಉಪನಿಷತ್ತು 'ಓಂ ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ। ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ' ಎಂದು ಸಾರಿದೆ. ಅನಂತ ಲೋಕಗಳೂ ಅನಂತ ವಿಶ್ವಗಳೂ ಆ 'ಪೂರ್ಣ'ದೊಳಗಿಂದಲೆ ಹುಟ್ಟಿ ಬಂದಿದ್ದರೂ ಅದು ಎಂದಿನಂತೆ ಪೂರ್ಣವೆ ಆಗಿ ಉಳಿದಿದೆ. ಆದರೆ ವಸ್ತುತಃ ಪ್ರತಿ ಸೃಷ್ಟಿಯೂ ಒಂದೊಂದು ಮಿತಿಯೆ ಆಗಿದ್ದು ಅಷ್ಟರಮಟ್ಟಿಗೆ ಸಚ್ಚಿದಾನಂದವು ನಿವರ್ತಿತವಾಯಿತೆನ್ನಬೇಕು. ಇನ್ನೊಂದು ಉದಾಹರಣೆಯನ್ನು ಇಲ್ಲಿ ಕೊಡಬಹುದು. ಒಂದು ಕ್ಷಣ ನಾವು ಸಾಮಾನ್ಯ ಪ್ರಜ್ಞೆಯೊಂದನ್ನುಳಿದು ಉಳಿದೆಲ್ಲವನ್ನೂ ನಮ್ಮ ಚೇತನದೊಳಗಿಂದ ತೆಗೆದುಬಿಟ್ಟೆವೆಂದು ಕಲ್ಪಿಸುವಾ. ಆಗ ಏನು ಉಳಿಯುವದು? ನಾವು ಪ್ರಜ್ಞಾವಂತರಾಗಿದ್ದೇವೆಂಬುದರ ಪ್ರಜ್ಞೆಯು ನಮ್ಮಲ್ಲಿ ಉಳಿಯುವದು. ಅಂದರೆ ಚೇತನದ ಕ್ಷಿತಿಜದ ಮೇಲೆ ಬರುವದನ್ನೆಲ್ಲ ತಿಳಿಯಬಲ್ಲೆವೆಂಬ ಸಾಮರ್ಥ್ಯವು ನಮ್ಮಲ್ಲಿ ಇದ್ದಂತಾಗಲಿಲ್ಲವೆ? ಆದಾಗ್ಯೂ ಸೂರ್ಯನೊಬ್ಬನ ಪ್ರಜ್ಞೆ ನನ್ನಲ್ಲಿ ಉಂಟಾದ ಕೂಡಲೆ ಅಷ್ಟರಮಟ್ಟಿಗೆ ನನ್ನ ಪ್ರಜ್ಞೆಗೆ ಮಿತಿಯುಂಟಾಯಿತು. ಸೂರ್ಯನ ವಿಷಯವಾಗಿ ಜ್ಞಾನವುಂಟಾಯಿತೆಂದರೆ ಪ್ರಸ್ತುತ ಮುಹೂರ್ತದ ಮಟ್ಟಿಗೆ ಸೂರ್ಯನಿಂದ ವ್ಯತಿರಿಕ್ತವಾದ ಇನ್ನುಳಿದ ವಸ್ತುಗಳ ಬಗೆಗೆ ಅಜ್ಞಾನವು ಉಂಟಾಯಿತೆಂದರ್ಥ. ಏಕೆಂದರೆ ಎಲ್ಲ ಜೋರು ಸೂರ್ಯನ ಮೇಲೆಯೆ ಇದ್ದು ನನ್ನ ಚೇತನವು ಅದರಲ್ಲಿ ಮಗ್ನವಾಗಿ ಬಿಡುವದು. ಆದರೆ ಮಾನವನ ಮಿತ ಚೇತನಕ್ಕೂ ಸಚ್ಚಿದಾನಂದದ ಅಮಿತ ಚೇತನಕ್ಕೂ ವ್ಯತ್ಯಾಸವೆಂಬುದು ಖಂಡಿತವಾಗಿಯೂ ಇದೆ. ಸಚ್ಚಿದಾನಂದವು ಯಾವ ಮಿತಿಯಿಂದಲೂ ಅಬಾಧಿತವಾಗಿ ಉಳಿದರೆ, ಸೃಷ್ಟಿಯಲ್ಲಿ ನಿರ್ಮಿತವಾದ ಪ್ರತಿ ಸಾಂತ ವಸ್ತುವೂ ಅನಂತತೆಯ ಉಗಮದೊಳಗಿಂದ ಸೂಸಿ ಬರುವದನ್ನೆಲ್ಲ ಪಡೆದುಕೊಳ್ಳಬಲ್ಲ ತನ್ನ ಮುಂಚಿನ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತದೆ. ಈ ಮಿತಿಯೆ ನಿವರ್ತನೆಯೆನಿಸಿಕೊಳ್ಳುವದು, ಸೃಷ್ಟಿಯೆನಿಸಿಕೊಳ್ಳುವದು; ಸಂಭೂತಿಯೆಂದರೂ ಇದೇ ತಾನೆ, ಸಕಲ ವಿಶ್ವಗಳ ಹಾಗೂ ಜಡದ ಉಗಮವಾದರೂ ಇದೇ ಸರಿ. ನಮ್ಮ ಜ್ಞಾನದ ಮಟ್ಟಿಗೆ ಹೇಳುವದಾದರೆ, ಸೃಷ್ಟಿಗಳಲ್ಲೆಲ್ಲ ಜಡವೆ ಅತಿಶಯವಾಗಿ ಆತ್ಯಂತಿಕವಾಗಿದೆ. ಜಡ-ಚೇತನಗಳಲ್ಲಿ ತೋರಿಕೆಗಂತೂ ಪರಸ್ಪರ ವಿರೋಧವು ಅತಿಶಯವಾಗಿದ್ದು, ಒಂದರ ಸಂಬಂಧವು ಇನ್ನೊಂದಕ್ಕೆ ಇಲ್ಲವೇ ಇಲ್ಲವೆನ್ನುವಷ್ಟು ಅಂತರವು ಅವುಗಳಲ್ಲಿದೆಯೆಂದು ನಾವು ಭಾವಿಸುತ್ತೇವೆ. ಆದರೆ ಇದು ವಸ್ತುಸ್ಥಿತಿಯಲ್ಲ. ಜಡದೊಳಗಿಂದ ಪ್ರಾಣ-ಚೇತನಗಳು ವಿಕಾಸಗೊಳ್ಳುತಿರುವಾಗಲೆ ವಿಕಾಸದ ಮಧ್ಯದಲ್ಲಿ ಆ ಜಡವನ್ನು ಅವು ಸಂಘಟಿಸುತ್ತ ಉಪಯೋಗಿಸಿಕೊಳ್ಳುವದು

ವಾಸ್ತವಿಕ ಸತ್ಯವಾಗಿದೆ; ಜಡ-ಚೇತನಗಳು ಒಂದರಲ್ಲೊಂದು ನಿವರ್ತಿತವಾಗಿವೆ ಯೆಂಬ ಮಾತಿಗೆ ಈ ವಾಸ್ತವಿಕ ಸತ್ಯವೆ ಸಾಕ್ಷಿ. ಈ ನಿವರ್ತನೆಯ ಪ್ರಮಾಣವು ಜಡಕ್ಕೂ ಆತ್ಮಕ್ಕೂ ಇರುವ ಅಂತರವನ್ನು ಸೃಷ್ಟಿಯೆಂಬ ಮಾಪನದಿಂದ ಅಳೆದಾಗಲೆ ತಿಳಿದು ಬರುವದು. ಒಂದು ವಸ್ತುವಿನಲ್ಲಿ ಚೇತನವು ಹೆಚ್ಚು ಹೆಚ್ಚು ನಿವರ್ತಿತ-ವಾದಂತೆ ಆ ವಸ್ತುವಿನ ಸೃಷ್ಟಿಯಲ್ಲಿ ಅದು ಅಷ್ಟು ನಿಮ್ನ ಪ್ರಮಾಣದಲ್ಲಿ ಇರುವ-ದುಂಟು. ಆದರೆ ಸೃಷ್ಟಿಯಲ್ಲಿ ಚೇತನರಹಿತವಾದುದು ಯಾವದೂ ಇಲ್ಲ. ಜಡದಲ್ಲಿ ಯಾದರೂ ಚೇತನವು ಅತಿಶಯವಾಗಿ ನಿವರ್ತಿತವಾಗಿರುವದು. ಮುಕ್ತವಾದ ಅಂಶವು ಅಲ್ಲಿ ಅತಿ ಸ್ವಲ್ಪ ಪ್ರಮಾಣದಲ್ಲಿ ಇರುವದು; ಈ ಸ್ವಲ್ಪಾಂಶವನ್ನೆ ಹುಡುಕಿ ತೆಗೆಯುವದು ಸುಲಭವಲ್ಲ. ತದ್ವಿರುದ್ಧವಾಗಿ, ನಿವರ್ತನೆಯು ಕಡಿಮೆ ಪ್ರಮಾಣ ದಲ್ಲಿಯೂ ವಿವರ್ತನೆಯು ಹೆಚ್ಚು ಪ್ರಮಾಣದಲ್ಲಿಯೂ ಘಟಿಸಿದಾಗ ಚೇತನವು ಹೆಚ್ಚಿಗೆ ಮುಕ್ತವಾದುದು ಕಂಡು ಬರುವದು; ಈ ಮಾತು ಸಚೇತನ ಜೀವಕೋಟಿ ಯಲ್ಲಿಯೂ ಮಾನವನಲ್ಲಿಯೂ ಒಡೆದು ಕಾಣುತ್ತದೆ. ಇಲ್ಲಿಯ ವರೆಗೆ ಒದಗಿ ಬಂದ ವಿಕಾಸಕ್ರಮವನ್ನು ಅವಲೋಕಿಸಿದರೆ, ಮಾನವನೆ ಪರಮಾವಧಿ ವಿಕಾಸವನ್ನು ಹೊಂದಿದ ಪ್ರಾಣಿಯಾಗಿದ್ದು ಅವನಲ್ಲಿಯ ಚೇತನವು ಇತರ ಪ್ರಾಣಿಗಳಲ್ಲಿ ಇರು-ವದಕ್ಕಿಂತ ಅಧಿಕ ಪ್ರಮಾಣದಲ್ಲಿ ಮುಕ್ತವಾಗಿದೆಯೆಂಬುದು ಸ್ಪಷ್ಟವಾಗಿದೆ. ಅತಿ-ಮಾನವನು ಬಂದನೆಂದರೆ ಮಾನವನ ಚೇತನಕ್ಕಿಂತ ಅಧಿಕ ಪ್ರಮಾಣದಲ್ಲಿ ಮುಕ್ತ ವಾದ ಚೇತನವು ಆ ನವಜಾತಿಯಲ್ಲಿ ಇರಬಲ್ಲದು. ಎಲ್ಲ ಮುಕ್ತಿ ಅಥವಾ ಎಲ್ಲ ನೈಜ ಮುಕ್ತಿ ಎಂದರೆ ನಿವರ್ತನೆಯಿಂದ ಚೇತನವು ಪಡೆಯುವ ಮುಕ್ತಿಯೆ ಸರಿ. ನಮ್ಮ ಚೇತನಕ್ಕೆ, ತನ್ನ ನಿವರ್ತಿತ ಪರಿಸ್ಥಿತಿಯೊಳಗಿಂದ ಬಿಡುಗಡೆಹೊಂದಿ ಸಹಜ ಶುದ್ಧ ಸ್ವರೂಪದಲ್ಲಿ ಹೆಚ್ಚುಹೆಚ್ಚಾಗಿ ಇರಬಲ್ಲ ಸಾಮರ್ಥ್ಯವು ಪ್ರಾಪ್ತವಾದಂತೆ ನಾವು ಹೆಚ್ಚುಹೆಚ್ಚಾಗಿ ಮುಕ್ತರಾಗುವದುಂಟು. ಪಾತಂಜಲ ಯೋಗದ ಪ್ರಕಾರ ಆತ್ಯಂತಿಕ ಮುಕ್ತಿಯೆಂದರೆ ಮೂಲ ಸ್ವರೂಪದಲ್ಲಿ ನೆಲೆಗೊಂಡು ಇದ್ದು ಬಿಡುವದು—ಸ್ವರೂಪೇ ಅವಸ್ಥಾನಮ್.

ಇಂತು ಆತ್ಮ ಮತ್ತು ಜಡ ಇವೆರಡು ಒಂದೇ ಅಸ್ತಿತ್ವದ ಎರಡು ತುಟ್ಟತುದಿ ಗಳು. ಸತ್ ಮತ್ತು ಆನಂದ ಇವುಗಳನ್ನೂ ಒಳಗೊಂಡ ಬ್ರಹ್ಮತತ್ತ್ವದ ಮುಖ್ಯ ಲಕ್ಷಣವೆಂದರೆ ಚೇತನವೆ ಸರಿ. ಈ ಚೇತನದ ಪರಿಭಾಷೆಯಲ್ಲಿ ಮಾತನಾಡುವ ದಾದರೆ ಆತ್ಮವೆಂಬುದು ಸರ್ವಪ್ರಜ್ಞೆಯುಳ್ಳ ಶುದ್ಧ ಚೇತನವಾಗಿದೆ; ಹಾಗೂ ಜಡ ವೆಂಬುದು ನಿಜ್ಞಾನದ ಮೊಟ್ಟೆಯೆ ಆಗಿ ಅಚೇತನವಾಗಿಯೂ ಚೇತನದ ಯಾವ ಕುರುಹೂ ಇಲ್ಲದೆ ಕೇವಲ ಯಾಂತ್ರಿಕವಾಗಿಯೂ ಕಂಡುಬರುವದು. ಆದರೆ ಎರಡಕ್ಕೂ ಆಧಾರವಾಗಿರುವ ಭರ್ತಾರನೆಂದರೆ ಪುರುಷೋತ್ತಮನೆಂದು ಹೆಸರಾದ ಪರಮಾತ್ಮನು. ಈ ಪರಮಾತ್ಮನಲ್ಲಿಯೆ ಚೇತನಾಚೇತನಗಳು ಸರಿಹೊಂದಿ ಸಮ-

ನ್ವಯಗೊಳ್ಳುವವು. ಎಲ್ಲದರ ತಾಯಿ-ತಂದೆಯೆಂದರೆ ಈ ಪರಮಾತ್ಮ ತತ್ತ್ವವೆ. ಎಲ್ಲ ಸೃಷ್ಟಿಗೂ ಅಥವಾ ಯಾವುದೆ ಸಂಸ್ಕರಣಕ್ಕೂ ಅತೀತವಾಗಿರುವ ಪರಮ ಸದ್ವಸ್ತುವೆ ಅದಾಗಿದೆ. ಚೇತನಾಚೇತನಗಳನ್ನೂ ಅವುಗಳ ಎಲ್ಲ ಸಂಸ್ಕರಣಗಳನ್ನೂ ಒಳಗೊಂಡ ಪ್ರತಿಯೊಂದರ ಶುದ್ಧ ಸಾರವೆ ಅದಾಗಿದೆ.

ಆದುದರಿಂದ ಶ್ರೀ ಅರವಿಂದರ ತತ್ತ್ವಜ್ಞಾನದ ಪ್ರಧಾನ ರೂಪರೇಷೆಯು ಇಂತಿದೆ: ಕೇವಲ ಪರಾತ್ಪರವೆಂಬುದೊಂದು ಉಂಟು; ಹಾಗೂ ಕಲ್ಪನೀಯವಾದ ಎಲ್ಲ ಭಾವವನ್ನೂ ಮೀರಿ ಅದು ಭಾವಾತೀತವಾಗಿದೆ. ಇದಲ್ಲದೆ ಸತ್ತ್ವ-ಸಂಭೂತಿಗಳ ಹಾಗೂ ಚೇತನಾಚೇತನಗಳ ಸಮನ್ವಯವೂ ಅದಾಗಿದೆ. ಗೀತೆಯಲ್ಲಿ ಉಕ್ತವಾದಂತೆ ನಾಶವಾಗಬಲ್ಲ 'ಕ್ಷರ' ಕ್ಕೂ ನಾಶವನ್ನೆ ಅರಿಯದ 'ಅಕ್ಷರ' ಕ್ಕೂ ಅತೀತವಾಗಿರುವ ಪುರುಷೋತ್ತಮತತ್ತ್ವವೆಂದರೂ ಈ ಕೇವಲ ಪರಾತ್ಪರವೆ ಸರಿ. ಆದರೆ ಮಾನವೀ ಚೇತನವು ಈ ಪರಮ ತತ್ತ್ವವನ್ನು ಸತ್-ಚಿತ್-ಆನಂದವೆಂದು ಗ್ರಹಿಸಬಲ್ಲುದಾಗಿದೆ. ಅದಕ್ಕೆ ಆತ್ಮನಿರೂಪಣ ಶಕ್ತಿಯುಂಟು. ಲೀಲೆಗಾಗಿಯೂ ಆತ್ಮ-ಸಂತೋಷಕ್ಕಾಗಿಯೂ ಚಿತ್‌ಶಕ್ತಿಯ ಮುಖಾಂತರವಾಗಿ ಅದು ತನ್ನನ್ನು ಒಂದು ಸೀಮೆಯಲ್ಲಿ ಮರ್ಯಾದಿತವನ್ನಾಗಿ ಮಾಡಿಕೊಳ್ಳುತ್ತದೆ. ಈ ಮರ್ಯಾದೆಯೆ ಸೃಷ್ಟಿಯ ಮೊದಲ ಹೆಜ್ಜೆಯಾಗುವದು. ಸಕಲ ಸೃಷ್ಟಿಯೂ ನಿವರ್ತನೆಯಾಗಿದ್ದು ಜಡವೆಂಬುದು ಈ ನಿವರ್ತನೆಯ ಅತಿ ನಿಮ್ನವಾದ ಕೊನೆಯ ಬಿಂದುವಾಗಿದೆ. ಸತ್-ಚಿತ್-ಆನಂದವು ಮೂರಾಗಿರದೆ ಒಂದರಲ್ಲಿ ಮೂರು ಬೆರೆತ ಸ್ಥಿತಿಯಾಗಿದೆ. ಈ 'ಸಚ್ಚಿದಾನಂದ' ದಿಂದಲೆ ಅವರೋಹಣದ ಕ್ರಮವು ಮೊದಲಾಗುವದು. ಸಚ್ಚಿದಾನಂದವು ಏಕಮೇವ ಚೇತನವಾಗಿದ್ದು ಅರ್ಥಗ್ರಹಣದ ಅನುಕೂಲತೆಗಾಗಿ ಅದರ ಮೂರು ಲಕ್ಷಣಗಳಿಗೆ ಬೇರೆ ಬೇರೆ ಹೆಸರು ಕೊಡಲಾಗಿದೆ. ಸಚ್ಚಿದಾನಂದವು ನಿವರ್ತನೆಗೊಳ್ಳುವಾಗ ಇಡುವ ಮೊದಲ ಹೆಜ್ಜೆಯೆ ಅತಿಮಾನಸವು. ಋತಚೇತನವೆ ಈ ಅತಿಮಾನಸದ ಪ್ರಧಾನಲಕ್ಷಣವು; ಈ ಋತಚೇತನವೆಂದರೆ ಸತ್ಯದ ಸಾಕ್ಷಾತ್ ಬಲವೆ ಅದು. ಅತಿಮಾನಸದ ಅನಂತರ ಕೆಳಗೆ ಅಧಿಮನವೂ ಉಚ್ಚತರಮನವೂ ಮನವೂ ಬರುವವು. ಆ ಮೇಲೆ ಚೈತ್ಯವೂ ಪ್ರಾಣವೂ ಕೊನೆಗೆ ಜಡವೂ ಇರುವವು. ಇದುವೆ ನಿವರ್ತನೆಯ ಅವರೋಹಣ ಕ್ರಮವು. ಚೇತನವು ಆರೋಹಣಕ್ರಮದಲ್ಲಿ ಕೊನೆಕೊನೆಗೆ ಶುದ್ಧ ಚೇತನವಾಗುತ್ತ ಸಚ್ಚಿದಾನಂದದ ಅವಸ್ಥೆಯನ್ನು ತಲುಪುವ ವರೆಗೂ ತನ್ನನ್ನು ಪುನಃ ಶೋಧಿಸಿಕೊಳ್ಳುವದೆ 'ವಿಕಾಸ' ವೆಂದು ವರ್ಣಿಸಿ ಹೇಳಬಹುದು. ಬಹು ಸರಳ ಶಬ್ದಗಳಲ್ಲಿ ಹೇಳುವದಾದರೆ, ಆ 'ತತ್ತ್ವ' ಇಲ್ಲವೆ 'ಸದ್ವಸ್ತು'ವೆಂಬುದು ಪ್ರಕೃತಿಯಿಂದ ಏಕವೂ ಅನಂತವೂ ಸಕಲ-ದ್ವಂದ್ವಸಂಬಂಧಾತೀತವೂ ಆದ ಶುದ್ಧ ಚೇತನವಾಗಿದೆ. ಅದು ತಾನಾಗಿ ಲೀಲೆಗಾಗಿ ಮಿತಿಗೆ ಒಳಪಡುತ್ತದೆ. ಇಂಥ ಪ್ರತಿ 'ಮಿತಿ'ಯೂ ಮೂಲದಿಂದ

ಅಷ್ಟಷ್ಟು ಭೇದಗೊಂಡ ನಿವರ್ತನೆಯಾಗಿದ್ದು ಈ ನಿವರ್ತನೆಯೆ ಸೃಷ್ಟಿಗೆ ಅವಕಾಶವನ್ನು ಒದಗಿಸುವದು. ಆ ಸದ್ವಸ್ತುವು ಅನಂತವಾದುದರಿಂದ ಯಾವ ಭೇದ-ನಿವರ್ತನ-ಸೃಷ್ಟಿಗಳಾಗಲಿ ಮೂಲ ಸದ್ವಸ್ತುವಿನಲ್ಲಿ ಯಾವದೆ ಬಗೆಯ ವಿಕಾರವನ್ನಾಗಲಿ ವ್ಯಯವನ್ನಾಗಲಿ ಉಂಟುಮಾಡಲಾರವು. ಚೇತನವು ಅವಿಕಾರ್ಯವೂ ಅವ್ಯಯವೂ ಅಚ್ಛೇದ್ಯವೂ ಆಗಿರುವದರಿಂದ ಅದರ ಆತ್ಮನಾಶವು ಸಾಧ್ಯವೆ ಇಲ್ಲ. ಅಂತೆಯೆ ಆರೋಹಣದ ಚಲನೆಯು ಮೊದಲಾಗಲೆಬೇಕು. ಈ ಆರೋಹಣವೆ ವಿಕಾಸವಾಗಿದ್ದು, ಎಲ್ಲಿಂದ ಹೊರಟಿತ್ತೊ ಅಲ್ಲಿಗೆ ಅಂದರೆ ಶುದ್ಧ ಚೇತನಸ್ವರೂಪಕ್ಕೆ ಬಂದು ಮುಟ್ಟುವದಂತಾಗುವದು.

ಶ್ರೀ ಅರವಿಂದರು ಇನ್ನೊಂದು ಅಂಶವನ್ನು ಒತ್ತಿ ಹೇಳುತ್ತಾರೆ: 'ಒಂದೆಡೆಗೆ ಸಚ್ಚಿದಾನಂದವಿದೆ, ಇನ್ನೊಂದೆಡೆಗೆ ಮನವೂ ಅದನ್ನು ಬೆಂಬತ್ತಿ ಬರುವ ಇತರ ವಸ್ತುಗಳೂ ಇವೆ; ಮಧ್ಯದಲ್ಲಿ ಕೊಂಡಿಯಂತೆ ಅತಿಮಾನಸವಿದೆ.' ಸಚ್ಚಿದಾನಂದದ ಶಕ್ತಿಯೆ ಅತಿಮಾನಸವು. ಸಚ್ಚಿದಾನಂದದ ಕ್ರಿಯಾಶೀಲ ಜ್ಞಾನಶಕ್ತಿಯೂ ಕ್ರತು-ಶಕ್ತಿಯೂ ಅದುವೆ ಆಗಿದೆ. ಈ ಅತಿಮಾನಸದ ಮಾಧ್ಯಮದಿಂದಲೆ ನಿವರ್ತನೆ-ವಿವರ್ತನೆಗಳೆರಡೂ ಸಂಭವಿಸುವವು. ಸಚ್ಚಿದಾನಂದದ ಮೂರು ಲಕ್ಷಣಗಳನ್ನು ಒಂದನ್ನೊಂದು ಪ್ರತ್ಯೇಕಿಸದೆ ವಿಭಾಗಿಸದೆ ವಿಕಸನಗೊಳಿಸುವ ಶಕ್ತಿ ಅತಿಮಾನಸ-ದಲ್ಲಿದೆ. ವಸ್ತುಸ್ಥಿತಿಯೇನೆಂದರೆ, ಈ ಅತಿಮಾನಸದ ಉಚಿತ ಕಾರ್ಯವನ್ನೂ ಅದರ ವಿವರಗಳನ್ನೂ ಶೋಧಿಸುತ್ತ ಮನುಕುಲದ ವಿಕಾಸಕ್ಕಾಗಿ ಅದರ ಪೂರ್ಣ ಶಕ್ತಿ-ಯನ್ನು ಎಂತು ಉಪಯೋಗಿಸಿಕೊಳ್ಳುವದೆಂಬ ಬಗೆಗೆ ಸಾಧನೆಗೈದಿರುವದೆ ಶ್ರೀ ಅರವಿಂದರ ಜೀವನದ ಕೇವಲ ವೈಶಿಷ್ಟ್ಯವಾಗಿದೆ. ಈ ಅತಿಮಾನಸದ ಸಹಾಯವಿಲ್ಲದೆ ಮನ ಪ್ರಾಣ-ಜಡಗಳಲ್ಲಿ ದಿವ್ಯತ್ವವನ್ನು ನೆಲೆಯೂರಿಸುವದು ಸಾಧ್ಯವೆ ಇಲ್ಲ. ಜೀವಾತ್ಮನು ಆರೂಢನಾಗಬಲ್ಲನೇನೊ ನಿಜ; ಆದರೆ ಈ ಪೃಥ್ವಿಯಲ್ಲಿ ದಿವ್ಯತೆ-ಯನ್ನು ತುಂಬುತ್ತ ದೈವೀ ಜೀವನವನ್ನು ಪೃಥ್ವಿಯ ಮೇಲಿನ ನನಸನ್ನಾಗಿ ಮಾಡಲು ಆರೂಢಸ್ಥಿತಿಯಲ್ಲಿದ್ದ ಆತ್ಮವು ಇಳಿದು ಬರಬೇಕಾದರೆ ಅತಿಮಾನಸಶಕ್ತಿಯನ್ನು ಸಂಪಾದಿಸಿಕೊಂಡು ಅದನ್ನು ಉಪಯೋಗಿಸಿಕೊಳ್ಳುವದು ಅತ್ಯವಶ್ಯವಾಗಿದೆ.

ಇನ್ನು ಮಾನವಕುಲದ ಕಡೆಗೆ ಕಣ್ಣಾಡಿಸಿದರೆ ಏನು ಕಂಡು ಬರುವದು? ಒಂದು ನಿಶ್ಚಿತ ಮಟ್ಟವನ್ನು ಮೀರಿ ಹೋಗುವದು ಅದಕ್ಕಿನ್ನೂ ಸಾಧ್ಯವಾಗಿಲ್ಲವೆಂದು. ಆದರೆ ಚೇತನವು ಮಾನವನಲ್ಲಿ ವಿಕಾಸಗೊಂಡು ಆತ್ಮಪ್ರಜ್ಞೆಯನ್ನು ಬೆಳಿಸಿಕೊಂಡಿರುವದರಿಂದ, ವಿಕಾಸದ ಇನ್ನು ಮುಂದಿನ ಹೆಜ್ಜೆಯನ್ನು ಪ್ರಜ್ಞಾಪೂರ್ವಕವಾಗಿಯೆ ಇಡುವದು ಸಾಧ್ಯವೆಂಬ ಮಾತು ಈಗ ದೃಗ್ಗೋಚರವಾಗಿದೆ. ಪ್ರತಿ ಜೀವಾತ್ಮನಲ್ಲಿ-ರುವ ಚೇತನವು ಹಲವಾರು ಅಂಶಗಳಿಂದ ಸೀಮಿತವಾಗಿ ಪ್ರತಿಬದ್ಧವಾಗಿರುವದುಂಟು; ದೇಹ, ಪ್ರಾಣದ ಪ್ರವೃತ್ತಿಗಳು, ಮನದ ಮಿತಿಗಳು, ಅಹಂಕಾರ, ಸಾಕ್ಷಾತ್ ಸತ್ಯವನ್ನು ಅರಿಯಲಾರದ ಅಸಾಮರ್ಥ್ಯ ಇವೇ ಮೊದಲಾದ ಅಂಶಗಳು

ಆ ಚೇತನಕ್ಕೆ ಬಂಧನಕಾರಿಯಾಗಿರುವವು. ಇಷ್ಟೆಲ್ಲ ಬಂಧನಗಳಿದ್ದರೂ ನಮಗೆ ತಿಳಿದ ಮಟ್ಟಿಗೆ, ಸೃಷ್ಟಿಯಲ್ಲಿರುವ ಜೀವಕೋಟಿಯಲ್ಲೆಲ್ಲ 'ಮಾನವನ ಜನುಮವೆ ಅತಿ ದೊಡ್ಡದು'; ಏಕೆಂದರೆ, ವಿಕಾಸದ ಕಾರ್ಯದಲ್ಲಿ ತನಗೆ ತಾನೆ ಸಹಾಯಕನಾಗಿ-ರುತ್ತ ಪ್ರಕೃತಿಗೆ ಸಹಯೋಗಿಯಾಗಬಲ್ಲ ಸಾಮರ್ಥ್ಯವು ಅವನಲ್ಲಿ ಮಾತ್ರ ಉಂಟು. ಅವನು ತನ್ನ ವೈಯಕ್ತಿಕ ವಿಕಾಸ-ಮುಕ್ತಿಗಳಿಗಾಗಿ ಮಾತ್ರವಲ್ಲದೆ ಸಮಸ್ತ ಮನು-ಕುಲದ ವಿಕಾಸಕ್ಕಾಗಿ, ಮಾನವ್ಯದ ಚರಿತ್ರೆಯಲ್ಲಿಯೆ ಅಪೂರ್ವವೆಂಬಂತೆ ಅತಿ ತೀವ್ರ ವಾಗಿ ಸ್ಥಾಪಿಸಬೇಕಾದ ನವಮನ್ವಂತರಕ್ಕಾಗಿ, ಅತಿಮಾನವರ ನೂತನ ಸಂತಾನದ ನಿರ್ಮಾಣಕ್ಕಾಗಿ ತನ್ನ ಪಾತ್ರವನ್ನು ವಹಿಸಲೆ ಬೇಕು. ವಾನರಯುಗದ ಅನಂತರ ಇಂದಿನ ಮಾನವಕುಲವು ಎಷ್ಟು ಖಚಿತವಾಗಿ ಬಂತೊ ಅಷ್ಟೆ ಖಚಿತವಾಗಿ ವಿಕಾಸಕ್ರಮದಲ್ಲಿ ಇನ್ನು ಮುಂದಿನ ಹೆಜ್ಜೆಯೆಂದು ನೂತನತರ ಮಾನವನು ಬರ-ಲಿರುವನು. ಇದುವೆ ಶ್ರೀ ಅರವಿಂದರ ತತ್ತ್ವಜ್ಞಾನದ ತಿರುಳು. ಇದುವೆ ಅವರು ಸ್ಥಾಪಿಸಿದ ಮಾನವವಿಕಾಸ-ಸಿದ್ಧಾಂತದ ಹುರುಳು. ಆಧುನಿಕ ಯುಗದಲ್ಲಿ ಪ್ರಯೋಗತಃ ಸಿದ್ಧಮಾಡಿ ತೋರಿಸಲ್ಪಟ್ಟ ಅನೇಕ ವೈಜ್ಞಾನಿಕ ಸತ್ಯಗಳ ಆಧಾರದ ಮೇಲೆ ಅವರ ತತ್ತ್ವಶಾಸ್ತ್ರಮಂದಿರವು ರಚಿತವಾಗಿದೆಯೆಂಬುದನ್ನು ಸುಲಭವಾಗಿ ನಾವು ಅರಿತುಕೊಳ್ಳಬಹುದು.

ಈಗಾಗಲೆ ಪ್ರಗತಿಪಥದಲ್ಲಿದ್ದ ವಿಕಾಸಕ್ರಮದ ಯೋಜನೆಯಲ್ಲಿ ಮಾನವನು ಹೇಗೆ ಸಹಾಯಕನಾಗಬಲ್ಲನೆಂಬ ಪ್ರಶ್ನೆಯೊಂದು ಇಲ್ಲಿ ಉದ್ಭವಿಸುತ್ತದೆ. ಈ ಪ್ರಶ್ನೆ ನಮ್ಮನ್ನು ಸ್ವಾಭಾವಿಕವಾಗಿ, 'ಪೂರ್ಣಯೋಗ' ವೆಂದು ಖ್ಯಾತವಾದ ಅವರ 'ಯೋಗ' ವಿಷಯದತ್ತ ಕರೆದೊಯ್ಯುವದು.

'ದೈವೀ ಜೀವನ' ವು ತಾತ್ತ್ವಿಕ ವಿಭಾಗವಾಗಿದ್ದರೆ, 'ಪೂರ್ಣಯೋಗ' ವು ಅನುಷ್ಠಾನ ವಿಭಾಗವಾಗಿದೆ. ಈ ಅಮೋಘ ಅಸ್ತಿತ್ವದ ರಹಸ್ಯವೇನು, ಅದು ಎಂದು ಏಕೆ ಉಂಟಾಯಿತು, ಅದನ್ನು ಯಾರು ಉಂಟುಮಾಡಿದರು ಎಂಬೀ ಅಂಶಗಳನ್ನು ಮೊದಲನೆಯ ವಿಭಾಗವು ಪರಿಶೀಲಿಸುವದು. ಈ ಅಸ್ತಿತ್ವವು ಹೇಗೆ ಒದಗಿ ಬಂತೆಂಬುದರ ರಹಸ್ಯವನ್ನು ಎರಡನೆಯ ವಿಭಾಗವು ಪರಿಶೀಲಿಸುವದು. ನಾವು ಅರಿತ ಮಟ್ಟಿಗೆ, ಈ ಅಸ್ತಿತ್ವವೆಂಬುದು ಮಾನವನೊಬ್ಬನಿಗೆ ಮಾತ್ರ ರಹಸ್ಯವೊ ಸಮ-ಸ್ಯೆಯೊ ಆಗಿಬಿಟ್ಟಿದೆ. ಇನ್ನಾವ ಜೀವಕೋಟಿಗೂ ಅದು ಹಾಗೆ ಆಗಿಲ್ಲ. ಆದುದ-ರಿಂದ ಸಮಸ್ಯೆಯನ್ನು ಅವನೆ ಬಿಡಿಸಬೇಕಾಗಿದೆ. ಮಾನವ್ಯದ ದೀರ್ಘ ಇತಿಹಾಸದಲ್ಲಿ ಅನೇಕ ಪರಿಹಾರೋಪಾಯಗಳು ಸೂಚಿತವಾಗಿದ್ದು ಅವುಗಳ ಪ್ರಯೋಗವನ್ನಿ ವರೂ ಮಾಡಿನೋಡಲಾಗಿದೆ. ಈಗ ಶ್ರೀ ಅರವಿಂದರಾದರೂ ಮತ್ತೊಂದು ಪರಿ-ಹಾರೋಪಾಯವನ್ನು ಸೂಚಿಸಿದ್ದಾರೆ. ಅವರ ಯೋಗವು ಸಮಗ್ರ ಮಾತ್ರವಾಗಿ-ರುವದಲ್ಲದೆ ಎಲ್ಲ ಯೋಗಗಳ ಸಮನ್ವಯವೂ ಆದಾಗಿದೆ. ಮುಖ್ಯವಾಗಿ ಅತಿ

ಮಹತ್ವದವುಗಳೆಂದು ಹೆಸರಾದ ಜ್ಞಾನ-ಭಕ್ತಿ-ಕರ್ಮ ಯೋಗಗಳ ಸಮನ್ವಯವು ಇಲ್ಲಿ ಉಂಟೆಂದು ಈ ಯೋಗವು ಪ್ರತಿಪಾದಿಸುತ್ತದೆ. ಶ್ರೀ ಅರವಿಂದರು ಏನನ್ನು ಸೂಚಿಸಿರುವರೆಂಬುದನ್ನು ನಾವೀಗ ನೋಡುವಾ.

ತಾನು ಏನಿರುವೆ, ತನ್ನಲ್ಲಿ ಏನಿದೆ ಎಂಬ ಬಂಡವಲದಿಂದ ಮಾನವನು ಮುಂದಿನ ಧ್ಯೇಯಕ್ಕಾಗಿ ಆರಂಭವನ್ನಂತೂ ಮಾಡಬೇಕಾಗಿದೆ. ಅವನ ಧ್ಯೇಯವಾದರೊ ಮಹತ್ತರವಾದುದೆಂಬುದು ಸ್ಪಷ್ಟವೆ ಇದೆ. ಅವನು ತನ್ನ ವ್ಯಕ್ತಿಮತ್ತೆಯನ್ನು ಸಮಗ್ರವನ್ನಾಗಿ ಮಾಡಲು ವೈಯಕ್ತಿಕ ಮುಕ್ತಿಯನ್ನು ಸಾಧಿಸಿಕೊಳ್ಳುವದಲ್ಲದೆ ಶಾಂತಿಸಾಮರಸ್ಯಗಳನ್ನೂ ತನ್ನಲ್ಲಿ ಸ್ಥಾಪಿಸಿಕೊಳ್ಳಬೇಕಾಗಿದೆ. ಆ ಬಳಿಕ ಅವನು ಬಾಹ್ಯಜಗತ್ತಿನೊಡನೆ ಸಾಮರಸ್ಯವನ್ನು ಪ್ರಸ್ಥಾಪಿಸಬೇಕು; ಸಮಸ್ತ ಮಾನವ ಕುಲದ ಮೋಕ್ಷಕ್ಕಾಗಿ ಅವನು ದುಡಿಯಬೇಕು. ಮುಕ್ತಿಯೊಂದು ಸಾಧ್ಯವಾಗಿ ಪರಾತ್ಪರದೊಡನೆ ಕೈವಲ್ಯಸುಖವನ್ನು ಹೊಂದುವದರಿಂದ ಮಾನವಕುಲದ ಮೋಕ್ಷವು ಒದಗಿ ಬರುವದಿಲ್ಲವೆಂದೂ ಅದು ಒದಗಿ ಬರಬೇಕಾದರೆ ಮನ-ಪ್ರಾಣ-ಜಡಗಳು ಇಲ್ಲಿಯೆ ಇಹಲೋಕದಲ್ಲಿರುವಾಗಲೆ ದಿವ್ಯವಾಗಿ ಪರಿವರ್ತಿಸಲ್ಪಡಬೇಕೆಂದೂ ಶ್ರೀ ಅರವಿಂದರು ಉಪದೇಶಿಸಿದ್ದಾರೆ. ಅತಿಮಾನಸವನ್ನು ಅರಿತುಕೊಂಡು ಅದರ ಶಕ್ತಿಗಳನ್ನು ಆವಾಹಿಸಿದುದಾದರೆ ಈ ಪರಿವರ್ತನೆಯ ಉದ್ದೇಶವು ಸಫಲವಾಗಬಲ್ಲುದೆಂದು ಅವರ ಆಶ್ವಾಸನವಿದೆ.

ಪ್ರಸ್ತುತ ಮುಹೂರ್ತದಲ್ಲಿ ಮಾನವನು ಆ ಬಗೆಯ ದೈವೀ ಜೀವನಾವಸ್ಥೆಯ ಆದರ್ಶದಿಂದ ಬಹು ದೂರದಲ್ಲಿದ್ದಾನೆ. ಇಂಥ ಅವಸ್ಥಾಪ್ರಾಪ್ತಿಯ ದೃಷ್ಟಿಯಿಂದ ಅವನಲ್ಲಿ ಸದ್ಯಕ್ಕಿರುವ ಉಪಕರಣಗಳು ಒಂದಿಷ್ಟು ಸ್ಥೂಲವಾಗಿಯೊ ಅಪರ್ಯಾಪ್ತವಾಗಿಯೊ ಇವೆ. ಮೊದಲನೆಯದಾಗಿ, ನಿವರ್ತನೆಯೆಂಬ ಘಟನೆಯ ಪ್ರಾರಂಭದಲ್ಲಿ ಉಂಟಾದ ಗತಿಯ ಮೊತ್ತ (momentum) ಕ್ಕೆ ಇನ್ನೂ ಅತನು ಒಳಗಾಗಿದ್ದಾನೆ. ತನ್ನ ಈ ಎಲ್ಲ ಚಿಕ್ಕ, ಆರಂಭಗಳಿಂದ ಮಾನವನು ಭಗವಂತನ ದೇಗುಲವೊಂದನ್ನು ನಿರ್ಮಿಸಿ ಅಲ್ಲಿ ' ಆತನು ಬಂದು ನೆಲಿಸುವಂತೆ ಆವಾಹನೆ ಮಾಡಬೇಕಾಗಿದೆ. ಜೀವಾತ್ಮನು ಸಾಮಾನ್ಯವಾಗಿ ಬಹಿರ್ಮುಖನೆಂದೂ ಅಂತರ್ಮುಖಿಯಾಗಿ ಅಂತರಾತ್ಮನ ಕಡೆಗೆ ನೋಡುತ್ತ 'ಮೂರುತಿಯನೆ ನಿಲ್ಲಿಸೊ' ಎಂದು ಅನ್ನತೊಡಗುವದು ಅತಿ ಅಪರೂಪವೆಂದೂ ಉಪನಿಷತ್ತುಗಳು ಸಾರುತ್ತವೆ. ಈ ಬಹಿರ್ಮುಖತ್ವದ ಪರಿಣಾಮವಾಗಿಯೆ ಮಾನವನ ದೇಹದಲ್ಲಿ ಪ್ರಬಲವಾದ ಸ್ವದ್ರವ್ಯವೊಂದಿದೆ. ವಿಷಯಸುಖಕ್ಕಾಗಿ ಎಳಸುವ ಮಾನಸಿಕ ಪ್ರಾಣಿಕ ಪ್ರವೃತ್ತಿಗಳು ಅವನ ಚಂಚಲ ಮನವನ್ನು ಪ್ರಲೋಭನಗೊಳಿಸಿ ಅಂತರಾತ್ಮನನ್ನು ಕುರಿತು ಏಕಾಗ್ರತೆಯುಂಟಾಗದಂತೆ ಆ ಪ್ರಬಲ ದ್ರವ್ಯವು ನೋಡಿಕೊಳ್ಳುತ್ತದೆ. ಇದರಿಂದ ಜನಿಸಿ ಬರುವ ಹೃದಯದೌರ್ಬಲ್ಯವೂ ಸಂಕಲ್ಪದೌರ್ಬಲ್ಯವೂ ಜೀವಾತ್ಮನಲ್ಲಿ ಬಾಹ್ಯವಸ್ತುಗಳ ವಿಷಯದಲ್ಲಿ ಪ್ರಬಲ

ಆಸಕ್ತಿಯನ್ನು ನೊಳೆಯಿಸುತ್ತವೆ. ಸುಖದುಃಖ, ಲಾಭಾಲಾಭ, ರಾಗದ್ವೇಷ ಎಂಬೀ ದ್ವಂದ್ವಗಳಿಗೆ ಈ ಆಸಕ್ತಿಯೆ ಮೂಲ ಕಾರಣವು. ಮುಖ್ಯ ಮಾತೆಂದರೆ, ಮನ ವೆಂಬುದೆ ಒಂದು ದುರ್ಬಲ ಉಪಕರಣವಾಗಿದ್ದು ಅದರ ಶಕ್ತಿಗಳು ಸೀಮಿತವಾಗಿವೆ. ಆಯುಷ್ಯದಲ್ಲಿ ಸೇವಕನಾಗಿರಲು ಮಾತ್ರ ಮನವು ತಕ್ಕುದಾಗಿದೆ. ನಮ್ಮ ಅನುಭವ ಗಳ ಸಮೀಕರಣಕ್ಕಿಂತ ಹೆಚ್ಚಾಗಿ ಪೃಥಕ್ಕರಣಕ್ಕಾಗಿ ಈ ಮನವು ಉಪಯುಕ್ತ ವಾಗಿದೆ. ವಸ್ತುಗಳೊಳಗಿನ ಭೇದಗಳನ್ನು ಅದು ಹೆಚ್ಚು ಪರಿಣಾಮಕಾರಕವಾಗಿ ತಿಳಿಸಿಕೊಡಬಲ್ಲದು. ವಿಶ್ಲೇಷಣೆಗಾಗಿ ಅದು ಹೆಚ್ಚು ಪ್ರಯೋಜನಕಾರಿಯಾಗಿದ್ದು ಅಸ್ತಿತ್ವದ ಸಮಗ್ರತೆಯನ್ನು ಅರಿಯಲು ಅದು ಅಸಮರ್ಥವಾಗಿದೆ.

ಇಷ್ಟೆಲ್ಲ ಅಡಚಣೆಗಳಿದ್ದರೂ ಮಾನವನು ಘನಘೋರವಾಗಿ ಹೋರಾಡಿದ್ದಾನೆ; ಅವನ ಪ್ರಯತ್ನಗಳೇನೂ ವಿಫಲವಾಗಿಲ್ಲ. ಬಂದ ತೊಂದರೆಗಳನೆಲ್ಲ ಮೀರಿ ಸತ್ಯ-ವನ್ನರಿತು ಜೀವನವನ್ನು ಊರ್ಧ್ವಮುಖಿಯನ್ನಾಗಿ ಮಾಡಿದ ಉದಾಹರಣೆಗಳು ಅತಿ ಸ್ವಲ್ಪವೆ ಸರಿ. ಆದರೂ ಇದ್ದವುಗಳೆ ಸಾಕಷ್ಟು ಅರ್ಥಪೂರ್ಣವಾಗಿವೆ ; ಏಕೆಂದರೆ ಮಾನವನ ಸತ್ತ್ವದಲ್ಲಿಎಂತೆಂತಹ ಸಾಧ್ಯತೆಗಳೂ ಸಂಭಾವ್ಯತೆಗಳೂ ತುಂಬಿಕೊಂಡಿವೆ-ಯೆಂಬುದಕ್ಕೆ ಇದ್ದಷ್ಟು ಉದಾಹರಣೆಗಳೆ ಸಾಕ್ಷಿ. ಇವು ಗಾಳಿ ಎತ್ತ ಬೀಸುವದೆಂಬು ದನ್ನು ಹೇಳಿಕೊಡುವವು. ಈಶ್ವರನು ಸರ್ವಭೂತಗಳ ಹೃದ್ದೇಶದಲ್ಲಿ ಗುಪ್ತನಾಗಿ ನೆಲಿಸಿರುವನೆಂದೂ ಮಾನವನು ಆ ಈಶ್ವರನ ಆವಿಷ್ಕಾರವೆಂದೂ ಬೀಸುವ ಈ ಗಾಳಿ ಘೋಷಿಸಿ ಹೇಳುವದು. ಈ ಮಾತನ್ನು ಅನುಭವದಿಂದ ಅರಿಯಲು ಶಕ್ಯವಿದೆ; ಒಳಗಿದ್ದ ಈಶ್ವರಾಂಶವನ್ನು ಪ್ರಕಟಗೊಳಿಸುತ್ತ ಅಂತರಾತ್ಮನ ಆದೇಶದ ಮೇರೆಗೆ 'ಇದ್ದು ಜೈಸು' ವದು ಸಾಧ್ಯವಿದೆ. ಮಾನವನ ಮನವು ಸುಖದುಃಖಾದಿ ದ್ವಂದ್ವ-ಗಳಿಂದ ಜರ್ಜರಿತವಾಗಿರುವಲ್ಲಿ ಸಂಶಯವಿಲ್ಲ. ಮನಕ್ಕೆ ಖಂಡ ಜ್ಞಾನ ಮಾತ್ರ ಉಂಟೆಂಬುದೂ ಶುಭಾಶುಭಗಳ ಮತ್ತು ಪುಣ್ಯಪಾಪಗಳ ಘರ್ಷಣೆಯಲ್ಲಿ ಅದು ಗಾಸಿ-ಯಾಗುವದೆಂಬುದೂ ಸ್ಪಷ್ಟವೆ ಇದೆ. ಆದರೆ ಸಿದ್ಧಾವಸ್ಥೆಯನ್ನು ತಲುಪಿದ ಮಹಾ-ತ್ಮರ ಸಫಲ ಜೀವನವು ನಮಗೆ ಏನನ್ನು ಸಿದ್ಧಮಾಡಿ ತೋರಿಸುವದು ? ಎಲ್ಲ ದೌರ್ಬ-ಲ್ಯಗಳನ್ನು ತೊರೆದು ಮೀರಿ ನಿಂತು ಸುಖದುಃಖ-ಶುಭಾಶುಭ ಮೊದಲಾದ ಸಕಲ ದ್ವಂದ್ವಗಳಿಗೂ ಅತೀತವಾಗಿರುವ ಪ್ರತಿಷ್ಠಾನವೊಂದರಲ್ಲಿ ಇದ್ದುಬಿಡುವಂತೆ ಮಾನ-ವೀಯ ಚೇತನವನ್ನು ತರಬೇತುಗೊಳಿಸಲು ಸಾಧ್ಯವಿದೆಯೆಂದಲ್ಲವೆ ? ನೀತ್ಯತೀತ-ವಾದ ಇಂಥ ಪ್ರತಿಷ್ಠಾನವು ಪೂರ್ಣ ಅತಿಮಾನವನ ಲಕ್ಷಣಗಳಲ್ಲಿ ಒಂದಾಗಿದೆ.

ಸರ್ವಸಾಧಾರಣವಾದ ಚೇತನವನ್ನು ಮೀರಿ ನಿಂತು ಅತಿಚೇತನವೆಂದು ಕರೆಯ ಬಹುದಾದ ಪ್ರತಿಷ್ಠಾನವೊಂದರಲ್ಲಿ ಇದ್ದುಬಿಡುವ ಕಲೆಯನ್ನೂ ಶಾಸ್ತ್ರವನ್ನೂ ಭಾರತವು ಕಳೆದ ಸಹಸ್ರಾರು ವರ್ಷಗಳಿಂದ ಬೆಳಿಸಿಕೊಂಡು ಬಂದಿದೆ. ಮಾನವ-ನೆಂದರೆ ದೈಹಿಕ, ಪ್ರಾಣಿಕ, ಮಾನಸಿಕ, ಬೌದ್ಧಿಕ, ನೈತಿಕ ಮತ್ತು ಆಧ್ಯಾತ್ಮಿಕ

ಶಕ್ತಿಗಳ ಒಂದು ಮೊತ್ತವಾಗಿದ್ದು ಈ ಎಲ್ಲ ಶಕ್ತಿಗಳೊಡನೆ ವಿವಿಧ ಪ್ರಯೋಗ-ಗಳನ್ನು ಮಾಡಿ ನೋಡಲಾಗಿದೆ. ಇವೆಲ್ಲವೂ ಮಾನವನ ವ್ಯಕ್ತಿಮತ್ತೆಯಲ್ಲಿ ಒಂದುಗೂಡಿವೆ. ಆದುದರಿಂದಲೆ ಇವನ್ನು ರಕ್ಷಿಸಿ ನಿಯಂತ್ರಿಸಿ ಏಕಾಗ್ರಗೊಳಿಸಿ ಅನ್ಯೋನ್ಯ ಸಂಬಂಧವನ್ನು ಹೊಂದುಗೂಡಿಸುತ್ತ ಅತಿಚೇತನದ ಮಹೋನ್ನತ ಸಿದ್ಧಿಗಾಗಿ ಇವ-ನ್ನೆಲ್ಲ ಉಪಯೋಗಿಸಿಕೊಳ್ಳಬೇಕು. ಅಲ್ಲದೆ ಜೀವನದಲ್ಲಿ ದಿವ್ಯತೆಯನ್ನು ತುಂಬಲು ಇವನ್ನೆಲ್ಲ ಉನ್ನಯನಗೊಳಿಸಬೇಕು. ಈ ಸಮಗ್ರ ಪ್ರಯತ್ನಕ್ಕೆ 'ಯೋಗ'ವೆಂದು ಹೆಸರು. ಶ್ರೀ ಅರವಿಂದರು ತಮ್ಮ ಪೂರ್ಣಯೋಗದ ಕಲ್ಪನೆಯನ್ನು ಒಂದು ಸಿದ್ಧಾಂತರೂಪದಲ್ಲಿ ಇಡತೊಡಗಿದಾಗ ಅತಿಮಾನಸ ಅವಸ್ಥೆಯೊಂದು ಉಂಟೆಂಬು-ದನ್ನು ಕಂಡುಹಿಡಿದರು. ಈ ಅವಸ್ಥೆಯು ಅತಿ ಮಹತ್ವದ್ದಾಗಿದೆಯೆಂದು ಅವರಿಗೆ ತೋರಿಬಂತು; ಏಕೆಂದರೆ ಮನ-ಪ್ರಾಣ-ಜಡಗಳಲ್ಲಿ ಸಾಕ್ಷಾತ್ತಾಗಿ ದಿವ್ಯತೆಯು ನೆಲೆಯೂರುವಂತೆ ಕೆಳಗಿನ ಕೋಶಗಳಲ್ಲಿ ಬದಲಾವಣೆಗಳನ್ನು ಮಾಡಿ ಅವನ್ನು ಮೇಲಿನವುಗಳೊಡನೆ ಕೂಡಿಸಬಲ್ಲ ಕ್ರಿಯಾತ್ಮಕ ಕೊಂಡಿಯೆ ಈ ಅತಿಮಾನಸ ಅವ-ಸ್ಥೆಯು. ಈ ಮನ-ಪ್ರಾಣ-ಜಡಗಳನ್ನು ದೈವೀ ಶಕ್ತಿಯು ಉಪಯೋಗಿಸಿಕೊಂಡು ಅವುಗಳ ಮುಖಾಂತರ ತಾನು ಕಾರ್ಯ ಮಾಡಿದ ಮಾತ್ರಕ್ಕೆ ದಿವ್ಯತೆಯು ಘಟಿಸಿ-ದಂತಾಗುವುದಿಲ್ಲ. ಯಾವ ಸತ್ತ್ವದಿಂದ ಅವು ಉಂಟಾಗಿವೆಯೊ ಆ ಮೂಲ ಸತ್ತ್ವ-ದಲ್ಲಿಯೆ ಪರಿವರ್ತನೆಯಾಗಿ ಅದು ಹೆಚ್ಚು ಸೂಕ್ಷ್ಮವೂ ಶುದ್ಧವೂ ಉಚ್ಚವೂ ಆದ ದ್ರವ್ಯರೂಪದಲ್ಲಿ ಪರಿಣಮಿಸಿದ ಪಕ್ಷದಲ್ಲಿ ಅಸ್ತಿತ್ವದ ಮಟ್ಟವೆ ಉನ್ನತತರವಾಗುವದು; ಆಗ ತಾನೆ ದಿವ್ಯತೆಯು ಘಟಿಸಿದಂತಾಗುವದು. ಈ ಬಗೆಯ ಪರಿವರ್ತನೆಯೆ 'ದೈವೀ ಜೀವನ'ವನ್ನು ತ್ವರೆಗೊಳಿಸಬಲ್ಲದು.

ಶ್ರೀ ಅರವಿಂದರ ಯೋಗವನ್ನು ಪೂರ್ಣಯೋಗ, ಯೋಗಸಮನ್ವಯ, ಸಮರ್ಪಣಯೋಗ, ಅತಿಮಾನಸಯೋಗ ಎಂಬುದಾಗಿ ವಿವಿಧ ನಾಮಗಳಿಂದ ವರ್ಣಿಸ-ಬಹುದಾಗಿದೆ. ಈ ಪ್ರತಿಯೊಂದು ನಾಮವೂ ಸಕಾರಣವಾಗಿ ಅರ್ಥಪೂರ್ಣವಾಗಿದೆ. ಈ ಯೋಗವು ಸಮಗ್ರಯೋಗವೆಂಬರ್ಥದಲ್ಲಿ ಪೂರ್ಣಯೋಗವಾಗಿದೆ. ಯುದ್ಧ-ವೊಂದು ನಡೆದಾಗ ಜಯಪ್ರಾಪ್ತಿಗಾಗಿ ಸಾಮಗ್ರಿಯ ಎಲ್ಲ ಉಗಮಗಳನ್ನೂ ಉಪಯೋಗಿಸಿಕೊಳ್ಳುವರೆಂದೆ ಅದಕ್ಕೆ ಸಮಗ್ರಯುದ್ಧವೆಂದು ಕರೆಯುವುದಿಲ್ಲವೆ? ಆ ಅರ್ಥದಲ್ಲಿ ಈ ಯೋಗವೂ ಸಮಗ್ರವಾಗಿದೆ. ಉಳಿದ ಯೋಗಪಂಥಗಳು ಮಾನವನಲ್ಲಿಯ ಒಂದೆರಡು ಶಕ್ತಿಗಳಿಗೆ ಮಾತ್ರ ಪ್ರಾಧಾನ್ಯವನ್ನೀಯುತ್ತವೆ. ಉದಾ-ಹರಣೆಗಾಗಿ ಭಕ್ತಿಯೋಗವು ಮಾನವನಲ್ಲಿಯ ಭಾವನಾಬಲವೊಂದನ್ನೆ ಉಪಯೋ-ಗಿಸಿಕೊಳ್ಳುವದುಂಟು. ಆದರೆ ಪೂರ್ಣಯೋಗದ ಸಾಧಕನು ಭಗವಂತನ ಬಳಿ ಸಾರುವ ಹಾಗೂ ಆತನನ್ನು ಅರಿಯುವ ಕಾರ್ಯದಲ್ಲಿ ತನ್ನೆಲ್ಲ ಶಕ್ತಿಗಳನ್ನು ಏಕ-ಕಾಲಕ್ಕೆಯೆ ಪರಮಪ್ರಯತ್ನದೊಂದಿಗೆ ತೊಡಗಿಸುತ್ತಾನೆ. ಇನ್ನೊಂದು ಅರ್ಥ-

ದಲ್ಲಿಯೂ ಇದು ಪೂರ್ಣಯೋಗವೆನಿಸಿದೆ; ಅದು ಹೇಗೆಂದರೆ, ('ಸಮಗ್ರ ಭಗವಂತ' ಎಂಬ ಪದವನ್ನು ಪ್ರಯೋಗಿಸಲು ನಮಗೆ ಅಜ್ಞೆಯಿದ್ದಲ್ಲಿ) ಈ ಯೋಗವು 'ಸಮಗ್ರ ಭಗವಂತ' ನೊಂದಿಗೆ ಒಂದಾಗಲು ಹವಣಿಸುತ್ತದೆ. ಪ್ರಭುವಿನೊಡನೆ ಕೇವಲ ಕೈವಲ್ಯಾನುಭವ ಪಡೆಯುವದಾಗಲಿ ಕೇವಲ ಸಂಭೂತಿಯ ಅನುಭವ ಪಡೆಯುವದಾಗಲಿ ಈ ಯೋಗದ ಉದ್ದೇಶವಲ್ಲ. ಆ ಪ್ರಭುವಿನೊಂದಿಗೆ ಚೇತನದ ಸಮಸ್ತ ಸ್ತರಗಳಲ್ಲಿಯೂ ಸಾಧ್ಯವಿದ್ದಷ್ಟು ಬಹುಮುಖವಾದ ಸಂಪರ್ಕವನ್ನಿಡುವದೆ ಇಲ್ಲಿ ಮುಖ್ಯ ಮಾತಾಗಿದೆ. ಮತ್ತೂ ಒಂದರ್ಥದಲ್ಲಿ ಅದು ಸಮಗ್ರವಾಗಿದೆ; ಅದು ಹೇಗೆಂದರೆ, ಆ ಪೂರ್ಣ ಪರಮಾತ್ಮನನ್ನು ಸಕಲ ಶಕ್ತಿಗಳ ಮುಖಾಂತರ ಸಾಕ್ಷಾತ್ಕರಿಸಿಕೊಳ್ಳುವದಲ್ಲದೆ ಪರಮಾತ್ಮನ ದೈವೀ ಶಕ್ತಿಯನ್ನು ನಿವರ್ತಿತ-ಚೇತನದ ಕೊನೆಯ ಮೆಟ್ಟಲಿನ ವರೆಗೂ ಇಳಿಸಿ ತರುತ್ತ, ಆ ಮೆಟ್ಟಲಿನಲ್ಲಿಯೂ ದಿವ್ಯತೆಯನ್ನು ನೆಲೆಯೂರಿಸಿ ದೈವೀ ಸಂಕಲ್ಪದ ನಿವರ್ತನ-ವಿವರ್ತನ ಚಕ್ರವನ್ನು ಪೂರ್ಣಗೊಳಿಸುವದೆ ಈ ಯೋಗದ ಉದ್ದೇಶವಾಗಿದೆ. 'ಆರ್ಯ' ಪತ್ರಿಕೆಯ ಸಪ್ಟೆಂಬರ ೧೯೧೪ ರ ಸಂಚಿಕೆಯಲ್ಲಿ ಶ್ರೀ ಅರವಿಂದರು ಈ ವಿಷಯವಾಗಿ ಹೀಗೆ ಹೇಳಿದ್ದಾರೆ: 'ಯೋಗವೆಂದರೆ, ಪರಾತ್ಪರವನ್ನು ಕಂಡುಕೊಂಡ ಮೇಲೆ ವಿಶ್ವಕ್ಕೆ ಮರಳಿ ಬಂದು ಅದರ ಮೇಲೆ ಪ್ರಭುತ್ವವನ್ನು ಸ್ಥಾಪಿಸಿ ಅಸ್ತಿತ್ವದ ದೊಡ್ಡ ನಿಚ್ಚಣಿಕೆಯೊಂದರಲ್ಲಿ ಏರಲೂ ಇಳಿಯಲೂ ಇಚ್ಛಾಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವದೆ ಸರಿ. ಪಥದ ಮತ್ತು ಸಾಧನಗಳ ದೃಷ್ಟಿಯಿಂದ ಈ ಯೋಗವು ಪೂರ್ಣವಾಗಿರುವದಲ್ಲದೆ ಆದರ್ಶದ ದೃಷ್ಟಿಯಿಂದಲೂ ಅದು ಪೂರ್ಣವಾಗಿದೆ. ಹೆಚ್ಚು ಸೌಮ್ಯ ಭಾಷೆಯಲ್ಲಿ ಹೇಳುವದಾದರೆ ಅದಕ್ಕೆ ಯೋಗಸಮನ್ವಯವೆಂದೂ ಕರೆಯಬಹುದು. ಏಕೆಂದರೆ ಸದ್ಯಕ್ಕೆ ಪ್ರಚಲಿತವಿರುವ ಇತರ ಯೋಗಗಳನ್ನು, ಮುಖ್ಯವಾಗಿ ಜ್ಞಾನ-ಕರ್ಮ-ಭಕ್ತಿಯೋಗಗಳನ್ನು ಸಮನ್ವಯಗೊಳಿಸಲು ಅದು ಹೆಣಗುತ್ತಿದೆ. ಅದಕ್ಕೆ ಸಮರ್ಪಣಯೋಗವೆಂದು ಕರೆಯುವದೂ ಸಮಂಜಸವೆ ಆಗಿದೆ; ಏಕೆಂದರೆ ಇತರ ಯೋಗಗಳಲ್ಲಿ ಸಮರ್ಪಣೆ ಇಲ್ಲವೆ ಆತ್ಮನಿವೇದನೆ ಎಂಬುದು ಸಾಧನೆಯ ಕೊನೆಗೂ ಆತ್ಮಶುದ್ಧಿ ಮೊದಲಾದ ಅಂಶಗಳು ಮೊದಲಿಗೂ ಬರುವದುಂಟು. ಆದರೆ ಈ ಯೋಗವು ಆತ್ಮಸಮರ್ಪಣೆಯಿಂದಲೆ ಆರಂಭವಾಗುವದು. ನಮ್ಮೊಳಗಿನ ಶಕ್ತಿ-ಯೋಗ್ಯತೆಗಳು ಎಷ್ಟೆ ಸ್ಥೂಲವಾಗಿ ಅಶುದ್ಧವಾಗಿ ಅಸಮರ್ಪಕವಾಗಿ ಇದ್ದರೂ ಅವನ್ನೆಲ್ಲ ಭಗವಂತನಲ್ಲಿ ಮುಂಚೆಯೆ ಅರ್ಪಿಸಿಬಿಡಬೇಕು.' 'ಆರ್ಯ' ದ ಇನ್ನೊಂದು ಸಂಚಿಕೆಯಲ್ಲಿ ಅವರು 'ಇಡಿ ಜೀವನವೆ ಒಂದು ಯೋಗವಾಗಿದೆ' ಎಂದು ಹೇಳಿದ್ದಾರೆ. ಈ ಚಿಕ್ಕ ಉಕ್ತಿಯಲ್ಲಿ, ಮೇಲೆ ಉದ್ಧೃತವಾದ ಅವತರಣಿಕೆಯೊಳಗೆ ಪ್ರಸ್ತಾಪಿಸಲ್ಪಟ್ಟ ಸಮರ್ಪಣಯೋಗವನ್ನು ಬಹು ಸಾರವತ್ತಾಗಿ ಬಿಂಬಿಸಲಾಗಿದೆ. ಅತಿಮಾನಸಯೋಗವೆಂಬ ಹೆಸರೂ ಅನ್ವರ್ಥಕವಾಗಿದೆ; ಏಕೆಂದರೆ ಯಾವ ಶಕ್ತಿಯು ಸಕ್ರಿಯ ಪರಿಣಾಮ-

ಕಾರಕ ಸಹಾಯವಿಲ್ಲದೆ ಮನ-ಪ್ರಾಣ-ಜಡಗಳಲ್ಲಿ ದಿವ್ಯತೆಯನ್ನು ತುಂಬುವ ಕಾರ್ಯವನ್ನು ತ್ವರೆಗೊಳಿಸುವದು ಸಾಧ್ಯವಿಲ್ಲವೊ ಅಂಥ ಅತಿಮಾನಸ ಶಕ್ತಿಯೊಡನೆ ಸಂಪರ್ಕವನ್ನಿಟ್ಟುಕೊಂಡು ವಾರ್ತಾವಿನಿಮಯ ನಡೆಸಬೇಕೆಂಬ ಮಾತಿನ ಮೇಲೆ ಈ ಯೋಗವು ಬಹಳ ಜೋರನ್ನು ಕೊಡುತ್ತದೆ. ಉದಾಹರಣೆ ಹೇಳುವದೆಂದರೆ ಜ್ಞಾನಯೋಗ-ಭಕ್ತಿಯೋಗಗಳಲ್ಲಿ ಅನುಕ್ರಮವಾಗಿ ಜ್ಞಾನವೊ ಭಕ್ತಿಯೊ ಬಹು ಮಹತ್ವದ ಪಾತ್ರವನ್ನು ವಹಿಸುವದುಂಟು; ಆದರೆ ಇಲ್ಲಿ ಅತಿಮಾನಸವು ಅಥವಾ ಉಪನಿಷತ್ತುಗಳ ಪರಿಭಾಷೆಯಲ್ಲಿ ಹೇಳಬೇಕೆಂದರೆ 'ವಿಜ್ಞಾನ'ವು ಬಹು ಮುಖ್ಯ ವಾದ ಪಾತ್ರವನ್ನು ವಹಿಸುತಿದೆ.

ಯೋಗವು ಪ್ರಾಯೋಗಿಕ ಶಾಸ್ತ್ರವೂ ಅಹುದು, ಕಲೆಯೂ ಅಹುದು. ಅದು ದರಿಂದ ಅದು ಸದ್ವಸ್ತುವಿನ ಪ್ರಕೃತಿಯನ್ನು ಕುರಿತು ಮೂಲಭೂತ ಶ್ರದ್ಧೆಯನ್ನು ವಹಿಸಿಯೆ ತನ್ನ ಕಾರ್ಯವನ್ನು ಆರಂಭಿಸುತ್ತದೆ. ಶ್ರೀ ಅರವಿಂದರ ತತ್ತ್ವಜ್ಞಾನದ ಪ್ರಕಾರ ಸದ್ವಸ್ತುವೆಂದರೇನೆಂಬುದನ್ನು ನಾವು ಈಗಾಗಲೆ ಅರಿತಿದ್ದೇವೆ. ಅದನ್ನು ಸಾಧಕನಾದವನು ಪ್ರಶ್ನಿಸುವ ಗೊಡವೆಗೆ ಹೋಗಬಾರದು; ಅದು ಅವನ ಧರ್ಮವಲ್ಲ. ಆ ಸದ್ವಸ್ತುವಿನೊಡನೆ ಸಮರಸವಾಗುವದು ಹ್ಯಾಗೆ, ಅದರೊಡನೆ ಐಕ್ಯಾನುಭವ ವನ್ನು ಪಡೆಯುವದು ಹೇಗೆ, ಮತ್ತು ಆ ಅನುಭವದಲ್ಲಿಯೆ ಪ್ರತಿಷ್ಠಿತನಾಗುವದು ಹೇಗೆ ಎಂಬುದೆ ಅವನು ಈಗ ಎದುರಿಸಬೇಕಾದ ಪ್ರಶ್ನೆಯಾಗಿದೆ. 'ಯೋಗ ಸಮನ್ವಯ (Synthesis of Yoga)'ವೆಂಬ ಗ್ರಂಥದಲ್ಲಿ ಶ್ರೀ ಅರವಿಂದರು ತಮ್ಮ ವಾಚಕರನ್ನು ಕುರಿತು ಹೀಗೆ ಹೇಳಿದ್ದಾರೆ: 'ಇದು ನೋಡಿರಿ, ದೈವೀ ಜೀವನದ ಗುರಿಯನ್ನೂ ಅತಿಮಾನಸತ್ವದ ಮತ್ತು ಅತಿಪ್ರಕೃತಿಯ ಗುರಿಯನ್ನೂ ನೀವು ಹೀಗೆಯೆ ಮುಟ್ಟಬೇಕು.' ಈ ಸಾಹಸದಲ್ಲಿ ಮೂಲಭೂತವಾದುದು ಶ್ರದ್ಧೆ ಯೆಂದೂ ಆಧ್ಯಾತ್ಮಿಕ ಸಿದ್ಧಿಯನ್ನು ಪಡೆದೇನೆಂಬ ನವೋನವ ಆತ್ಯಂತಿಕ ಅಭೀ-ಪ್ಸೆಯು ಆ ಶ್ರದ್ಧೆಯನ್ನು ಬೆಂಬತ್ತಿ ಬರಬೇಕೆಂದೂ ಅವರು ಹೇಳುತ್ತಾರೆ. ಶ್ರದ್ಧೆ-ಅಭೀಪ್ಸೆಗಳು ಜೊತೆಗೂಡಿದವೆಂದರೆ ಪೂರ್ಣಯೋಗದಲ್ಲಿ ಸಾಧಕನಾದವನು ತನ್ನೆಲ್ಲ ಜೀವನವನ್ನು ಪರಮ ಸಂಕಲ್ಪದೊಂದಿಗೆ ಪ್ರಭುವಿಗೆ ಸಮರ್ಪಿಸಲು ಸಿದ್ಧನಾಗಬೇಕು. ತನ್ನ ಸಾಧನೆಗಾಗಿ ಪ್ರಭುವಿನ ಸಹಾಯವನ್ನು ಕೋರುವದೆ ಸಮರ್ಪಣೆಯ ಉದ್ದೇಶ-ವಾಗಿದೆ. ದಾರಿಯಲ್ಲಿ ಬರುವ ಎಲ್ಲ ವಿಘ್ನಗಳನ್ನು ಎದುರಿಸಿಯೂ ಸಾಧಕನು ಅತ್ಯುನ್ನತವಾದುದನ್ನೆ ಸಾಧಿಸಲು ಈ ಆತ್ಮಸಮರ್ಪಣೆಯು, ಈ ಆತ್ಮನಿವೇದನೆಯು ಕ್ರಿಯಾತ್ಮಕವಾಗಿ ಸಹಾಯಕವಾಗುತ್ತದೆ. ಅವನ ಶಕ್ತಿಗಳೆಲ್ಲ ಪರಮಾವಧಿ ಉನ್ನತಾವಸ್ಥೆಯನ್ನು ಹೊಂದಲೂ ಈ ಸಮರ್ಪಣೆಯು ನೆರವಾಗುವದು. ಅಲ್ಲದೆ ಸಾಕ್ಷಾತ್ ಆದಿಶಕ್ತಿಯಾದ ಜಗನ್ಮಾತೆಯು ಯೋಗದ ಸಕಲ ಭಾರವನ್ನು ತಾನೆ ಹೊತ್ತುಕೊಂಡು ಯಶಸ್ಸು ನಿಶ್ಚಿತವೆಂದು ಆಶ್ವಾಸನವನ್ನೀಯುವಳು. ಈ

ಸಮರ್ಪಣೆಯಿಂದಲೆ 'ದೈವೀ ಕೃಪೆ' ಯು ಸಕಾಲದಲ್ಲಿ ಇಳಿದು ಬರಲು ಅನುಕೂಲತೆಯುಂಟಾಗಿ ಸಾಧಕನ ಪ್ರಯತ್ನಗಳೆಲ್ಲ ಸಫಲವಾಗುವದರಲ್ಲಿ ಸಂಶಯವಿಲ್ಲ.

ಅದೇ 'ಯೋಗಸಮನ್ವಯ' ಗ್ರಂಥದಲ್ಲಿ ಶ್ರೀ ಅರವಿಂದರು ಯೋಗಸಿದ್ಧಿಯ ವಿಷಯವಾಗಿ ಹೀಗೆ ಹೇಳುತ್ತಾರೆ: 'ನಾಲ್ಕು ಮಹಾ ಉಪಕರಣಗಳು ಒಟ್ಟುಗೂಡಿ ಕಾರ್ಯಮಾಡುವದರಿಂದ ಯೋಗಸಿದ್ಧಿಯು ಚೆನ್ನಾಗಿ ಲಭಿಸುತ್ತದೆ.' ಈ ನಾಲ್ಕು ಉಪಕರಣಗಳು ಯಾವನೆಂದರೆ ಶಾಸ್ತ್ರ, ಉತ್ಸಾಹ, ಗುರು ಮತ್ತು ಕಾಲ. ಶಾಸ್ತ್ರವೆಂದರೆ ಮಹಾಯೋಗಿಗಳು ಕೊಟ್ಟುಹೋದ ಪ್ರಯೋಗ-ಪರಂಪರೆಗಳ ಸಮುದಾಯವನ್ನೊಳಗೊಂಡ ಯೋಗಶಾಸ್ತ್ರವು. ಉತ್ಸಾಹವೆಂದರೆ ನಿತ್ಯವೂ ಪ್ರಜ್ವಾಲಿತವಾಗಿದ್ದು ಊರ್ಧ್ವಮುಖಿಯಾದ ಅಭೀಪ್ಸೆಯ ಜ್ಯೋತಿ. ಗುರುವೆಂದರೆ ತನ್ನ ಬೋಧೆಯಿಂದ ಸಾಧಕನಿಗೆ ಮಾರ್ಗದರ್ಶನ ಮಾಡಬಲ್ಲ ಯೋಗೇಶ್ವರನು (ಶ್ರೀ ಅರವಿಂದರಂಥ ಅಪವಾದಾತ್ಮಕ ಪ್ರಸಂಗಗಳಲ್ಲಿ ಗುರುಗಳ ಗುರುವಾದ ಅಂತರ್ಯಾಮಿಯೆ ಶಿಷ್ಯನಿಗೆ ಆದೇಶವನ್ನು ಈಯುತ್ತಾನೆ). ಅಲಕ್ಷ್ಯ ಮಾಡಲಾಗದ ಕೊನೆಯ ಉಪಕರಣವೆಂದರೆ ಕಾಲ. ಯಾವದಕ್ಕೂ ಕಾಲವು ಪರಿಪಕ್ವವಾಗಿರಬೇಕು. ನಿವರ್ತನೆಗೆ ಕೆಲವೊಂದು ಕಾಲವು ಹಿಡಿದಿದೆ; ವಿವರ್ತನಕ್ಕಾದರೂ ಸಾಕಷ್ಟು ಕಾಲವು ಬೇಕೆಬೇಕು. ಯೋಗವು ಕಾಲಮಿತಿಯನ್ನು ಕಡಿಮೆಮಾಡಬಲ್ಲುದೆ ಹೊರತು ಕಾಲವನ್ನೆ ಅಲ್ಲಗಳೆಯಲಾರದು. ಒಂದರ್ಥದಲ್ಲಿ ಸರ್ವವೂ ಸಂಕಲ್ಪಿತವಾಗಿ ದೇವದತ್ತವಾಗಿದೆ; ಆದರೆ ಅದೇ ಕಾಲಕ್ಕೆ ಅದೆಲ್ಲವು ಸಂಭವಿಸಿ ಬರಬೇಕು. ಶ್ರೀ ಅರವಿಂದರು ಈ ವಿಷಯವಾಗಿ ಹೀಗೆ ಹೇಳಿದ್ದಾರೆ: 'ಎಲ್ಲ ಬೋಧೆಯೂ ಆತ್ಮ-ಶ್ರುತಿಯಾಗಿದೆ; ಎಲ್ಲ ಸಂಭೂತಿಯೂ ಆವಿಷ್ಕಾರವಾಗಿದೆ. ಆತ್ಮಸಿದ್ಧಿಯೆಂಬುದು ರಹಸ್ಯವಾಗಿದೆ. ಆತ್ಮಜ್ಞಾನ ಮತ್ತು ವರ್ಧಮಾನಚೇತನ ಇವು ಸಾಧನಗಳೂ ಅಹುದು, ಪ್ರಕ್ರಿಯೆಯೂ ಅಹುದು'.

ಈ ಯೋಗಪಥದಲ್ಲಿ ಸಾಧಕನಾದವನು ಪ್ರಗತಿಗಾಗಿ ಗೈಯಬೇಕಾದ ಸ್ವಪ್ರಯತ್ನವನ್ನು 'ಮಾತೆ (The Mother)' ಎಂಬ ಗ್ರಂಥದಲ್ಲಿ ಶ್ರೀ ಅರವಿಂದರು ಇಂತು ಸಾರವತ್ತಾಗಿ ವರ್ಣಿಸಿದ್ದಾರೆ: 'ಅಗತ್ಯವಿದ್ದ ಸ್ವಪ್ರಯತ್ನವೆಂದರೆ ಅಭೀಪ್ಸೆ, ತ್ಯಜನ ಮತ್ತು ಸಮರ್ಪಣ ಇವು ಮೂರೂ ಮುಪ್ಪುರಿಗೊಂಡು ವಹಿಸುವ ಶ್ರಮವೆ ಸರಿ. ಅಭೀಪ್ಸೆಯು ದಕ್ಷವೂ ಸತತವೂ ಅವಿರತವೂ ಆಗಿರಬೇಕು,—ಮನದ ಸಂಕಲ್ಪ, ಹೃದಯದ ಶೋಧ, ಪ್ರಾಣದ ಆರೋಹಣ, ದೈಹಿಕ ಚೇತನವನ್ನು ತೆರೆದು ಹಿಗ್ಗಿಸುವದು ಇವು ಅಭೀಪ್ಸೆಯ ಅಂಶಗಳು; ತ್ಯಜನವೆಂದರೆ ನಿಮ್ಮ ಪ್ರಕೃತಿಯ ಚಲನೆಗಳನ್ನು ಬಿಟ್ಟುಕೊಡುವದು,—ಮನದ ಕಲ್ಪನೆಗಳು, ಅಭಿಪ್ರಾಯಗಳು, ಪ್ರಾಶಸ್ತ್ಯಗಳು, ರೂಢಿಗಳು, ರಚನೆಗಳು ಇವನ್ನೆಲ್ಲ ಬಿಟ್ಟುಕೊಟ್ಟರೆ ಸತ್ಯಜ್ಞಾನಕ್ಕೆ ಶಾಂತ ಮನದಲ್ಲಿ ಮುಕ್ತಾವಕಾಶವು ದೊರೆಯುವದು,—

ಪ್ರಾಣದ ಬಯಕೆಗಳು, ಬೇಡಿಕೆಗಳು, ಅರ್ತ ಇಚ್ಛೆಗಳು, ಸಂವೇದನೆಗಳು, ವಿಕಾರ-ಗಳು, ಸ್ವಾರ್ಥ, ಮದ, ದರ್ಪ, ಕಾಮ, ಲೋಭ, ಮತ್ಸರ, ಸ್ಪರ್ಧೆ, ಸತ್ಯಕ್ಕೆ ವಿರೋಧ ಇವನ್ನೆಲ್ಲ ಬಿಟ್ಟುಕೊಟ್ಟರೆ ನೈಜವಾದ ಬಲವೂ ಸಂತೋಷವೂ ಮೇಲಿನಿಂದ ಸುರಿದುಬಂದು ಪ್ರಾಣವನ್ನು ನಿಷ್ಪಂದವನ್ನಾಗಿಯೂ ಮಹತ್ತರವನ್ನಾಗಿಯೂ ಬಲಿಷ್ಠವನ್ನಾಗಿಯೂ ನಿವೇದಿತವನ್ನಾಗಿಯೂ ಮಾಡುವವು,—ದೈಹಿಕ ಪ್ರಕೃತಿ-ಯಲ್ಲಿರುವ ಮೂರ್ಖತೆ, ಸಂಶಯ, ಅವಿಶ್ವಾಸ, ಅಸ್ಪಷ್ಟತೆ, ಹಟ, ಕ್ಷುದ್ರತೆ, ಆಲಸ್ಯ, ಬದಲಾವಣೆಗೆ ಒಪ್ಪಿಕೊಳ್ಳದಿರುವದು, ತಮಸ್ಸು ಇವನ್ನೆಲ್ಲ ಬಿಟ್ಟುಕೊಟ್ಟರೆ ಪ್ರಭೆ–ಬಲ–ಆನಂದಗಳ ನೈಜ ಸ್ಥಿರತೆಯು ಸದಾ ದಿವ್ಯತರವಾಗುತಿರುವ ದೇಹದಲ್ಲಿ ನೆಲೆಗೊಳ್ಳಲು ಅನುಕೂಲವಾಗುವದು; ಸಾಧಕನು ತಾನು ಏನೇನು ಇರುವನೋ ತನ್ನಲ್ಲಿ ಏನೇನು ಇದೆಯೊ ಅದೆಲ್ಲವನ್ನೂ ಚೇತನದ ಪ್ರತಿ ಸ್ತರವನ್ನೂ ಪ್ರತಿ ಚಲನೆ-ಯನ್ನೂ ಭಗವಂತನಿಗೂ ಆದಿಶಕ್ತಿಗೂ ಸಂಪೂರ್ಣವಾಗಿ ಸಮರ್ಪಿಸುವದು.'

ಈ ಬಗೆಯ ಯೌಗಿಕ ಸಾಧನೆಯಿಂದಲೆ ಸಾಧಕನು ದುಸ್ತರ ಮಾರ್ಗದಲ್ಲಿ-ರುವ ಸಕಲ ವಿಘ್ನಗಳೊಂದಿಗೆ ಹೋರಾಡಲು ಸಮರ್ಥನಾಗುವನು. 'ಯೋಗವೂ ಅದರ ಆಧಾರವೂ ( Yoga and Its Basis ) ' ಎಂಬ ಗ್ರಂಥದ ೨೧ ನೆಯ ಪುಟ ದಲ್ಲಿ ನಾವು ಈ ಮಾತನ್ನು ಓದುತ್ತೇವೆ: ' ವಿಶ್ವವೆಲ್ಲವೂ ಅನಂತಕೋಟಿಬ್ರಹ್ಮಾಂಡ ನಾಯಕನಾದ ಭಗವಂತನ ಲೀಲೆಯೆಂದೂ ಆವಿಷ್ಕಾರವೆಂದೂ ನಿಮಗೆ ಅರಿವು ಉಂಟಾದಾಗ, ಅವಿಷ್ಕೃತ ಅಸ್ತಿತ್ವದ ಆಧಾರವೆ ಆಗಿರುವ ನಿರ್ಗುಣ ಸದ್-ಆತ್ಮನನ್ನು ಪ್ರತಿಯೊಂದರಲ್ಲಿಯೂ ನೀವು ಕಂಡಾಗ ಅಲ್ಲ – ( ಆ ಜ್ಞಾನವನ್ನು ನೀವು ಕಳೆದು ಕೊಳ್ಳುವದಿಲ್ಲವಾದರೂ ) – ಆದರೆ ಏಕಕಾಲಕ್ಕೆ ಅಸ್ತಿತ್ವವಲ್ಲಿದ್ದು ಆಧಾರಭೂತ ವಾಗಿದ್ದ ಆವಿಷ್ಕೃತ ಮತ್ತು ಅನಾವಿಷ್ಕೃತ ಅಸ್ತಿತ್ವಕ್ಕೂ ಅತೀತವಾಗಿದ್ದು ಅವ್ಯಕ್ತೋ ವ್ಯಕ್ತಾತ್ ಪರಃ ಎಂಬಂತಿರುವ ಶ್ರೀಕೃಷ್ಣನನ್ನು ನೀವು ಪ್ರತಿಯೊಂದರಲ್ಲಿ ಕಂಡಾಗ ಈ ಯೋಗದಲ್ಲಿ ನೀವು ಸಾಕ್ಷಾತ್ಕಾರದ ಶಿಖರಕ್ಕೆ ಮುಟ್ಟಿದಂತಾಗುವದು '.

ಎಲ್ಲ ಯೋಗಸಂಘಗಳಿಗೂ ಸಾಮಾನ್ಯವಾಗಿದ್ದು ಪೂರ್ಣಯೋಗಕ್ಕೂ ಸಾರತಃ ಅಗತ್ಯವಾಗಿರುವ ಯಮ ನಿಯಮಾದಿ ಅಂಗಗಳ ವಿವರಣೆಗಳನ್ನು ಇಲ್ಲಿ ಕೊಡುವದು ಅವಶ್ಯವಿಲ್ಲ. ಶ್ರೀ ಅರವಿಂದರ ಯೋಗದಲ್ಲಿ ಅತ್ಯಂತ ಮಹತ್ವದ್ದಾಗಿ-ರುವದೆಲ್ಲವನ್ನೂ ಇಲ್ಲಿ ಸ್ಪಷ್ಟವಾಗಿ ಸೂಚಿಸಲಾಗಿದೆ. ವಿಶೇಷವಾಗಿ ಈ ಯೋಗದ ದೃಷ್ಟಿಕೋನ, ಅದರ ಧ್ಯೇಯ, ಅದರ ಸಮಗ್ರತ್ವ, ಅದರ ನಿಲುವು ಹಾಗೂ ಶ್ರದ್ಧೆ ಸಮರ್ಪಣಗಳಿಂದ ಮೊದಲಾಗುವ ಅದರ ಮುಖ್ಯ ಮೆಟ್ಟಲುಗಳು ಇವನ್ನೆಲ್ಲ ಇಲ್ಲಿ ಪರಿಶೀಲಿಸಲಾಗಿದೆ.

ಶ್ರೀ ಅರವಿಂದರ ತತ್ತ್ವಜ್ಞಾನ ಹಾಗೂ ಯೋಗ ಇವುಗಳ ಸಂಕ್ಷಿಪ್ತ ರೂಪ ರೇಷೆಯನ್ನು ಮುಕ್ತಾಯದ ಈ ವಾಕ್ಯವೃಂದಗಳಲ್ಲಿ ಇದುವರೆಗೆ ಕೊಡಲಾಯಿತು.

ಇನ್ನು, ಅವರು ವಿಶೇಷವಾಗಿ ಒತ್ತಿ ಹೇಳುವ ಕೆಲವು ಮುಖ್ಯಾಂಶಗಳು ಯಾವವು ಎಂದರೆ ಅವರ ಅಮೋಘ ಉಪದೇಶದ ಅಪ್ರತಿಮ ಲಕ್ಷಣಗಳು ಯಾವವು ಎಂಬುದನ್ನು ನಾವು ಈ ರೂಪರೇಷೆಯ ಸಹಾಯದಿಂದ ಸುಲಭವಾಗಿ ಗ್ರಹಿಸಿಕೊಳ್ಳಬಹುದಾಗಿದೆ.

ಮುಖ್ಯ ಮುಖ್ಯ ದ್ವಂದ್ವಗಳು ಉಂಟೆಂಬ ಅಥವಾ ಜಡ-ಚೇತನಗಳೊಳಗೆ ವಿರೋಧವುಂಟೆಂಬ ಕಲ್ಪನೆಯನ್ನೆ ಶ್ರೀ ಅರವಿಂದರು ಹೊಡೆದುಹಾಕಿದ್ದಾರೆ. ಇವುದ-ದೆಲ್ಲವೂ 'ಬ್ರಹ್ಮ' ಅಥವಾ 'ಆತ್ಮ'ವೆಂದು ಅವರು ಘೋಷಿಸುತ್ತಾರೆ. ಮನ-ಪ್ರಾಣ-ಜಡಗಳೆಲ್ಲವೂ ಆತ್ಮತತ್ತ್ವದ ವಿವಿಧ ರೂಪಗಳು. ಜಡದ ಇಲ್ಲವೆ ಭೌತಿಕ ಜಗತ್ತಿನ ವಿಷಯದಲ್ಲಿ ಮಾಯೆಯೆಂಬುದು ಇಲ್ಲವೇ ಇಲ್ಲ. ಆತ್ಮವೆಂದರೆ ಅನಂತ ಸಂಭಾವ್ಯತೆಯೆಂದು ವರ್ಣಿಸಬಹುದು. ನಿವರ್ತನದ ಪ್ರಕ್ರಿಯೆಯ ಮೂಲಕ ಆತ್ಮತತ್ತ್ವವು ತಾನೆ ತಾನಾಗಿ ಅಸಂಖ್ಯ ರೂಪಗಳನ್ನು ತಾಳುತ್ತದೆ; ಇದೇ ಮಾತನ್ನು ಹೆನ್ರಿ ಬರ್ಗಸನ್ ಎಂಬವರು ತಮ್ಮ 'Creative Evolution (ರಚನಾನಿಷ್ಠ ವಿಕಾಸ) ಎಂಬ ಗ್ರಂಥದಲ್ಲಿ 'ಜೀವನ ಶಕ್ತಿ (elan vitale)' ಎಂಬ ಸಿದ್ಧಾಂತ ರೂಪದಿಂದ ಪ್ರತಿಪಾದಿಸುತ್ತಾರೆ. ಆತ್ಮತತ್ತ್ವವು ಅನಂತವಾದುದರಿಂದ ಸೃಷ್ಟಿ-ಗೊಂಡ ಈ ರೂಪಗಳೂ ವಿಶ್ವಗಳೂ ಮೂಲದಲ್ಲಿ ಯಾವ ಬದಲಾವಣೆಯನ್ನೂ ಮಾಡಲರಿಯವು. ಆದರೆ ವಿವರ್ತನ ಅಥವಾ ವಿಕಾಸವೆಂಬ ವ್ಯಸ್ತ ಚಲನೆಯೂ ಒಂದು ಇದೆ; ಅದರ ಮೂಲಕವೆ ನಿವರ್ತಿತವಾದುದೆಲ್ಲ ವಿಕಾಸಗೊಳ್ಳುವದು. ಇಂತು ಸೃಷ್ಟಿಯನ್ನು ನಿವರ್ತನ-ವಿವರ್ತನ, ಅವರೋಹಣ-ಆರೋಹಣ ಎಂಬೀ ದ್ವಿಮುಖಚಲನೆಯೆಂದು ವರ್ಣಿಸಬಹುದು. ಕೇವಲವೂ ಅನಂತವೂ ಆದ ಆತ್ಮ-ತತ್ತ್ವವು ಅಬಾಧಿತವಾಗಿ ಇದ್ದುಬಿಟ್ಟಿದೆ; ಆದರೆ ಅದರ ಬಲವೆ ಆದ ಸಚ್ಚಿದಾನಂದ ಸ್ವರೂಪವು ಶಾಶ್ವತವಾದ ನಿವರ್ತನ-ವಿವರ್ತನ ಘಟನೆಯ ಮೂಲದಲ್ಲಿದೆ. ಸಚ್ಚಿ-ದಾನಂದವು ಆತ್ಮತತ್ತ್ವದ ಸತ್ತ್ವದ ಲಕ್ಷಣವಾಗಿದ್ದರೆ ಸೃಷ್ಟಿಯು ಅದರ ಸಂಭೂ-ತಿಯ ಲಕ್ಷಣವಾಗಿದೆ. ಗೀತೆಯ ಪರಿಭಾಷೆಯಲ್ಲಿ ಈ ಆತ್ಮತತ್ತ್ವವನ್ನೆ 'ಪುರುಷೋ-ತ್ತಮ'ನೆಂದೂ ಸಚ್ಚಿದಾನಂದವನ್ನೆ 'ಅಕ್ಷರ'ವೆಂದೂ ಸೃಷ್ಟಿಯನ್ನೆ 'ಕ್ಷರ' ವೆಂದೂ ಕರೆಯಬಹುದೆಂದು ಶ್ರೀ ಅರವಿಂದರು ಸೂಚಿಸಿದ್ದಾರೆ.

ಮಾಯೆಯೆಂಬುದು ಹೇಗೆ ಇಲ್ಲವೇ ಇಲ್ಲವೊ ಹಾಗೆ ಅಜ್ಞಾನವೆಂಬುದೂ ಇಲ್ಲವೇ ಇಲ್ಲ. ಅದಕ್ಕೆ ನಿಶ್ಚಯಾತ್ಮಕ ಅಸ್ತಿತ್ವವೆ ಇಲ್ಲ. ನಿವರ್ತನದ ಮೂಲಕ ಉಂಟಾಗುವ ಖಂಡ ಜ್ಞಾನವೆ ಅಜ್ಞಾನವು. ಸಚ್ಚಿದಾನಂದದ 'ಚಿತ್' ಲಕ್ಷಣಕ್ಕೂ ಅಜ್ಞಾನಕ್ಕೂ ಇರುವ ಸಂಬಂಧವು ಸೂರ್ಯನಿಗೂ ಕತ್ತಲೆಗೂ ಇರುವ ಸಂಬಂಧ ದಂತೆ ಇದೆ. ಆದುದರಿಂದ, ಕೇವಲ ನಿರಸ್ತಿತ್ವವೆಂಬುದಾಗಲಿ ಶೂನ್ಯವೆಂಬುದಾಗಲಿ ಅದರಂತೆಯೆ ಕೇವಲ ದುಃಖವೆಂಬುದಾಗಲಿ ನಿಶ್ಚಯಾತ್ಮಕ ಅನಿಷ್ಟವೆಂಬುದಾಗಲಿ

ಇಲ್ಲವೇ ಇಲ್ಲ. ಅವೆಲ್ಲವೂ ನಿಶ್ಚಯಾತ್ಮಕ ಅಸ್ತಿತ್ವಗಳೆಂದು ನಮಗೇನೊ ಹೊಳೆಯು ವದು. ಆದರೆ ಈ ದುಃಖಾದಿಗಳಿಗೆ ವಿರೋಧಿರೂಪಗಳೆಂಬವು ಸ್ಥಾನಬಲದಿಂದ ಇದ್ದೇ ಇವೆಯಾದುದರಿಂದ ಇವು ವಸ್ತುತಃ ಆ ವಿರೋಧಿರೂಪಗಳ ಖಂಡ ಹಾಗೂ ತಾತ್ಪೂರ್ತಿಕ ನಿರಸ್ತಿತ್ವಗಳಾಗಿವೆ.

ನಿವರ್ತನವೆಂಬುದೆಲ್ಲವು ಆತ್ಮತತ್ತ್ವವು ಒಂದು ಸೀಮಿತ ಉದ್ದೇಶಕ್ಕಾಗಿ ತಾನಾಗಿ ತನ್ನಲ್ಲಿ ಮಾಡಿಕೊಂಡ ಭೇದವಾಗಿದೆ. ಆತ್ಮತತ್ತ್ವವನ್ನು ಪೂರ್ಣ ಸಚ್ಚಿದಾ-ನಂದವೆಂದು ಕರೆವುದಾದರೆ ಸೃಷ್ಟಿಯೆಂಬುದೆಲ್ಲವು ಅದರಿಂದ ಕಳೆಯಲ್ಪಟ್ಟ ಭೇದ ವಾಗಿದೆ. ಸಚ್ಚಿದಾನಂದವು ಸತ್ಯ-ಜ್ಞಾನ-ಆನಂದ-ಪ್ರಕಾಶ-ಸಾಮರಸ್ಯ-ಅವ್ಯತತ್ತ್ವ ಗಳನ್ನು ಪ್ರತಿನಿಧಿಸುತಿದ್ದರೆ, ಪ್ರತಿ ನಿವರ್ತನದಲ್ಲಿ ಇವೆಲ್ಲವುಗಳು ಅಷ್ಟಷ್ಟು ಕಡಿಮೆ ಯಾಗಿರುವವು. ಅದರಂತೆಯೆ, ಪ್ರತಿ ವಿವರ್ತನದಲ್ಲಿ ಇವೆಲ್ಲವು ಪುನಃ ಸಂಪಾದಿತ ವಾಗುವವು. ನಿಚ್ಚಣಿಕೆಯನ್ನು ಇಳಿಯುವದೆಂದರೆ ನಿವರ್ತನ, ಏರುವದೆಂದರೆ ವಿವರ್ತನ. ಅದೊಂದು ಶಾಶ್ವತ ಪ್ರಕ್ರಿಯೆಯಾಗಿದೆ.

ಇನ್ನು ಮಾನವ್ಯದ ಬಗೆಗೆ ಆಲೋಚಿಸುವಾ. ಈಗ ಮಾನವನು ವಿಕಾಸದ ಒಂದು ನಿಶ್ಚಿತ ಅವಸ್ಥೆಯನ್ನು ತಲುಪಿದ್ದು, ತನ್ನ ಸದ್ಯದ ಅವಸ್ಥೆಯ ಮಟ್ಟವನ್ನು ತಿಳಿಯಬಲ್ಲ ಯೋಗ್ಯತೆಯು ಅವನಲ್ಲಿದೆ. ಅದರಂತೆಯೆ ಅತಿಮಾನಸ ಅವಸ್ಥೆಯತ್ತ ಊರ್ಧ್ವಮುಖವಾಗಿ ಇನ್ನು ಮುಂದಿನ ಹೆಜ್ಜೆಯನ್ನು ತಾನು ಹೇಗೆ ಇಡಬೇಕೆಂಬು ದನ್ನು ತಿಳಿಯಬಲ್ಲ ಯೋಗ್ಯತೆಯೂ ಅವನಲ್ಲಿ ಬಂದಿದೆ. ವಿಕಾಸದ ಸಂಬಂಧದಲ್ಲಿ ಈ ಅತಿಮಾನಸ ಶಕ್ತಿಯೆ ನಿಶ್ಚಿತವೂ ಕ್ರಿಯಾತ್ಮಕವೂ ಆದ ವಾಹಕ ಶಕ್ತಿಯಾಗಿದೆ. ಆದುದರಿಂದ, ಪೂರ್ಣಯೋಗದ ಮುಖಾಂತರವಾಗಿ ಮಾನವನು ಅತಿಮಾನಸದ ಆವಾಹನೆ ಮಾಡಿದುದಾದರೆ ಪ್ರಕ್ರಿಯೆಯು ಹೆಚ್ಚು ಸುಲಭವಾಗಿ ವಿಕಾಸದ ಗತಿಯು ಹೆಚ್ಚು ತ್ವರಿತವಾಗುವದು. ಎಲ್ಲಿಯ ವರೆಗೆ ಸಿದ್ಧಿಯೆಂಬುದು ಮನೋಮಯ ಕೋಶದ ಪರಿಧಿಯಲ್ಲಿಯೆ ಇರುವದೊ ಅಲ್ಲಿಯ ವರೆಗೆ ಆ ಸಿದ್ಧನೆಂಬವನು ಎಂಥ ಅಮೋಘ ಪೂರ್ಣತೆಯನ್ನು ಪಡೆದಿದ್ದರೂ ಅವನ ಸಿದ್ಧಿಯ ವ್ಯಾಪ್ತಿಯೂ ಬಲವೂ ಸೀಮಿತವಾಗಿ ಇರಲೆಬೇಕು. ಸಿದ್ಧಿಯು ಅತಿಮಾನಸದ ಮೆಟ್ಟಲನ್ನು ಮುಟ್ಟದಾಗ ವಿಕಾಸವು ತಾನಾಗಿ ತ್ವರೆಗೊಳ್ಳುವದು. ಹೇಗೆಂದರೆ, ಮಾನವನಲ್ಲಿ ಮೂಲಭೂತ ವಾಗಿರುವ ಮನ-ಪ್ರಾಣ-ಜಡಗಳನ್ನು ಪರಿವರ್ತಿಸುವದರ ಸಲುವಾಗಿ ಅತಿಮಾನಸ ಬಲಗಳನ್ನು ಉಪಯೋಗಿಸಿಕೊಳ್ಳುವದರಿಂದ ಆ ಸಿದ್ಧನಲ್ಲಿ ವಿಕಾಸವನ್ನು ತ್ವರೆಗೊಳಿ ಸುವ ಸಾಮರ್ಥ್ಯವು ಬರುವದುಂಟು. ಈ ವಿಷಯಕ್ಕೆ ಶ್ರೀ ಅರವಿಂದರು ಬಹು ಮಹತ್ವವನ್ನು ಕೊಡುತ್ತಾರೆ. 'The Riddle of the World (ಜಗತ್ತಿನ ಒಡಪು)' ಎಂಬ ಪುಸ್ತಕದಲ್ಲಿ ಅವರು ಈ ಮಾತನ್ನು ಇಂತು ಒತ್ತಿ ಹೇಳಿದ್ದಾರೆ: 'ವೈದಿಕ ಋಷಿಗಳು ಪೃಥ್ವಿಗೋಸ್ಕರ ಅತಿಮಾನಸ ಅವಸ್ಥೆಯನ್ನು ಸಾಧಿಸಿಕೊಳ್ಳ

ಲಿಲ್ಲ, ಅಥವಾ ಆ ಬಗೆಯ ಪ್ರಯತ್ನವನ್ನೆ ಅವರು ಮಾಡಲಿಲ್ಲ. ಈ ಅತಿಮಾನಸ (ವಿಜ್ಞಾನ)ವನ್ನು ಋಷಿಗಳು ಅರಿತಿದ್ದರು, ಅದರ ಸಿದ್ಧಿಯೂ ಅವರಿಗೆ ಆಗಿತ್ತು; ಆದರೆ ಒಮ್ಮೆಲೆ ಪರಮಾತ್ಮತತ್ತ್ವದ ಕಡೆಗೆ ಧಾವಿಸಿ ಅದನ್ನು ಪೃಥ್ವಿಯ ಮೇಲಿನ ಜೀವನಕ್ಕಾಗಿಯೂ ಮಾನವ್ಯಕ್ಕಾಗಿಯೂ ಉಪಯೋಗಿಸಿಕೊಳ್ಳುವ ಆಲೋಚನೆಯನ್ನು ಅವರು ಮಾಡಲಿಲ್ಲ.' ತನ್ನೊಬ್ಬ ಶಿಷ್ಯನಿಗೆ ಬರೆದ ಪತ್ರದಲ್ಲಿ ಅವರು ಹೀಗೆ ಉದ್ಗಾರ ತೆಗೆದಿದ್ದಾರೆ: 'ಈ ಪದ್ಧತಿಯನ್ನು ಅಥವಾ ಇದಕ್ಕೆ ಸರಿಹೋಲುವ ಯಾವದೆ ಪದ್ಧತಿಯನ್ನು ಹಿಂದಿನ ಯೋಗಗಳು ಸಮಗ್ರವಾಗಿ ಪ್ರತಿಪಾದಿಸಿದುದಾಗಲಿ ಅರಿತುದಾಗಲಿ ನನಗೆ ಕಂಡುಬಂದಿಲ್ಲ. ಹಾಗೆ ನನಗೆ ಕಂಡುಬಂದಿದ್ದರೆ, ಅಜ್ಞಾತ ಅರಣ್ಯವೊಂದರಲ್ಲಿ ಗಿಡ ಕಡಿದು ದಾರಿ ಮಾಡುವದರಲ್ಲಿಯೂ ಶೋಧ-ಅಂತಃಸೃಷ್ಟಿಗಳಲ್ಲಿಯೂ ಈ ಮೂವತ್ತು ವರ್ಷಗಳ ಕಾಲವನ್ನು ನಾನು ಹಾಳು ಮಾಡುತಿರಲಿಲ್ಲ. ಈಗಾಗಲೆ ಗುರುತಿಸಿ ಗೆರೆ ಹಾಕಿ ಪೂರ್ಣ ನಕ್ಷೆ ತೆಗೆದು ಗಟ್ಟಿಗೊಳಿಸಿ ಸುರಕ್ಷಿತವಾಗಿ ಮಾಡಿದ ಸಾರ್ವಜನಿಕ ರಾಜಮಾರ್ಗಗಳಲ್ಲಿ ಸುಲಭವಾಗಿ ಮಾರ್ಗಕ್ರಮಣ ಮಾಡುತ್ತ ನನ್ನ ಗುರಿಯನ್ನು ಅತಿ ಶೀಘ್ರವಾಗಿ ನಾನು ಮುಟ್ಟಿಬಿಡಬಹುದಾಗಿತ್ತು'.

ಯೋಗದ ವಿಷಯದಲ್ಲಿ ಅವರ ಮಾರ್ಗವು ತೀರ ಪ್ರಾರಂಭದಿಂದಲೆ ಪೂರ್ಣ ಸಮರ್ಪಣದ ಮಾರ್ಗವಾಗಿತ್ತು. 'ಆರ್ಯ' ಪತ್ರಿಕೆಯ ೫ನೆಯ ಸಂಪುಟದ ೨೮೩ನೆಯ ಪುಟದಲ್ಲಿ ಅವರು ಹೀಗೆ ವಿವರಿಸಿದ್ದಾರೆ: 'ನಮ್ಮ ಮಾನವೀಯ ಅಸ್ತಿತ್ವದ ಒಂದು ಅಥವಾ ಎಲ್ಲ ಶಕ್ತಿಗಳನ್ನು ಭಗವಂತನನ್ನು ತಲುಪುವ ಸಾಧನವನ್ನಾಗಿ ಮಾರ್ಪಡಿಸುವದೆ ಯೋಗದ ತತ್ತ್ವವಾಗಿದೆ. ಸರ್ವಸಾಮಾನ್ಯ ಯೋಗದಲ್ಲಿ ಜೀವನದ ಒಂದು ಪ್ರಮುಖ ಶಕ್ತಿಯನ್ನೊ ಶಕ್ತಿಗಳ ಒಂದು ಸಮುಚ್ಚಯವನ್ನೊ ಸಾಧನವನ್ನಾಗಿ, ವಾಹನವನ್ನಾಗಿ, ಮಾರ್ಗವನ್ನಾಗಿ ಮಾಡಿಕೊಳ್ಳುತ್ತಾರೆ. ಆದರೆ ಸಮನ್ವಯ ಯೋಗದಲ್ಲಿ ಎಲ್ಲ ಶಕ್ತಿಗಳೂ ಒಂದೆಡೆಗೆ ಒಟ್ಟುಗೂಡಿ ರೂಪಾಂತರದ ಮಾಧ್ಯಮದಲ್ಲಿ ಸಮಾವೇಶವಾಗುತ್ತವೆ.' ಹೀಗೆ ಅವರು ಪೂರ್ಣಯೋಗದ ಸಿದ್ಧಾಂತಕ್ಕೆ ತಲುಪಿ ಅದುವೆ ಶ್ರೇಷ್ಠವೆಂದು ಪ್ರತಿಪಾದಿಸಿದರು. ಏಕೆಂದರೆ ಅದರಲ್ಲಿ ಮಾನಸಿಕ, ಬೌದ್ಧಿಕ, ಭಾವನಾತ್ಮಕ ಶಕ್ತಿಯೆಲ್ಲವೂ ಕೊನೆಯಲ್ಲಿ ಏಕಮಾತ್ರಶಕ್ತಿಯಾಗಿದೆ. ಸಮಸ್ತ ಶಕ್ತಿಯೂ ನಿಜವಾಗಿ ಆತ್ಮಶಕ್ತಿಯೆ ಸರಿ. ಎಂದ ಮೇಲೆ ಒಂದೇ ಒಂದು ಶಕ್ತಿಯನ್ನು ಸಾಧನವನ್ನಾಗಿ ಮಾಡಿಕೊಳ್ಳಲು ಏಕೆ ಹವಣಿಸಬೇಕು? ಇಡಿ ಜೀವನವನ್ನು ಸಮಸ್ತ ಶಕ್ತಿಗಳೊಂದಿಗೆ ನಿವೇದನೆ ಮಾಡಿ ಯೋಗವನ್ನು ಸಮಗ್ರವನ್ನಾಗಿ ಏಕೆ ಮಾಡಬಾರದು?

ಶ್ರೀ ಅರವಿಂದರ ಉಪದೇಶದ ಪ್ರಧಾನ ಲಕ್ಷಣವು ಅದರ ಗುರಿಯಲ್ಲಿಯೂ ಅಂತಿಮ ಉದ್ದೇಶದಲ್ಲಿಯೂ ಇದೆ. ಮನ-ಪ್ರಾಣ-ಜಡಗಳನ್ನು ಪರಿವರ್ತಿಸುವದರಿಂದ

ಸಮಸ್ತ ಮನುಕುಲದಲ್ಲಿಯೆ ದಿವ್ಯತೆಯನ್ನು ತುಂಬುವದು ಅವರ ಗುರಿಯಾಗಿತ್ತು. ಮಾನವನ ರಚನೆಗೆ ಕಾರಣವಾದ ಈ ಮೂರು ತತ್ತ್ವಗಳು ಸದ್ಯಕ್ಕೆ ಕರ್ಕಶವಾಗಿಯೂ ಅತಿ ಸ್ಥೂಲವಾಗಿಯೂ ಇವೆ. ಸಾಮಾನ್ಯ ಉಪಾಯವೆಂದರೆ ಅವುಗಳೊಳಗಿಂದ ಆತ್ಮವನ್ನು ಹೊರಗೆ ತೆಗೆದು ಅದಕ್ಕೊಂದು ಸುರಕ್ಷಿತ ಸ್ಥಾನವನ್ನು ಪರಮಾತ್ಮನಲ್ಲಿ ದೊರಕಿಸಿಕೊಡುವದೆ ಸರಿ. ಆದರೆ ಶ್ರೀ ಅರವಿಂದರ ಉದಾತ್ತ ದೃಷ್ಟಿಕೋನವು ಎಲ್ಲರಿಗಿಂತ ಅತಿ ಭಿನ್ನವಾದುದು. ವೈಯಕ್ತಿಕ ಮುಕ್ತಿಯಾಗಲಿ, ಸಮಸ್ತ ಮಾನವ ಕುಲಕ್ಕೆಯೆ ಇಂಥ ಪರಂಪರಾಗತ ಮುಕ್ತಿಯಾಗಲಿ ದೊರೆತರೆ ಸಾಕೆಂದು ಅವರು ಎಂದೂ ಭಾವಿಸಲಿಲ್ಲ. ಅಂಥ ಮೋಕ್ಷಪ್ರಾಪ್ತಿಯ ಕಲ್ಪನೆಯು ಅವರನ್ನು ಒಂದಿಷ್ಟೂ ಆಕರ್ಷಿಸಲಿಲ್ಲ. ಮಾನವರಲ್ಲಿ ದಿವ್ಯತೆಯನ್ನು ತುಂಬುತ್ತ ಇದ್ದಕಿದ್ದಂತೆ ಅವರನ್ನಿಷ್ಟೇ ಅಲ್ಲ, ಅವರ ರಚನೆಗೆ ಕಾರಣವಾದ ಮೂಲದ್ರವ್ಯವನ್ನೆ ಪರಿವರ್ತಿಸುವದು ಅವರ ಧ್ಯೇಯವಾಗಿತ್ತು. ಇಂದು ಮಾನವತ್ವದ ರಚನೆಗೆ ಕಾರಣೀಭೂತವಾಗಿರುವ ಮನ-ಪ್ರಾಣ-ಜಡಗಳ ಮೂಲ ಸತ್ತ್ವದಲ್ಲಿಯೆ ಪರಿವರ್ತನವನ್ನು ಉಂಟುಮಾಡಿ ಆ ಸತ್ತ್ವವು ಸೂಕ್ಷ್ಮತರವೂ ಸುಂದರತರವೂ ಉಚ್ಚತರವೂ ಆಗುವಂತೆ ಮಾಡುವದು ಅವರು ನಿರಿಯಿಟ್ಟ ಗುರಿಯಾಗಿತ್ತು. ಈ ದಿವ್ಯತರ ಸತ್ತ್ವವೆ ಮಾನವನಲ್ಲಿರುವ ಸಮಗ್ರ ರಸಪುರುಷನನ್ನು ಅಸ್ತಿತ್ವದ ಅತಿಮಹೋನ್ನತ ಶ್ರೇಣಿಗೆ ಒಯ್ದು ಮುಟ್ಟಿಸುವದು. ಅಲ್ಲಿ ಶುದ್ಧ ಜ್ಞಾನವೂ ಅನೋಘ ಸಾಮರಸ್ಯವೂ ದೈವೀ ಆನಂದವೂ ಶಾಶ್ವತವಾಗಿ ಆಳುತ್ತಿರುವವು.

# ಆಧಾರಗ್ರಂಥಗಳು

ಶ್ರೀ ಅರವಿಂದರು ಬರೆದುದು, ಮಾತಾಡಿದುದು—ಅದು ಪ್ರಕಟಿತವಿರಲಿ, ಅಪ್ರಕಟಿತವಿರಲಿ — ಎಲ್ಲವೂ ಅಭ್ಯಸನೀಯವಾಗಿದೆ. ಸ್ವಾಭಾವಿಕವಾಗಿ ಪುನರುಕ್ತಿಗಳು ಅಲ್ಲಲ್ಲಿ ಬಂದಿರುವದು ಅನಿವಾರ್ಯವೆ ಆಗಿದೆ; ಆದರೆ ಅವು ಅನವಶ್ಯವೆಂದು ಹೇಳಲಿಕ್ಕಾಗದು.

ಭಾರತೀಯ ಮತ್ತು ವಿದೇಶೀಯ ವಿವಿಧ ಭಾಷೆಗಳಲ್ಲಿ ಸಾಕಷ್ಟು ಗ್ರಂಥಗಳು ಪ್ರಕಟವಾಗಿವೆ, ಇನ್ನೂ ಆಗುತ್ತಲಿವೆ. ಇಂತು 'ಅರವಿಂದಾಯಣ'ವು ದಿನದಿನಕ್ಕೂ ಹೆಚ್ಚುತಿದೆ.

ನನಗೆ ಸಕಾಲದಲ್ಲಿ ಪ್ರಯೋಜನಕಾರಿಯಾದ ಗ್ರಂಥಗಳ ಸಣ್ಣ ಪಟ್ಟಿಯೊಂದನ್ನು ಇಲ್ಲಿ ಕೊಟ್ಟಿದ್ದೇನೆ. ಶಾಂತ ವ್ಯಾಸಂಗಕ್ಕೆ ಉಪಯುಕ್ತವಾಗಿರುವ ಇನ್ನು ಕೆಲವು ಗ್ರಂಥಗಳನ್ನೂ ಈ ಪಟ್ಟಿಯಲ್ಲಿ ಸಮಾವೇಶ ಮಾಡಲಾಗಿದೆ. ಕೊನೆಯಲ್ಲಿ ಕನ್ನಡದಲ್ಲಿಯ ಪ್ರಕಟನೆಗಳನ್ನೂ ಉಲ್ಲೇಖಿಸಲಾಗಿದೆ.


1. MEMORIES OF MY LIFE AND TIMES *by Bipin Chandra Pal.*
2. THE SOUL OF INDIA *by Bipin Chandra Pal.*
3. SRI AUROBINDO AND INDIAN FREEDOM *by Sisir Kumar Mitra*
4. THE RENAISSANCE IN INDIA *by C. F. Andrews.*
5. INDIAN UNREST *by Valentine Chirol.*
6. GOVERNMENT OF INDIA *by Ramsay Macdonald.*
7. BANKIM, TILAK AND DAYANAND *by Sri Aurobindo.*
8. THE LIFE OF RAMAKRISHNA *by Romain Rolland.*
9. BIOGRAPHY OF A NEW FAITH, Vol I, *by P. K. Sen.*
10. AMONG THE GREAT *by Dilip Kumar Roy.*
11. SRI AUROBINDO *by Aurobindo Library, Madras.*
12. SRI AUROBINDO JEEVAN AU YOGA ( Bengali ) *by Promod Kumar Sen*

13. SRI AUROBINDO JEEVAN KATHIKA ( Bengali ) *by Promod Kumar Sen.*

14. SRI AUROBINDO *by K. R. Srinivas Iyengar.*

15. SRI AUROBINDO KE PATRA ( Hindi ) *by Sri Aurobindo Grantha Mala, Pondicherry.*

16. UTTARAPARA SPEECH *by Sri Aurobindo.*

17. SPEECHES OF SHRI AUROBINDO *by Sri Aurobindo.*

18. KARA KAHINI ( Bengali ) *by Sri Aurobindo.*

19. SRI AUROBINDO AND HIS ASHRAM *by Arya Publishing House, Calcutta.*

20. YUGANTARA, *Bengali weekly, all issues.*

21. BANDE MATARAM, *English weekly and daily, all issues.*

22. KARMAYOGIN, *English weekly, all issues.*

23. DHARMA, *Bengali weekly, all issues.*

24. ARYA, *English monthly, all issues.*

25. MOTHER INDIA, *English fortnightly from Bombay, all issues.*

26. MOTHER INDIA, *English monthly. 16 issues from Feb. 1952 to May 1953.*

27. DAKSHINA, *Gujerati quarterly, 4 issues from Feb. to Nov. 1951.*

28. LIFE DIVINE, *Vol. I and Vol. II by Sri Aurobindo.*

29. THE SYNTHESIS OF YOGA *by Sri Aurobindo.*

30. THE SUPRAMENTAL MANIFESTATICN UPON EARTH *by Sri Aurobindo.*

31. THE HUMAN CYCLE *by Sri Aurobindo.*

32. THE IDEAL OF HUMAN UNITY *by Sri Aurobindo.*

33. EVOLUTION *by Sri Aurobindo.*

34. ISHA UPANISHAD *by Sri Aurobindo.*

35. KENA UPANISHAD *by Sri Aurobindo.*

36. KATHA UPANISHAD *by Sri Aurobindo.*

37. ESSAYS ON THE GITA, ( First Series and Second Series, ) *by Sri Aurobindo.*
38. THE MOTHER *by Sri Aurobindo.*
39. THE YOGA AND ITS OBJECTS *by Sri Aurobindo.*
40. LIGHTS ON YOGA *by Sri Aurobindo.*
41. BASIS OF YOGA *by Sri Aurobindo.*
42. THE RIDDLE OF THIS WORLD *by Sri Aurobindo.*
43. LETTERS OF SRI AUROBINDO, First to Fourth Series, *by Sri Aurobindo.*
44. THE IDEAL OF KARMAYOGIN *by Sri Aurobindo.*
45. A SYSTEM OF NATIONAL EDUCATION *by Sri Aurobindo.*
46. THOUGHTS FROM SRI AUROBINDO.
47. THE SPIRIT AND FORM OF INDIAN POLITY *by Sri Aurobindo.*
48. TALES OF ALL TIME *by Mother.*
49. PRAYERS AND MEDITATIONS OF THE MOTHER.
50. ON EDUCATION *by Mother.*
51. AUROBINDO CAME TO ME *by Dilip Kumar Roy.*
52. LIGHTS ON THE VEDA *by Kapali Shastry.*
53. LIGHTS ON THE UPANISHADS *by Kapali Shastry.*
54. SRI AUROBINDO, LIGHTS ON THE TEACHINGS *by Kapali Shastry.*
55. THE COMING RACE *by Nolini Kanto Gupta.*
56. TOWARDS A NEW SOCIETY *by Nolini Kanto Gupta.*
57. NATURE OF THE UNIVERSE *by Fred Hoyle.*
58 PHILOSOPHIES OF INDIA *by Zimmer.*
59. AUROBINDO AND THE SOUL QUEST OF MAN *by Pearson.*
60. SRI AUROBINDO *by G. H. Langley.*
61. LEAD KINDLY LIGHT *by Vincent Sheean.*
62. FOUNDATION OF INDIAN CULTURE *by Sri Aurobindo.*

# ಕನ್ನಡದಲ್ಲಿಯ ಶ್ರೀ ಅರವಿಂದ-ಸಾಹಿತ್ಯ



೧. ಸಮರ್ಪಣ (೧-೪ ಸಂಪುಟಗಳು): ಶ್ರೀ ಅರವಿಂದ ಮತ್ತು ಶ್ರೀಮಾತಾ ಮಂಡಲ, ಹುಬ್ಬಳ್ಳಿ.

೨. ಧರ್ಮ ಹಾಗೂ ರಾಷ್ಟ್ರೀಯತ್ವ (ಮಿಂಚಿನಬಳ್ಳಿ, ಧಾರವಾಡ): ಅನು: ಸಿಂಪಿ ಲಿಂಗಣ್ಣ.

೩. ಶ್ರೀ ಅರವಿಂದರು (ಚರಿತ್ರೆ): ಸಿಂಪಿ ಲಿಂಗಣ್ಣ.

೪. ಧರ್ಮಕ್ಷೇತ್ರೇ ಕುರುಕ್ಷೇತ್ರೇ: ಮಧುರಚೆನ್ನ.

೫. ಪೂರ್ಣಯೋಗ: ಮಧುರಚೆನ್ನ.

೬. ಶ್ರೀ ಅರವಿಂದ ದರ್ಶನ ('Life Divine'ದ ೩ ಪ್ರಕರಣಗಳು): ಶಿವಾನಂದ ಮಂದಿರ, ಹುಬ್ಬಳ್ಳಿ. ಅನು: ಆರ್. ಕೆ. ಜೋಶಿ, ಸಾಂಗಲಿ.

೭. ಭಾರತೀಯ ನವಜನ್ಮ: ಅರವಿಂದ ಗ್ರಂಥಮಾಲೆ, ಹಲಸಂಗಿ: ಅನು: ದ. ರಾ. ಬೇಂದ್ರೆ.

೮. ಅರವಿಂದ ಘೋಷರು (ಚರಿತ್ರೆ): ಶಂ. ಬಾ. ಜೋಶಿ.

೯. ಆಶ್ರಮ ಮತ್ತು ಉಪದೇಶ

೧೦. ಮಾತೃವಾಣಿ: ಅನು: ಮಧುರಚೆನ್ನ.

೧೧. ಯೋಗದೀಕ್ಷೆ: ಅನು: ಮಧುರಚೆನ್ನ.

೧೨. ಶ್ರೀ ಅರವಿಂದರ ಪತ್ರಗಳು: ಅನು: ಸಿಂಪಿ ಲಿಂಗಣ್ಣ.

೧೩. ಉತ್ತರಪಾರಾ ಉಪನ್ಯಾಸ: ಅನು: ಸಿಂಪಿ ಲಿಂಗಣ್ಣ.

# ಕೋಶ

ಪುಸ್ತಕದಲ್ಲಿ ಯಾವ ಶಬ್ದಗಳನ್ನು ಪೂರ್ಣವಾಗಿ ಸ್ಪಷ್ಟೀಕರಿಸಿಲ್ಲವೊ ಅಂಥವುಗಳ ಅರ್ಥವನ್ನು ಮಾತ್ರ ಇಲ್ಲಿ ಕೊಡಲಾಗಿದೆ:—

**ಅಚೇತನ** ( Inconscient )— ನಿಶ್ಚೇತನ; ಈ ಪೃಥ್ವಿಯಮೇಲೆ ಇದ್ದುದೆಲ್ಲವೂ 'ಅಚೇತನ' ವೆಂದು ಕರೆಯಲ್ಪಡುವದನ್ನು ಆಧರಿಸಿ ಇರುವದುಂಟು. ಇದರಲ್ಲಿ ಚೇತನವು ಇಲ್ಲವೇ ಇಲ್ಲವೆಂದು ಅರ್ಥವಲ್ಲ; ಅದು ಸಂಕುಚಿತವಾಗಿ ಹುದುಗಿಕೊಂಡಿರುವದು. ಪೂರ್ಣ ನಿಜ್ಞಾನವೆಂಬುದು ಆಧಾರದಲ್ಲಿದ್ದು ವಸ್ತುಗಳ ಪ್ರಾರಂಭವೆ ಅದು. ಚೇತನವು ಅಚೇತನದಲ್ಲಿ ವಿಕಾಸಕ್ಕಾಗಿ ದಾರಿ ಕಾಯುತ್ತಿದೆ. ಆದರಿಂದ ಮೊದಲು ಹೊರಬರುವದು 'ಜಡ'ವು.

**ಅತಿಚೇತನ** ( Super-conscious )— ಸ್ವಾಭಾವಿಕವಾದ ವಾಡಿಕೆಯ ಚೇತನಕ್ಕಿಂತ ಮೇಲೆ ಇರುವ ಅವಸ್ಥೆ.

**ಅತಿಮಾನಸ** ( Supermind )— ಸಚ್ಚಿದಾನಂದದ ವಾಹನವೆ ಇದು. ಮಾನಸಿಕ ಸತ್ತ್ವಕ್ಕಿಂತ ಉಚ್ಚತರವಾದ ಅನಂತ ಚೇತನದ ಅವಸ್ಥೆ ಇದು. ಇಲ್ಲಿ ಇದರ ವಿಕಾಸವು ಅನಿವಾರ್ಯವಾಗಿ ಅಗತ್ಯವಾಗಿದೆ. ಅನಂತತೆಯ ಹಾಗೂ ಶಾಶ್ವತತೆಯ ಸ್ವಯಂಪ್ರಜ್ಞೆಯೆ ಇದಾಗಿದ್ದು ಆ ಸ್ವಯಂಪ್ರಜ್ಞೆಯಲ್ಲಿ ಅಂತರ್ಗತವಾದ ಸ್ವಯಂನಿರ್ಣಯದ ಬಲವು ಇದು. ಅತಿಮಾನಸವು ಎಲ್ಲದರ ಆಧ್ಯಾತ್ಮಿಕ ಸಾಕ್ಷಾತ್ಕಾರವನ್ನು ಪ್ರತಿ ಸ್ತರದಲ್ಲಿಯೂ ಪ್ರತಿ ಸ್ಥಿತಿಗತಿಯಲ್ಲಿಯೂ ಸದಾ ಇಟ್ಟುಕೊಳ್ಳುತ್ತದೆ. ಜಗಚ್ಚೇತನದ ವಿಧಾತೃವೆ ಇದು. ಪ್ರಕಾಶ-ದೃಷ್ಟಾಂತಗಳನ್ನೂ ಕರ್ಮಬಲವನ್ನೂ ಸಂಕಲ್ಪಿಸಬಲ್ಲ ಸಾಮರ್ಥ್ಯ ಇದರಲ್ಲಿದೆ. ನಮ್ಮ ಚೇತನದ ಸಾಮಾನ್ಯ ಅಂತರಿಕ್ಷವನ್ನು ಮೀರಿದಂಥ ಬೃಹತ್ತ್ವವು ಇದಕ್ಕುಂಟು. ಸತ್ಯಂ, ಋತಂ, ಬೃಹತ್ ಎಂಬುದನ್ನೆಲ್ಲವನ್ನು ಅರಿತುಕೊಳ್ಳುವ ಅವಸ್ಥೆ ಇದು. ಅಚೇತನದ ಶಕ್ತಿ ( Force ) ಯೊಡನೆ ಒಂದಾದ ಪ್ರಕಾಶವೂ ಇದೇ; ಸಂಕಲ್ಪದ ಸಾಮರಸ್ಯದೊಡನೆ ಇದ್ದುಕೊಂಡ ಜ್ಞಾನದ ತರಂಗವೂ ಇದೇ. ಋತಚೇತನವೆಂದರೂ ಇದೇ ಸರಿ.

**ಅಧಿಮನ** ( Overmind )— ವ್ಯಕ್ತಿಗತ ಮನವನ್ನೂ ಅಜ್ಞಾನದಲ್ಲಿದ್ದ ವಿಶ್ವಗತ ಮನವನ್ನೂ ಮೀರಿ ಇದ್ದ ಚೇತನದ ಅವಸ್ಥೆ. ಇದು ವಿಶ್ವಸತ್ಯದ ಪ್ರಥಮ

ಸಾಕ್ಷಾತ್ ಜ್ಞಾನವನ್ನು ಪ್ರಭಾವಯುಕ್ತವಾಗಿ ತನ್ನಲ್ಲಿ ಇಟ್ಟುಕೊಂಡಿರುತ್ತದೆ.

**ಅನುಶೀಲನ ಸಮಿತಿ**— ಅಭ್ಯಾಸ ಸಮಿತಿ.

**ಅವಚೇತನ** ( Sub-conscient )— ಚೇತನದ ಚಲನೆಯ ಕೆಳಗೆ ಏನೊ ಒಂದಿದೆ. ಯೆಂಬ ಅನುಭವ ಬರುವದು, ಅದು ಎಲ್ಲಿ ಬೇಕಾದಲ್ಲಿ ಅನುಭವಕ್ಕೆ ಬರುವದು. ಒಂದು ರೀತಿಯಿಂದ ಇದು ಕೆಳಗಿನಿಂದ ಚೇತನಕ್ಕೆ ಆಧಾರವಾಗಿ ಇರುವದು, ಅಥವಾ ಚೇತನವನ್ನೆ ತನ್ನ ಕಡೆಗೆ ಕೆಳಗೆ ಎಳೆದುಕೊಳ್ಳುವದು. ರೂಢಿಗತವಾಗಿರುವ ಎಲ್ಲ ಚಲನೆಗಳಿಗೆ, ವಿಶೇಷವಾಗಿ ದೈಹಿಕ ಹಾಗೂ ನಿಮ್ನತರ ಪ್ರಾಣಿಕ ಚಲನೆಗಳಿಗೆ ಈ ಅವಚೇತನವು ಆಧಾರವಾಗಿರುತ್ತದೆ. ಪ್ರಾಣದೊಳಗಿಂದಾಗಲಿ, ದೇಹದೊಳಗಿಂದಾಗಲಿ ಏನನ್ನಾದರೂ ಹೊರಚೆಲ್ಲಿದರೆ ಅದು ನೇರವಾಗಿ ಕೆಳಗೆ ಅವಚೇತನದಲ್ಲಿ ಹೋಗಿ ಅಲ್ಲಿ ಬೀಜಗತವೊ ಎಂಬಂತೆ ಇದ್ದುಬಿಡುತ್ತದೆ. ಮುಂದೆ ಕಾಲಕ್ರಮದಲ್ಲಿ ಶಕ್ಯವಿದ್ದಾಗ ಮೇಲಕ್ಕೆ ಬರುತ್ತದೆ.

**ಅವಿಚ್ಛಿನ್ನ ತತ್ತ್ವಜ್ಞಾನ** ( Perennial Philosophy )— ಎಲ್ಲ ಕಾಲಕ್ಕೂ ಸತ್ಯವಾಗಿರುವ ತತ್ತ್ವಜ್ಞಾನ.

**ಅಸ್ತಿತ್ವ** ( Existence )— ಚಿತ್‌ಶಕ್ತಿಯು ಅನುಪಂಶಿಕವಾಗಿ ಎಲ್ಲಿ ಇರುವದೊ ಅದು ಅಸ್ತಿತ್ವವು. ಈ ಅಸ್ತಿತ್ವವೆ ಲೋಕಗಳನ್ನು ಸೃಜಿಸುತ್ತದೆ. ಅನಂತವೂ ಶಾಶ್ವತವೂ ಆದ ಅಸ್ತಿತ್ವವೆಂದು ತಿಳಿಯಲ್ಪಡುವ ಕೇವಲ ತತ್ತ್ವವೆ ಇದು ( ಚಿತ್ ಮತ್ತು ಆನಂದ )

**ಆಗಮ**— ವೇದಗಳನ್ನು ಹೊರತುಪಡಿಸಿ ಇದ್ದ ಹಿಂದೂ ಪೂಜ್ಯ ಗ್ರಂಥಗಳು. ಉದಾ :— ಶೈವಾಗಮಗಳು, ಶಾಕ್ತಾಗಮಗಳು, ಪಂಚರಾತ್ರ ಇತ್ಯಾದಿ.

**ಆತ್ಮನ್, ಆತ್ಮತತ್ತ್ವ**— ಜಡಕ್ಕೆ ವಿರುದ್ಧವಾದುದು. ಇದು ನಿರಾಕಾರವೂ ಶಾಶ್ವತವೂ ಸಾರ್ವತ್ರಿಕವಾದುದೂ ಆಗಿದೆ. ಆತ್ಮವು 'ಪುರುಷ'ನಾಗಿ ಸಾಕಾರ ಸ್ವರೂಪವನ್ನು ತಾಳುತ್ತದೆ. 'ಪ್ರಕೃತಿ' ಯೊಡನೆ ಸಂಬಂಧವನ್ನು ಪಡೆಯುವಾಗ ಆತ್ಮವು ಸಚೇತನ ಪುರುಷನಾಗುತ್ತದೆ. ಪ್ರಕೃತಿಯ ಎಲ್ಲ ರೂಪಗಳನ್ನೂ ವ್ಯಾಪಾರಗಳನ್ನೂ ಪುರುಷನು ಆತ್ಮಸ್ವರೂಪದಿಂದ ಸೃಜಿಸಿ ಅವುಗಳಿಗೆ ಆಧಾರವಾಗಿದ್ದು ಅವುಗಳ ಮೇಲೆ ಪ್ರಭುತ್ವವನ್ನು ಸ್ಥಾಪಿಸಿ ಅವಕ್ಕೆಲ್ಲ ಸಾಕ್ಷಿಯಾಗಿದ್ದು ಅವನ್ನೆಲ್ಲ ಭೋಗಿಸುವನು. ಪ್ರಕೃತಿಯ ಜೇರೆ ಜೇರೆ ಮೆಟ್ಟಲಿನ ಅವಸ್ಥೆಯಲ್ಲಿ ಆಯಾ ಮೆಟ್ಟಲಿಗೆ ತಕ್ಕಂತೆ ಆತ್ಮವು ಮನ-ಪ್ರಾಣ-ಜಡಗಳಲ್ಲಿ ಜೇರೆ ಜೇರೆ ಪ್ರತಿಷ್ಠಾನವನ್ನು ಹೊಂದುತ್ತದೆ. ವಿಶಾಲಾರ್ಥದಲ್ಲಿ ಆತ್ಮತತ್ತ್ವವೂ ಬ್ರಹ್ಮತತ್ತ್ವವೂ ಒಂದೇ ಸರಿ.

**ಉತ್ತರಪರಾ**— ಕಲಕತ್ತಾ ಮಹಾನಗರದ ಒಂದು ಭಾಗ. ಶ್ರೀ ಅರವಿಂದರು ೧೯೦೯ ರಲ್ಲಿ ಬಿಡುಗಡೆ ಹೊಂದಿದ ಬಳಿಕ ಕೆಲವು ದಿನಗಳಲ್ಲಿಯೆ ತಮ್ಮೊಂದು ಸುಪ್ರಸಿದ್ಧ ಭಾಷಣವನ್ನು ಇಲ್ಲಿಯೆ ಮಾಡಿದರು.

**ಋತಚೇತನ** ( Truth-Consciousness )-- ಅತಿಮಾನಸ ಚೇತನವೆಂಬುದೂ ಇದೇ.

**ಓಜಸ್**— ಶಾರೀರಿಕ ಬಲ ಮತ್ತು ಕಾಂತಿ ಇವುಗಳಿಗೆ ವೈಷಮ್ಯವಾಗಿ ಇರುವ ಆಧ್ಯಾತ್ಮಿಕ ಮತ್ತು ನೈತಿಕ ಬಲ ಮತ್ತು ಕಾಂತಿ.

**ಕ್ರತು**— ನಿರ್ಣಯ, ಸ್ಥಿರನಿಶ್ಚಯ.

**ಕಾರ್ಬೊನರಿ** ( Carbonari )— ಕಳೆದ ಶತಕದಲ್ಲಿ ಇಟಲಿ ದೇಶದಲ್ಲಿ ಸ್ವಾತಂತ್ರ್ಯ-ಪ್ರಾಪ್ತಿಗಾಗಿ ಸ್ಥಾಪಿಸಲ್ಪಟ್ಟ ಗುಪ್ತ ರಾಜಕೀಯ ಕ್ರಾಂತಿಕಾರಕ ಸಂಘ. ಇದು ಮೊದಲು ನೇಪಲ್ಸದಲ್ಲಿ ಸಂಘಟಿಸಲ್ಪಟ್ಟಿತು.

**ಕೇವಲ**— 'ಪರಬ್ರಹ್ಮ' ವೆಂದು ವೇದಾಂತದಲ್ಲಿಯೂ 'Absolute' ಎಂದು ಪಾಶ್ಚಾತ್ಯ ತತ್ತ್ವಜ್ಞಾನದಲ್ಲಿಯೂ ಹೆಸರಾದುದು ಇದೇ. ಎಲ್ಲ ಸಂಬಂಧಗಳಿಂದಲೂ ನಿರ್ಣಯಗಳಿಂದಲೂ ರಹಿತವಾದುದೆಂದು ಚಿತ್ತಕ್ಕೆ ತೋರುವಂತಹದೂ ಇದೇ. ಇದು ಅನಿರ್ವಚನೀಯವಾಗಿದ್ದು ಅಸ್ತಿತ್ವದ ಮೊದಲ ಮಾತೂ ಇದೇ, ಕೊನೆಯ ಮಾತೂ ಇದೇ. ಎಲ್ಲ ನಿರ್ಣಯಗಳಿಗೂ ಉಗಮಸ್ಥಾನದಲ್ಲಿದ್ದು ಅದೇ ಕಾಲಕ್ಕೆ ಅವನ್ನೆಲ್ಲ ಮೀರಿಯೂ ಅವುಗಳಿಂದ ಬದ್ಧವಾಗದೆಯೂ ಇರಬಲ್ಲ ಈ 'ಕೇವಲ' ವು ನಿರ್ಣಯಿಸಲಿಕ್ಕೆ ಬಾರದಂತಹದಾಗಿದೆ.

**ಗ್ರಾಮರ ಸ್ಕೂಲ್** ( Grammar School )— ಇಂಗ್ಲಂಡದಲ್ಲಿಯ ಮಾಧ್ಯಮಿಕ ಶಾಲೆ.

**ಚೇತನ** ( Consciousness )— ತಾದಾತ್ಮ್ಯದ ಮೂಲಕವಾಗಿ ಯಾವೊಂದರ ವಿಷಯವಾಗಿ ಎಚ್ಚರವನ್ನು ಇಲ್ಲವೆ ಅರಿವನ್ನು ತಾಳಬಲ್ಲ ಯೋಗ್ಯತೆ. ಚೇತನವು ತಾನು ಪ್ರಕಟವಾಗುವ ಮುನ್ನ ಅಚೇತನದಲ್ಲಿ ನಿಗೂಢವಾಗಿದ್ದು ವಿಕಾಸಕ್ಕಾಗಿ ದಾರಿ ಕಾಯುತ್ತಿದೆ. ಎಲ್ಲವೂ ಸಿದ್ಧವಾದೊಡನೆ ತೋರಿಕೆಯ ಅಚೇತನವೆಂಬ ಸೆರೆಮನೆಯ ಬಾಗಿಲನ್ನು ಒಡೆದು ಚೇತನವು ಹೊರಬೀಳುವದು. ತೋರಿಕೆಯ ಮೂಲ ಅಚೇತನದೊಳಗಿಂದಲೆ ಈ ಸೃಷ್ಟಿಯನ್ನು ಚೇತನವು ನಿರ್ಮಿಸುತ್ತದೆ. ಚೇತನವು ನಿರ್ಣಯಗಳಿಂದ ಬದ್ಧವಾದ ಸೃಷ್ಟಿಯನ್ನು ಸ್ವತಃ ಏವ ನಿರ್ಮಿಸಿದರೂ ಅವುಗಳಿಂದ ಬದ್ಧವಾಗದಂಥ ಮೂಲಸ್ವಾತಂತ್ರ್ಯವು ಅದಕ್ಕೆ ಇದ್ದೇ ಇರುವದು. ತಾನು ನಿರ್ಮಿಸಿದ ಸೃಷ್ಟಿಯಿಂದ ಹಿಂತೆಗೆಯುವ ಸ್ವಾತಂತ್ರ್ಯವೂ ಚೇತನಕ್ಕೆ ಇರುತ್ತದೆ; ಅಂತೆಯೆ ಹೀಗೆ ಹಿಂತೆಗೆದು ಅದೇ ಸೃಷ್ಟಿಯನ್ನು ಉಚ್ಚತರ ಸತ್ಯದ

ಪ್ರಮೇಯವನ್ನಾಗಿ ಪುನರ್ರಚಿಸುವ ಸಾಮರ್ಥ್ಯವೂ ಚೇತನಕ್ಕೆ ಇರುವದುಂಟು. ಚೇತನಕ್ಕೆ ನಿರಾಕಾರದ ಮುಖವೊಂದಿದೆ; ಆದರೆ ಸಚೇತನವಾಗಿರುವ ವ್ಯಕ್ತಿಯೊಂದು ಇರದಿದ್ದರೆ ಚೇತನಕ್ಕೆ ನಿಲ್ಲಲು ಆಧಾರವೆ ದೊರೆಯದು.

**ಚೈತ್ಯ** (the Psyche)— ವ್ಯಕ್ತಿಯಲ್ಲಿ ಗುಪ್ತವಾಗಿರುವ ದೈವೀ ತೇಜೋಂಶವು ಇದು. ಅವಿನಾಶಿಯಾದ ದೈವೀ ಜ್ಯೋತಿಯ ಕಿಡಿಯಿದು. ಸರ್ವಸಾಧಾರಣ ಇಚ್ಛೆಗಳಿಗೆ ಒಳಗಾದ ಜೀವಾತ್ಮನೆಂದರೆ ಚೈತ್ಯಪುರುಷನಲ್ಲ. ಈ ಚೈತ್ಯಪುರುಷನು ಮನ-ಪ್ರಾಣ-ದೇಹಗಳಿಗೆ ಆಧಾರವಾಗಿದ್ದುಕೊಂಡು ಮಾನಸಿಕ, ಪ್ರಾಣಿಕ ಹಾಗೂ ಸೂಕ್ಷ್ಮ ದೈಹಿಕ ಸತ್ತ್ವದ ಹಿಂದೆ ಇದ್ದು-ಕೊಂಡಿರುವ ಗುಪ್ತ ಮಾರ್ಗದರ್ಶಕನೂ ನಿಯಂತಾರನೂ ಆಗಿದ್ದಾನೆ. ನೀತಿಶಾಸ್ತ್ರನಿಪುಣರು ರಚಿಸಿರುವ ಪರಂಪರಾಗತ ವಿವೇಕಕ್ಕಿಂತಲೂ ಹೆಚ್ಚು ಗಭೀರವೂ ನೈಜವೂ ಆದ ಮೂಲ ಚೇತನವೆ ಇದು.

**ಜಡ** (Matter)— ಅನ್ನಮಯ ಕೋಶವೆಂದರೂ ಇದೇ. ಆತ್ಮತತ್ತ್ವದ ಒಂದು ರೂಪವು ಇದು, ಆತ್ಮಕ್ಕೆ ಆವಾಸಸ್ಥಳವಾದುದೂ ಇದೇ. ಇದಲ್ಲದೆ ಈ 'ಜಡ' ಅಥವಾ ಅನ್ನಮಯ ಕೋಶದಲ್ಲಿಯೆ ಆತ್ಮದ ಸಾಕ್ಷಾತ್ಕಾರವಾಗಬಲ್ಲದು.

**ಜತ ಮತ ತತ ಪಥ**— ವಂಗಭಾಷೆಯ ಒಂದು ವಾಕ್ಯ. ಎಷ್ಟು ಮತಗಳೊ ಅಷ್ಟು ಪಥಗಳು ಎಂಬ ಅರ್ಥವುಂಟು.

**ಜೀವನಶಕ್ತಿ**— Elan Vitale ಎಂಬ ಫ್ರೆಂಚ ಶಬ್ದದ ಭಾಷಾಂತರವಿದು. ಜೀವನವೆಂಬ ಮಹಾಪ್ರವಾಹ ಎಂದರ್ಥವನ್ನು ಸೂಚಿಸುತ್ತದೆ.

**ದರ್ಶನ**— ೧ ನೋಟ, ಪೂಜ್ಯಪುರುಷರ ಇಲ್ಲವೆ ದೇವತಾಮೂರ್ತಿಯ ದರ್ಶನ ೨ ವಿಶಿಷ್ಟ ತತ್ತ್ವಜ್ಞಾನವನ್ನುಳ್ಳ ಒಂದು ಪಂಥ.

**ನಿಜ್ಞಾನ** (Nescience)— ಜ್ಞಾನದ ಅಭಾವ.

**ನಿವರ್ತನ** (-ನೆ) (Involution)— ಅಡಕವಾಗುವಿಕೆ, ಸಂಕೋಚಗೊಳ್ಳುವಿಕೆ, ವಿಕಾಸ ಅಥವಾ ವಿವರ್ತನೆಯ ವಿರುದ್ಧಕ್ರಿಯೆ.

**ಪರಾತ್ಪರ** (Transcendent)— (೧) ವಿಶ್ವರೂಪದಲ್ಲಿ ಒಳಗೊಳ್ಳದೆ ವಿಶ್ವವನ್ನು ಮೀರಿ ಇದ್ದುದು. (೨) ಇದು ನಮ್ಮ ಮನ-ಪ್ರಾಣ-ದೇಹಗಳ ವಿಶ್ವವನ್ನೂ ಮೀರಿ ಇದೆ. ಆ ಅರ್ಥದಲ್ಲಿ ಅತಿಮಾನಸವು ಪರಾತ್ಪರದ ಭಾಗವೆ ಸರಿ. ಶಬ್ದಕ್ಕೆ ಇರುವ ಅರ್ಥಗರ್ಭಿತತೆ ಸಾಪೇಕ್ಷವಾಗಿರುವದೆ ಹೊರತು ಕೇವಲವಾಗಿರುವದಿಲ್ಲ.

**ಪ್ರಕೃತಿ** (Nature)— ಶುದ್ಧ ನಿಷ್ಕ್ರಿಯ ಚೇತನವಾಗಿರುವ ಪುರುಷನಿಗೆ ವೈಷಮ್ಯ

ವಾಗಿರುವ ಪ್ರವೃತ್ತಿಪರ ತತ್ತ್ವವು. ಸೃಷ್ಟಿಯ ವಿಧಾತೃವೇ ಇದು.

**ಪ್ರತಿಷ್ಠೆ, ಪ್ರತಿಷ್ಠಾನ** ( Poise )— ಸಮತೋಲ ಸ್ಥಿತಿ.

**ಪ್ರಾಣ** ( Life )— ಜಡ, ಪ್ರಾಣ, ಮನ ಇವು ಮೂರು ವಿಕಾಸವು ಆಳವಡಿಸಿಕೊಂಡ ಬಲಗಳು. ಪ್ರಾಣವು ಮೂಲ 'ಸದ್ವಸ್ತು' ( Reality )ವಾಗಿರದೆ ಅದರ ಒಂದು ರೂಪವೂ ಒಂದು ಬಲವೂ ಆಗಿದೆ. ಪ್ರಾಣವು ವಿಕಾಸಗೊಂಡಾಗ ಅದು ಜಡದಲ್ಲಿ ಅಡಕವಾಗಿರುತ್ತದೆ. ಜಡವು ಪ್ರಾಣಕ್ಕೆ ಆಧಾರವಾಗಿದೆ. ಪ್ರಾಣವು ವಿಶ್ವಶಕ್ತಿಯ ಒಂದು ರೂಪವಾಗಿದ್ದು ಒಂದು ಗತಿಶೀಲ ಚಲನೆಯೂ ಆಗಿದೆ. ರೂಪಗಳನ್ನು ರಚಿಸುತ್ತಲೂ ವಿಘಟನೆ-ಸಂಘಟನೆಗಳ ಅವಿರತವಾದ ಪ್ರಕ್ರಿಯೆಯ ಮೂಲಕ ಆ ರೂಪಗಳಿಗೆ ಉತ್ಸಾಹ ನೀಡುತ್ತಲೂ ಇರುವ ಒಂದು ಅಮೋಘ ಶಕ್ತಿಯ ಲೀಲೆಯೆ ಪ್ರಾಣವು. ಪ್ರಾಣಕ್ಕೆ ಜಡ-ಸಸ್ಯ-ಪ್ರಾಣಿ ಎಂಬ ಮೂರು ರಾಜ್ಯಗಳುಂಟು. ಚಲನವಲನ, ಶ್ವಾಸೋಚ್ಛ್ವಾಸ, ಊಟಮಾಡುವದು ಇವು ಪ್ರಾಣದ ಪ್ರಕ್ರಿಯೆಗಳೆ ಹೊರತು ಪ್ರಾಣವೆ ಅಲ್ಲ.

**ಪಾಗಲೇರ ಸಂಗೇ ಪಾಗಲಿ**— ಇದು ವಂಗಭಾಷೆಯ ಒಂದು ಜಾಣ್ನುಡಿ. ಹುಚ್ಚನ ಬೆನ್ನು ಹತ್ತಿದ ಹುಚ್ಚಿಯಂತೆ ಎಂದರ್ಥ.

**ಪುರುಷೋತ್ತಮ**— ಸತ್ತ್ವ ( Being ) ಮತ್ತು ಸಂಭೂತಿ ( Becoming ) ಇವುಗಳೂ ಜಡ ಮತ್ತು ಆತ್ಮ ಇವುಗಳೂ ಯಾರಲ್ಲಿ ಸಮನ್ವಯಗೊಳ್ಳುವವೊ ಅಂಥ ಪರಮಾತ್ಮ.

**ಬ್ರಹ್ಮನ್, ಬ್ರಹ್ಮತತ್ತ್ವ**— ಎಲ್ಲ ಸಂಬಂಧಗಳಿಂದ ಸ್ವತಂತ್ರವಾಗಿದ್ದು ಅವನ್ನು ಆಧರಿಸಿ ಆಳುತ್ತಲೂ ಅವುಗಳಲ್ಲಿ ಆವಾಸಮಾಡಿಕೊಂಡು ಅವನ್ನು ರಚಿಸುತ್ತಲೂ ಇರಬಲ್ಲ 'ಕೇವಲ' ತತ್ತ್ವವಿದು. ಇದು ಸರ್ವಾಂತರ್ಯಾಮಿಯಾಗಿದೆ. ಇದು ನಿರ್ಗುಣವಾಗಿದ್ದು ಅನಂತ ಗುಣಗಳನ್ನು ತಾಳಬಲ್ಲ ಶಕ್ತಿಯನ್ನೂ ಧರಿಸಿದೆ. ಎಲ್ಲ ಕರ್ಮದ ಕರ್ತಾರನಾದ ಪ್ರಭುವಾಗಿ ಇದ್ದೂ ಅಕರ್ತಾರನೆನಿಸಿದೆ. 'ಪ್ರಕೃತಿ'ಯ ಎಲ್ಲ ವ್ಯಾಪಾರಗಳನ್ನು ಸಾಕ್ಷಿರೂಪದಿಂದ ಮೌನದಿಂದ ನೋಡಬಲ್ಲದು.

**ಭೂಮಾನಂದ**— ಜೀವಾತ್ಮನು ಪರಮಾತ್ಮನೊಡನೆ ಐಕ್ಯವಾದಾಗ ಹೊಂದಬಲ್ಲ ನಿರತಿಶಯವಾದ ಆನಂದ.

**ಮನ** ( Mind )— ಜಡ, ಪ್ರಾಣ, ಮನ, ಇವು ಮೂರು ವಿಶ್ವವಿಕಾಸದ ಮೂರು ಪದಗಳು. ನಮಗೆ ತಿಳಿದ ಮಟ್ಟಿಗಂತೂ ಮನದ ಪ್ರಕೃತಿಯೆಂದರೆ ಜ್ಞಾನವನ್ನು ಶೋಧಿಸುವ ಅಜ್ಞಾನವಾಗಿದೆ; ಅದು ವಿಚ್ಛೇದನೆಗಳ ಬಲವಾಗಿದ್ದು ವಿಭಜನೆಗಳ ಕರ್ತೃವಾಗಿದೆ. ಅಂಶಗಳನ್ನೆಲ್ಲ ಒಟ್ಟುಗೂಡಿಸಲೂ

ಒಟ್ಟು ಮೊತ್ತವೆಷ್ಟೆಂಬುದನ್ನು ಹುಡುಕಿ ತೆಗೆಯಲೂ ಅದು ಪ್ರಯತ್ನ ಪಡುತ್ತದೆ; ವಸ್ತುಗಳ ಸಾರವಾಗಲಿ ಸಮಗ್ರತೆಯಾಗಲಿ ಇದಕ್ಕೆ ದೊರೆಯದು. ಮನವು ಕಾರ್ಯಕ್ಕೆ ಪ್ರವೃತ್ತವಾದೊಡನೆ ಪ್ರಾಣ-ದೇಹಗಳ ಬೇಡಿಕೆಗಳನ್ನು ಪೂರೈಸಲೋಸುಗ ಒಂದು ಕ್ರಿಯೆಯಲ್ಲಿ ತೊಡಗಿಕೊಳ್ಳುತ್ತದೆ. ಆದರೆ ಮಾನವನಲ್ಲಿ ಅದು ಬೆಳೆಬೆಳೆದಂತೆ ಅರ್ಥಗ್ರಹಣ, ಶೋಧನೆ ಮತ್ತು ವಿಚಾರಾವಲೋಕನ ಇವುಗಳ ಪ್ರಥಮ ಆಶೆಯು ಅಂಕುರಿಸುವದು.

**ರಾಜಯೋಗ**— ಯಾವ ಯೋಗದಲ್ಲಿ ಸತ್ಯದ ಪ್ರತಿಬಿಂಬಕ್ಕಾಗಿ ಚಿತ್ತದ ಎಲ್ಲ ವೃತ್ತಿಗಳನ್ನು ನಿರೋಧಿಸುತ್ತ ಶಮನಗೊಳಿಸುವದೆ ಮುಖ್ಯ ಪ್ರಯತ್ನವಾಗಿದೆಯೊ ಆ ಯೋಗಪಂಥ.

**ವಿಜ್ಞಾನ**— ೧ ಆಧುನಿಕ ವಿಜ್ಞಾನ ( Modern Science )
೨ ಉಪನಿಷತ್ತುಗಳಲ್ಲಿ ಬರುವ ಅತಿಮಾನಸ ಅವಸ್ಥೆ.

**ವಿಕಾಸ, ವಿವರ್ತನ (-ನೆ)** ( Evolution )— ಅರಳಿಬರುವದು, ನಿವರ್ತನೆಯ ವಿರುದ್ಧ ಕ್ರಿಯೆ.

**ಶಕ್ತಿ** ( Energy )— ಯಾವದು ಜಡವನ್ನು ಸೃಜಿಸಿ ಅದರ ಚಲನೆಗೆ ಕಾರಣವಾಗಿರುವಂತೆ ತೋರುವದೊ ಆದರೆ ಯಾವದು ಸ್ವತ ಏವ ಆ ಜಡದ ಸಾರವಾಗಿರುವದೊ ಅದು. ಶಕ್ತಿಯು ಜಡದಂತೆ ತೋರುವದು. ಸೃಷ್ಟಿಯನ್ನು ನಿರ್ಮಿಸುವ ವಿಶ್ವಪ್ರಕೃತಿಯೆ ಶಕ್ತಿಯೆನಿಸುವದು. ಅನಂತವೂ ಅನಿರ್ಣಾಯಕವೂ ಆದ ಅಸ್ತಿತ್ವವು ಶಕ್ತಿಯೆಂದು ಪ್ರಕಟವಾಗುತ್ತ ತನ್ನ ಕ್ರಿಯೆಗಳ ಮೂಲಕ ವಿದಿತವಾಗುತ್ತದೆ. ಶಕ್ತಿಯು ಆವಾಸಕ್ಕಾಗಿ ಒಂದು ವ್ಯಕ್ತಿಯಿರದಿದ್ದರೆ ಹಾಗೂ ಆಧಾರಕ್ಕಾಗಿ ಒಂದು ಚೇತನವಿರದಿದ್ದರೆ ಶಕ್ತಿಯೊಂದು ಮಾನಸಿಕ ರಚನೆಯಾಗಿ ಅವಾಸ್ತವವಾದುದೆಂದು ತೋರುವದು.

**ಸಂಕಲ್ಪ** ( Will )— ಪರಿಣಾಮಾತ್ಮಕ ಕ್ರಿಯೆಯತ್ತ ಹೊರಳಿದ ಚೇತನದ ಬಲವು. ಚೇತನವು ಕ್ರಿಯೆ-ಪರಿಣಾಮುಗಳಿಗಾಗಿ ತನ್ನನ್ನು ಪ್ರಯೋಗಿಸಿ ನೋಡುತ್ತದೆ. ಚೇತನದ ಪ್ರವೃತ್ತಿಪರ ಸ್ವಭಾವವೆ ಸಂಕಲ್ಪವು.

**ಹಠಯೋಗ**— ಯಾವ ಯೋಗದಲ್ಲಿ ಪ್ರಾಣದ ಪ್ರವೃತ್ತಿಗಳನ್ನು ಪ್ರಾಣಾಯಾಮ, ಆಸನ, ಮುದ್ರೆ, ಕ್ರಿಯೆ ಈ ಮೂಲಕವಾಗಿ ಅಂಕೆಯಲ್ಲಿಟ್ಟುಕೊಳ್ಳುವದೆ ಮುಖ್ಯ ಪ್ರಯತ್ನವಾಗಿದೆಯೊ ಆ ಯೋಗಪಂಥ.

---

ಸಂಯುಕ್ತಕರ್ನಾಟಕ ಮುದ್ರಣಾಲಯ, ಹುಬ್ಬಳ್ಳಿ ೨೪೯೧-೩೪-೧೫೦೦